ಬರಬಹುದು, ಅವರು ಇತರ ಪುಸ್ತಕಗಳನ್ನು ಅಚ್ಚುಹಾಕಬಹುದು. ಆದರೆ ಇವೆಲ್ಲ ಪ್ರಾಸಂಗಿಕ ಫಲಗಳೇ ಹೊರತು ಟೆಕ್ಸ್ಟ್‌ಬುಕ್ ಕಮಿಟಿಯ ಧ್ಯೇಯವಲ್ಲ. ಟೆಕ್ಸ್ಟ್‌ಬುಕ್ ಕಮಿಟಿಯು ಕೆಲಸ ವಿದ್ಯಾರ್ಥಿಗೆ ಒಳ್ಳೆಯ ಪುಸ್ತಕವನ್ನು ಒದಗಿಸಿಕೊಡುವುದು. ಅನೇಕ ವೇಳೆ ಕನ್ನಡದ ಪಾಠಕ್ಕೆ ಬೇರೆ ಬೇರೆಯ ತರಗತಿಗಳಿಗೆ ತಕ್ಕ ಪುಸ್ತಕಗಳು ಸಿಕ್ಕುವುದಿಲ್ಲ; ಇದು ನಿಜ. ಹೀಗೆ ಕಂಡರೆ ತಕ್ಕ ಪುಸ್ತಕಗಳನ್ನು ಗ್ರಂಥಕರ್ತರು ಯಾರಾದರೂ ಬರೆಯುವ ವರೆಗೂ ಕಮಿಟಿಯವರು ಪೂರ್ವದ ಪುಸ್ತಕಗಳನ್ನು ಸರಿಪಡಿಸಿ ಪಾಠ ಪುಸ್ತಕಗಳನ್ನು ಸಿದ್ಧಪಡಿಸಬೇಕು. ಇದು ಹೊರೆಯ ಕೆಲಸ. ಆದರೆ ಇದನ್ನು ಮಾಡದೆ ಕಮಿಟಿಯವರು ಕೃತಕೃತ್ಯರಾಗಲಾರರು. ಇದುವರೆಗೆ ಪುಸ್ತಕಗಳನ್ನು ನಿಯಮಿಸುವಲ್ಲಿ ನಮ್ಮ ಕಮಿಟಿಗಳ ಮೆಂಬರುಗಳು ಗ್ರಂಥಕರ್ತರನ್ನು ಕುರಿತು ಅಯ್ಯೋ ಪಾಪ ಎಂದಷ್ಟು ಸಲ ವಿದ್ಯಾರ್ಥಿಗಳನ್ನು ಕುರಿತು ಅಯ್ಯೋ ಪಾಪ ಎಂದು ಹೇಳಿದ್ದರೆ ಕನ್ನಡದ ವಿಷಯದಲ್ಲಿ ನಮ್ಮ ವಿದ್ಯಾರ್ಥಿಗಳಿಗೆ ಈಗಿರುವುದಕ್ಕಿಂತ ಹೆಚ್ಚು ಆದರವಿರುತ್ತಿತ್ತೆಂದು ಖಂಡಿತವಾಗಿ ಹೇಳಬಹುದು. ಇನ್ನು ಮೇಲಾದರೂ ಎಲ್ಲ ಕಮಿಟಿಗಳವರೂ ತಮ್ಮ ಕರ್ತವ್ಯವನ್ನು ನೆನೆದು ನಡೆದರೆ ಭಾಷೆಯ ಬೆಳವಣಿಗೆಗೆ ಬಹಳ ಸಹಾಯವಾಗುವುದು.

### ಕರ್ಣಾಟಕಕ್ಕೆ ಒಂದು "ಯೂನಿವರ್ಸಿಟಿ"

ನಾಡಿನ ದೃಷ್ಟಿಯಿಂದ ನಮಗೆ ಒಂದು ವಿಶ್ವವಿದ್ಯಾ ಪೀಠವೂ ಬೇಕು. ಈಗ ನಮ್ಮ ಪ್ರೌಢ ವಿದ್ಯಾರ್ಥಿಗಳು ಮೂರು ವಿದ್ಯಾಪೀಠಗಳಲ್ಲಿ ಹಂಚಿ ಹೋಗಿದ್ದಾರೆ. ಇವುಗಳಲ್ಲಿ ಕನ್ನಡಕ್ಕೆ ಸ್ವಲ್ಪವಾದರೂ ಪ್ರಾಶಸ್ತ್ಯವಿದೆಯೆನ್ನುವುದು ಮೈಸೂರು ಯೂನಿವರ್ಸಿಟಿಯಲ್ಲಿ ಮಾತ್ರ; ಆದರಲ್ಲಿಯೂ ಅದಕ್ಕೆ ತಕ್ಕ ಸ್ಥಾನ ಸಿಕ್ಕಿದೆಯೆಂದು ನಾವು ಹೇಳುವಂತಿಲ್ಲ. ಸಾಲದುದಕ್ಕೆ ರಾಜಕೀಯ ಕಾರಣಗಳಿಂದ ಅದು ಮೈಸೂರಷ್ಟಕ್ಕೇ ಕೇಂದ್ರ ವಿದ್ಯಾಪೀಠವಾಗಬಹುದಾಗಿದೆಯೇ ಹೊರತು ಇತರ ಭಾಗಗಳನ್ನು ಸೇರಿಸಿಕೊಳ್ಳುವಂತಿಲ್ಲ. ಪ್ರೌಢ ವಿಷಯಗಳನ್ನು ಕುರಿತು ಕನ್ನಡದಲ್ಲಿ ಚರ್ಚೆಮಾಡುವ ಮತ್ತು ಬರೆಯುವ ಪರಿಸ್ಥಿತಿಯು ನಮ್ಮಲ್ಲಿ

ಉಂಟಾಗಬೇಕಾದರೆ ನಮ್ಮ ಪ್ರೌಢ ವಿದ್ಯಾರ್ಥಿಗಳು ತಮ್ಮ ಬುದ್ಧಿಶಕ್ತಿಯನ್ನು ಈ ಮುಖಕ್ಕೆ ತಿದ್ದಬೇಕು. ಹೀಗಾಗಲು ಕನ್ನಡವನ್ನು ಮುಖ್ಯ ಭಾಷೆಯಾಗಿ ಎಣಿಸಿ ಸೀಮೆಗೆಲ್ಲ ಕೇಂದ್ರವಾಗುವ ಒಂದು ವಿಶ್ವವಿದ್ಯಾಪೀಠವು ಆವಶ್ಯಕ. ಈ ವಿಷಯ ಆಗಲೇ ಮುಖಂಡರ ಆಲೋಚನೆಯಲ್ಲಿದೆ. ಮುಂದೆ ಇದಕ್ಕೆ ಯಾವ ರೂಪ ಬರುವುದೋ ನೋಡಬೇಕು. ಮುಂದಕ್ಕೆ ಈ ಭಾವ ಹೇಗೆ ಬೆಳೆದರೂ ಈಗ ಸದ್ಯಕ್ಕೆ ಈ ಕೆಲಸದಲ್ಲಿ ನಮ್ಮ ಮೂರು ಯೂನಿವರ್ಸಿಟಿಗಳೂ ಎಷ್ಟು ಸಾಧ್ಯವೋ ಅಷ್ಟು ಸಹಾಯವನ್ನು ಮಾಡಬೇಕಾಗಿದೆ. ಎಲ್ಲ ವಿಷಯುಗಳನ್ನೂ ಕುರಿತ ಪ್ರೌಢೋಪನ್ಯಾಸಗಳನ್ನೂ ಸಾರ್ವಜನಿಕೋಪನ್ಯಾಸಗಳನ್ನೂ ವರ್ಷಕ್ಕೆ ಎರಡು ಮೂರು ಮಾಲೆಯುನ್ನಾದರೂ ಕನ್ನಡದಲ್ಲಿ ಈ ಪೀಠಗಳು ಕೊಡಿಸಬಹುದಾಗಿದೆ. ಅದರಿಂದ ನಮ್ಮಲ್ಲಿ ವಿದ್ವಾಂಸರಾದವರನ್ನು ಕನ್ನಡದ ಬೆಳವಣಿಗೆಗೆ ಸಹಾಯಕರನ್ನಾಗಿ ತರಬಹುದು. ನಮ್ಮ ಕಾಲೇಜುಗಳ ಕರ್ಣಾಟಕ ಸಂಘಗಳು ವಿದ್ಯಾರ್ಥಿಗಳನ್ನೂ ಹಿರಿಯರನ್ನೂ ಸೇರಿಸಿ ಚರ್ಚೆಗಳನ್ನು ಏರ್ಪಡಿಸುತ್ತಿವೆ. ಇವು ಸದ್ಯದ ಸ್ಥಿತಿಯಲ್ಲಿ ತಕ್ಕಷ್ಟು ಗಂಭೀರವಾದ ರೀತಿಯಲ್ಲಿ ನಡೆಯುತ್ತಿಲ್ಲ. ಚರ್ಚಿಸುವ ಮಹನೀಯರು, ನಿಜವಾದ ಚರ್ಚೆ ಅಸೆಂಬ್ಲಿಗಳಲ್ಲಿ ಮಾತ್ರ ನಡೆಯಬೇಕು, ಕಾಲೇಜಿನಲ್ಲಿ ಹುಡುಗರ ಜೊತೆಗೆ ಮಾಡುವ ಚರ್ಚೆ ಹುಡುಗಾಟದ ಚರ್ಚೆಯಾಗಿರಬೇಕು ಎಂದು ಭಾವಿಸಿ ಮಾತನಾಡುವಂತೆ ಹಲವು ವೇಳೆ ನನಗೆ ಕಂಡಿದೆ. ಯಾವ ವಿಷಯವನ್ನು ತೆಗೆದುಕೊಂಡರೂ ಗಂಭೀರವಾಗಿ ಯುಕ್ತಿ ಯುಕ್ತವಾಗಿ ಮಾತನಾಡುವುದನ್ನು ನಮ್ಮ ವಿದ್ಯಾರ್ಥಿಗಳು ಕಲಿಯಬೇಕು. ಇದಕ್ಕೆ ಇಂಥ ಚರ್ಚೆಗಳು ಅವಕಾಶವನ್ನು ಕಲ್ಪಿಸುತ್ತವೆ. ಕನ್ನಡ ನಾಡಿನ ಎಲ್ಲ ಪ್ರೌಢ ವಿದ್ಯಾಶಾಲೆಗಳೂ ಸೇರಿ ಇಂಥ ಚರ್ಚೆಗಳನ್ನೂ ಏರ್ಪಡಿಸಿದರೆ ಬಹಳ ಚೆನ್ನಾಗಿರಬಹುದು. ಬೇರೆ ಬೇರೆ ಪ್ರಾಂತದ ಕಾಲೇಜುಗಳ ಅಧ್ಯಾಪಕರು ಇಲ್ಲಿಂದ ಅಲ್ಲಿಗೆ ಅಲ್ಲಿಂದ ಇಲ್ಲಿಗೆ ಬಂದು ಉಪನ್ಯಾಸಗಳನ್ನು ಮಾಡುವುದರಿಂದಲೂ ನಮ್ಮ ನಾಡಿನ ಪ್ರೌಢ ವಿದ್ಯೆಯು ಒಂದು ಮುಖವಾಗಬಹುದು. ಹಣಕಾಸಿಗೂ ಮೇಲ್ವಿಚಾರಣೆಗೂ ಈ ಪ್ರಾಂತದ ಕಾಲೇಜುಗಳನ್ನು

ಮುಂಬಯಿ ಯೂನಿವರ್ಸಿಟಿಗೆ ಸೇರಿಸಬಹುದಾದರೂ ಇಲ್ಲಿಯ ವಿದ್ಯಾರ್ಥಿಗಳು ಬಿ.ಎ. ಮುಂತಾದ ದೊಡ್ಡ ಪರೀಕ್ಷೆಗಳಿಗೆ ಬೆಂಗಳೂರು, ಮೈಸೂರಿಗೆ ಬಂದು ಸೇರುವುದೂ ಒಳ್ಳೆಯದು. ಅದರಲ್ಲಿಯೂ ಕನ್ನಡದ ಎಂ. ಎ. ಪರೀಕ್ಷೆಗೆ ಓದಬೇಕೆನ್ನುವವರೆಲ್ಲ ಮೈಸೂರಿನ ಯೂನಿವರ್ಸಿಟಿಗೆ ಬರುವುದಕ್ಕೆ ಮನಸ್ಸು ಮಾಡಿದರೆ ನಮ್ಮ ಭಾಷೆಯ ಪ್ರಾಂತಗಳೆಲ್ಲ ಒಂದಾಗುವುದಕ್ಕೂ ನಮ್ಮ ವಿದ್ಯಾರ್ಥಿಗಳಲ್ಲಿ ಪರಸ್ಪರ ಪ್ರೀತಿ ಬೆಳೆಯುವುದಕ್ಕೂ ಯೋಗ್ಯವಾದ ಸ್ಪರ್ಧೆಯಿಂದ ಅವರ ಶಕ್ತಿ ಅಭಿವೃದ್ಧಿಯಾಗುವುದಕ್ಕೂ ಅನುಕೂಲವಾಗುತ್ತದೆ.

## ಹೊಸ ಸಾಹಿತ್ಯದ ದಾರಿಗಳು

ಇದಿಷ್ಟು ಎಲ್ಲ ಜನರೂ ಮಾಡಬೇಕಾದ ಕೆಲಸ. ಇನ್ನು, ಗ್ರಂಥಕರ್ತನೇ ಮಾಡಬೇಕಾದ ಕೆಲಸವನ್ನು ಕುರಿತು ಎರಡು ಮಾತನ್ನು ಹೇಳುತ್ತೇನೆ. ಈ ಪರಿಷತ್ತಿನ ಕಳೆದ ವರ್ಷದ ಅಧಿವೇಶನದಲ್ಲಿ ನನ್ನ ಗುರುವರ್ಯರಾದ ಶ್ರೀಮಾನ್ ಶ್ರೀಕಂಠಯ್ಯನವರು ಈ ವಿಷಯವನ್ನು ಕುರಿತು ಅಮೋಘವಾದ ಉಪನ್ಯಾಸವನ್ನು ಮಾಡಿದರು. ಸಾಹಿತ್ಯ ಪ್ರಪಂಚದಲ್ಲಿ ಶ್ರೀಮಾನ್ ಶ್ರೀಕಂಠಯ್ಯನವರು ನೋಡದ ಪ್ರಸ್ಥಭೂಮಿಯೊಂದಿಲ್ಲ. ಅಂಥ ಒಂದೊಂದು ಪ್ರಸ್ಥಭೂಮಿಯಿಂದ ಅವರ ವಿಶಾಲ ದೃಷ್ಟಿಗೆ ಕಂಡ ಸಕಲ ವಿಷಯವನ್ನೂ ಅವರು ಆ ಉಪನ್ಯಾಸದಲ್ಲಿ ಸೂಚಿಸಿರುವರು. ಈಚೆಗೆ ಇನ್ನೊಂದು ಸಂದರ್ಭದಲ್ಲಿ ನಮ್ಮ ಮಿತ್ರರಾದ ಶ್ರೀಮಾನ್ ಗುಂಡಪ್ಪನವರು ಪಾಶ್ಚಾತ್ಯ ಸಾಹಿತ್ಯದ ಸ್ವಾತಂತ್ರ್ಯ ಭಾವದ ವಸಂತ ಮಾರುತದಿಂದ ಶ್ವಾಸಕೋಶಗಳನ್ನು ತುಂಬಿಕೊಂಡು ಸಾಹಿತ್ಯ ಕಲೆಯನ್ನು ಜನಜೀವನದ ಸಂಸ್ಕರಣವೆಂಬ ಅದರ ಮುಖ್ಯ ಕರ್ತವ್ಯಕ್ಕೆ ಉದ್ಘೋಷಿಸಿ ಕರೆದಿರುವರು. ಸಹಜವಾದ ಸಾಹಿತ್ಯ ದೀಕ್ಷೆಯಿಂದ ಭಾಷಾ ಸೇವೆಗೆ ಬಂದು ನಿಂತಿರುವ ಶ್ರೀಮಾನ್ ಪುಟ್ಟಪ್ಪನವರು, ಇನ್ನೊಂದು ಸಂದರ್ಭದಲ್ಲಿ, ಅವರ ವಯಸ್ಸಿಗೆ ತಕ್ಕ ವಿನಯದಿಂದಲೂ ಅವರ ವಯಸ್ಸಿಗೆ ಮೀರಿದ ಪ್ರೌಢಿಮೆಯಿಂದಲೂ ಅವರಿಗೆ ಸುಲಭವಾದ ಪ್ರತಿಭೆಯಿಂದಲೂ ಹೊಸ ಕವಿಗಳ ಆಕಾಂಕ್ಷೆಗಳನ್ನೂ ಶಂಕೆಗಳನ್ನೂ ಧ್ಯೇಯಗಳನ್ನೂ ತಮ್ಮ ಸುಂದರವಾದ ಒಂದು ಭಾಷಣದಲ್ಲಿ

ವರ್ಣಿಸಿರುವರು. ಪಾಶ್ಚಾತ್ಯ ಸಾಹಿತ್ಯಗಳ ಸಂಪರ್ಕದಿಂದ ನಮ್ಮಲ್ಲಿ ಉಂಟಾಗಿರುವ ಸಾಹಿತ್ಯ ವಿಷಯಕ ಪರಿಜ್ಞಾನದ ಮುಖ್ಯ ವಿಷಯಗಳು ಈ ಮೂರು ಉಪನ್ಯಾಸಗಳಲ್ಲಿ ಚೆನ್ನಾಗಿ ವ್ಯಕ್ತವಾಗಿವೆ. ಮುಖ್ಯವಾಗಿ ನಾವು ತಿಳಿದುಕೊಳ್ಳಬೇಕಾಗಿರುವುದೇನೆಂದರೆ, ನಮ್ಮ ಸಾಹಿತ್ಯವು ಮುಂದುವರಿಯಬೇಕಾದರೆ ಅದು ಕೃತಕ ನಿಯಮಗಳ ನಿರ್ಬಂಧದಿಂದ ಬಿಡಿಸಿಕೊಂಡು ಸ್ವತಂತ್ರವಾಗಿ ನಡೆಯಬೇಕು. ಕೃತಕ ನಿಯಮಗಳನ್ನು ಬಿಡಬೇಕೆಂದರೆ ನಿಯಮಗಳೇ ಇರಕೂಡದೆಂದರ್ಥವಲ್ಲ. ಸಾಹಿತ್ಯದ ಸೌಜನ್ಯಕ್ಕೆ ಆವಶ್ಯಕಗಳಾದ ಸ್ವರೂಪ ಜನ್ಯಗಳಾದ ನಿತ್ಯ ನಿಯಮಗಳು ಹಲವು ಇವೆ. ಅವು ಎಲ್ಲ ಸಂದರ್ಭಗಳಲ್ಲಿಯೂ ಇರತಕ್ಕವೇ. ಗ್ರಂಥ ಕರ್ತರೆಲ್ಲರೂ ಅವುಗಳನ್ನು ತಿಳಿದುಕೊಂಡು ಅವಕ್ಕೆ ತಗ್ಗಿಯೇ ನಡೆಯ ಬೇಕು. ನಮ್ಮ ಪೂರ್ವದ ಸಾಹಿತ್ಯವು ಕೃತಕವಾಗುವುದಕ್ಕೆ ಮೊದಲು ಚೆನ್ನಾಗಿಯೇ ಇದ್ದಿತು. ಒಟ್ಟು ಸಾಹಿತ್ಯವು ಕೃತಕವಾದಮೇಲೆಯೂ ಸ್ವಭಾವವಾಗಿ ಬರೆದ ಹಲಕೆಲವು ಕೃತಿಗಳು ಚೆನ್ನಾಗಿಯೇ ಬಂದುವು. ಕೃತಕದಲ್ಲಿಯೂ ವಸಂತಋತು, ಮಂದಮಾರುತ ಮೊದಲಾದ ತಿಳಿದ ವಿಷಯವನ್ನು ವರ್ಣಿಸಿ ಅತಿಗೆ ಹೋಗದೆ ಬರೆದಾಗ ಕವಿತೆ ಚೆನ್ನಾಗಿಯೇ ಹರಿಯಿತು. ಸಮುದ್ರದಂತಹ ತಿಳಿಯದ ವಿಷಯವನ್ನು ಕುರಿತು ಬರೆದಾಗ; ಭಾವದಿಂದ ಕಾವ್ಯ, ಮಾತಿನಿಂದಲ್ಲ, ಎಂಬ ತತ್ತ್ವವನ್ನು ಮರೆ ತಾಗ; ಸಾಹಿತ್ಯವು ಕಲೆ, ಅದನ್ನು ಉತ್ತಮ ಕಾರ್ಯಕ್ಕೇ ಉಪಯೋ ಗಿಸಬೇಕು ಎಂಬ ನೀತಿಯನ್ನು ತೊರೆದಾಗ; ಕಾವ್ಯವು ಕೆಟ್ಟು ಹೋಯಿತು. ನಮ್ಮ ವನ ವರ್ಣನೆಗಳಲ್ಲಿ ಒಂದೊಂದು ಮರವನ್ನು ವರ್ಣಿಸಿರುವ ಕಡೆ ವರ್ಣನೆ ಚೆನ್ನಾಗಿ ಬಂದಿದೆ. ವನವನ್ನೇ ವರ್ಣಿಸುವುದಕ್ಕೆ ಹೋಗಿ ಸೃಷ್ಟಿಯಲ್ಲಿ ಇರುವ ಮರ, ಇಲ್ಲದ ಮರ, ಕಂಡ ಮರ, ಕಾಣದ ಮರ ಎಲ್ಲವನ್ನೂ ಪ್ರಾಸಕ್ಕಾಗಿ ಸೇರಿಸಿದಕಡೆಗಳಲ್ಲೆಲ್ಲ ಬೇಸರ ಮಾತ್ರ ಹುಟ್ಟು ತ್ತದೆ. ಸರಿಯಾದ ಸ್ಥಳದಲ್ಲಿ ಸುಲಕ್ಷಣವಾಗಿ ವರ್ಣಿಸಿರುವ ಶೃಂಗಾರ ವುಂಟು. ಇದು ಚೆನ್ನಾಗಿದೆ. ನಾಟಕದ ನಾಂದಿಯಲ್ಲಿ ದೇವದೇವನಾದ ವಿಷ್ಣುವಿನ ರತ್ಯುತ್ಸಾಹದ ವಿವರವಾದ ವರ್ಣನೆಯೂ ಉಂಟು. ಇದು ಅಸಹ್ಯವಾಗಿದೆ. ಕನ್ನಡದ ವೇಣೀ ಸಂಹಾರ ನಾಟಕದ ಮೊದಲನೆಯ

ಪುಟದಲ್ಲಿ ಈ ವರ್ಣನೆಯೊಂದಿದೆ. ಇದಾದಮೇಲೆ ಸೂತ್ರಧಾರನು ಪ್ರವೇಶಿಸಿ ಇನ್ನು ಅಧಿಕಪ್ರಸಂಗವು ಸಾಕು ಎಂದು ಹೇಳುತ್ತಾನೆ. ಗ್ರಂಥದ ಇತರ ಭಾಗ ಹೇಗಿದ್ದರೂ ವಿಷ್ಣುವಿನ ರತ್ಯುತ್ಸಾಹದ ವರ್ಣನೆಯು ಅಧಿಕಪ್ರಸಂಗವೆಂದು ಹೇಳಿದಷ್ಟು ಮಾತು ಈ ಕಾವ್ಯದಲ್ಲಿ ಅಮೂಲ್ಯವಾದುದು. ಇಂಥ ವರ್ಣನೆಗಳು ಏಕೆ ಬೇಕಾದುವು? ಬೇರೆ ಕೆಲಸವಿಲ್ಲದೆ ಶೃಂಗಾರಾನುಭವದಲ್ಲಿ ಸೋತ ರಸನೆಗೆ ಸುಖ ತಿಳಿಯುವುದಕ್ಕೆ ಇನ್ನಷ್ಟು ಮತ್ತಷ್ಟು ಶೃಂಗಾರವನ್ನು ಹಾಕುವುದಕ್ಕೆ ಹೋಗಿ ಹೀಗಾಯಿತು. ಪಾಶ್ಚಾತ್ಯ ಸಾಹಿತ್ಯಗಳಲ್ಲಿ ಇಂತಹ ಬರವಣಿಗೆ ಇಲ್ಲದೆ ಇಲ್ಲ. ಆದರೆ ಇದರ ಜೊತೆಗೆ ಇತರ ರೀತಿಯ ಬರವಣಿಗೆ ಸಾಕಾದಷ್ಟು ಇದೆ. ನಮ್ಮಲ್ಲಿ ಒಟ್ಟಿನಲ್ಲಿಯೇ ಬರವಣಿಗೆ ಕಡಿಮೆ. ಬರೆದ ಸ್ವಲ್ಪವು ವಿಶೇಷವಾಗಿ ರಾಜರನ್ನು ಕುರಿತುದು. ರಾಜರಿಗಾಗಿ ಅಥವಾ ಕೆಲವು ಮಹಾಜನರಿಗಾಗಿ ಬರೆದುದು. ಇದರಿಂದ ಬೇರೆಯ ರೀತಿಯಾದ ವರ್ಣನೆ ಇಲ್ಲದೆ ಹೋಯಿತು. ಹಿಂದೆ ನಮ್ಮ ಸಾಹಿತ್ಯವು ಸಮುದ್ರಕ್ಕೆ ಸಂಬಂಧವಿಲ್ಲದೆ ಇದ್ದ ಸರೋವರದಂತೆ ಇತ್ತು. ಅದರಲ್ಲಿ ಶಾಂತಿಯಿತ್ತು. ಆದರೂ ನೀರು ಸ್ವಲ್ಪ ಕೊಳೆಯಾಗುತ್ತ ಬಂದಿತ್ತು. ಈಗ ಅದು ವಿಶಾಲ ಪ್ರಪಂಚದೊಂದಿಗೆ ಸಂಬಂಧವನ್ನು ಪಡೆದಿದೆ. ಇದಕ್ಕೆ ನಾವು ಸಂತೋಷಪಡೋಣ. ಸಮುದ್ರದೊಡನೆ ಸಂಬಂಧವುಂಟಾದ ಸರೋವರದ ಹಾಗೆ ಈಗ ಇದರಲ್ಲಿ ಆ ಶಾಂತಿ ಇಲ್ಲದೆ ಹೋಗುವುದು. ಆದರೆ ಕ್ಷೋಭೆಯಲ್ಲದೆ ಇನ್ನೇನೂ ಇಲ್ಲದೆ ಹೋಗದಂತೆ ನೋಡಿಕೊಳ್ಳೋಣ. ಮುಖ್ಯವಾಗಿ ನಮ್ಮ ಕಾವ್ಯ ಚೆನ್ನಾಗಿ ಆಗಬೇಕಾದರೆ ನಮ್ಮ ಜೀವನ ಚೆನ್ನಾಗಬೇಕು. | ತನ್ನ ಜೀವನವನ್ನು ಒಳ್ಳೆಯದನ್ನಾಗಿ ಮಾಡಲಾರದವನು ತನ್ನ ಕಾವ್ಯವನ್ನು ಒಳ್ಳೆಯದಾಗಿ ಮಾಡಲಾರನು.| ತಂದೆತಾಯಿಗಳ ಮುಖದ ಮತ್ತು ಮನಸ್ಸಿನ ಹೋಲಿಕೆಯು ಮಗುವಿನಲ್ಲಿ ಬರುವುದು ಎಷ್ಟು ನಿಜವೋ ಎಷ್ಟು ಖಂಡಿತವೋ ಕವಿಯ ಮನಸ್ಸಿನ ಗುಣದೋಷಗಳು ಅವನ ಕೃತಿಯಲ್ಲಿ ಕಾಣುವುದೆನ್ನುವುದು ಅಷ್ಟು ನಿಜ, ಅಷ್ಟು ಖಂಡಿತ. ಕವಿಯಾದವನು ಸರಸ್ವತಿಯ ಮುಂದೆ ನಿಂತಾಗ ಗೆಣ್ಣುಗೆಣ್ಣೂ ನಿಜವನ್ನು ನುಡಿಯುತ್ತದೆ. ಅವನು ಅದನ್ನು ಅನೇಕ

ವೇಳೆ ಮರೆಯಿಸನೋಡುವನು ; ಸಾಮಾನ್ಯ ದೃಷ್ಟಿಗೆ ಕಾಣದಂತೆ ಮರೆಯಿಸಲೂ ಬಹುದು. ಆದರೆ ಇದರಿಂದ ಫಲವಿಲ್ಲ. ಕವಿತೆಗೆ ಕೊಳೆಯು ಮನಸ್ಸನ್ನು ತರುವುದು ದೇವರಿಗೆ ಕೊಳೆತ ಕಾಯನ್ನು ತಂದಂತೆ. ಆ ಕಾಯಿಗೂ ಆ ಮನುಷ್ಯನಿಗೂ ಸಾನ್ನಿಧ್ಯದವರೆಗೆ ಪ್ರವೇಶವುಂಟು. ಆದರೆ ಅಲ್ಲಿ ಅಂಗೀಕಾರವಿಲ್ಲ. ಇನ್ನೊಂದು ವಿಷಯವೇನೆಂದರೆ, ಸಾಹಿತ್ಯವು ಜನದ ಜೀವನದ ಸಮಸ್ತ ಭಾಗವನ್ನೂ ಒಳಗೊಂಡುದು. ಜನಾಂಗದ ಎಲ್ಲಾ ಭಾಗವೂ ಒಳ್ಳೆಯ ಸ್ಥಿತಿಗೆ ಬರಬೇಕು ಎಂಬುದು ನಮ್ಮೆಲ್ಲರ ಆಸೆ. ಈ ಕೆಲಸದಲ್ಲಿ ಎಷ್ಟು ದೂರ ಸಾಹಿತ್ಯವು ನೆರವಾಗಿರುವುದೋ ಅಷ್ಟು ಮಟ್ಟಿಗೆ ಅದು ಸಾರ್ಥಕವಾಯಿತು. ಎಷ್ಟು ದೂರ ಆಗದೆ ಹೋಗುವುದೋ ಅಷ್ಟುದೂರ ಅದು ವ್ಯರ್ಥವಾಯಿತು. ಹಿಂದೆ ತಕ್ಕಮಟ್ಟಿಗೆ ಒಂದು ಸ್ಥಿತಿಯಲ್ಲಿ ನಿಂತ ಜನಕ್ಕೆ ನಮ್ಮ ಜನರು ವಿಶ್ವಧರ್ಮವನ್ನು ಬೋಧಿಸುವುದಕ್ಕೆ ಒಂದು ರೀತಿಯ ಕಾವ್ಯವನ್ನು ನಿರ್ಮಿಸಿ ಅದನ್ನೇ ಓದಿ ಓದಿ ಹೇಳಿದರು. ಈಗಣ ಸ್ಥಿತಿಗನುಸಾರವಾಗಿ ನೂರಾರು ಸಂದರ್ಭಗಳಿಗೆ ಅನ್ವಯಿಸುವ ನೂರಾರು ರೀತಿಯ ಬರವಣಿಗೆಯಿಂದ ಅದೇ ವಿಶ್ವಧರ್ಮವನ್ನು ನಮ್ಮ ಸಾಹಿತ್ಯ ಕಲೋಪಾಸಕರು ಬೋಧಿಸಬೇಕಾಗಿದೆ. ಬೋಧಿಸುವುದರಲ್ಲಿ ಸಾಹಿತ್ಯದ ಪದ್ಧತಿಯೂ ಮುಖ್ಯವಾಗಿ ಮನಸ್ಸಿನಲ್ಲಿರಬೇಕಾದುದು. ತಮ್ಮ ಬಳಿಗೆ ಉಪದೇಶಕ್ಕೆಂದು ಬಂದವರಿಗೆ ಅಗಡಿಯ ಸಾಧುಗಳು, “ ಉಪದೇಶಮಾಡುವುದು ಅಂದರೇನು ಸ್ವಾಮಿ? ಉಪದೇಶ ಆಗಬೇಕು ” ಎಂದು ಹೇಳುತ್ತಿದ್ದರಂತೆ. ಸಾಹಿತ್ಯಕ್ಕೆ ಈ ಮಾತು ಚೆನ್ನಾಗಿ ಒಪ್ಪುವುದು. ಸಾಹಿತ್ಯವು ಉಪದೇಶ ಮಾಡುವುದಿಲ್ಲ ; ಉಪದೇಶ ಆಗುವಂತೆ ಮಾಡುತ್ತದೆ. ಸಾಹಿತ್ಯದಿಂದ ದೇಶಸೇವೆಯನ್ನು ಮಾಡುವವರು ಇದನ್ನು ಮರೆಯಲಾಗದು. ಸಂಪ್ರದಾಯದಲ್ಲಿ ಒಳ್ಳೆಯದನ್ನು ಇಟ್ಟುಕೊಂಡು ಅದರ ಸಂಕೋಲೆಯಿಂದ ಬಿಡುಗಡೆ ಹೊಂದುವುದು, ತನ್ನ ಬದುಕನ್ನು ಚೆನ್ನಾಗಿ ಮಾಡಿಕೊಳ್ಳುವುದು, ನಿಜವಾದ ಅನುಭವವನ್ನು ನುಡಿಯುವುದು, ಜನಾಂಗವೆಲ್ಲದರ ಕ್ಷೇಮವನ್ನು ಬಯಸುವುದು, ಇದಕ್ಕೆ ಆವಶ್ಯಕವಾಗಿರುವ ಕೆಲಸದಲ್ಲಿ ಕಾವ್ಯ ನಿರ್ಮಾಣದಿಂದ ತನ್ನ ಕೈಯಲ್ಲಾ

ದುದನ್ನು ಮಾಡುವುದು, ಹೀಗೆ ಮಾಡುವುದರಲ್ಲಿ ಸಾಹಿತ್ಯದ ಸ್ವರೂಪವನ್ನು ಮರೆಯದಿರುವುದು, ಇದೀಗ ನಮ್ಮ ಹೊಸ ಗ್ರಂಥಕಾರನ ಕರ್ತವ್ಯ.

### ಹೊಸ ಸಾಹಿತ್ಯಶಾಸ್ತ್ರ

ಕಾವ್ಯದ ಕೆಲಸದ ಈ ವರ್ಣನೆಯು ಬಹು ರಸ ವಿಹೀನವಾಗಿ ಕಾಣಬಹುದು. ಕಾವ್ಯವು ಮಾಡುವ ಕೆಲಸವು ಇದೇಯೇ ಎಂದು ತೋರಬಹುದು. ರಸಾತ್ಮಕವಾದ ವಾಕ್ಯ ಕಾವ್ಯ, ಕಾವ್ಯಕ್ಕೆ ರೀತಿಯು ಆತ್ಮ ಎಂಬ ಮಾತುಗಳು ಏನಾಗಬೇಕು? ಇನ್ನು ಪಾಶ್ಚಾತ್ಯ ಕವಿವರರ ಕಾವ್ಯೋತ್ಸಾಹದ ಬಣ್ಣನೆಯ ನುಡಿಗಳೇನಾಗಬೇಕು? (ಕವಿಯು ಉತ್ತಮರಲ್ಲಿ ಉತ್ತಮನು, ಭೋಗಿಗಳಲ್ಲಿ ಭೋಗಿಯು, ಬುದ್ಧಿವಂತರಲ್ಲಿ ಬುದ್ಧಿವಂತನು, ತೃಪ್ತರಲ್ಲಿ ತೃಪ್ತನು) ಎಂಬ ಷೆಲ್ಲಿಯ ಮಾತು ಏನಾಗಬೇಕು? ಮಹನೀಯರೆ! ನಮ್ಮ ಪೂರ್ವಿಕರ ಕಾವ್ಯ ಮೀಮಾಂಸೆಯು ಕೆಲವು ಸಂದರ್ಭಗಳಲ್ಲಿ ಸರಿಯಾದ ಸ್ಥಾನವನ್ನು ಮುಟ್ಟಿ ಆಮೇಲೆ ಅತಿ ವಿವರಣೆಗೆ ಹೋಗಿ ಅಡ್ಡದಾರಿಯನ್ನು ಹಿಡಿಯಿತು. ಋಷಿಯಲ್ಲದವನು ಕವಿತೆಯನ್ನು ಮಾಡಲಾರನೆಂದವರು ನಮ್ಮವರು; ಆಮೇಲೆ ಸಾಹಿತ್ಯ ಶಾಸ್ತ್ರದಲ್ಲಿ ಅಧ್ಯಾಯದ ಮೇಲೆ ಅಧ್ಯಾಯವನ್ನು ಅಲಂಕಾರಕ್ಕೂ ಲಕ್ಷಣಕ್ಕೂ ಯಾರೂ ಕಾಣದ ಗುಣದೋಷಗಳಿಗೂ ಕೊಟ್ಟವರು ನಮ್ಮವರು. ಪಾಶ್ಚಾತ್ಯರ ಕಾವ್ಯ ಮೀಮಾಂಸೆಯೂ ಇನ್ನೊಂದು ರೀತಿಯಲ್ಲಿ ಹೀಗೆಯೇ ಆಯಿತೆಂದು ನನಗೆ ತೋರುತ್ತದೆ. ಷೆಲ್ಲಿಯು ಬಹಳ ಉತ್ತಮ ಕವಿ. ಅವನು ಕವಿಯನ್ನು ಹೊಗಳಿ ನುಡಿದ ಮಾತನ್ನು ಮೇಲೆ ಹೇಳಿದೆ. ಆದರೆ ಅವನ ಕಾವ್ಯದಲ್ಲಿ ಒಂದು ಕಡೆ ಅವನೇ, "Alas! I have nor hope nor health nor peace within, nor calm around, nor that content surpassing wealth, the sage in meditation found." ಎಂದು ಹೇಳಿದನು. ಹೀಗೆಂದು ಇವನು ಬರೆದಿರುವ ಪದ್ಯವನ್ನು ಓದುವವರಿಗೆ ಮಾತಿನ ಶಕ್ತಿ ಇನ್ನು ಮುಂದೆ ಹೋಗುವುದುಂಟೆ ಎನ್ನಿಸುತ್ತದೆ. ಇದನ್ನು ಬರೆದವನು ಸುಖಿಯಲ್ಲ; ಇದನ್ನು ಅವನು ಬರೆದುದು, In dejection near Naples; "Our

sweetest songs are those that tell of saddest thought" ಎಂದು ಈತನೇ ಹೇಳಿದ್ದಾನೆ. ಭಾರತವರ್ಷದ ಆದಿ ಕಾವ್ಯದ ಕವಿಗೆ ಶ್ಲೋಕವಾಗಿ ಬಂದುದು ಅವನ ಹೃದಯದ ಶೋಕ. ಹಾಫೀಸ್ ಕವಿಯು ತನ್ನ ಕವಿತೆಯನ್ನು ಕುರಿತು, "For each small word my heart hath surely bled silent and long" ಎಂದು ಹೇಳಿದನು. ಷೆಲ್ಲಿಯ ಅಭಿಮಾನಜನಕವಾದ ಪ್ರಶಂಸೆಯನ್ನು ನಾಲ್ಕು ಪದ್ಯ ಬರೆಯುಬಲ್ಲ ಕವಿಯೆಂಬ ವ್ಯಕ್ತಿಗಳೆಲ್ಲ ತಮಗೆ ಆರೋಪಿಸಿಕೊಳ್ಳಲಾಗದು. ಕವಿಯಾದವನು ನಿತ್ಯ ಸುಖವನ್ನು ಕುರಿತು ಮಾತನಾಡಬಹುದು; ಅದರ ಸ್ವರೂಪವನ್ನು ಕ್ಷಣ ಮಾತ್ರ ಕಾಣಬಹುದು; ಅದನ್ನು ಅವನು ನಿತ್ಯವಾಗಿ ಪಡೆದಿದ್ದಾನೆಂದು ನಾವು ಭಾವಿಸಲಾಗದು. ಅವನು ಇತರರಿಗೆ ಬೆಳಕನ್ನು ಕೊಡುವುದಲ್ಲದೆ ತಾನೂ ಆ ಬೆಳಕನ್ನು ಕಾಣಬಹುದು; ಕೆಲವು ವೇಳೆ ಪಂಜನ್ನು ಹಿಡಿದ ಕುರುಡನಂತೆ ಇತರರಿಗೆ ಬೆಳಕನ್ನು ಕೊಡುತ್ತ ತಾನು ಅದನ್ನು ಅನುಭವಿಸಲಾರದವನಾಗಿರಬಹುದು. ಒಟ್ಟಿನಲ್ಲಿ ಕವಿಯ ಕರ್ಮದ ಸ್ವರೂಪಕ್ಕೆ ಪ್ರಾಮುಖ್ಯವನ್ನು ಕೊಟ್ಟು ನಿಯಮಗಳನ್ನು ಮುಂದಿಟ್ಟ ಇತ್ತೀಚಿನ ನಮ್ಮ ಕಾವ್ಯ ಮೀಮಾಂಸೆಯನ್ನೂ, ಒಬ್ಬೊಬ್ಬ ಕವಿಯ ಅಂತರಂಗಕ್ಕೆ ಪ್ರಾಶಸ್ತ್ಯವನ್ನು ಕೊಟ್ಟು ನಿಯಮವೇ ಇಲ್ಲವೋ ಎಂಬಂತೆ ಕಾಣಿಸಿಕೊಳ್ಳುವ ಪಾಶ್ಚಾತ್ಯರ ಕಾವ್ಯ ಮೀಮಾಂಸೆಯನ್ನೂ ಸಮನ್ವಯಮಾಡುವ ಕಾವ್ಯ ಮೀಮಾಂಸೆಯೊಂದು ನಮಗೆ ಬೇಕಾಗಿದೆ. ಮಾನವನ ಪ್ರಯತ್ನಕ್ಕೇ ಹೆಚ್ಚು ಬೆಲೆಯನ್ನು ಕೊಡುವ ಪಾಶ್ಚಾತ್ಯ ಜೀವನ ತತ್ತ್ವವನ್ನೂ ಕೇವಲ ದೈವಿಕವೆನ್ನುವುದರ ಮೇಲೆ ಹೆಚ್ಚು ಭಾರ ಹಾಕುವ ನಮ್ಮವರ ಜೀವನತತ್ತ್ವವನ್ನೂ ಸಮನ್ವಯಮಾಡಿ ಒಂದು ಜೀವನ ತತ್ತ್ವವನ್ನು ನಿರ್ಧರಿಸಿಕೊಂಡು ಅದಕ್ಕೆ ಅನುಸಾರವಾದ ಸಾಹಿತ್ಯವನ್ನು ನಾವು ತರಬೇಕಾಗಿದೆ. ಋಷಿಯಾದವನು ಮಾತ್ರವಲ್ಲ, ಋಷಿಯಾಗಲು ಯತ್ನಿಸುತ್ತಿರುವವನೂ ಸುಖದ ಸ್ವರೂಪವನ್ನು ಕಂಡು ತಿಳಿದು ತನ್ನ ಅನುಭವವನ್ನು ಹೇಳಿದರೆ ಕಾವ್ಯವಾಗುತ್ತದೆ. ನಮ್ಮ ಹೊಸ ಸಾಹಿತ್ಯ ಶಾಸ್ತ್ರದಲ್ಲಿ ಈ ಸೂತ್ರಕ್ಕೆ ಸ್ಥಾನವು ದೊರೆಯಬೇಕು.

## ಎರಡು ಎಚ್ಚರಿಕೆಯ ಮಾತು

ಮುಖ್ಯ ತತ್ತ್ವದ ವಿಚಾರ ಹೀಗಿರಲಾಗಿ, ಬರೆಯುವ ದಾರಿಯನ್ನು ಕುರಿತು ಒಂದೆರಡು ವಿಷಯವನ್ನು ನಾವು ಮನಸ್ಸಿನಲ್ಲಿಡಬೇಕಾಗಿದೆ: ಹೊಸ ಸಾಹಿತ್ಯದ ಕವಿಗಳು ಹೊಸದರ ಪರಿಚಯದಿಂದ ಮೋಹ ಗೊಂಡು 'ದೇವರು ಪ್ರಪಂಚವನ್ನು ಕೈಬಿಟ್ಟಿದಾನೆ; ಇದನ್ನು ನಾವು ಉದ್ಧಾರಮಾಡುತ್ತೇವೆ' ಎಂಬ ಬುದ್ಧಿಯಿಂದ ಕಾವ್ಯಸೃಷ್ಟಿಗೆ ಹೊರಡ ಬಾರದು. 'ದೇವರು ಪ್ರಪಂಚವನ್ನು ಉದ್ಧಾರಮಾಡುತ್ತಿದ್ದಾನೆ, ನಾವು ಅವನ ಕೈಯ ಆಯುಧಗಳು' ಎಂದು ಹೊರಟರೆ ಸರಿಯಾದ ಸೂತ್ರವನ್ನು ಹಿಡಿದಂತಾದೀತು. ಕನ್ನಡದ ಸಂಪ್ರದಾಯವು ಬಹು ಉಚ್ಚ ಸಂಪ್ರದಾಯ; ನಾವು ಬರೆಯುವ ಯಾವ ಗ್ರಂಥದಿಂದಲಾಗಲಿ ಉಚ್ಚವಾದ ಆ ಸಂಪ್ರದಾಯಕ್ಕೆ ಕುಂದು ಬರಬಾರದು. ನಮ್ಮ ಸಾಹಿತ್ಯದ ಆದಿ ಕವಿಯೇ ಆ ಸಂಪ್ರದಾಯವನ್ನು ಆಕಾಶದಲ್ಲಿಟ್ಟನು. ಸ್ವರೂಪತಃ ಕವಿಯಾದವನು ಪಾಂಡಿತ್ಯವುಳ್ಳವನಾದರೆ ಎಂತಹ ಕಾವ್ಯ ವನ್ನು ಬರೆಯಬೇಕೆಂದು ಪಂಪನ ಹೊಂದಾವರೆಗಳು ನಿಯಮಿಸಿವೆ. ಸಾಹಿತ್ಯದ ಉನ್ನತ ಶಿಖರಗಳಲ್ಲಿ ಎಂತಹ ತೀಕ್ಷ್ಣವೂ ನಿರ್ದಾಕ್ಷಿಣ್ಯವೂ ಆದ ಆತ್ಮ ಪರೀಕ್ಷೆ ಇರಬೇಕೆಂಬುದನ್ನು ಬಸವೇಶ್ವರನ ವಚನಗಳು ತೋರುತ್ತಿವೆ. ಮಹಾ ಕಾವ್ಯದ ಭಾವೌನ್ನತ್ಯಕ್ಕೆ ಸ್ಫುರದ್ರೂಪವು ಬರಬೇಕಾದರೆ ಎಷ್ಟು ವಿಶಾಲವೂ ಉದಾರವೂ ಆದ ಪ್ರಪಂಚ ಜ್ಞಾನವು ಆವಶ್ಯಕವೆನ್ನುವುದು ಕುಮಾರವ್ಯಾಸನ ಕಾವ್ಯದಿಂದ ತಿಳಿಯುತ್ತದೆ. ಈ ಮೂರು ಗ್ರಂಥಗಳೂ ಪ್ರಪಂಚದ ಅತ್ಯುತ್ತಮ ಗ್ರಂಥಗಳಲ್ಲಿ ಸೇರಿ ದುವು. ಇಂತಹ ಗ್ರಂಥಗಳನ್ನುಳ್ಳ ನಮ್ಮ ಸಾಹಿತ್ಯವು ಸಾಹಿತ್ಯ ಪ್ರಪಂಚದ ಮೇಲು ಮೆಟ್ಟಲನ್ನು ಕಂಡಿರತಕ್ಕುದೆಂಬುದರಲ್ಲಿ ಸಂದೇಹ ವಿಲ್ಲ. ಈ ಮಹಾ ಗ್ರಂಥಗಳಿಂದ ಕನ್ನಡಕ್ಕೆ ಒಂದು ಪ್ರಶಸ್ತಿ ಬಂದಿರು ವುದೇನೋ ನಿಜ. ಆದರೆ ಇದರಿಂದ ನಮ್ಮೆಲ್ಲರ ಕೆಲಸವೂ ಕಷ್ಟವಾಗಿದೆ. ಈ ಗ್ರಂಥಗಳನ್ನು ರಚಿಸಿದವರ ಹೆಸರು ಹೇಳುವ ನಾವು ನಮ್ಮ ಕಾವ್ಯಕ್ಕೆ ಅಲ್ಪ ರೀತಿಯನ್ನು ತರಬಾರದು. ಇನ್ನೊಂದು ವಿಷಯವೇನೆಂದರೆ, ಕೇವಲ Originality, ಎಂದರೆ, ನವೀನತೆ ಎಂಬ ಒಂದು ಭ್ರಮೆಯಲ್ಲಿ

ನಾವು ತೀರ ಕಾಡು ಮೇಯ್ದು ಹೋಗಬಾರದು ಎಂಬುದು. ದೃಷ್ಟಿಸಿ ನೋಡಿದರೆ Originality ಎನ್ನುವುದು ಇಲ್ಲವೇ ಇಲ್ಲ; ಇದ್ದರೆ ಅದು ಅಷ್ಟು ದೊಡ್ಡ ವಿಷಯವಲ್ಲ, ನಾನು ಸ್ವತಂತ್ರವಾಗಿ ಬರೆದಿದ್ದೇನೆ, ನಾನು ಯಾರಿಂದಲೂ ಏನನ್ನೂ ಕಲಿಯಲಿಲ್ಲ ಎನ್ನುವವರು ". . . . . . . . I am a block-head at first-hand" ಎಂದು ಹೇಳುತ್ತಾರೆಂದು ಗಯಟೇ ಎಂಬುವನು ಹೇಳಿದ್ದಾನೆ. ನಾವೆಲ್ಲ ಇತರರಿಂದ ಕಲಿತೇ ದೊಡ್ಡವರಾಗಿರುವುದು. ಕಲಿತುದನ್ನು ಜೀರ್ಣಿಸಿಕೊಂಡಿದ್ದರೆ ಸಾಕು. ಇಷ್ಟನ್ನು ಮಾಡಿದ ಮೇಲೆ ಇತರರು ಬರೆದಂತೆ ಬರೆದರೂ ಚೆನ್ನಾಗಿ ಬರೆದು ನಮ್ಮ ಸಂಸ್ಕಾರವು ನಮ್ಮ ಕೃತಿಯಲ್ಲಿ ರೂಪುಗೊಳ್ಳುವಂತೆ ಮಾಡಬೇಕು. ಮತ್ತೊಂದು ವಿಷಯವೇನೆಂದರೆ, ಕಾವ್ಯದಲ್ಲಿ ಒಂದು ಸಂಪ್ರದಾಯವಿರುವಂತೆ ಭಾಷೆಯಲ್ಲಿ ಒಂದು ಮರ್ಯಾದೆಯಿದೆ. ಬರೆಯುವವರೆಲ್ಲ ಇದನ್ನು ಸಾವಧಾನವಾಗಿ ತಿಳಿದು ಎಚ್ಚರಿಕೆಯಿಂದ ಬರೆಯಬೇಕು. ನಮ್ಮಲ್ಲಿ ಚೆನ್ನಾಗಿ ಬರೆಯುವವರೂ ಕೂಡ ಸಂಸ್ಕೃತದ ರಹಿತ ವಿಹೀನ ಎಂಬ ಮಾತುಗಳಿಗೆ ವ್ಯತ್ಯಾಸವೇನು? ಅವು ಎಂಥ ಕಡೆ ಬರಬೇಕು ಎಂದು ಗ್ರಹಿಸಿರುವುದಿಲ್ಲ. ಇದರಂತೆ ನೂರು ವಿಷಯ ವಿರುತ್ತದೆ. ಭಾಷೆಯ ಮರ್ಯಾದೆಯೆಂದು ಹೇಳಿಹೇಳಿದವರ ಮಾತನ್ನೆಲ್ಲ ಕೇಳಬೇಕಾದುದಿಲ್ಲ. ಆದರೆ ಸ್ವಭಾವವಾಗಿ ಮಾತಿನೊಂದಿಗೆ ಬೆಳೆದು ಬಂದಿರುವ ಮರ್ಯಾದೆಯೊಂದು ಇರುತ್ತದೆ; ಅದನ್ನು ಮೀರಬಾರದು. ಬರೆಯುವವರೆಲ್ಲ ಭಾಷೆಯನ್ನು ಎಚ್ಚರಿಕೆಯಿಂದ ಕಲಿಯಬೇಕು. ಅದರಲ್ಲಿಯೂ ಕವಿಯಾದವನು ಮಾತಿನ ಸ್ವರೂಪವನ್ನು ಚೆನ್ನಾಗಿ ತಿಳಿಯದೆ ಕೆಲಸಕ್ಕೆ ಕೈಹಾಕಲೇ ಬಾರದು.

### ನಮ್ಮ ಸಾಹಿತ್ಯದಲ್ಲಿ ಈಗ ನಡೆಯುತ್ತಿರುವ ಕೆಲಸ

ಈಗ ನಮ್ಮ ಸಾಹಿತ್ಯದಲ್ಲಿ ನಡೆಯುತ್ತಿರುವ ಕೆಲಸವೆಂಥದೆಂದು ತಮ್ಮಲ್ಲಿ ಅನೇಕರಿಗೆ ತಿಳಿದೇ ಇದೆ. ನಮ್ಮ ಗ್ರಂಥಕರ್ತರು ಹೊಸ ದಾರಿಯಲ್ಲಿ ಕಾಲಿಟ್ಟಿರುವುದೇನೋ ನಿಜ. ಇದು ಅನಿವಾರ್ಯವಾದ ಮಾರ್ಪಾಡು. ಭರತಖಂಡದಲ್ಲೆಲ್ಲ ಕಾಣುವ ಈ ಪ್ರವೃತ್ತಿಯು ನಮ್ಮಲ್ಲಿಯೂ ತಲೆದೋರಿದೆ. ನಮ್ಮ ಪದ್ಯಕಾವ್ಯವು ಛಂದಸ್ಸಿನ

ಹೊಸ ಕಟ್ಟಡಗಳನ್ನು ಕಟ್ಟಿ ನೋಡುತ್ತಿದೆ. ನಮ್ಮ ಗದ್ಯದಲ್ಲಿ ಅನೇಕ ಶೈಲಿಗಳು ಬೆಳೆದಿವೆ. ನಮ್ಮ ಪದ್ಯವೂ ಗದ್ಯವೂ ಪಾಶ್ಚಾತ್ಯ ಸಾಹಿತ್ಯಗಳ ರೀತಿಯಲ್ಲಿ ಜೀವನದ ಅನೇಕ ವಿಷಯಗಳನ್ನು ವಸ್ತುವಾಗಿ ಸೇರಿಸಿ ಕೊಂಡಿವೆ. ನಮ್ಮ ಹೊಸ ಕಾವ್ಯದಲ್ಲಿ ಒಂದು ಹೊಸ ಚೈತನ್ಯವು ಕಂಡುಬರುತ್ತಿದೆ. ಇದೆಲ್ಲ ಬಹಳ ಸಂತೋಷದ ವಿಚಾರ. ಹೊಸ ದಾರಿ ಯಲ್ಲಿ ಅಡಿಯಿಟ್ಟಿರುವ ಈ ಸಾಹಿತ್ಯದ ವಿಚಾರವಾಗಿ ಕೆಲವು ಭಿನ್ನಾಭಿ ಪ್ರಾಯಗಳಿರುವುದು ಸಹಜ. ನಮ್ಮ ಹೊಸ ಕಾವ್ಯದಲ್ಲಿಯ ಹಲವು ವಿಷಯಗಳು ಅಲ್ಪವಾದುವೆಂದೂ, ಉತ್ತಮ ಕಾವ್ಯಕ್ಕೆ ಯೋಗ್ಯವಾದ ವಸ್ತುಗಳಲ್ಲವೆಂದೂ ಕೆಲವರಿಗೆ ತೋರಬಹುದು. ಬರೆಯುವ ಕತೆಗಳು ನಡೆಯುವ ವಿಷಯುವನ್ನು ನಡೆದಂತೆ ಬರೆದಿರುತ್ತವೆ, ಇದರಲ್ಲಿ ಏನು ವಿಶೇಷ ಎಂದು ತೋರಬಹುದು. ಪ್ರಾಸ ಬಿಟ್ಟಿರುವುದು ಕಾವ್ಯದ ಮೂಲಕ್ಕೇ ಕೇಡನ್ನು ತಂದಿತೆಂದು ಕೆಲವರ ಭಾವನೆ. ಇನ್ನು ಕೆಲ ವರಿಗೆ ನಮ್ಮ ಭಾಷೆಯ ರೂಪಗಳನ್ನು ನಮ್ಮ ಗ್ರಂಥಕಾರರು ಕೆಡಿಸು ತ್ತಾರೆ ಎಂದು ತೋರಬಹುದು. ಸಂಪ್ರದಾಯದ ಭಕ್ತರು ಹೀಗೆನ್ನು ವುದು ಆಶ್ಚರ್ಯವಲ್ಲ. ಇಂಗ್ಲೀಷಿನಲ್ಲಿ ಬಿಡಿ ವೃತ್ತವು ಹೊಸದಾಗಿ ಬಂದಾಗ ಈಗ ನಾವು ಹೇಳುವಂತಹ ಮಾತುಗಳನ್ನು ಅಲ್ಲಿಯ ಸಂಪ್ರ ದಾಯದ ಭಕ್ತರೂ ಹೇಳಿದರು. ವರ್ಡ್ಸ್‌ವರ್ತ್ ಕೋಲರಿಡ್ಜ್ ಕವಿ ಗಳು ಹೊಸ ಶೈಲಿಯನ್ನು ವಾಡಿಕೆಗೆ ತಂದಾಗ ಅವರನ್ನು ಅಲ್ಲಿಯ ವಿಮರ್ಶಕರು ತಕ್ಕಮಟ್ಟಿಗೆ ಅಲ್ಲಗಳೆದರು. ಇದು ಯಾವುದೂ ತಪ್ಪಿದು ದಲ್ಲ. ಆದರೆ ಅಭಿಪ್ರಾಯದಲ್ಲಿ ಭೇದವಿದ್ದ ಮಾತ್ರಕ್ಕೆ ನಾವು ಒಬ್ಬರನ್ನೊಬ್ಬರು ಬಯ್ಯಬೇಕಾದುದಿಲ್ಲ. ಯಾವನಾದರೂ ಗ್ರಂಥ ಗಳನ್ನು ಓದುವವರೆಗೆ ಮಾತ್ರ ಭಾಷಾಪ್ರೇಮಿಯಾಗಿರುತ್ತಾನೆ, ಗ್ರಂಥ ಗಳನ್ನು ಬರೆಯುವುದಕ್ಕೆ ತೊಡಗಿದೊಡನೆ ಅವನು ಭಾಷಾ ದ್ರೋಹಿ ಯಾಗುತ್ತಾನೆ ಎಂದು ಹೇಳಲಾಗುವುದೆ? ಭಾಷೆಯಲ್ಲಿ ಪ್ರೇಮವುಳ್ಳವ ರಲ್ಲವೆ ಭಾಷೆಯಲ್ಲಿ ಕೆಲಸಮಾಡಬೇಕೆನ್ನುವರು? ಅವರು ಏನಾದರೂ ತಪ್ಪುಮಾಡಿದರೂ ಓದುವವರು ಅದನ್ನು ಸ್ವಲ್ಪ ಸೈರಣೆಯಿಂದ ನೋಡಿ, 'ಪಾಪ, ತಪ್ಪಾಯಿತು' ಎನ್ನಬೇಕು; ಅದನ್ನು ಬಿಟ್ಟು ಕಠಿನವಾದ

ಭಾಷೆಯಿಂದ ಅವರನ್ನು ಬಡಿಯುವುದಕ್ಕೆ ಹೋಗಬಾರದು. ಇಷ್ಟಕ್ಕೆ, ಬರೆಯುವವನ ಭಾವನೆಯೇ ಸರಿಯಾಗಿರಬಹುದು, ನಮ್ಮದು ತಪ್ಪಾಗಿರ ಬಹುದು ಎಂದೂ ಅವರು ಎಣಿಸುವುದು ಒಳ್ಳೆಯದು. ಏಕೆಂದರೆ ಹೀಗೂ ಒಂದೊಂದು ಸಲ ಆಗಿದೆ. ಹೀಗಾಗಿಯೇ ಸಾಹಿತ್ಯಗಳು ಬೆಳೆದಿರುವುದು, ಭಾಷೆಗಳು ಮುಂದುವರಿದಿರುವುದು. ಓದುವವರು ಈ ತಾಳ್ಮೆಯನ್ನು ತೋರಬೇಕೆಂದ ಮಾತ್ರಕ್ಕೆ ಗ್ರಂಥಕರ್ತರು ಸಿಕ್ಕಿದ ಹಾಗೆ ಬರೆಯಬಹುದೆಂದು ಅರ್ಥವಲ್ಲ. ಗ್ರಂಥಕರ್ತನು ಎಂಥವನಾಗಿರ ಬೇಕು, ಎಷ್ಟು ಎಚ್ಚರಿಕೆಯಿಂದ ನಡೆಯಬೇಕೆಂಬುವುದು ಮೊದಲೇ ಹೇಳಿದೆ. ತಮ್ಮ ಮೇಲಿರುವ ಭಾರವನ್ನು ಗ್ರಂಥಕರ್ತರೂ ಎಚ್ಚರಿಕೆ ಯಿಂದ ನೋಡಿಕೊಳ್ಳಬೇಕು.

## ಗ್ರಂಥಕರ್ತರಿಗೆ ಕೆಲವು ಸೂಚನೆಗಳು

ನಮ್ಮ ಸಾಹಿತ್ಯದ ಹೊಸ ಗ್ರಂಥಕಾರರು ಏನು ಮಾಡುತ್ತಿ ದ್ದಾರೆಂದು ತಿಳಿಯದವರು ಹೇಳುವ ಆಕ್ಷೇಪಗಳು ಹೀಗಿರುವಲ್ಲಿ ಗ್ರಂಥ ಕಾರರೇ ಮನಗಂಡಿರುವ ಕೆಲವು ಕೊರತೆಗಳು ನಮ್ಮಲ್ಲಿವೆ. ಇವುಗಳಲ್ಲಿ ಸಂಪ್ರದಾಯದ ಸಂಕೋಲೆಯಿಂದ ಬಿಡಿಸಿಕೊಂಡು ಬಂದಿರುವವರು ಹೊಸ ಸಂಪ್ರದಾಯವನ್ನೇ ಸಂಕೋಲೆಯನ್ನಾಗಿ ಮಾಡಿಕೊಂಡಿರು ವುದು ಮುಖ್ಯವಾದುದು. ನಮ್ಮಲ್ಲಿ ಸಣ್ಣ ಕತೆಗಳು ಆರಂಭವಾಗಿ ಹಲವು ವರುಷಗಳಾದುವು. ಬಾಲ್ಯದ ಪ್ರೇಮ, ಮದುವೆ, ವಿರಹ, ಇವುಗಳನ್ನು ಬಿಟ್ಟು ಬೇರೆಯ ವಿಷಯಗಳಿಗೆ ಇನ್ನೂ ನಾವು ನಡೆದಿಲ್ಲ; ದೊಡ್ಡ ಕತೆಗಳನ್ನು ಬರೆಯುವುದಕ್ಕೆ ಯಾರೂ ತೊಡಗಿಲ್ಲ; ನಾವೆಲನ್ನು ರಚಿಸುವ ಆಲೋಚನೆಯೇ ನಮ್ಮಲ್ಲಿ ತಲೆದೋರಿದಂತೆ ಕಾಣಲಿಲ್ಲ. ಪದ್ಯದಲ್ಲಿ ವ್ಯಂಜಕ ಗೀತೆಗಳು ವಾಡಿಕೆಗೆ ಬಂದಿವೆ. ಆದರೆ ವ್ಯಂಜನದ ವಿಷಯವು ಜೀವನದಂತೆ ವಿಸ್ತಾರವಾಗಲಿಲ್ಲ; ಗೀತೆಗಳೆಲ್ಲ ಒಂದೇ ರೀತಿ ಯವಾಗಿ ಕಾಣುತ್ತಿವೆ. ಬಿಡಿ ವೃತ್ತವೊಂದು ರೂಪುಗೊಂಡಿತು. ಇನ್ನೂ ನಾವು ಅದನ್ನು ಇಂಗ್ಲೀಷಿನಲ್ಲಿ ಉಪಯೋಗಿಸುವಂತೆ ಹಲವು ವಿಷಯ ಗಳಿಗೆ ಉಪಯೋಗಿಸಿ ನೋಡಿಲ್ಲ. ಪಾದದ ಅಂತ್ಯದಿಂದ ಸಂಧಿಯನ್ನು ಬಿಟ್ಟು ಬರೆದುದಾಯಿತು; ಇಟ್ಟುಕೊಂಡು ಬರೆದ ಹಿಂದಣ ರೀತಿಯೂ

ಬಿಟ್ಟು ಬರೆಯುವ ಈಗಣ ರೀತಿಯೂ ಕಲೆಯುವುದು ಸಾಧ್ಯವೇ ಎಂದು ಇನ್ನೂ ನಮ್ಮ ಮನಸ್ಸಿಗೇ ನಿರ್ಧಾರವಾಗಿಲ್ಲ. ನಾಟಕವನ್ನು ಬರಿಯ ಗದ್ಯದಲ್ಲಿ ಬರೆದುದಾಯಿತು; ಅದು ನಮ್ಮ ನಾಟಕ ರಂಗವನ್ನು ಇನ್ನೂ ಹಿಡಿದಿಲ್ಲ. ಹಳೆಯ ರೀತಿಯನ್ನು ತೀರ ಬಿಡದೆ ಹೊಸ ರೀತಿಯನ್ನು ಅನುಸರಿಸಿಯೇ ನಾಟಕವನ್ನು ಸಜೀವವನ್ನಾಗಿ ಮಾಡುವ ಪ್ರಯತ್ನ ನಮ್ಮಲ್ಲಿ ನಡೆಯಲೇ ಇಲ್ಲ. ಭಾವದ ವ್ಯಂಜನೆಗೆ ಗೀತೆಯು ಎಷ್ಟು ಒಳ್ಳೆಯ ಸಾಧನವೋ ಉಪನ್ಯಾಸವೂ ಅಷ್ಟೇ ಒಳ್ಳೆಯ ಸಾಧನವೆಂಬುದನ್ನು ನಮ್ಮ ಬರಹಗಾರರು ಕಂಡಂತೆ ತೋರುವುದಿಲ್ಲ. ಯಾವ ಸಾಹಿತ್ಯದ ಪರಿಚಯದಿಂದ ನಮ್ಮಲ್ಲಿ ಹೊಸ ದಾರಿಯೊಂದು ಕಂಡಿತೋ ಅದೇ ಸಾಹಿತ್ಯವನ್ನು ನಮ್ಮ ತರುಣ ಲೇಖಕರು ಮುಂದಿಟ್ಟುಕೊಂಡು ಕೆಲಸಮಾಡಿದರೆ ಈ ಎಲ್ಲ ರೀತಿಯ ಸಾಹಿತ್ಯ ರೂಪಗಳೂ ವಾಡಿಕೆಗೆ ಬರುವುವು. ಹೊಸ ಹೊಸ ರೀತಿಯ ಕೆಲಸವನ್ನು ಹೊಸ ಹೊಸ ಹುರುಪಿನಿಂದ ಮಾಡಿ ಅದರದರ ಯೋಗ್ಯತೆಯನ್ನು ಕಂಡುಕೊಂಡರಲ್ಲದೆ ನಮ್ಮ ಸಾಹಿತ್ಯವನ್ನು ನಾವು ಮುಂದುವರಿಸಲಾರೆವು. ಈಗ ಆಗಿರುವ ಯಾವ ಕೆಲಸವೂ ಸಾಹಿತ್ಯದಲ್ಲಿ ಸ್ವತಃಸಿದ್ಧವಾದುದೆಂದು ನಾವು ತಿಳಿಯಬಾರದು. ಪರೀಕ್ಷೆಯ ಅವಸ್ಥೆ ಇನ್ನೂ ಮುಗಿದಿಲ್ಲ. ಹೊಸ ರೂಪಗಳನ್ನಾದರೂ 'ಚೆನ್ನಾಗಿದ್ದರೆ ಸಂತೋಷ, ಇಲ್ಲದಿದ್ದರೆ ಅದು ನಮ್ಮದಲ್ಲ' ಎಂದು ಬಿಡುವ ಧೈರ್ಯವನ್ನು ನಾವು ಬಳೆಯಿಸಬೇಕು. ಹಳೆಯದೆಲ್ಲ ಸಾಧು ಎನ್ನುವುದು ತಪ್ಪು. ಹಾಗೆಯೇ ಹೊಸದೆಲ್ಲ ಸಾಧುವೆನ್ನುವುದೂ ತಪ್ಪು. ಸ್ವಾತಂತ್ರ್ಯವು ಸ್ವಾತಂತ್ರ್ಯವೆಂದು ಕರೆದುಕೊಳ್ಳುವ ದಾಸ್ಯವಾಗಬಾರದು. ಸಾಹಿತ್ಯರಂಗದಲ್ಲಿ ಕೆಲಸಮಾಡುವವರು ಈ ತತ್ತ್ವವನ್ನು ಮನಸ್ಸಿನಲ್ಲಿಡುವುದು ಆವಶ್ಯಕ.

**ಒಡನೆಯೇ ಮಾಡಬೇಕಾದ ಕೆಲಸ**

ಮಹನೀಯರೇ, ನಮ್ಮ ವಿದ್ಯಾಭ್ಯಾಸದಲ್ಲಿ ಕನ್ನಡಕ್ಕೆ ಸರಿಯಾದ ಸ್ಥಾನವನ್ನು ಕೊಡಿಸುವುದೂ, ಕನ್ನಡಕ್ಕೆ ಎಲ್ಲ ಭಾಷೆಗಳಿಂದ ಉತ್ತಮ ಗ್ರಂಥಗಳನ್ನು ಭಾಷಾಂತರ ಮಾಡುವುದೂ, ಕನ್ನಡ ರಾಷ್ಟ್ರವನ್ನೂ ಭಾಷೆಯನ್ನೂ ಒಂದಾಗಿ ಮಾಡುವುದೂ, ಹೊಸ ಯುಗದ ನಮ್ಮ

ಗ್ರಂಥಕರ್ತರು ಉತ್ತಮ ಗ್ರಂಥಗಳನ್ನು ಬರೆದು ನಮ್ಮ ಜನದ ಜೀವನವನ್ನು ಹಿಡಿದು ತಿದ್ದುವುದೂ ಕಾಲಕ್ರಮವಾಗಿ ಆಗುವ ಕೆಲಸ. ಈಗ ಒಡನೆ ಏನು ಮಾಡಬೇಕು ಎಂದು ತಮ್ಮಲ್ಲಿ ಯಾರಾದರೂ ಕೇಳಬಹುದು. ಇದು ನ್ಯಾಯವಾದ ಮಾತಾಗಿದೆ. ಇರುವುದಕ್ಕೆ ಮನೆ ಇಲ್ಲದಿರುವವನು ಗಂಧರ್ವನಗರವನ್ನು ಕಟ್ಟಿ ಪ್ರಯೋಜನವೇನು? ಈಗ ನಾವು ಒಡನೆಯೇ ಮಾಡಬೇಕಾದ ಕೆಲಸಗಳೂ ಇವೆ. ಅವುಗಳನ್ನು ಕುರಿತು ಎರಡು ಮಾತನ್ನು ಹೇಳುತ್ತೇನೆ. ಈ ಕೆಲಸಗಳಲ್ಲಿ ಮೊದಲನೆಯದು, ನಮ್ಮಲ್ಲಿರತಕ್ಕ ಗ್ರಂಥಕರ್ತರಿಗೆ ಉತ್ತೇಜನ ಕೊಡುವುದು, ಎಂದರೆ ಅವರು ಮಾಡುತ್ತಿರುವ ಕೆಲಸಕ್ಕೆ ಅವರಿಗೆ ತಕ್ಕ ಪ್ರತಿಫಲ ದೊರೆಯುವಂತೆ ಮಾಡುವುದು. ನಮ್ಮಲ್ಲಿ ಹಲವರು ಈಗ ಇತರ ವಿಧದಲ್ಲಿ ಜೀವನಮಾಡಿಕೊಂಡು ಜೊತೆಗೆ ಸಾಹಿತ್ಯದಲ್ಲಿ ಕೆಲಸವನ್ನು ಮಾಡುತ್ತಿದ್ದೇವೆ. ಇಂಥವರಿಂದಲೇ ಸಾಹಿತ್ಯಕ್ಕೆ ಸಾಕಾದಷ್ಟು ಸೇವೆಯಾಗುತ್ತದೆನ್ನುವುದು ಭ್ರಮೆ. ಸಾಹಿತ್ಯ ಸೇವೆಯು ಒಂದು ಉಪಾಸನೆ. ಬದುಕನ್ನು ಮುಖ್ಯವಾಗಿ ಬೇರೆಯ ಕೆಲಸಕ್ಕೆ ಕೊಟ್ಟು ಸಾಹಿತ್ಯವನ್ನು ವಿರಾಮ ಕಾಲಕ್ಕೆ ಉಳಿಸಿಕೊಂಡಿರುವವನು ಸಾಹಿತ್ಯರಂಗದಲ್ಲಿ ಬದುಕನ್ನು ಸಂಪೂರ್ಣವಾಗಿ ಸಾಹಿತ್ಯಕ್ಕೆ ಕೊಡುವವನಿಗೆ ಸಾಧ್ಯವಾದ ಮೆಟ್ಟಿಲನ್ನು ಏರಲಾರನು. ವಿರಾಮದಲ್ಲಿ ಕೆಲಸಮಾಡುವವರಿಂದಲೂ ಒಳ್ಳೆಯ ಕೆಲಸ ನಡೆಯಬಹುದು. ಆದರೆ ಅದು ಜನಕ್ಕೆ ಎಷ್ಟು ಬೇಕೋ ಅಷ್ಟು ಆಗುವುದಿಲ್ಲ. ಇಂದಿಗಲ್ಲದಿದ್ದರೆ ಇನ್ನು ಹತ್ತು ವರುಷಕ್ಕಾದರೂ ಇಪ್ಪತ್ತು ವರುಷಕ್ಕಾದರೂ ಕನ್ನಡದಲ್ಲಿ ಒಳ್ಳೆಯ ಪುಸ್ತಕಗಳನ್ನು ಬರೆದರೆ ಸಾಮಾನ್ಯವಾಗಿ ಜೀವನಕ್ಕೆ ಸಾಕಾದಷ್ಟು ಪ್ರತಿಫಲ ಸಿಕ್ಕುತ್ತದೆಂಬ ಭರವಸೆ ಬರೆಯುವವರಿಗೆ ಬರಬೇಕು. ಧನವಂತರ ಆಶ್ರಯದಿಂದ ಮಾತ್ರ ಸಾಹಿತ್ಯವು ಬೆಳೆಯುವ ದಿನವಲ್ಲ ಇದು. ಗ್ರಂಥಕಾರನು ಸಮಸ್ತ ಪ್ರಜೆಗಾಗಿ ದುಡಿಯುತ್ತಾನೆ; ಸಮಸ್ತ ಪ್ರಜೆಯೂ ಅವನಿಗೆ ಜೀವನವನ್ನು ಕೊಡಬೇಕು. ಪುಸ್ತಕವನ್ನು ಬರೆದು ಜೀವಿಸುವವರು ಪೊಳ್ಳು ಪುಸ್ತಕಗಳನ್ನು ಬರೆದು ಹಣಸಂಪಾದಿಸುವಂತಾದರೆ ಏನುಮಾಡುವುದು ಎನ್ನಬಹುದು. ಆದರೆ ಈ ಸಂದರ್ಭದಲ್ಲಿ ಹತ್ತು ಜನ ಪೊಳ್ಳು ಪುಸ್ತಕ

ಗಳನ್ನು ಬರೆದು ಧನವನ್ನು ಸಂಪಾದಿಸುವೆವೆಂದರೆ ಒಬ್ಬನಾದರೂ ಕೀರ್ತಿಗಾಗಿ ಒಂದು ಉತ್ತಮವಾದ ಗ್ರಂಥವನ್ನೇ ಬರೆಯುವನು. ನಮ್ಮ ಜನರು ಮುಂದಕ್ಕೆ ಇಂಥವರಿಗೆ ಜೀವನದ ವೇತನವನ್ನು ಕೊಡುವಂತೆ ಆಗಬೇಕಾದರೆ ಈಗ ಅಚ್ಚಿನ ಖರ್ಚು ಏಳುವಂತಾದರೂ ಗ್ರಂಥ ಕರ್ತರಿಗೆ ಸಹಾಯಮಾಡಬೇಕು. ಬರೆದವರಿಗೆಲ್ಲ ಹಿಡಿ ಹೊನ್ನು ಕೊಡಿ ಎಂದು ನಾನು ಹೇಳುವುದಿಲ್ಲ. ಒಳ್ಳೆಯ ಪುಸ್ತಕವೆಂದು ತೋರಿದುದರ ಒಂದೊಂದು ಪ್ರತಿಯನ್ನು ಎಲ್ಲರೂ ಕೊಳ್ಳಿರಿ, ಅಷ್ಟೇ. ಒಬ್ಬನು ಕೊಂಡು ಹತ್ತುಜನ ಓದಬೇಡಿರಿ, ಅಂಗಡಿಯಲ್ಲಿ ನೋಡಿ ಅಲ್ಲಿಯೇ ಇಡಬೇಡಿರಿ. ನೀವು ಓದಿ ಮುಗಿಸಿರುವ ಪುಸ್ತಕವನ್ನಾದರೂ ಮನೆಯವರಿಗೆಂದು ತಂದುಕೊಡಿರಿ. ನೀವು ಓದಿದಾಗ, ಇದೇನು ಸ್ಕಾಟನ ನಾವಲಿನ ಹಾಗೆ ಇದೆಯೋ ಎಂದು ತೋರಿದರೂ ಸ್ಕಾಟನ ನಾವಲನ್ನು ಕಾಣದ ಮನೆಯ ಹೆಂಗಸರಿಗೆ ಮಕ್ಕಳಿಗೆ ಚೆನ್ನಾಗಿರಬಹುದೆಂದು ತೋರುವ ಪುಸ್ತಕದ ಒಂದು ಪ್ರತಿಯನ್ನು ಅವರಿಗೆ ತಂದುಕೊಡಿರಿ. ಈಗ ನಮ್ಮಲ್ಲಿ ಸಾಮಾನ್ಯವಾಗಿ ಒಳ್ಳೆಯ ಪುಸ್ತಕವೆನ್ನುವುದು ಯಾವುದೂ ಎರಡನೆಯ ಮುದ್ರಣಕ್ಕೆ ಬರುವುದೇ ದುಸ್ತರ; ನಾಲ್ಕು ಐದು ಮುದ್ರಣಗಳಿಗೆ ಬರುವುದೆನ್ನುವುದು ಇಲ್ಲವೇ ಇಲ್ಲ. ನಾನು ಇದುವರೆಗೆ ನೋಡಿರುವ ಕನ್ನಡದ ಪುಸ್ತಕಗಳಲ್ಲಿ ಹತ್ತನೆಯ ಮುದ್ರಣಕ್ಕೆ ಬಂದಿರುವ ಪುಸ್ತಕವು ಒಂದೇ: ಅದು ಪಂಡಿತರಿಂದ ಪರಿಶೋಧಿಸಲ್ಪಟ್ಟು ಯಾರೋ ಒಬ್ಬ ಮಹನೀಯರ ಸ್ವಕೀಯ ಮುದ್ರಾಶಾಲೆಯಲ್ಲಿ ಮುದ್ರಿಸಲ್ಪಟ್ಟ ಶನಿದೇವರ ಮಹಾತ್ಮ್ಯೆ. ಇನ್ನೊಂದು ಮಾತು: ನಮ್ಮಲ್ಲಿ ಓದಬಲ್ಲ ಜನ ಬಹಳ ಕಡಮೆ. ಓದು ಬಲ್ಲವರು ತಾವು ಓದಿ ಚೆನ್ನಾಗಿದೆಯೆಂದುಕೊಂಡ ಬರಹವನ್ನು ಓದಲಾರದವರಿಗೆ ತಿಳಿಸುವುದಕ್ಕೆ ಸಾಧ್ಯವಾದ ಏರ್ಪಾಡುಗಳನ್ನು ಮಾಡಬೇಕು. ಜೈಮಿನಿ ಭಾರತವೂ ಕುಮಾರವ್ಯಾಸ ಭಾರತವೂ ನಮ್ಮ ಜನರಲ್ಲಿ ಹಿಂದೆ ವಾಡಿಕೆಗೆ ಬಂದುದು ಹೀಗೆಯೇ. ಆ ಕಾವ್ಯಗಳು ವಾಡಿಕೆಗೆ ಬಂದ ಹಾಗೆಯೇ ನಮ್ಮ ಹೊಸ ಗ್ರಂಥಗಳೂ ವಾಡಿಕೆಗೆ ಬರಬೇಕು; ನಾವು ಅದೇ ಏರ್ಪಾಡನ್ನು ಈಗಲೂ ಮಾಡಬೇಕು. ಹಳೆಯ ಕಾವ್ಯಗಳನ್ನೂ ಹೊಸ ಕಾವ್ಯಗಳನ್ನೂ ಜನರಲ್ಲಿ ಓದಿಸಿ ಜನರ ಸಾಹಿತ್ಯಾಭಿರುಚಿ

ವೃದ್ಧಿ ಯಾಗುವಂತೆಯೂ ಶುದ್ಧವಾಗುವಂತೆಯೂ ಯತ್ನಿಸಬೇಕು. ನಮ್ಮಲ್ಲಿ ಇರುವ ಪುಸ್ತಕಗಳು ಜನರಲ್ಲಿ ಬಳಕೆಗೆ ಬಂದಿಲ್ಲ; ಇಂತಹ ಪುಸ್ತಕ ಇದೆ ಎಂಬುದೇ ಜನರಿಗೆ ತಿಳಿದಿಲ್ಲ. ಇದಕ್ಕೆ ಇಂತಹ ಏರ್ಪಾಡು ಆವಶ್ಯಕ.

### ನಮ್ಮ ಸೀಮೆಯ ನಾಟಕದ ಸುಧಾರಣೆ

ಜನರ ವಿದ್ಯಾಭ್ಯಾಸಕ್ಕೆ ನಾಟಕದಷ್ಟು ಅನುಕೂಲವಾದ ಸಾಧನ ವಿಲ್ಲ. ನಮ್ಮ ಸೀಮೆಯ ನಾಟಕ ರಂಗವನ್ನು ಎಷ್ಟು ಬೇಗ ಯಾವ ರೀತಿಯಿಂದ ನಮ್ಮ ಜನರ ಏಳಿಗೆಯ ರಥಕ್ಕೆ ಹೂಡಬಹುದು ಎಂಬು ದನ್ನು ಒಡನೆಯೇ ನಾವು ಆಲೋಚಿಸಬೇಕಾಗಿದೆ. ಜನದ ಮನಸ್ಸನ್ನೇ ತಿದ್ದಬೇಕಾದರೆ ನಾಟಕದಷ್ಟು ಅನುಕೂಲವಾದ ಸಾಧನ ಬೇರೆ ಒಂದಿಲ್ಲ. ಈಗ ನಮ್ಮ ನಾಟಕವು ಯಾವುದೋ ಕಾಡುದಾರಿಯಲ್ಲಿ ಬಿದ್ದು ಹೋಗಿದೆ. ಈಚೆಗೆ ಅದರಲ್ಲಿ ನಾರದನಿಗೆ ಬಂದಿರುವ ಗತಿಯನ್ನೂ, ಕಬೀರದಾಸನ ಭಕ್ತಿಗೆ ಬಂದಿರುವ ವಿಕಾರ ಸ್ವರೂಪವನ್ನೂ, ರಾಮದಾಸನ ಕನಿಕರವು ಚಿತ್ರಿತವಾಗುವ ವಿಚಿತ್ರ ರೀತಿಯನ್ನೂ ನೋಡಿದರೆ ಇದು ವ್ಯಕ್ತ ವಾಗುವುದು. ಸಿಕ್ಕಿ ಸಿಕ್ಕಿದಾಗ ನಿಂತು ದೀರ್ಘವಾಗಿ ರಾಗಾಲಾಪನ ಮಾಡುವ ಪಾತ್ರಗಳ ಅನೌಚಿತ್ಯವನ್ನು ಕುರಿತು ಬಹಳ ಹೇಳಬೇಕಾದು ದಿಲ್ಲ. ಜನಕ್ಕೆ ಸಂಗೀತ ಬೇಕಾಗಿದೆ; ಎಷ್ಟು ಅವಶ್ಯಕವೋ ಅಷ್ಟನ್ನು ಇಟ್ಟುಕೊಂಡು ಹೆಚ್ಚಾದ ಭಾಗವನ್ನೆಲ್ಲ ಬಿಟ್ಟು ನಾವು ನಾಟಕವನ್ನು ಸುಧಾರಿಸಬೇಕಾಗಿದೆ. ಹಳೆಯ ವಿಷಯುಗಳನ್ನೇ ವಸ್ತುವಾಗಿಟ್ಟುಕೊಂಡು ನಿಜವಾದ ಭಕ್ತಿ ಯಾವುದು, ನಿಜವಾದ ಪ್ರಜಾ ವಾತ್ಸಲ್ಯ ಯಾವುದು, ನಿಜವಾದ ನಾರದನೆಂಥವನಿರಬಹುದು ಎಂದು ಸಂಸ್ಕೃತವಾದ ದೃಷ್ಟಿ ಯಿಂದ ನಾವು ತಿಳಿದು ನೋಡುವವರ ದೃಷ್ಟಿಗೆ ಸಂಸ್ಕಾರವಾಗುವಂತೆ ತೋರಿಸಬೇಕಾಗಿದೆ. ಇಂಗ್ಲೀಷಿನಲ್ಲಿ ನಾಟಕವು ಅತ್ಯುನ್ನತ ಸ್ಥಿತಿಗೆ ಬಂದುದಕ್ಕೆ ಮುಖ್ಯ ಕಾರಣಗಳಲ್ಲಿ ಬಿಡಿ ವೃತ್ತವು ರಂಗದಲ್ಲಿ ಉಪ ಯೋಗಕ್ಕೆ ಬಂದುದು ಒಂದು. ಈ ವೃತ್ತವು ಗದ್ಯದಂತೆ ಸರಳವಾದ ರೀತಿಯೊಡನೆ ಪದ್ಯದ ನಿಯಮದ ಅತ್ಯವಶ್ಯ ಭಾಗವನ್ನು ಸೇರಿಸುತ್ತದೆ. ಈ ವೃತ್ತದಲ್ಲಿ ಬರೆದು ಹಳೆಯ ವಿಷಯಗಳನ್ನೇ ಆದರೂ ಹೊಸರೀತಿಯಲ್ಲಿ

ಪ್ರತಿಪಾದಿಸುವ ನಾಟಕಗಳು ನಮ್ಮ ರಂಗಕ್ಕೆ ಬೇಕಾಗಿವೆ. ಇವುಗಳನ್ನು ಬರೆಯುವುದು ಹೇಗೋ ಹಾಗೆ ಇಂತಹ ನಾಟಕಗಳನ್ನು ಅಭಿನಯಿಸುವುದೂ ನವೀನ ಸಂಸ್ಕೃತಿಯ ತರುಣರಿಗೆ ಮಾತ್ರ ಸಾಧ್ಯ. ಹಳೆಯ ರೀತಿಯ ನಟರು ಇಂಥ ನಾಟಕಗಳನ್ನು ಸುಲಭವಾಗಿ ಸ್ವೀಕರಿಸುವುದಿಲ್ಲ. ಆದುದರಿಂದ ನಮ್ಮ ನಾಟಕ ರಂಗವನ್ನು ಜನದ ಮೇಲ್ಮೆಗೆ ಸಾಧನವಾಗಿ ಮಾಡುವುದು ನಮ್ಮ ಸುಸಂಸ್ಕೃತ ತರುಣ ಮಂಡಲವನ್ನು ಸೇರಿದ ಕೆಲಸವಾಗಿದೆ.

### ಆಡಳಿತದಲ್ಲಿ ಕನ್ನಡ

ಇದಲ್ಲದೆ, ನಾವು ನಮ್ಮ ಸೀಮೆಯ ಆಡಳಿತದಲ್ಲಿ ಸಾಧ್ಯವಾದಲ್ಲೆಲ್ಲ ಕನ್ನಡವನ್ನು ಒಡನೆಯೇ ವಾಡಿಕೆಗೆ ತರಬೇಕು. ಇಂಗ್ಲೀಷಿನಲ್ಲಿ ಕೆಲಸ ನಡೆಯುವ ಸಂಸ್ಥೆಗಳಲ್ಲಿ, ನಮ್ಮಲ್ಲಿ ಹಿರಿಯರಾದವರನೇಕರು ಆ ಭಾಷೆಯ ಪರಿಚಯವಿಲ್ಲದ ಕಾರಣ ಭಾಗಿಗಳಾಗಲಾರರು. ಇಂಥವರ ಪ್ರಪಂಚ ಜ್ಞಾನದ ಫಲವು ನಮ್ಮ ಆಡಳಿತಕ್ಕೆ ಸಿಕ್ಕಬೇಕಾದರೆ ಕೆಲಸವೆಲ್ಲ ಕನ್ನಡದಲ್ಲಿ ನಡೆಯಬೇಕು. ಕಾಯಿದೆ ಕಾನೂನುಗಳೂ ಕನ್ನಡದಲ್ಲಿ ಮುಖ್ಯವಾಗಿ ಪ್ರಚುರವಾಗಬೇಕು. ಅವು ಆಗುವುದು ಜನರಿಗಾಗಿ, ಅವು ಇರುವುದು ಅವರಿಗೆ ತಿಳಿಯದ ಭಾಷೆಯಲ್ಲಿ. ಇದರಿಂದ ಯಾವ ಪ್ರಯೋಜನವೂ ಇಲ್ಲ. ನ್ಯಾಯಾಸ್ಥಾನಗಳಲ್ಲಂತೂ ಇಂಗ್ಲೀಷಿನ ವ್ಯವಹರಣೆ ಕೇವಲ ಅನುಚಿತವೆಂದೇ ಹೇಳಬೇಕು. ದೂರು ಹೊತ್ತುಕೊಂಡು ನ್ಯಾಯಾಧೀಶನ ಮುಂದೆ ನಿಂತಿರುವವನ ಮೇಲೆ ದೂರನ್ನು ಬರೆಯುವುದು ಇಂಗ್ಲೀಷಿನಲ್ಲಿ, ಅದನ್ನು ಕುರಿತು ರುಜುವಾತನ್ನು ಬರೆದುಕೊಳ್ಳುವುದು ಇಂಗ್ಲೀಷಿನಲ್ಲಿ; ಆಮೇಲೆ ಅದನ್ನು ಓದಿ ಅವನಿಗೆ ಅರ್ಥ ಹೇಳಬೇಕು. ಲಾಯರುಗಳ ವಾದ ಇಂಗ್ಲೀಷಿನಲ್ಲಿ, ತೀರ್ಪು ಇಂಗ್ಲೀಷಿನಲ್ಲಿ. ಇದೆಲ್ಲ ತೀರ ಹಾಸ್ಯಾಸ್ಪದವಾಗಿದೆ. ಸಂಬಂಧಪಟ್ಟ ಕೆಲಜನಕ್ಕೆ ತೊಂದರೆಯಾಗುವುದು ಮಾತ್ರವಲ್ಲದೆ ಇದರಿಂದ ನಮಗೆ ಇನ್ನೊಂದು ನಷ್ಟವಿದೆ. ಕೋರ್ಟು ಕಚೇರಿಗಳು ವಯಸ್ಸಾದವರಿಗೆ ನಾಗರಿಕತೆಯ ಕೆಲಸದ ವಿಷಯದಲ್ಲಿ ಪಾಠಶಾಲೆಗಳು. ಇವುಗಳಿಂದ ನಾಗರಿಕನ ಕರ್ತವ್ಯವೆಂಥದೆಂಬ ಜ್ಞಾನವು ಹಲ ರೀತಿಯಲ್ಲಿ ಜನರಲ್ಲಿ ಹರಡುತ್ತದೆ. ಈ

ಸಂಸ್ಥೆಗಳಲ್ಲಿ ಕೆಲಸವು ಇಂಗ್ಲೀಷಿನಲ್ಲಿ ನಡೆಯುವುದರಿಂದ ನಮ್ಮ ಜನಕ್ಕೆ ಈ ಉಪಯೋಗವು ಇಲ್ಲದಂತಾಗಿದೆ. ಎಲ್ಲ ಜನರ ಜ್ಞಾನದ ಫಲವನ್ನೂ ಆಡಳಿತವು ಪಡೆಯುವುದೂ, ಎಲ್ಲ ಜನಕ್ಕೂ ಆಡಳಿತದ ಸ್ವರೂಪವು ತಿಳಿಯುವುದೂ ರಾಜ್ಯದ ಏಳಿಗೆಯ ಮೂಲ ತತ್ತ್ವಗಳು. ನಾವು ಈ ತತ್ತ್ವಗಳನ್ನು ಸಾಧಿಸಬೇಕಾದರೆ ಕನ್ನಡ ನಾಡಿನ ಆಡಳಿತದ ಕೆಲಸವೆಲ್ಲ ಕನ್ನಡದಲ್ಲಿ ನಡೆಯುವಂತೆ ಮಾಡಬೇಕು.

## ಉಪಸಂಹಾರ

ಮಹನೀಯರೆ, ಒಂದಾನೊಂದು ಕಾಲದಲ್ಲಿ ಭಾರತವರ್ಷದ ಜೀವನವಾಹಿನಿ ಹೊಳೆದುಂಬಿ ಎರಡು ದಡವನ್ನೂ ಮುಟ್ಟಿ ಹರಿಯುತ್ತಿತ್ತು. ದೇಶದಲ್ಲೆಲ್ಲ ಹರಡಿರುವ ಶಿಲ್ಪ ಚಿತ್ರಗಳಿಂದ, ಎಲ್ಲೆಡೆಯೂ ಕಾಣುವ ಕಾವ್ಯ ಗೀತಗಳಿಂದ, ಎಲ್ಲ ಜನದಲ್ಲಿಯೂ ಹರಡಿರುವ ತತ್ತ್ವ ಜ್ಞಾನ ವಿನಯದಿಂದ ಇದು ಸ್ಪಷ್ಟವಾಗಿ ತಿಳಿಯುತ್ತದೆ. ಈ ಪೂರ್ಣ ಪ್ರವಾಹದ ಜೀವನಸಂಪತ್ತಿನಲ್ಲಿ ಕರ್ಣಾಟಕವು ಇನ್ನು ಯಾವ ನಾಡಿಗಿಂತಲೂ ಕಡಿಮೆಯಿಲ್ಲದೆ ಭಾಗಿಯಾಗಿತ್ತು ಎಂದು ನಮ್ಮ ಸೀಮೆಯ ಕಲೆಯಿಂದಲೂ ಇತಿಹಾಸದಿಂದಲೂ ಕಾಣುತ್ತದೆ. ಅಂದು ಹಾಗೆ ತುಂಬಿ ಹರಿದ ಜನಜೀವನವು ಇಂದು ನೋಡಿದರೆ ವಿಶಾಲವಾದ ಮರಳ ಶಯ್ಯೆಯಲ್ಲಿ ಬಹು ಭಾಗವನ್ನೆಲ್ಲ ಬಿಟ್ಟು ಏಕದೇಶವಾಗಿ ಹರಿಯುವ ನದಿಯಂತೆ ಸಂಕುಚಿತವಾಗಿ ಹೋಗಿದೆ. ಈ ವಾಹಿನಿಯು ಪುನಃ ಪೂರ್ಣ ಪ್ರವಾಹವಾಗಬೇಕು. ಇದಕ್ಕೆ ಎಲ್ಲ ನಾಡ ಜನರೂ ಸೇರಿ ಕೆಲಸಮಾಡಬೇಕಾಗಿದೆ. ಕನ್ನಡ ನಾಡು ಸುಂದರವಾದ ನಾಡು, ಕನ್ನಡ ಮಾತು ಸುಂದರವಾದ ಮಾತು; ಕನ್ನಡ ಸಾಹಿತ್ಯವು ಈ ಸುಂದರವಾದ ನಾಡಿನ ಈ ಸುಂದರವಾದ ಮಾತಿನ ವ್ಯಕ್ತಿತ್ವದಿಂದ ಭಾರತ ಭೂಮಿಯ ಹೆಮ್ಮೆಗೆ ಮೆರುಗನ್ನು ಕೊಡಬೇಕಾಗಿದೆ. ನಮಗೆ ಬೇರೆ ಭಾಷೆಗಳ ವಿಷಯದಲ್ಲಿ ಹಗೆಯಿಲ್ಲ, ಅಸೂಯೆಯಿಲ್ಲ. ಅವು ಚೆನ್ನಾಗಿ ಬಾಳಲಿ ಎಂದೇ ನಮ್ಮ ಆಸೆ. ಅವೂ ಚೆನ್ನಾಗಿ ಬಾಳಬೇಕು, ನಮ್ಮ ಭಾಷೆಯೂ ಚೆನ್ನಾಗಿ ಬಾಳಬೇಕು; ಈ ಚೆನ್ನವಾದ ಬಾಳೆಂಬುದು ವಿಶಾಲವಾಗಬೇಕು. ಪೂರ್ವದಲ್ಲಿ ಯಾವ ನಿತ್ಯ ನಿಯಮಗಳನ್ನು ಹಿಡಿದು ನಮ್ಮ ದೇಶವು

ಮುಂದುವರಿಯಿತೆಂಬುದನ್ನೂ, ಯಾವ ನಿಯಮಗಳ ಉಲ್ಲಂಘನೆಯಿಂದ ಅದಕ್ಕೆ ಅಮಂಗಳ ಪ್ರಾಪ್ತವಾಯಿತೆಂಬುದನ್ನೂ, ಮತ್ತೆ ಏನುಮಾಡಿದರೆ ನಾವು ಉದ್ಧಾರವಾಗಬಹುದೆಂಬುದನ್ನೂ ಆಲೋಚಿಸಿ ಎಲ್ಲರಿಗೂ ತಿಳಿಯುವಂತೆ ಹೇಳುವುದು ಸಾಹಿತ್ಯ ಕಲೋಪಾಸಕರ ಕೆಲಸ. ಈ ಕೆಲಸವನ್ನು ತಾವು ಕೈಕೊಂಡಿದ್ದೀರಿ. ತಾವು ಇದರಲ್ಲಿ ಕೃತಕೃತ್ಯರಾಗಬೇಕೆಂದು ನಾನು ಹಾರೈಸುತ್ತೇನೆ.

ಮಹನೀಯರೆ, ಈ ಭಾಷಣವು ಬಹು ದೀರ್ಘವಾಗಿಹೋಯಿತು. ಇನ್ನು ನಾನು ತಮ್ಮ ಕಾಲವನ್ನು ತೆಗೆದುಕೊಳ್ಳುವುದಿಲ್ಲ. ಈ ಮಧ್ಯೆ ನಾನು ಹೇಳಿರುವ ಮಾತುಗಳಲ್ಲಿ ತಮ್ಮಲ್ಲಿ ಯಾರಿಗಾದರೂ ಮನಸ್ಸಿಗೊಪ್ಪದ ಮಾತು ಕೆಲವು ಇರಬಹುದು. ಹಾಗೇನಾದರೂ ಇದ್ದರೆ ಅಂಥ ಮಾತು ತಾವೆಲ್ಲ ತೋರಿರುವ ಅತ್ಯಧಿಕ ವಿಶ್ವಾಸದಿಂದುಂಟಾದ ಸಲಿಗೆಯಿಂದ ಬಂದಿತೆಂದು ಭಾವಿಸಿ ಮನ್ನಿಸಿರಿ. ಅನೇಕ ಮಹನೀಯರು ತನ್ನ ಸೇವೆಗಾಗಿ ಸೇತುವೆಯನ್ನು ಕಟ್ಟುತ್ತಿರುವಲ್ಲಿ ಸ್ವಲ್ಪ ದೂಳನ್ನು ತಂದು ಕೊಡವಿದ ಅಳಿಲೊಂದನ್ನು ಹಿಡಿದು ಕನ್ನಡ ನಾಡು ಇಂದದರ ಬೆನ್ನನ್ನು ತಡವಿದೆ. ಈ ಪ್ರೇಮದ ಗುರುತು ಇನ್ನೆಂದೆಂದಿಗೂ ನನ್ನ ಬೆನ್ನಮೇಲೆ ನಿಲ್ಲುವುದು. ಅದಕ್ಕೆ ಸದಾ ಕಾಲದಲ್ಲಿಯೂ ಅರ್ಹನಾಗಿರುವಂತೆ ನನ್ನ ಜೀವನವನ್ನು ಭಗವಂತನು ತಿದ್ದಲಿ. ಇನ್ನು, ಕನ್ನಡ ನಾಡು ತನ್ನ ಮಕ್ಕಳಿಂದ ಸದಾ ಕಾಲದಲ್ಲಿಯೂ ಉತ್ತಮವಾದ ಸೇವೆಯನ್ನೇ ಪಡೆಯುವಂತಾಗಲೆಂದೂ ಈ ನಮ್ಮ ನಾಡು, ನಮ್ಮ ಮಾತು, ನಮ್ಮ ಜನಕ್ಕೆ ಶುಭವಾಗಲೆಂದೂ ನಾವು ಭಾರತವರ್ಷದ ದೇಶಗಳಲ್ಲಿಯೂ ಪ್ರಪಂಚದ ಜನಗಳಲ್ಲಿಯೂ ತಲೆಯೆತ್ತಿಕೊಂಡು ನಡೆಯುವಂತಾಗಲೆಂದೂ ತಮ್ಮೆಲ್ಲರ ಪರವಾಗಿ ಸರ್ವಾಂತರ್ಯಾಮಿಯೂ ಸರ್ವಶಕ್ತನೂ ಕೃಪಾಸಾಗರನೂ ಆದ ಭಗವಂತನನ್ನು ಪ್ರಾರ್ಥಿಸಿ ಈ ಭಾಷಣವನ್ನು ಮುಗಿಸುತ್ತೇನೆ.

---

Printed by U. Narasimha Mallya, Proprietor, B. B. D. Power Press,
Cottonpet, Bangalore City.

## ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಒಂದು ಕತೆ)
ತಾಳೀಕೋಟೆ (ಒಂದು ಪ್ರಕರಣ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಒಂದು ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ಣಾಟಕದ ಜನತೆಯ ಸಂಸ್ಕೃತಿ (ಉಪನ್ಯಾಸ)
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ ೩ (ಲೇಖನಗಳು)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ನಾಟಕ)
ಕರ್ಣಾಟಕದ ಜನಪದ ಸಾಹಿತ್ಯ (ಉಪನ್ಯಾಸ)
ಕಾಕನಕೋಟೆ (ನಾಟಕ)
ಆದಿಕವಿ ವಾಲ್ಮೀಕಿ
ವಿಮರ್ಶೆ ೪ (ಲೇಖನಗಳು)
ಸಣ್ಣ ಕತೆಗಳು ೬
ಗೌಡರ ಮಲ್ಲಿ (ಪದ್ಯಕಥೆ)
ರಾಮನವಮಿ ( ,, )
ಮೂಕನ ಮಕ್ಕಳು ( ,, )

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (in four volumes)
Subbanna

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ
43–44, ಗವಿಪುರದ ವಿಸ್ತರಣ, ಬಸವನಗುಡಿ ಟಪಾಲು
ಮನೋಹರ ಗ್ರಂಥ ಭಾಂಡಾರ, ಧಾರವಾಡ

ಕರ್ಣಾಟಕದ

# ಜನತೆಯ ಸಂಸ್ಕೃತಿ

ಶ್ರೀನಿವಾಸ

೦-೧೨-೦

# ಮೊದಲನೆಯ ಮುದ್ರಣದ ಮುನ್ನುಡಿ

ಸರ್ ಆರ್. ವೆಂಕಟರತ್ನಂ ನಾಯುಡು ಅವರು ಮದ್ರಾಸಿನ ವಿಶ್ವ ವಿದ್ಯಾಲಯದ ವೈಸ್-ಛಾನ್ಸಲರ್ ಪದವಿಯಲ್ಲಿದ್ದಾಗ್ಯೆ ಆ ವಿಶ್ವ ವಿದ್ಯಾಲಯದ ಆಶ್ರಯದಲ್ಲಿ ದ್ರಾವಿಡ ದೇಶದ ಸಂಸ್ಕೃತಿಯನ್ನು ಕುರಿತು ಕೆಲವು ಉಪನ್ಯಾಸಗಳು ನಡೆಯುವಂತೆ ಏರ್ಪಾಡು ಮಾಡಿದರು. ಆ ಸಂದರ್ಭದಲ್ಲಿ ಕರ್ಣಾಟಕ ಶಾಖೆಯಲ್ಲಿ ಉಪನ್ಯಾಸ ಮಾಡುವ ಪುಣ್ಯ ನನ್ನ ಪಾಲಿಗೆ ಬಂದಿತು. ಕರ್ಣಾಟಕದ ಜನತೆಯ ಸಂಸ್ಕೃತಿಯನ್ನು ಕುರಿತ ಈ ಉಪನ್ಯಾಸವು ಆಗ ನಾನು ಮದ್ರಾಸಿನಲ್ಲಿ ಮಾಡಿದ ನಾಲ್ಕು ಭಾಷಣಗಳ ಸಾರಾಂಶ. ಅವಶ್ಯಕವೆಂದು ತೋರಿದ ಎರಡು ಕಡೆ ಈಚೆಗೆ ಕಂಡ ವಿಷಯದ ಪ್ರಸ್ತಾಪ ಮಾಡಿದೇನೆ. ಈ ಉಪನ್ಯಾಸದಲ್ಲಿ ಬೇರೆ ಬೇರೆ ಮತಗಳ ಮೇಲ್ಮೆ ಕೀಳ್ಮೆಗಳನ್ನು ತೋರಿಸಲು ಉದ್ದೇಶಿಸಿದೇನೆಂದು ಯಾರೂ ಭಾವಿಸಬಾರದು. ಕುಂದು ಕೊರತೆಗಳ ಮಾತನ್ನಾಡುವಾಗ ನನ್ನ ದೃಷ್ಟಿ ವಿಷಯದ ಮೇಲೆ ಇದ್ದಿದೆಯೇ ಹೊರತು ವ್ಯಕ್ತಿ ಅಥವಾ ಜಾತಿಗಳ ಮೇಲೆ ಹೋಗಿಲ್ಲ. ಮುಖ್ಯವಾಗಿ ನಮ್ಮ ಜನ ಮುಂದು ವರಿಯಬೇಕಾದರೆ ನಮ್ಮ ಈಗಣ ಸ್ಥಿತಿಯನ್ನು ಕುರಿತ ವಿಚಾರ ಅವಶ್ಯಕ. ಈ ವಿಚಾರದ ವಿಷಯವನ್ನು ಸಂಕ್ಷೇಪವಾಗಿ ಸೂಚಿಸುವುದು ಇಲ್ಲಿಯ ಉದ್ದೇಶ. ಈ ಉಪನ್ಯಾಸಗಳನ್ನು ಏರ್ಪಡಿಸಿದ್ದಕ್ಕಾಗಿ ಸರ್ ಆರ್. ವೆಂಕಟರತ್ನಂ ನಾಯುಡು ಅವರಿಗೂ, ಉಪನ್ಯಾಸಮಾಡುವ ಮರ್ಯಾದೆಯನ್ನು ನನಗೆ ತೋರಿದ್ದಕ್ಕಾಗಿ ಮದ್ರಾಸು ವಿಶ್ವವಿದ್ಯಾಲಯದ ನನ್ನ ಮಿತ್ರರಿಗೂ ಭಾಷಣಗಳ ಕಾಲದಲ್ಲಿ ವ್ಯಕ್ತಪಡಿಸಿದ ವಂದನೆಯನ್ನು ನಾನು ಈಗ ಮರಳಿ ಸೂಚಿಸುತ್ತೇನೆ. ಈ ಉಪನ್ಯಾಸವು ಪ್ರಬುದ್ಧ ಕರ್ಣಾಟಕದಲ್ಲಿ ಅಚ್ಚಾಗುತ್ತಿದೆ. ಇದಕ್ಕೆ ಅದರಲ್ಲಿ ಅವಕಾಶವನ್ನು ಕೊಟ್ಟದ್ದಕ್ಕಾಗಿ ನಾನು ಆ ಪತ್ರಿಕೆಯ ಕರ್ತರಿಗೆ ಕೃತಜ್ಞನಾಗಿದೇನೆ.

ಬೆಂಗಳೂರು, ಪ್ರಜೋತ್ಪತ್ತಿ ಸಂ||
ಆಶ್ವಯುಜ ಶುದ್ಧ ಪಂಚಮಿ

**ಶ್ರೀನಿವಾಸ.**

# ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾನ್ತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಒಂದು ಕತೆ)
ತಾಳೀಕೋಟೆ (ಒಂದು ಪ್ರಕರಣ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಒಂದು ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ಣಾಟಕದ ಜನತೆಯ ಸಂಸ್ಕೃತಿ (ಉಪನ್ಯಾಸ)
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ ೩ (ಲೇಖನಗಳು)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ನಾಟಕ)
ಕರ್ಣಾಟಕದ ಜನಪದ ಸಾಹಿತ್ಯ (ಉಪನ್ಯಾಸ)
ಕಾಕನಕೋಟೆ (ನಾಟಕ)
ಆದಿಕವಿ ವಾಲ್ಮೀಕಿ
ವಿಮರ್ಶೆ ೪ (ಲೇಖನಗಳು)
ಸಣ್ಣ ಕತೆಗಳು ೬
ಗೌಡರ ಮಲ್ಲಿ (ಪದ್ಯಕಥೆ)
ರಾಮನವಮಿ ( ,, )
ಮೂಕನ ಮಕ್ಕಳು ( ,, )

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (in four volumes)
Subbanna

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ
43–44, ಗವಿಪುರದ ವಿಸ್ತರಣ, ಬಸವನಗುಡಿ ಟಪಾಲು
ಮನೋಹರ ಗ್ರಂಥ ಭಾಂಡಾರ, ಧಾರವಾಡ

## ಕರ್ಣಾಟಕದ

# ಜನತೆಯ ಸಂಸ್ಕೃತಿ

### ವಿಷಯದ ಸ್ವರೂಪ: ವಿಚಾರದ ಆವಶ್ಯಕತೆ

ಭರತಖಂಡದ ಪ್ರಕೃತ ಸ್ಥಿತಿಯಲ್ಲಿ ಸಮಾಜ ನೇತೃಗಳು ಜನ ಸಾಮಾನ್ಯದ ಸಂಸ್ಕೃತಿಯನ್ನು ಕುರಿತು ವಿಚಾರಮಾಡುವುದು ಹಲವು ಕಾರಣಗಳಿಂದ ಆವಶ್ಯಕವಾಗಿದೆ. ನಮ್ಮ ಜನದ ಜೀವನ ಈಗ ಹೊಸ ದೊಂದು ರೀತಿಯಲ್ಲಿ ಬಹುಮುಖವಾಗಿ ಹಬ್ಬುತ್ತಿದೆ. ಈ ಹಬ್ಬುಗೆ ಶುಭಪ್ರದವಾಗಬೇಕಾದರೆ ನಾವು ಅದನ್ನು ಸರಿಯಾದ ದಾರಿಗಳಿಗೆ ತಿದ್ದಿಕೊಳ್ಳಬೇಕು. ಹಳೆಯದನ್ನು ತೀರಾ ಬಿಡದೆ ಅದಕ್ಕೆ ಅತಿಯಾಗಿ ಕಟ್ಟುಬೀಳದೆ ವಿವೇಚನೆಯಿಂದ ನಡೆದುಕೊಳ್ಳಬೇಕು. ಅಲ್ಲದೆ ಹೊರ ಗಣಿಂದ ಬರುವ ಅನೇಕರೂ, ಅವರ ಅನುಕರಣದಲ್ಲಿ ಕ್ಷೇಮವನ್ನು ಕಾಣುವ ನಮ್ಮವರು ಕೆಲವರೂ, ನಮ್ಮ ಸಂಸ್ಕೃತಿಯಲ್ಲಿ ದೋಷಗಳನ್ನು ನಿರ್ದೇಶಿಸುವರು. ಇಂಥವರು ನಿಂದಿಸುವ ಸಂಸ್ಕೃತಿ ನಮ್ಮದು ಎಂಬ ಕಾರಣದಿಂದ ನಾವು ಕೋಪಮಾಡಿದರೆ ಉಪಯೋಗವಿಲ್ಲ; ಅಥವಾ ಇವರು ತಿಳಿದವರು, ಹೇಳಿದರು, ಎಂದು ಅವರು ಹೇಳಿದ್ದನ್ನೆಲ್ಲ ಒಪ್ಪಿ ಕೊಂಡರೂ ಒಳ್ಳೆಯದಲ್ಲ. ಇಂಥವರು ಹೇಳಿದ್ದನ್ನು ಸಾವಧಾನವಾಗಿ ಪರಿಶೀಲಿಸಿ ಅವರ ಅಭಿಪ್ರಾಯಗಳ ಸಾಧುತೆಯನ್ನು ನಮ್ಮ ಮನಸ್ಸಿಗೆ ತೃಪ್ತಿಯಾಗುವಂತೆ ನಾವು ಕಂಡುಕೊಳ್ಳಬೇಕು. ಪಾಶ್ಚಾತ್ಯ ಸಂಸ್ಕೃತಿಯ ಹೊಗಳಿಕೆಯನ್ನು ಕೇಳಿಕೇಳಿ ಆ ಜನದ ಏಳಿಗೆಯನ್ನು ನೋಡಿನೋಡಿ ನಮ್ಮಲ್ಲಿ ಅನೇಕರು ನಮ್ಮ ಸಂಸ್ಕೃತಿಯ ವಿಷಯದಲ್ಲಿ ಬಹಳ ಅತೃಪ್ತ ರಾಗಿರುತ್ತಾರೆ. ಇಂಥವರಿಗೆ, ನಮ್ಮ ಜನಾಂಗದ ಜೀವನದಲ್ಲಿ ದೋಷ ಗಳಿರುವಂತೆಯೇ ಗುಣಗಳೂ ಇವೆ, ದೋಷಗಳಿಂದ ನಾವು ಕುಗ್ಗಬೇಕಾ ಗಿರುವಂತೆ ಗುಣಗಳಿಂದ ನಾವು ಧೈರ್ಯಗೊಳ್ಳಬೇಕಾಗಿದೆ, ಎಂಬುದನ್ನು ನಾವು ತೋರಿಸಬೇಕು. ನಮ್ಮ ಜನರು ಎಷ್ಟೇ ವಿನಯದಿಂದಲಾದರೂ

ತಲೆಯೆತ್ತಿಕೊಂಡು ನಡೆಯುವಂತೆ ಮಾಡಬೇಕು. ಇದೆಲ್ಲ ಕಾರಣಗಳಿಂದ ನಾಡ ಸಂಸ್ಕೃತಿಯನ್ನು ಕುರಿತ ವಿಚಾರ ಆವಶ್ಯಕವಾಗಿದೆ.

ರಾಜ್ಯದ ಆಡಳಿತದಲ್ಲಿ ಜನಾಂಗದ ದಿನ ದಿನದ ಕಾರ್ಯದಲ್ಲಿ ಜನದ ಸಂಸ್ಕೃತಿಯ ಜ್ಞಾನವು ಕೇವಲ ಆವಶ್ಯಕ. ಇದಕ್ಕೆ ಕೆಲವು ಉದಾಹರಣೆಗಳನ್ನು ಹೇಳಬಹುದು. ಯಾವುದಾದರೊಂದು ನಗರದ ಅಧಿಕಾರಿಗಳು ಬೀದಿಯ ನಾಯಿಗಳನ್ನು ಕೊಲ್ಲುವುದಕ್ಕೆ ಒಂದು ಏರ್ಪಾಡನ್ನು ಯೋಚಿಸಬಹುದು. ಅದಕ್ಕೆ ಒಪ್ಪುವರು ಎಷ್ಟು ಜನ? ಊರು ಚೊಕ್ಕಟವಾಗಬೇಕು. ನಿಜ. ಆದರೆ ಅದಕ್ಕೆ ನಾಯನ್ನು ಕೊಲ್ಲುವುದೆಂದರೆ ನಮ್ಮ ಜನಕ್ಕೆ ಮನಸ್ಸು ಬರುವುದಿಲ್ಲ. ಆಂಗ್ಲೇಯರು ಮುನ್ನೂರು ವರುಷಗಳ ಹಿಂದೆ ಬಡವರನ್ನು ಕುರಿತು ಒಂದು ಕಾನೂನನ್ನು ಮಾಡಿ ನಾಡಿನಲ್ಲಿ ಭಿಕ್ಷುಕರಿರಕೂಡದೆಂದು ಏರ್ಪಾಡನ್ನು ಹೂಡಿದರು. ಈಗ ಇಂಗ್ಲೆಂಡಿನಲ್ಲಿ ಯಾವನಾದರೂ ಭಿಕ್ಷ ಬೇಡಿದರೆ ಅವನಿಗೆ ಶಿಕ್ಷೆಯಾಗುವುದು. ಭಿಕ್ಷೆಯನ್ನು ಬೇಡುವವನೇ ಆದರೂ ನೆಪಮಾತ್ರಕ್ಕೆ ಒಂದು ಸಿಗರೇಟನ್ನೋ ಒಂದು ಬೆಂಕಿಯ ಕಡ್ಡಿಯನ್ನೋ ಮಾರಿ ನಾಲ್ಕು ಆಣೆ ದಾನವನ್ನು ತೆಗೆದುಕೊಳ್ಳಬೇಕು. ದಾನಿ ದಾನವನ್ನು ವ್ಯಾಪಾರದ ಹೆಸರಿನಲ್ಲಿ ಮಾಡಬೇಕು; ಬೇಡುವವನು ಭಿಕ್ಷೆಯನ್ನು ಬೆಲೆಯ ಹೆಸರಿನಲ್ಲಿ ತೆಗೆದುಕೊಳ್ಳಬೇಕು. ಭಿಕ್ಷುಕನು ಕೆಡುವನಲ್ಲಾ ಎಂದು ಈ ಜನಾಂಗ ನೀಡುವ ಸ್ವಾತಂತ್ರ್ಯವನ್ನು ಕಳೆದುಕೊಂಡಿತು. ನಮ್ಮಲ್ಲಿ ಭಿಕ್ಷುಕರ ಹಾವಳಿಯನ್ನು ತಪ್ಪಿಸುವ ಕಾನೂನು ಆಗಬೇಕೆಂದು ಆಗಾಗ ಮಾತು ಬರುತ್ತದೆ. ಅಂಥ ಕಾನೂನನ್ನು ಮಾಡುವುದೇ ಬಿಡುವುದೇ? ಹೊಲದಲ್ಲಿ ದೊಡ್ಡದೊಂದು ಮರ ಬೆಳೆದು ಬೆಳೆಯಿಲ್ಲದಂತೆ ಮಾಡಿದೆ. ಅದನ್ನು ಕಡಿಯುವುದಕ್ಕೆ ನಮ್ಮವರು ಹಿಂಜರಿಯುತ್ತಾರೆ. ಅದಕ್ಕೆ ಕಾರಣ ಅದರಲ್ಲಿ ಭೂತವಿದೆಯೆಂಬುದು. ಊರಿನಲ್ಲಿ ಹೊಸ ಮನೆಗಳನ್ನು ಕಟ್ಟುವುದಕ್ಕೆ ಒಳ್ಳೆಯ ಸ್ಥಳವನ್ನು ಸರ್ಕಾರದವರು ಹುಡುಕಬಹುದು. ಜನ ಅಲ್ಲಿ ಮನೆ ಕಟ್ಟುವುದಕ್ಕೆ ಒಪ್ಪುವುದಿಲ್ಲ. ಅಲ್ಲಿ ಸಾಲಾವಳಿಯಿಲ್ಲ ಎಂದು; ಅಥವಾ ನಿಮಿತ್ತ ಹೇಳುವವನು ಅದು ಕೆಟ್ಟದು ಎಂದ ಎಂದು. ಹೀಗೆ ದಿನದಿನದ ಬಾಳಿನಲ್ಲೂ ಜನದ ಸಂಸ್ಕೃತಿ ಜನದ ಪುರೋಭಿವೃದ್ಧಿಗೆ ಅಡ್ಡಿಯಾಗಿಯೋ

ಸಹಾಯವಾಗಿಯೋ ಬರುತ್ತದೆ. ಆ ಪುರೋಭಿವೃದ್ಧಿಯನ್ನು ಸಾಧಿಸಲಪೇಕ್ಷಿಸುವವರು ಈ ವಿವರಗಳನ್ನು ತಿಳಿದು ಆಯಾ ಸಂದರ್ಭಗಳಲ್ಲಿ ಏನು ಮಾಡಬೇಕೆಂದು ಯೋಚಿಸಬೇಕಾಗಿದೆ.

ಭರತಖಂಡದ ಒಟ್ಟಿನ ಸಂಸ್ಕೃತಿಯನ್ನು ದೇಶದ ಮುಖಂಡರು ಕುರಿತು ವಿಚಾರ ಮಾಡಬೇಕಾದ ಹಾಗೆ ಕರ್ಣಾಟಕದ ಜನರು ತಮ್ಮ ನಾಡಿನ ಸಂಸ್ಕೃತಿಯನ್ನು ಕುರಿತು ಯೋಚನೆ ಮಾಡುವುದು ಅವಶ್ಯಕ. ಭರತಖಂಡದ ಬೇರೆಬೇರೆ ನಾಡುಗಳ ಸಂಸ್ಕೃತಿಯನ್ನು ನೋಡಿದರೆ ಅದರಲ್ಲಿ ಬಹುಭಾಗ ಸಾಮಾನ್ಯವಾಗಿ ಇರಬಹುದು ; ಸಾಮಾನ್ಯವಾಗಿರುವುದೇ ನಿಜ. ಆದರೆ ಆಯಾ ನಾಡಿನ ಲಕ್ಷಣ ಸೌಕರ್ಯ ಇತಿಹಾಸಗಳಿಗೆ ಅನುಗುಣವಾಗಿ ವಿಶೇಷ ಗುಣಗಳೂ ಕೆಲವು ಕಾಣುವುದರಲ್ಲಿ ಸಂದೇಹವಿಲ್ಲ. ಸಂಸ್ಕೃತಿಯೆನ್ನುವುದು ಜನದ ಒಟ್ಟು ಎಲ್ಲಾ ಅನುಭವದಿಂದ ಅದರ ಮನಸ್ಸಿನಲ್ಲಿ ಉಂಟಾಗಿರುವ ಪರಿಣಾಮ. ಇದು ಒಟ್ಟು ದೇಶದಲ್ಲೆಲ್ಲಾ ಒಂದೇ ಆಗಲಾರದು ; ಭಾಗ ಭಾಗದಲ್ಲೂ ಬೇರೆ ಬೇರೆಯಾಗಿಯೇ ಇದ್ದೀತು. ಅಥವಾ ಅಂಥ ವ್ಯತ್ಯಾಸಗಳೇ ಇಲ್ಲವೆಂದು ಹೇಳುವುದಕ್ಕೇ ಆದರೂ ಬೇರೆ ಬೇರೆ ಭಾಗಗಳ ಸಂಸ್ಕೃತಿಯ ಮುಖ್ಯಾಂಶಗಳೇನೆಂದು ವಿಚಾರಮಾಡುವುದು ಆವಶ್ಯಕವಾಗುತ್ತದೆ. ಈ ಉಪನ್ಯಾಸದಲ್ಲಿ ಕರ್ಣಾಟಕದ ಜನತೆಯ ಸಂಸ್ಕೃತಿಯನ್ನು ಈ ದೃಷ್ಟಿಯಿಂದ ಸಂಕ್ಷೇಪವಾಗಿ ಪರೀಕ್ಷಿಸಲು ಯತ್ನಮಾಡಿದೆ.

## ಕರ್ಣಾಟಕದ ಜನತೆ : ಇದರ ಸಂಸ್ಕೃತಿ

ಕಾವೇರಿಯಿಂದ ಗೋದಾವರಿಯವರೆಗಿನ ನಾಡು ಕನ್ನಡ ನಾಡೆಂದು ಪೂರ್ವದ ರಾಜಕವಿಯೊಬ್ಬನು ಹೇಳಿದನು. ಈಗ ಕನ್ನಡವು ವಿಶೇಷವಾಗಿ ಮೈಸೂರು, ಧಾರವಾಡ, ಬಿಜಾಪುರ, ಬೆಳಗಾಂ, ಉತ್ತರ ಮತ್ತು ದಕ್ಷಿಣ ಕನ್ನಡ, ಹೈದರಾಬಾದು, ಬಳ್ಳಾರಿ, ಕೊಯಿಮುತ್ತೂರು, ಮಧುರೆ ಈ ಪ್ರಾಂತಗಳಲ್ಲಿ ಪ್ರಚಾರದಲ್ಲಿದೆ. ಉತ್ತರದ ಕಡೆ ಸಂಕೋಚವಾಗಿ ದಕ್ಷಿಣದ ಕಡೆ ಕಾವೇರಿಯಿಂದಾಚೆ ಸ್ವಲ್ಪ ದೂರ ಹೋಗಿದೆ. ಈ ಭಾಷೆಯನ್ನಾಡುವ ಪ್ರಜೆ ಒಟ್ಟು ಒಂದು ಕೋಟಿ ಇಪ್ಪತ್ತು ಲಕ್ಷದಷ್ಟು

ಇದೆ. ಇದು ಕನ್ನಡವನ್ನು ಮಾತೃಭಾಷೆಯೆಂದು ಹೇಳುವವರ ಸಂಖ್ಯೆ. ಕನ್ನಡದಲ್ಲಿ ಬಳಕೆಯುಳ್ಳ ಜನರೆಲ್ಲಾ ಇದರಲ್ಲಿ ಸೇರಿಲ್ಲ. ಮೈಸೂರಿನ ಸೀಮೆಯಲ್ಲಿ ಕನ್ನಡವನ್ನರಿಯದ ಜನವೇ ಇಲ್ಲವೆನ್ನಬಹುದು. ತಮಿಳು ತೆಲುಗು ಮಾತೃಭಾಷೆಯೆಂದು ಹೇಳುವ ಅನೇಕರಿಗೆ ಆ ಮಾತೃಭಾಷೆಗಳಿಗಿಂತ ಕನ್ನಡದಲ್ಲೇ ಬಳಕೆ ಹೆಚ್ಚು. ಇದಕ್ಕೆ ಪ್ರತಿಯಾಗಿ ಮಾತೃಭಾಷೆ ಕನ್ನಡವೆಂದರೂ ಮರಾಠಿ, ತೆಲುಗು ಅಥವಾ ತಮಿಳು ಸೀಮೆಯಲ್ಲಿರುವುದರಿಂದ ಆಯಾ ಭಾಷೆಗಳ ಪರಿಚಯವಿದ್ದು ಕನ್ನಡವನ್ನರಿಯದವರ ಸಂಖ್ಯೆಯನ್ನು ನಾವು ಎಣಿಸಬೇಕು. ಕನ್ನಡ ನಾಡಿನಲ್ಲಿ ಸೇರಿ ಬೇರೆ ಮಾತೃಭಾಷೆಯನ್ನು ಮರೆತಿರುವವರನ್ನೂ, ಬೇರೆ ಸೀಮೆಯಲ್ಲಿ ಸೇರಿ ಕನ್ನಡವನ್ನು ಕಲಿಯಲು ಅವಕಾಶವಿಲ್ಲದೆ ಇರುವವರನ್ನೂ ಸುಮಾರು ಸಂಖ್ಯೆಯಲ್ಲಿ ಸರಿಸಮನೆಂದು ಎಣಿಸಿದರೆ ಒಟ್ಟಿನಲ್ಲಿ ಕನ್ನಡವನ್ನಾಡುವ ಅಥವಾ ಅದರಲ್ಲಿ ಮಮತೆಯುಳ್ಳ ಪ್ರಜೆ ಸುಮಾರು ೧೫೦ ಲಕ್ಷ ಆಗುತ್ತದೆ.

ಕರ್ಣಾಟಕದ ಜನರಲ್ಲಿ ಈ ನಾಡಿನ ಇತಿಹಾಸದಿಂದೆಲ್ಲ ವಾಸಿತವಾಗಿರುವ ಸಂಸ್ಕೃತಿಯೊಂದು ಉಂಟಾಗಿದೆ. ದ್ರಾವಿಡ ದೇಶದಲ್ಲಿ ಕರ್ಣಾಟಕವೇ ಮಧ್ಯದೇಶ. ತಮಿಳಿನ ಸಂಸ್ಕೃತಿ ಸಂಸ್ಕೃತಭಾಷೆಯಿಂದ ಅಷ್ಟಾಗಿ ಬಣ್ಣವನ್ನು ಪಡೆಯಲಿಲ್ಲ; ತೆಲುಗಿನ ಸಂಸ್ಕೃತಿ ಸಂಸ್ಕೃತಕ್ಕೆ ಮಾರುಹೋಯಿತು. ಕರ್ಣಾಟಕದ ಸಂಸ್ಕೃತಿ ಈ ಎರಡು ಪಕ್ಷವನ್ನೂ ಬಿಟ್ಟು ಮಧ್ಯವರ್ತಿಯಾಗಿ ನಡೆಯಿತು. ಈ ಭಾಷೆಗಳು ಸಂಸ್ಕೃತದ ಮಾತನ್ನು ಉಪಯೋಗಿಸುವ ರೀತಿಯಿಂದಲೇ ಇದನ್ನು ಊಹಿಸಬಹುದು. ತಮಿಳಿನ ಕಾವ್ಯದಲ್ಲಿ ಸಂಸ್ಕೃತದ ಮಾತು ರೂಪು ಮಾರ್ಪಡದೆ ಸಿಕ್ಕುವುದೇ ಇಲ್ಲ. ತೆಲುಗಿನಲ್ಲಿ ರೂಪು ಮಾರ್ಪಟ್ಟು ಇರುವುದು ಕಡಮೆ; ಹುಟ್ಟು ಸಂಸ್ಕೃತ ತುಂಬಿರುತ್ತದೆ. ಕನ್ನಡದಲ್ಲಿ ಅರ್ಧ ಹಾಗೆ ಅರ್ಧ ಹೀಗೆ. ಪ್ರಾಯಶಃ ಅನೇಕ ಕವಿಗಳು ಸ್ವಲ್ಪ ಸಂಸ್ಕೃತವನ್ನಿಟ್ಟುಕೊಂಡು ವಿಶೇಷ ಕನ್ನಡ ಪದಗಳನ್ನೇ ಉಪಯೋಗಿಸಿ ಬರೆದಿದ್ದಾರೆ. ಈ ರೀತಿಯ ಮಧ್ಯಮಾರ್ಗಾವಲಂಬನವು ಈ ನಾಡಿನ ಸ್ಥಾನದ ಫಲ. ಅಲ್ಲದೆ ಕರ್ಣಾಟಕದ ಬೇರೆಬೇರೆ ಭಾಗಗಳು ಆಗಾಗ ಕೆಲವು

ತಮಿಳು ರಾಜರುಗಳ ಕೈಯಲ್ಲೂ ಕೆಲವು ಮಹಾರಾಷ್ಟ್ರ ರಾಜರುಗಳ ಕೈಯಲ್ಲೂ ಇದ್ದುವು. ಕರ್ಣಾಟಕದ ಸಂಸ್ಕೃತಿ ಇದರಿಂದ ಇತರ ರಾಷ್ಟ್ರಗಳ ಸಂಸ್ಕೃತಿಯನ್ನು ಒಳಗೊಂಡಿತು. ಈ ನಾಡು ದಕ್ಷಿಣ ದೇಶದ ಮೂವರು ಮತಾಚಾರ್ಯರಿಗೂ ಜನ್ಮಭೂಮಿ ಅಥವಾ ಆಶ್ರಯಸ್ಥಾನ. ಅಲ್ಲದೆ ವೀರಶೈವ ಮತ ಪ್ರತಿಷ್ಠಾಪನೆಯ ಕಾರ್ಯರಂಗ. ಇಲ್ಲಿಯದೇ ಒಂದು ಶಿಲ್ಪರೀತಿಯಿದೆ. ಇದನ್ನು ಹೊಯ್ಸಳ ಶಿಲ್ಪ, ಚಾಲುಕ್ಯರ ಶಿಲ್ಪ ಎಂದು ವಿದೇಶೀಯರು ವರ್ಣಿಸಿದಾರೆ. ಮುಖ್ಯ ಇದು ಕರ್ಣಾಟಕದ ಶಿಲ್ಪ. ಗಾನಪದ್ಧತಿಯಲ್ಲಿ ಕರ್ಣಾಟಕದ್ದು ಎಂಬ ಹೆಸರಿನದೊಂದು ಪದ್ಧತಿಯಿದೆ. ಅದು ಈಚೆಗೆ ಬೆಳೆದದ್ದು ಕರ್ಣಾಟಕದವರಿಂದಲ್ಲ. ಆದರೂ ನಮ್ಮ ಹೆಸರುಗಳ ಮುಂದೆ ಹಾಕುವ ಊರ ಹೆಸರುಗಳಂತೆ ಕರ್ಣಾಟಕದ ಸಂಗೀತವೆಂಬ ಈ ಸಂಗೀತ ಪದ್ಧತಿ ಈಗ ತಮಿಳರಲ್ಲೇ ಪ್ರಬಲವಾಗಿದ್ದರೂ ಮೂಲದಲ್ಲಿ ಅದು ಕರ್ಣಾಟಕದ್ದು ಎಂದು ಆ ಹೆಸರು ತೋರಿಸುತ್ತದೆ.

## ಈ ಸಂಸ್ಕೃತಿ ಬೆಳೆದ ರೀತಿ

ಉತ್ತಮವಾದ ಸಂಸ್ಕೃತಿಯುಳ್ಳ ನಾಡಿನಲ್ಲಿ ಸಂಸ್ಕೃತರಾದವರ ತಿಳಿವು ಅಸಂಸ್ಕೃತರ ಬಾಳಿನಲ್ಲಿ ಅನೇಕ ರೀತಿಯಲ್ಲಿ ಸೇರುತ್ತದೆ. ಸಹಜವಾದ ಬೆಳವಣಿಗೆಯುಳ್ಳ ಜನದಲ್ಲೆಲ್ಲ ಈ ರೀತಿಯ ಜ್ಞಾನ ಪ್ರಸರಣದ ವಿನ್ಯಾಸ ನಡೆಯುತ್ತಲೇ ಇರುತ್ತದೆ. ಊರಿಗೆ ತಿಳಿದವನು ಒಬ್ಬನೇ ಆದರೂ ಅವನ ನಡೆ ನುಡಿಯನ್ನು ನೋಡಿ ಕೇಳಿ ಸಭ್ಯರಾಗುವವರು ಅನೇಕರು. ಇದು ತಿಳಿವಿನಲ್ಲಿರುವ ಮಹಿಮೆ. ತಿಳಿದವನಿಗೆ ಇಷ್ಟವಿಲ್ಲದೆ ಇದ್ದರೂ ಲೋಭಿ ತನ್ನ ಮನೆಗೆಂದೇ ಬಾಗಿಲಲ್ಲಿಟ್ಟ ದೀಪದ ಬೆಳಕಿನಂತೆ ಅವನ ತಿಳಿವು ಅವನಿಂದ ಇನ್ನೊಬ್ಬನ ಕಡೆಗೆ ಹರಿಯುತ್ತದೆ. ತಿಳಿದವರು ತಿಳಿಯದವರಿಗೆ ಸಹಾಯವಾಗುವಂತೆ ಏರ್ಪಾಡುಗಳನ್ನು ಮಾಡಿದರೆ ಅದು ಹರಡುವುದೆಂದು ಹೇಳಬೇಕಾದದ್ದಿಲ್ಲ. ಹಿಂದೆ ನಮ್ಮ ಜನರು ಇಂತಹ ಅನೇಕ ಏರ್ಪಾಡುಗಳನ್ನು ಮಾಡಿದ್ದರು. ಈ ಕಾರಣದಿಂದ ಜನಾಂಗದ ಜ್ಞಾನದ ಸಾರ ಜನರಲ್ಲಿ ಊರಿತ್ತು. ನವನಾಗರಿಕತೆಯ ಅನೇಕ ಸಲಕರಣೆಗಳನ್ನು ಕಂಡಿರುವ ನಾವು ನಮ್ಮ ಪೂರ್ವಿಕರು ಜನರ

ತಿಳಿವನ್ನು ವೃದ್ಧಿಮಾಡುವುದಕ್ಕೆ ಎಷ್ಟು ಪ್ರಯತ್ನಮಾಡಿದ್ದರೆಂಬುದನ್ನೂ ಜನಾಂಗದ ಸಂಸ್ಕೃತಿಯನ್ನು ಕುರಿತು ಅವರು ಎಷ್ಟು ವಿಚಾರವನ್ನೂ ಊಹೆಯನ್ನೂ ಉಪಯೋಗಿಸಿದ್ದರೆಂಬುದನ್ನೂ ತಿಳಿಯಲಾರದೆ ಇದೇವೆ. ನಾವು ಈಗ ಜನಕ್ಕೆ ಅಕ್ಷರವನ್ನು ಹೇಳಿಕೊಡುತ್ತೇವೆ; ಅವರು ಏನನ್ನು ಓದುತ್ತಾರೋ ನೋಡುವುದಿಲ್ಲ. ಹಿಂದಿನವರು ಅಕ್ಷರ ಹೇಳಿಕೊಡದೆ ಇದ್ದರೂ ಊರಲ್ಲಿ ಸಂಜೆಯಲ್ಲಿ ಜೈಮಿನಿ ಭಾರತವನ್ನು ಓದಿಸುತ್ತಿದ್ದರು. ಶ್ರೀ ವಧುವಿನಂಬಕ ಚಕೋರಕಂ ಪೊರೆಯೆ ಎಂಬ ಮಾತು ಈಗ ಇಪ್ಪತ್ತು ವರುಷಗಳ ಕೆಳಗೆ ಹಳ್ಳಿಹಳ್ಳಿಯಲ್ಲಿಯೂ ಜನಕ್ಕೆ ತಿಳಿದಿತ್ತು. ಇದರಿಂದ ಓದುಬರಹವನ್ನು ಕಲಿಸುವುದು ಅನಾವಶ್ಯಕವೆಂದು ನನ್ನ ಅಭಿಪ್ರಾಯವಲ್ಲ. ಅದನ್ನು ಕಲಿಸಬೇಕು; ಆದರೆ ಅದನ್ನು ಕಲಿಸುವುದಷ್ಟೇ ಸಾಲದು. ಜನಕ್ಕೆ ಬೇಕಾದುದು ಮುಖ್ಯವಾಗಿ ತಿಳಿವು; ತಿಳಿವಿನ ಸಾಧನ ಸಾಧ್ಯವಾದರೆ ಅದರ ಜೊತೆಗೆ ಬರಬಹುದು. ಬಾಳನ್ನು ಬೆಳಗಿಸುವ ಮೂಲತತ್ತ್ವಗಳು ಮೊದಲು ತಿಳಿಯಬೇಕು; ಅವುಗಳನ್ನು ಹುಡುಕಿ ತಿಳಿಯುವ ದಾರಿ ಸಾಧ್ಯವಾದರೆ ಆಮೇಲೆ ಬರಬಹುದು. ರಸದ ಅನುಭವ ಮೊದಲು ಆಗಬೇಕು; ಅದರ ವಿಮರ್ಶೆ ಸಾಧ್ಯವಾದರೆ ಆಮೇಲೆ ಬರಬಹುದು. ಕಾವ್ಯವು ಮನಮುಟ್ಟುವುದು ಮುಖ್ಯ; ಅದನ್ನು ನಾನೇ ಓದಿ ತಿಳಿಯುತ್ತೇನೆಯೋ ಓದುವವರಿಂದ ಕೇಳಿ ತಿಳಿಯುತ್ತೇನೆಯೋ ಎನ್ನುವುದರಲ್ಲಿ ಏನಿದೆ? ಸಾಮಾನ್ಯನು ತಾನೇ ಓದಿ ತಿಳಿಯುವುದಕ್ಕಿಂತ ಬುದ್ಧಿವಂತನಾದ ಒಬ್ಬನು ಓದಿದ್ದನ್ನು ಕೇಳಿದರೆ ಹೆಚ್ಚು ಸುಖವನ್ನು ಅನುಭವಿಸುವನು. ಇಂಥ ಏರ್ಪಾಡಿನ ಪ್ರಯೋಜನವೆಷ್ಟೆಂದು ತಿಳಿಯಬೇಕಾದರೆ ಈಗ ಸಂಸ್ಕೃತರಾದ ನಾವು ಓದುತ್ತಿರುವ ಗ್ರಂಥಗಳು ಯಾವುವು ಎಂದು ಯೋಚಿಸಿದರೆ ಸಾಕು. ಓದು ಕಲಿತ ನಾವು ಅದರ ಸರಿಯಾದ ಫಲವನ್ನು ಪಡೆಯುತ್ತಿಲ್ಲ; ಓದು ಕಲಿಯದೆ ಇದ್ದರೂ ಹಿಂದೆ ನಮ್ಮ ಜನರಿಗೆ ಓದಿನ ಮುಖ್ಯ ಫಲ ತಕ್ಕ ಮಟ್ಟಿಗೆ ದೊರೆಯುತಿತ್ತು.

ಇದರಂತೆ ಇತರ ವಿಷಯಗಳನ್ನೂ ಬೇರೆ ಬೇರೆ ಏರ್ಪಾಡುಗಳಿಂದ ಜನರು ಸುಲಭವಾಗಿ ಕಲಿಯುತ್ತಿದ್ದರು. ಪುರಾಣ ಶ್ರವಣವೆನ್ನುವುದು

ಇಂತಹದೊಂದು ಏರ್ಪಾಡು. ನಮ್ಮ ಪುರಾಣಗಳು, ಚರಿತ್ರೆ, ಭೂವಿವರಣೆ, ಶಾಸ್ತ್ರ, ಸಾಹಿತ್ಯ, ತತ್ತ್ವ, ಭೂಲೋಕ, ದೇವಲೋಕ, ಸ್ವರ್ಗ, ನರಕ ಮುಂತಾದ ಎಲ್ಲ ವಿಷಯಗಳನ್ನು ಮೊದಲಿಂದ ಕೊನೆಗೆ ವರ್ಣಿಸುತ್ತವೆ. ಇವು ಜನರಿಗೆ ಚೆನ್ನಾಗಿ ತಿಳಿದಿದ್ದುವು. ಇವುಗಳಿಗೆ ಒಂದೊಂದು ಸಂದರ್ಭ ಬೇರೆ. ಹರಿಕಥೆ ಇಂಥ ಇನ್ನೊಂದು ಏರ್ಪಾಡು. ಸಂಪ್ರದಾಯದ ಪ್ರಕಾರ ಮಾಡುವ ಕಥೆಯಲ್ಲಿ ಒಳ್ಳೆಯ ಉಪನ್ಯಾಸದಲ್ಲಿರುವಂತೆ ಸ್ಪಷ್ಟವಾದ ವಿಷಯ ನಿರೂಪಣೆಯೂ ವಿಚಾರದ ಸೋಪಾನವೂ ಇರುತ್ತವೆ. ಅದರ ಜೊತೆಗೆ ಕತೆ; ಅದರಲ್ಲಿ ವರ್ಣನೆ; ಅಲ್ಲಲ್ಲಿ ಉಪಕತೆಗಳು; ಅಲ್ಲಲ್ಲಿ ಹಾಸ್ಯ, ಸಂಗೀತ ಬೇರೆ. ಸರಿಯಾದ ಹರಿಕಥೆಯಿಂದ ಜನರಿಗೆ ಉತ್ತಮ ಸಾಹಿತ್ಯ, ಮತದ ಮುಖ್ಯ ತತ್ತ್ವ, ಉದ್ಧಾರವಾಗುವ ಮಾರ್ಗ, ಇವೆಲ್ಲ ಒಟ್ಟಿಗೆ ದೊರಕುತ್ತಿದ್ದುವು. ಇನ್ನು ದೇವಸ್ಥಾನ, ಭಜನೆಯ ಮನೆ ಮುಂತಾದ ಇತರ ಸಂಸ್ಕಾರಕ ಸಂಸ್ಥೆಗಳು. ಮನೆಗಳಲ್ಲಿ ವ್ರತಗಳು. ಆಗಾಗ ಹಬ್ಬ ಹುಣ್ಣಿಮೆ. ಎಲ್ಲದರಲ್ಲೂ ದೇವರು ಎಂಬ ಭಾವನೆ ಮನಸ್ಸಿಗೆ ನೆನವಿಗೆ ಬರುವುದಕ್ಕೆ ಏರ್ಪಾಡು. ಇದರಲ್ಲಿ ಒಂದು ವಿಚಾರವನ್ನು ನಾವು ಗಮನಿಸಿ ನೋಡಬೇಕು. ಮನುಷ್ಯನಿಗೆ ದೇವರು ಒಬ್ಬನು ಇದಾನೆ ಎಂಬ ಭಾವನೆ ಬರುವುದು ಬಹು ಹಿರಿಯ ವಿಷಯ. ಅವನು ನಮ್ಮ ಸೇವೆಯನ್ನು ಅಪೇಕ್ಷಿಸುತ್ತಾನೆ, ಅವನನ್ನು ನಮ್ಮ ಸೇವೆಯಿಂದ ಮೆಚ್ಚಿಸಬಹುದು, ಮೆಚ್ಚಿಸಬೇಕು ಎನ್ನುವುದು ಅದಕ್ಕಿಂತ ಹಿರಿಯದು. ಇದಕ್ಕಾಗಿ ಎಲ್ಲಾ ನಾಡುಗಳಲ್ಲೂ ದೇವಾಲಯವೆನ್ನುವ ಕಟ್ಟಡವೊಂದು ಏರ್ಪಾಡಾಗಿದೆ. ಆದರೆ ನಮ್ಮ ಸೀಮೆಯ ದೇವಾಲಯದಲ್ಲಿ ಒಂದು ವಿಶೇಷ ಗುಣ. ಇಲ್ಲಿ ದೇವಾಲಯಗಳನ್ನು ರಾಜನೊಬ್ಬನ ಮನೆಯಂತೆ ನಡೆಯಿಸಿ ಅಲ್ಲಿ ಹೋದವನಿಗೆ ಕಣ್ಣು, ನಾಲಗೆ, ಕಿವಿ, ಮನಸ್ಸು ಎಲ್ಲ ತಣಿಯುವಂತೆ ಮಾಡುವ ಏರ್ಪಾಡು ಇದೆ. ಇದು ದಕ್ಷಿಣದೇಶದಲ್ಲಿ ವಿಶೇಷ. ಈ ವಿಶೇಷಗುಣವು ಕರ್ಣಾಟಕದ ದೇವಸ್ಥಾನಗಳಲ್ಲಿಯೂ ತುಂಬ ಇದೆ. ದೇವಸ್ಥಾನಕ್ಕೆ ಹೋದವರು ಒಳ್ಳೆಯ ಕಟ್ಟಡವನ್ನೇ ನೋಡುವರು; ದೇವರ ಕತೆಯನ್ನು ಚಿತ್ರಿಸಿರುವ ಕಲ್ಲುಗಳನ್ನು ನೋಡುವರು; ಪ್ರಸಾದಕ್ಕೆಂದಾದರೂ ಅಲ್ಲಿ ಸ್ವಲ್ಪ ಹೊತ್ತು ಇರುವರು.

ಇದಿಷ್ಟನ್ನು ಮಾಡಿದ್ದರಿಂದಲೇ ಎಂತಹವರಲ್ಲಿಯೂ ಸ್ವಲ್ಪ ಸಂಸ್ಕಾರ ಉಂಟಾಗುವುದು; ಬರಿಯ ಮಾತಿಗಾದರೂ ನಾರಾಯಣ ಎನ್ನುವುದು ಜನರಲ್ಲಿ ವಾಡಿಕೆಯಾಗುವುದು. ಇದರಿಂದ ಏನು ಪ್ರಯೋಜನ ಎಂದು ಯಾರಾದರೂ ಕೇಳಬಹುದು. ಪಾಠಶಾಲೆಗೆ ಹೋದವನಿಗೆ ಹೆಸರನ್ನು ಬರೆಯುವಷ್ಟನ್ನು ಮಾತ್ರ ಕಲಿವು ಬಂದರೂ ಅದು ವಿದ್ಯಾಭ್ಯಾಸ: ಪಾಠ ಶಾಲೆಗೆ ಹೋಗುವುದೇ ಒಬ್ಬನಿಗೆ ಒಂದು ವಿಧವಾದ ಶಿಕ್ಷೆಯನ್ನು ಕೊಡುತ್ತದೆ. ಇದರಂತೆಯೇ ದೇವಸ್ಥಾನಕ್ಕೆ ಹೋಗುವುದೆನ್ನುವುದು ಒಂದು ಶಿಕ್ಷೆ. ಭಕ್ತಿಯೆನ್ನುವುದು ಸಾವಕಾಶವಾಗಿ ಬೆಳೆಯುವ ಪೈರು. ಅದರ ಮೊದಲನ್ನು ಹೀಗೆಂದೇ ಹೇಳುವುದಕ್ಕೆ ಆಗುವುದಿಲ್ಲ. ದೇವರೆಂಬ ಭಾವ ಮನುಷ್ಯನ ಮನಸ್ಸಿನ ಬಾಗಿಲಲ್ಲಿ ಬಹುಕಾಲ ಕಾದು ಕಾದು ಅವನು ಏನಾದರೊಂದು ನಷ್ಟ ಅನುಭವಿಸಿದಾಗಲೋ ಕಷ್ಟಕ್ಕೆ ಸಿಕ್ಕಿರು ವಾಗಲೋ ಭಗವಂತನ ಸಹಾಯ ಬೇಕೆಂದರೆ ಒಳಹೊಗುತ್ತದೆ. ಆವರೆಗೆ ಅವನು ಅದಕ್ಕೆ ಹೃದಯದ ಬಾಗಿಲನ್ನು ತೆರೆಯುವುದಿಲ್ಲ. ಆದರೆ ಅವನಿಗೆ ಒಳ್ಳೆಯದನ್ನು ಮಾಡಬೇಕೆನ್ನುವವರು ಆ ಭಾವವನ್ನು ಅವನ ಮನಸ್ಸಿನ ಬಾಗಿಲಲ್ಲಿ ಇರಿಸುವುದಕ್ಕೆ ಯತ್ನಮಾಡಬೇಕು. ನಮ್ಮ ವರು ಹಿಂದೆ ಇದನ್ನು ಮಾಡಿದ್ದರು. ಇದರಂತೆಯೇ ಭಜನೆಯ ಮನೆ ಗಳಲ್ಲಿ ಭಕ್ತಿಪಂಥದ ಗೀತೆಗಳನ್ನು ಹಾಡುವುದರಲ್ಲಿ ಜನರಿಗೆ ಇದೇ ರೀತಿಯ ಪರಿಪಾಕ ಉಂಟಾಗುತ್ತಿತ್ತು. ಮುಖ್ಯವಾಗಿ ಇವೆಲ್ಲ ಜನ ಸಾಮಾನ್ಯಕ್ಕೆಂದು ಮಾಡಿದ್ದ ಏರ್ಪಾಡುಗಳೆಂಬುದನ್ನು ನಾವು ಮರೆಯ ಬಾರದು.

## ಈ ಸಂಸ್ಕೃತಿಯಿಂದುಂಟಾದ ಜನತಾ ಶೀಲ

ಇದರಿಂದುಂಟಾದ ಸಂಸ್ಕೃತಿಯನ್ನು ವಿವರಿಸಿ ವರ್ಣಿಸುವುದು ಕಷ್ಟ. ಆದರೆ ಅದರ ಸ್ವರೂಪವನ್ನು ಜನದ ಜೀವನದಿಂದ ತಿಳಿಯ ಬಹುದು. ನಾನು ಚಿಕ್ಕಂದಿನಲ್ಲಿ ಬೆಳೆದ ಊರಿನಲ್ಲಿ ಒಬ್ಬ ಶ್ಯಾನು ಭೋಗರು ಇದ್ದರು. ಅವರ ಮನೆಯಲ್ಲಿ ಒಂದು ಹೊತ್ತಿಗೆ ಆರುವತ್ತು ಎಲೆ ಹಾಕುತ್ತಿದ್ದರು. ತಮ್ಮಂದಿರು, ತಮ್ಮಂದಿರ ಹೆಂಡತಿಯರು, ಮಕ್ಕಳು; ತನ್ನ ಮಕ್ಕಳು, ಅವರ ಹೆಂಡತಿಯರು, ಗಂಡಂದಿರು;

ತಮ್ಮಂದಿರ ಅಳಿಯಂದರು; ಅಳಿಯಂದರ ತಮ್ಮಂದಿರು, ಇತ್ಯಾದಿ, ಇತ್ಯಾದಿ. ಇದರಮೇಲೆ ಊರಿಗೆ ಬರುವವರು ಹೋಗುವವರು. ಇಷ್ಟು ಸಂಸಾರವನ್ನೂ ಒಂದು ದಿನ ಗೊಣಗುಟ್ಟದೆ ಒಂದು ದಿನ ಬೇಸರಪಡದೆ ಆತ ಹತ್ತಾರು ವರುಷ ಸಾಕಿದರು. ವೆಚ್ಚವಾಗುತ್ತಿದೆಯೆ? ಆಯ ವಾದದ್ದು ಹೇಗೆ? ದೇವರು ಕೊಡುತ್ತಾ ಇದಾನೆ; ಖರ್ಚಾಗುತ್ತಾ ಇದೆ; ನಮಗೇಕೆ ಚಿಂತೆ? ಇವರಂತಹವರು ಅಪೂರ್ವರಲ್ಲ. ಇವರಿಗೆ ತಕ್ಕಂತೆ ಇವರ ತಮ್ಮಂದಿರು; ಇವರಂತೆಯೇ ನಮ್ಮ ಹಳ್ಳಿಯ ಗೌಡರು; ಅವರಂತೆ ನಮ್ಮೂರ ಬಳಿ ಇನ್ನೊಂದು ಹಳ್ಳಿಯಲ್ಲಿ ಇದ್ದ ಗೌಡರು. ನಾನು ಈಗ ಕೆಲವು ವರ್ಷಗಳ ಹಿಂದೆ ಮೈಸೂರ ಬಳಿ ಒಂದು ಕಡೆ ಒಬ್ಬ ಗೌಡ ನನ್ನ ನೋಡಿದೆ. ಮಾರ್ಗಶಿರ ಮಾಸದ ಕೊನೆಕೊನೆಯಲ್ಲಿ ಅವನು ಹಳ್ಳಿಯಿಂದ ಒಂದು ಮೈಲಿ ದೂರದಲ್ಲಿ ಹೊಲದಲ್ಲಿ ಅವರೇಗಿಡಕ್ಕೆ ನೀರು ಹಾಕುವುದಕ್ಕೆ ಒಂದು ಬಿಂದಿಗೆಯನ್ನು ಹೊತ್ತುಕೊಂಡು ಹೋಗು ತ್ತಿದ್ದನು. ಅವನ ಮಗ ಮನೆಯಲ್ಲಿದ್ದನು. ಸೊಸೆಯೂ ಇದ್ದಳು. ಅವರನ್ನು ಕಳುಹಿಸದೆ ನೀನೇಕೆ ಹೋಗುತ್ತೀಯೆ ಎಂದು ನಾನು ಕೇಳಿದೆನು. "ಅವರಿಗೆ ಇಷ್ಟು ದೂರ ಹೋಗಿ ನೀರು ಹೊಯ್ದು ಸಾಕಿ ಅವರೇಕಾಯಿ ತಿಂದು ಆಗುವುದೇನು, ಅಂತ ಅಲಕ್ಷ್ಯ". "ನಿನಗೆ ಬಹಳ ಆಸೆಯೇ?" "ಆಸೇನು ಉಂಟು. ಅಲ್ಲದೀರ—ಗಿಡ ಬೆಳೆಯುವಷ್ಟು ದಿನ ಬೆಳಸಿ ಕಾಯಿ ತಕೋಬೇಕು. ಕೊಂಚ ಕಷ್ಟಕ್ಕೆ ಸೋಮಾರಿತನಮಾಡಿ ಬರುವ ಫಲ ಬಿಡೋದೆ? ಇನ್ನೊಂದು ತಿಂಗಳಾದಮೇಲೆ ಕಾಯಿ ಬೇಕು ಎಂದರೆ ಸಿಕ್ಯಾತೆ? ಈಗ ನೋಡಿ ಹದಿನೈದು ದಿನದಿಂದ ನಮ್ಮೂರಲ್ಲಿ ಯಾರ ಮನೆಯಲ್ಲೂ ಅವರೇಕಾಯಿ ಇಲ್ಲ. ನಮ್ಮ ಮನೇಲಿ ದಿನಾ ನಾಲ್ಕು ಕಾಳು ಇದೆ". ನನ್ನ ಬಳಿ ಆಗಾಗ ಒಬ್ಬ ಹರಿದಾಸರು ಬರುತ್ತಾರೆ. ಅರ್ಧಗಂಟೆ ಕುಳಿತು ಆ ಮಾತು ಈ ಮಾತು ಆಡುತ್ತಿರು ತ್ತಾರೆ. ಅವರು ಬರುವಾಗ್ಗೆ ನನ್ನ ಮನಸ್ಸಿನಲ್ಲಿ ಏನಾದರೂ ಯೋಚನೆ ಯಿದ್ದರೆ ಅವರು ಹೋಗುವ ವೇಳೆಗೆ ಅದನ್ನೆಲ್ಲ ಕಳೆದಿರುತ್ತಾರೆ. ನಮ್ಮ ಯೋಚನೆಯೇನೆಂದು ನಾವು ಅವರಿಗೆ ಹೇಳಬೇಕಾದದ್ದಿಲ್ಲ. ಹೇಗೋ ಮಾತು ತಿರುಗುತ್ತದೆ. "ನೋಡಿ ಸ್ವಾಮಿ, ನಮ್ಮ ಅಣ್ಣಂದಿರು

ನೋಡಿಕೋತ ಇದ್ದರು ಸಂಸಾರಾನ. ನನಗೆ ಅರುವತ್ತು ವರುಷ ಆಗೋ ತನಕ ಅವರು ನನಗೆ ತಂದೆಯಂತೆ ಇದ್ದರು. ಹೋಗಬೇಕಾದರೆ ಹತ್ತಿರ ಕುಳಿತಿದ್ದೆ. ನನ್ನ ಕಣ್ಣಿನಲ್ಲಿ ನೀರು ಬಂತು. ನೋಡಿ, ನೀನು ಯೋಚನೆ ಮಾಡಬೇಡ, ಇದಕ್ಕೆಲ್ಲಾ ಕರ್ತ ಇದಾನೆ, ನೋಡಿಕೊಳ್ಳುತ್ತಾನೆ, ನಿನಗೆ ಭಾರ ಆಗೋದಿಲ್ಲ ಎಂದರು. ದೊಡ್ಡ ಸಂಸಾರ. ಹತ್ತು ವರುಷ ಆಯಿತಲ್ಲ; ನೋಡಿ ನಡೆಯಿಸಿಬಿಟ್ಟ ದೇವರು. ಸ್ವಾಮಿ, ನಾವು ಮಾಡುತ್ತೇವೆ ಎಂತ ಚಿಂತೆಯಿಟ್ಟುಕೊಳ್ಳಬಾರದು. ನಮ್ಮಿಂದಲೇ ಆಗುತ್ತೆ. ಆದರೆ ಮಾಡುವವರು ನಾವಲ್ಲ. ಅವ ಮಾಡುತ್ತಾನೆ". "ಅವ ಮಾಡುತ್ತಾನೆ ಎಂತ ನಾವು ಕೂತಿರಲಾಗದು. ನಮ್ಮಿಂದಲೇ ಆಗೋದು ಅದು, ಅವ ಮಾಡಿಸುತ್ತಾನೆ." "ಒಳ್ಳೆಯದನ್ನೇ ಆಗಲಿ ಕೆಟ್ಟದನ್ನೇ ಆಗಲಿ ಮಾಡೋಕೆ ನಾವು ಸ್ವತಂತ್ರರಲ್ಲ. ನಾನು ಮಾಡಿದೆ ಎಂತ ದೇವರಪೂಜೆ ಮಾಡಿದರೂ ಫಲವಿಲ್ಲ. ಅವ ಬುದ್ಧಿಕೊಟ್ಟು ಮಾಡಿಸಿದ. ನಮ್ಮಿಂದ ಆಯಿತು" ಎಂದು ಇದನ್ನು ಸಮರ್ಥಿಸುವುದಕ್ಕೆ ಇವರು ಹರಿಕಥಾಮೃತಸಾರದ ಪದ್ಯಗಳನ್ನು ಹೇಳುವರು. ಸಂಸಾರದಲ್ಲಿರುವವರಿಗೆ ಈ ಜ್ಞಾನ ಎಲ್ಲಿ ಬರಬೇಕು ಎಂದರೆ, "ಸ್ವಾಮಿ ಸ್ವಲ್ಪ ಸ್ವಲ್ಪ ಆಗಾಗ ಇದನ್ನು ಅಂದುಕೊಳ್ಳಬೇಕು, ಬರುತ್ತೆ. ಸಂಸಾರವೇನು ಸಂನ್ಯಾಸವೇನು ಸ್ವಾಮಿ? ಎಣಿಸಿದಹಾಗೆ ಆಗುತ್ತೆ. ದುಡಿಯುವುದೆಲ್ಲ ದೇವರಿಗಾಗಿ ಎಂದರೆ ಎಲ್ಲಾ ಪೂಜೆಯೇ" ಎಂದು ಸಾಧನದ ಬಗೆಗಾಣೆ ಎನ್ನಬಹುದೇ ಎಂಬ ದೇವರ ನಾಮವನ್ನು ಹೇಳುವರು. "ಮಕ್ಕಳನ್ನ ಮರೀನ ನಮ್ಮದು ಎಂದರೆ ಭಯವಾಗಿ ಹೇಗಪ್ಪ ಎನ್ನಿಸುತ್ತದೆ. ಅವನವು ಅನ್ನಿ ಸಮಾಧಾನವಾಗುತ್ತೆ. ಅವರನ್ನು ಸಾಕೋದು ಅವನ ಕೆಲಸ. ನಮ್ಮನ್ನಿಟ್ಟು ಸಾಕಿಸುತ್ತಾನೆ." "ಸ್ವಾಮಿ ತಿಳಿದವರು ಮಕ್ಕಳನ್ನ ದಾದಿ ಯಜಮಾನನ ಮಕ್ಕಳನ್ನ ಕಾಣೋಹಾಗೆ ಕಾಣಬೇಕು. ಭ್ರಮೆಯಿಂದ ಸಾಕಬೇಕು. ಯಾಕೆ? ತಪ್ಪಿದರೆ ಯಜಮಾನ ಕೋಪಿಸುತ್ತಾನೆ. ಆದರೆ ಅವನ್ನು ನನ್ನವು ಅನ್ನಕೂಡದು. ಲಾಲಿಸು ಅಂದರೆ ಲಾಲಿಸಿದೆವು; ಬೇಡವೆಂದರೆ ಬಿಟ್ಟೆವು. ಅವನಿಗೆ ತಿಳಿಯದೇ ಯಾವುದು ಸರಿ ಎಂತ." ನನಗೇನೋ ಈ ಹರಿದಾಸರ ಸಂಗಡ

ಅರ್ಥಗಂಟೆ ಮಾತನಾಡಿದರೆ ನಾನು ಇದುವರೆಗೆ ಓದಿ ಕೇಳಿ ನೋಡಿ ಕಲಿತ ಕಲಿವಿನ ಸಾರವೆಲ್ಲ ಮನಸ್ಸಿನಲ್ಲಿ ಮರಳಿ ಮೂಡುತ್ತದೆ. ನಮ್ಮ ಮಿತ್ರರೊಬ್ಬರು ಒಂದು ರಾತ್ರಿ ಬಂಡಿಯಲ್ಲಿ ಮಕ್ಕಳೊಡನೆ ಪ್ರಯಾಣ ಮಾಡುತ್ತ ಮಳೆಯಲ್ಲಿ ಸಿಕ್ಕಿ ಮುಂದಕ್ಕೆ ಹೋಗಲಾರದೆ ದಾರಿಯಲ್ಲಿ ಒಂದು ಮನೆಯನ್ನು ಕಂಡು ಅಲ್ಲಿ ನಿಂತರಂತೆ. ಅದು ಶಿವಾಚಾರದವರ ಒಂದು ಮಠ. ಇವರು ಬಂಡಿಯನ್ನು ನಿಲ್ಲಿಸಿ ಇಲ್ಲಿ ಇಳಿದುಕೊಳ್ಳಬಹುದೆ ಎಂದು ಕೇಳಿದರಂತೆ. ಮಠದ ಅಯ್ಯನೂ ಅಲ್ಲಿದ್ದ ಒಬ್ಬ ಮುದುಕಿಯೂ ಮನೆಯವರೆಲ್ಲರೂ ಬಂದು, ಬರಬೇಕು ಬರಬೇಕು ಎಂದು ಹೇಳಿ ಆದರ ದಿಂದ ಇವರನ್ನು ಕರೆದುಕೊಂಡು ಹೋಗಿ, ಬ್ರಾಹ್ಮಣರು ನಮ್ಮಲ್ಲಿ ಊಟ ಮಾಡುವುದಿಲ್ಲ ಹಣ್ಣು ಹಂಪಲು ತಕ್ಕೊಳ್ಳಿ ಎಂದು ಕೊಟ್ಟು, ಮಕ್ಕಳಿಗೆ ಹಾಸಿಕೊಳ್ಳುವುದಕ್ಕೆ ಹೊಸ ಕಂಬಳಿ ಮೊದಲಾದುವನ್ನು ಕೊಟ್ಟು, ಅಂದಿನ ರಾತ್ರಿ ಅಲ್ಲಿ ನಿಲ್ಲಿಸಿಕೊಂಡಿದ್ದು ಮಾರನೆಯ ದಿನ ಕಳುಹಿಸಿ ಕೊಟ್ಟರಂತೆ. ನಾನು ಒಂದು ಸಲ ಮಲೆನಾಡಿನಲ್ಲಿ ಸುತ್ತುತ್ತ ಒಂದು ಹಳ್ಳಿಗೆ ಹೋದೆ. ಆ ಕಾಡು ಹಳ್ಳಿಯಲ್ಲಿ ಮಧ್ಯೆ ಒಂದು ದೊಡ್ಡ ಮನೆ. ಇದು ಯಾರದೆಂದೆ. ಚೆನ್ನೇಗೌಡನದು ಎಂದೋ ಏನೋ ಹೆಸರು ಹೇಳಿದರು. ನಾವು ಮಾತ ನಾಡುವುದನ್ನು ಕೇಳಿ ಮನೆಯ ಮುದುಕಿ ಹೊರಗೆ ಬಂದರು. ಒಂದೆರಡು ಮಾತಾದಮೇಲೆ "ಇದು ಚೆನ್ನೇಗೌಡರ ಮನೆಯೇ" ಎಂದೆ. "ಹೌದು." "ಚೆನ್ನೇಗೌಡರು ಎಲ್ಲಿ?" "ಶಿವನಪುರಿಗೆ ಹೋಗ್ಯಾರೆ." ನನಗೆ ಅರ್ಥ ವಾಗಲಿಲ್ಲ. ನಾನು "ಶಿವನಪುರಿ ಎಲ್ಲಿದೆ?" ಎಂದೆ. ಹತ್ತಿರ ಇದ್ದವರು ಚೆನ್ನೇಗೌಡ ತೀರಿಹೋಗಿದ್ದಾರೆಂದು ತಿಳಿಸಿದರು. ನಾನು "ಅಯ್ಯೋ ಪಾಪ" ಎಂದು "ನಿಮ್ಮ ಮಾತು ತಿಳಿಯಲಿಲ್ಲವಮ್ಮಾ" ಎಂದೆ. ಮುದುಕಿ "ಅಯ್ಯೋ ನನ್ನಪ್ಪಾ ಏನು ಮಾತು ತಿಳಿಯೋಕೆ ಬಿಡಿ. ಅವರು ಹೋಗಿ ಹತ್ತು ವರುಷ ಆಯಿತು" ಎಂದರು. "ಶಿವನಪುರಿಗೆ ಹೋಗಿ ದಾರೆ!" ಮತ್ತೆ ನೋಡುವ ಭರವಸೆ ಉಂಟು ಎಂದು ಅರ್ಥ ಕಾಣು ತ್ತದೆ. ಈ ಅರ್ಥ ಆಕೆಯ ಮನಸ್ಸಿನಲ್ಲಿತ್ತೆ ಎಂದು ಸಂದೇಹ ಅವಶ್ಯಕ ವಿಲ್ಲ. ಮಾತು ಹುಟ್ಟಿ ಅರ್ಥ ಬರಲಿಲ್ಲ; ಅರ್ಥವಿದ್ದದ್ದರಿಂದ ಮಾತು ಬಂತು.

## ಈ ಸಂಸ್ಕೃತಿಯ ಫಲವಾದ ಗ್ರಾಮ ಜೀವನ

ಇದೇ ರೀತಿಯ ನಯವನ್ನು ನಮ್ಮ ಗ್ರಾಮಗಳ ಜೀವನದಲ್ಲಿಯೂ ನಾವು ನೋಡಬಹುದು. ನವನಾಗರಿಕತೆಯ ಬಡಿತದಿಂದ ಈಗ ನಮ್ಮ ಊರುಗಳ ಬದುಕಿನ ಕಟ್ಟು ಸಡಿಲವಾಗಿದೆ. ಈಗ ಕೆಲವು ವರುಷಗಳ ಹಿಂದೆ ಅದು ತಕ್ಕಮಟ್ಟಿಗೆ ಭದ್ರವಾಗಿತ್ತು. ನಮ್ಮ ಜನರಲ್ಲಿ ರಾಜ್ಯವೆಂಬ ಭಾವನೆ ಹೆಚ್ಚಾಗಿರಲಿಲ್ಲ; ಇದು ನಮ್ಮ ದೇಶದ ಚರಿತ್ರೆಯ ಫಲ; ದಿನಕ್ಕೆ ಒಬ್ಬನು ನಾಯಕನೆಂದರೆ, ರಾಮನಿಗೆ ರಾಜ್ಯವಾದರೇನು ರಾವಣನಿಗೆ ರಾಜ್ಯವಾದರೇನು ರಾಗಿ ಬೀಸುವುದು ತಪ್ಪಲಿಲ್ಲ, ಎಂಬ ಭಾವನೆ ಹುಟ್ಟುವುದು ಸ್ವಭಾವ. ಆದರೆ ಊರೆಂದರೆ ಯಾರೂ ಅಸಡ್ಡೆ ಮಾಡುವಂತಿರಲಿಲ್ಲ. ಜನ ನಾಡಿಗೆ ಅಂಟಿದ್ದಿತು: ಬಡಗ ನಾಡಿನವರು, ಸೀರ ನಾಡಿನವರು, ಮಂಡ್ಯದವರು, ಕೀಳು ನಾಡಿನವರು. ಆದ್ದರಿಂದ ಇವರಿಗೆ ತಮ್ಮ ಹಳ್ಳಿಗಳಲ್ಲಿ ಮಮತೆ ಹೆಚ್ಚು. ಊರ ಜನ ಅದರ ಬಳಿ ತೋಪು ಕೊಳ ಗುಡಿ ಮಂಟಪ ಮುಂತಾದುವನ್ನು ಮಾಡಿಕೊಂಡಿದ್ದರು. ಹತ್ತು ಜನಕ್ಕೆ ಸಹಾಯವಾಗುವ ಕೆಲಸವೆಂದರೆ ಪುಣ್ಯವೆಂದು ಭಾವನೆ. ರಂಗಪ್ಪನ ತೋಪು ಗಿರಿಯಪ್ಪನ ಬಾವಿ ಎಂದು ರಂಗಪ್ಪ ಹಾಕಿಸಿದ ತೋಪನ್ನೂ ಗಿರಿಯಪ್ಪನು ತೋಡಿಸಿದ ಬಾವಿಯನ್ನೂ ಕರೆಯುವರು. ಊರಿನ ಮುಂದೆ ರಚ್ಚೆಗಳು; ದಾರಿಗಳಲ್ಲಿ ಹೊರೆಕಲ್ಲುಗಳು, ಜಲ ಸಂದ್ರಗಳು; ಬಿಸಿಲ ದಿನದಲ್ಲಿ ಅರವಟ್ಟಿಗೆಗಳು. ಊರ ದೇವಾಲಯದಲ್ಲಿ ಉತ್ಸವಕಾಲದಲ್ಲಿ ದಿನ ದಿನವೂ ಒಬ್ಬರಲ್ಲದಿದ್ದರೆ ಒಬ್ಬರ ಸೇವೆ. ಕಾಲ ಕಾಲದಲ್ಲಿ ಆಯುಧ ಪೂಜೆ; ಬಿತ್ತುವಂದು ಭೂಮಿಯ ಪೂಜೆ. ಹೊಲ ಗದ್ದೆಗಳ ಕೆಲಸಗಳಲ್ಲಿ ಒಬ್ಬರಿಗೊಬ್ಬರು ನೆರವು. ಊರ ಹುಡುಗರಿಗಾಗಿ ಉಪ್ಪರಪಟ್ಟಿ ಗುಡುಗಿನಾಟ ಮುಂತಾದ ಆಟಗಳು. ಹಬ್ಬಗಳು. ಊರ ಜಗಳದ ನ್ಯಾಯಕ್ಕೆ ಬೇರೆಯವರನ್ನು ಕರೆಯುವುದಿಲ್ಲ. ಊರ ಜನದ ಅಂತಸ್ಸಾಕ್ಷಿ ಊರ ಚಾವಡಿಯಲ್ಲಿತ್ತು. ಈಗ ಅದು ನಾಡಿನ ಅಂತಸ್ಸಾಕ್ಷಿಯಲ್ಲಿ ಲೀನವಾಗಿ ನಮ್ಮ ನ್ಯಾಯಸ್ಥಾನಗಳಲ್ಲಿ ಜನರಿಗೆ ಗುರುತು ಸಿಕ್ಕದೆ ಮರೆಯಾಗಿದೆ. ಅದು ಚಾವಡಿಯಲ್ಲಿದ್ದಾಗ ಜನರು ಅದರೆದುರಿಗೆ ಸುಳ್ಳು ಹೇಳುವುದಕ್ಕೆ ಹಿಂಜರಿಯುತ್ತಿದ್ದರು.

ಹೀಗೆ ಒಂದೊಂದು ಗ್ರಾಮವೂ ಒಂದೊಂದು ಸಂಸಾರದಂತೆ ಇರುತ್ತಿತ್ತು.

## ಈ ಸಂಸ್ಕೃತಿಯಲ್ಲಿ ಕಲೆತ ವಿವಿಧ ಮತಗಳು

ಜನದ ಈ ಸಂಸ್ಕೃತಿ ಹಲವು ಮತಗಳ ಸೇರುವೆಯಿಂದ ಬೆಳೆಯಿತು. ಇದರಲ್ಲಿ ಮೊದಲನೆಯದು ನಾವು ಈಗ ಹಿಂದೂಮತವೆನ್ನುವುದರ ಮಧ್ಯಭಾಗ. ವಿದೇಶೀಯರು ನಮ್ಮ ಮತಗಳನ್ನು ಕುರಿತು ಚರ್ಚಿಸುವುದರಲ್ಲಿ ಕ್ರೀಸ್ತ ಮತ ಮುಹಮ್ಮದೀಯ ಮತಗಳನ್ನು ಬೇರೆಯೆಂದು ಎಣಿಸುವಂತೆ ಸನಾತನ ಧರ್ಮದ ಭಾಗಗಳನ್ನು ಬೇರೆ ಬೇರೆ ಮತಗಳೆಂದು ಎಣಿಸಿ ಬರೆದಿದ್ದಾರೆ. ಇದು ತಪ್ಪು ರೀತಿಯ ಭಾವನೆ. ಬೌದ್ಧಮತ ಜೈನಮತಗಳು ಹಿಂದೂಮತದಿಂದ ಬೇರೆಯಲ್ಲ. ಪ್ರೊಟಿಸ್ಟೆಂಟ್ ಕ್ರೈಸ್ತಜನರು ಪ್ರೊಟೆಸ್ಟೆಂಟರಾದರೂ ಕ್ರೈಸ್ತರು ಹೇಗೋ ಹಾಗೆ ಬೌದ್ಧರೂ ಜೈನರೂ ಬೌದ್ಧ ಜೈನರಾದರೂ ಹಿಂದೂಗಳೇ; ಸನಾತನ ಧರ್ಮದ ಮಧ್ಯಕಾಂಡವನ್ನಲ್ಲ, ಶಾಖೆಗಳನ್ನವಲಂಬಿಸಿರುವರು ಅಷ್ಟೇ. ಇತ್ತೀಚೆಗೆ ಕೆಲವರು ವಿದೇಶೀಯರು ವೀರಶೈವ ಮತವನ್ನು ಕೂಡ ಹಿಂದೂಮತದಿಂದ ಬೇರೆ ಎಂಬಂತೆ ಮಾತನಾಡಿದ್ದಾರೆ. ಹಿಂದೂ ಮತವನ್ನು ಇವರು "ಬ್ರಾಹ್ಮನಿಕಲ್" ಎಂದರೆ ಬ್ರಾಹ್ಮಣವೆಂದು ಕರೆಯುತ್ತಾರೆ. ಈ ಮಾತು ಬ್ರಾಹ್ಮಣ ಬ್ರಾಹ್ಮಣೇತರರ ವೈಷಮ್ಯಕ್ಕೆ ಕೂಡ ಕಾರಣವಾಗಿದೆಯೆನ್ನಬೇಕು. ಸನಾತನ ಧರ್ಮ ಯಾವ ಒಂದು ಜಾತಿಗೆ ಸೇರಿದುದೂ ಅಲ್ಲ. ಅದು ಬ್ರಾಹ್ಮನಿಕಲ್ಲೂ ಅಲ್ಲ ಶೂದ್ರಯಿಕಲ್ಲೂ ಅಲ್ಲ; ಅದಕ್ಕೆ ಬೌದ್ಧ ಜೈನ ತತ್ತ್ವಗಳು ವಿರೋಧವಾದುವಲ್ಲ; ವೀರಶೈವ ಮತವು ಅದರ ಆವರಣದಿಂದ ಹೊರಗಿರತಕ್ಕದ್ದಲ್ಲ. ಹೀಗೆ ಬೌದ್ಧ ಜೈನ ವೀರಶೈವ ಮೊದಲಾದ ಹಲವು ಶಾಖೆಗಳನ್ನೊಳಗೊಂಡ ಈ ಧರ್ಮದಲ್ಲಿ ಮಧ್ಯಭಾಗವೆನ್ನುವುದು ಸಾಂಪ್ರದಾಯಿಕವಾಗಿರುತ್ತ ಸ್ವಲ್ಪ ಸ್ವಲ್ಪ ಮಾರ್ಪಟ್ಟರೂ ಮೊತ್ತದಲ್ಲಿ ಆದಿಯಲ್ಲಿದ್ದ ಅಚ್ಚಿನಲ್ಲೇ ನಡೆದುಬರುತ್ತಿರುವ ಮತ. ಇದನ್ನು ನಾವು ಸ್ಮಾರ್ತ ಮತವೆಂದು ಕರೆಯಬಹುದು. ಕರ್ಣಾಟಕದ ಜನಸಂಸ್ಕೃತಿಯ ಚಿತ್ರಪಟದಲ್ಲಿ ಮೊದಲ ಬಣ್ಣ ಈ ಸ್ಮಾರ್ತ ಮತದ್ದು. ಇದಾದಮೇಲೆ ಬೌದ್ಧ

ಮತದ ಬಣ್ಣ ಸ್ವಲ್ಪ ಸೇರಿರಬೇಕು; ಇದರ ಜೊತೆಯಲ್ಲಿ ಜೈನಮತದ ಬಣ್ಣ ಸ್ವಲ್ಪ ಸೇರಿತು. ಆಮೇಲೆ ಅದರಲ್ಲಿ ವಿಶಿಷ್ಟಾದ್ವೈತ ಮತದ ವರ್ಣ ಒಂದುಕಡೆ ಸೇರಿತು. ಇತ್ತ ಇದು ಸೇರಿರುತ್ತಿರುವಲ್ಲಿ ಇನ್ನೊಂದು ಕಡೆ ಈ ನಾಡಿನ ಉತ್ತರ ಭಾಗದಲ್ಲೇ ಹುಟ್ಟಿದ ವೀರಶೈವ ಮತವೂ ಹರಿದಾಸಪಂಥವೂ ಚಿತ್ರಕ್ಕೆ ಬೇರೆಬೇರೆಯ ತೀವ್ರ ವರ್ಣಗಳನ್ನು ಸೇರಿಸಿದುವು. ಅದರಿಂದಾಚೆಗೆ ಕನ್ನಡ ನಾಡು ಕಷ್ಟಕ್ಕೆ ಸಿಕ್ಕಿ ಪುರೋಗಮನದಲ್ಲಿ ಭಂಗವನ್ನು ಪಡೆಯಿತು. ರಾಜ್ಯದಲ್ಲಿ ನೆಮ್ಮದಿ ಇಲ್ಲದ್ದರಿಂದ ಜನ ಒಂದು ಮುಖವಾಗಿ ಬೆಳೆಯುವುದಕ್ಕೆ ಇಲ್ಲದೆಹೋದರೂ ಜನರು ತಮ್ಮ ಹಿರಿಯರಿಂದ ಬಂದ ಧರ್ಮವನ್ನು ಹೇಗೋ ಹಾಗೆ ಕಾಪಾಡಿಕೊಂಡು ಬಂದರು. ನಮ್ಮ ಜನರ ಸಂಸ್ಕೃತಿಯಲ್ಲಿ ಕಡೆಯಲ್ಲಿ ಬಿದ್ದ ಬಣ್ಣ ವೀರಶೈವ ಮತದ್ದು ಮಾಧ್ವ ಮತದ್ದು. ಈಚೆಗೆ ಮುಹಮ್ಮದೀಯ ಮತ ಕ್ರೀಸ್ತ ಮತಗಳ ಸಂಪರ್ಕದಿಂದಲೂ ಕೆಲವು ಕೆಲವು ಮಾರ್ಪಾಡುಗಳು ಉಂಟಾಗಿವೆ.

## ಸಂಸ್ಕೃತಿಯಲ್ಲಿ ಬೌದ್ಧ ಜೈನ ಮತಗಳ ಅನುಭಾವ

ಕರ್ಣಾಟಕದ ಸಂಸ್ಕೃತಿ ಬೌದ್ಧಮತದಿಂದ ಯಾವ ವಿಶೇಷ ಗುಣವನ್ನು ಪಡೆದಿರಬಹುದೆಂದು ಹೇಳುವುದಕ್ಕೆ ಅವಕಾಶವಿಲ್ಲ. ಬುದ್ಧಮತಾವಲಂಬಿಯಾದ ಅಶೋಕ ಮಹಾರಾಜನ ಶಾಸನಗಳು ಮೂರು ಮೈಸೂರ ಉತ್ತರ ಭಾಗದಲ್ಲಿ ಸಿಕ್ಕಿರುವುದರಿಂದಲೂ, ಬೌದ್ಧರು ತಮ್ಮ ಮತಪ್ರಚಾರಕ್ಕಾಗಿ ಭರತವರ್ಷದಲ್ಲೆಲ್ಲಾ ಪ್ರಯತ್ನ ಮಾಡಿದರಾದ್ದರಿಂದಲೂ, ಕರ್ಣಾಟಕದಲ್ಲಿಯೂ ಕೆಲಸಮಾಡಿರಬೇಕೆಂದು ಊಹಿಸುವುದಕ್ಕೆ ಕಾರಣವಿದೆ. ಅಜಂತದ ದೇವಾಲಯಗಳೂ ಕನ್ನಡ ನಾಡಿನ ಎಲ್ಲೆಯಲ್ಲಿವೆ. ಬೌದ್ಧ ಶ್ರಮಣರು ಕರ್ಣಾಟಕದಲ್ಲಿ ತಮ್ಮ ಮತವನ್ನು ಪ್ರಚಾರಮಾಡಿದ್ದೇನೋ ಇರಬೇಕು. ಆದರೆ ಅದರ ಗುರುತು ಕನ್ನಡ ನಾಡಿನಲ್ಲಿ ಬಹಳವಾಗಿ ಸಿಕ್ಕುವಂತಿಲ್ಲ. ಬೌದ್ಧಮತಗ್ರಂಥಗಳ ಅನ್ವೇಷಣಕ್ಕಾಗಿ 'ನಮ್ಮ ಸೀಮೆಗೆ ಬಂದ ಫಾಹಿಯಾನ್ ಎಂಬ ಚೀನನು ಮಧ್ಯದೇಶದ ಪ್ರಯಾಣ ಮುಗಿಸಿದಮೇಲೆ ನಾವೆಯನ್ನೇರಿ ಸಿಂಹಳ ದ್ವೀಪಕ್ಕೆ ಹೋದಂತೆ ಅವನ ಪ್ರಯಾಣಕಥೆಯಿಂದ ತಿಳಿಯುತ್ತದೆ.

ಕರ್ಣಾಟಕದಲ್ಲಿ ಬೌದ್ಧಕ್ಷೇತ್ರಗಳು ಹೆಚ್ಚಾಗಿದ್ದಲ್ಲಿ ಅವನು ಇಲ್ಲಿಗೂ
ಪ್ರಾಯಶಃ ಬರುತ್ತಿದ್ದನು. ಎಂದರೆ ಬೌದ್ಧಮತವು ಕರ್ಣಾಟಕದ
ಅಂಚನ್ನು ಮುಟ್ಟಿದಷ್ಟು ಮಾತ್ರವೇ ಹೊರತು ಇಲ್ಲಿ ನೆಲಸಲಿಲ್ಲವೆಂದು
ತೋರುತ್ತದೆ. ಇದು ಹೇಗಾದರೂ ಶ್ರೀ ಶಂಕರಾಚಾರ್ಯರು ಸನಾತನ
ಧರ್ಮಸ್ಥಾಪನ ಕಾರ್ಯದಲ್ಲಿ ವಿಮತಖಂಡನಮಾಡುತ್ತಾ ಯಾವು
ದಾದರೂ ಒಳ್ಳೆಯ ಅಂಶಗಳು ಜನರಲ್ಲಿ ಊರಿದ್ದರೆ ಅವುಗಳನ್ನು ಬಿಡದಂತೆ
ಮುಖ್ಯಧರ್ಮಕ್ಕೆ ಅವನ್ನು ಸಮನ್ವಯ ಮಾಡಿ ಬೌದ್ಧಮತವು ಬೇರೆಯ
ಮತವಾಗಿ ಜನರಲ್ಲಿ ನಿಲ್ಲಬೇಕಾದ ಆವಶ್ಯಕತೆಯನ್ನು ಕಳೆದರು. ಬೌದ್ಧ
ಮತದ ಉಪಯುಕ್ತ ತತ್ವಗಳು ಹಲವು ಹೀಗೆ ಸನಾತನ ಧರ್ಮದಲ್ಲಿ
ಬೆರೆತುಹೋಗಿರಬೇಕು.

ಜೈನಮತದ ಚಿಹ್ನೆಗಳು ಕರ್ಣಾಟಕದಲ್ಲಿ ಇದಕ್ಕಿಂತ ಸ್ವಲ್ಪ ಸ್ಪಷ್ಟ
ವಾಗಿ ಕಾಣುತ್ತವೆ. ಶ್ರವಣಬೆಳಗೊಳವೂ ಕಾರಕಳವೂ ಕರ್ಣಾಟಕ
ದಲ್ಲಿರುವ ಜೈನ ಯಾತ್ರಾಸ್ಥಾನಗಳು. ಕನ್ನಡ ಸಾಹಿತ್ಯದ ಆರಂಭ
ಕಾಲದ ಉದ್ದಾಮ ಕವಿಗಳೆಲ್ಲ ಜೈನರೇ. ಕನ್ನಡ ನಾಡಿನಲ್ಲಿ ಜೈನ ಅರ
ಸರು ಅನೇಕರು ಆಳಿದರು. ಜೈನರು ಈಗಲೂ ಮನೆಯಲ್ಲಿ ಮದುವೆ
ಮುಂಜಿಗಳಲ್ಲಿ ಕನ್ನಡದಲ್ಲಿ ಮಂತ್ರಗಳನ್ನು ಹೇಳುವರಂತೆ. ಕರ್ನಾಟ
ಕದ ಜೈನರು ಆಡುವ ಮಾತು ಕೂಡ ಅಚ್ಚಗನ್ನಡ. ಸರ್ವಜ್ಞನು ಜೈನ
ಮತವನ್ನು ಹೊಗಳುತ್ತಾನೆ. ಬೇರೇದೇವರು ಜಿನ್ನೇದೇವರನ್ನು ಬಟ್ಟೆ
ಬೇಡಿದಹಾಗೆ ಎನ್ನುವ ನಾಣ್ನುಡಿಯಿಂದ ಜಿನಮೂರ್ತಿಯು ಜನಕ್ಕೆ
ಪರಿಚಿತಮೂರ್ತಿಯಾಗಿತ್ತೆಂದು ವ್ಯಕ್ತವಾಗುತ್ತದೆ. ಆದರೆ ಜೈನರ
ಚರಿತ್ರೆಯಲ್ಲೂ ಕೂಡ ಬರಬರುತ್ತ ಹೆಚ್ಚಿನ ಮಾರ್ಪಾಡುಗಳು ಆದುವು.
ರಾಮಾನುಜರ ಮತವು ಮೈಸೂರ ನಾಡಿಗೆ ಬಂದು ಜೈನರ ಪ್ರಾಬಲ್ಯ
ಕಡಿಮೆಯಾಯಿತು. ಇವರಿಂದಲೂ ಇವರ ಮತದಿಂದಲೂ ಜನದ ಬದು
ಕಿನಲ್ಲಿ ಯಾವ ಸಂಸ್ಕಾರವುಂಟಾಗಿತ್ತೋ ಅದು ಬೇರೆಯಾಗಿ ಗುರುತು
ಸಿಕ್ಕದಂತೆ ಸನಾತನ ಧರ್ಮದಲ್ಲಿ ಸೇರಿಹೋಯಿತು. ಈಗ ಹಳ್ಳಿಗಳಲ್ಲಿ
ರುವ ಜೈನರು ಉತ್ತಮ ತರಗತಿಯ ಸನಾತನ ಧರ್ಮಿಗಳಂತೆಯೇ
ಕಾಣುವರು. ಮಾತನಾಡಿಸಿ ನೋಡಿದರೂ ಜೈನರಿಗೂ ಹಿಂದೂಗಳಿಗೂ

ವ್ಯತ್ಯಾಸವೇನೆಂದು ಕಂಡುಬರುವುದಿಲ್ಲ. ಒಟ್ಟಿನಲ್ಲಿ ಮೊದಲಲ್ಲಿ ಪ್ರಾಣಿವಧೆ ತಪ್ಪೆಂಬ ಭಾವನೆ ಜನರಲ್ಲಿ ಜೈನಮತದಿಂದ ಹರಡಿರಬೇಕು.

## ಸನಾತನ ಧರ್ಮದ ಅನುಭಾವ

ಬೌದ್ಧ ಜೈನಮತಗಳು ಖಿಲವಾದರೂ ಅವುಗಳ ಉತ್ತಮ ಗುಣಗಳನ್ನು ಒಳಗೆ ಸೇರಿಸಿಕೊಂಡು ಹೆಚ್ಚು ಜನರದಾಗಿ ನಿಂತ ಮತವನ್ನು ಮುಖ್ಯಮತ ಸ್ಮಾರ್ತಮತ ಎಂದು ಹಿಂದೆ ಕರೆದಿದೆ. ಈ ಮತದಲ್ಲಿ ಇದೊಂದು ವಿಶೇಷ ಗುಣ. ಇದು ಇನ್ನು ಯಾವ ಮತದಿಂದಲೂ ಮರೆಯಾಗಿ ಹೋಗಿಲ್ಲ. ಈ ಮತವು ಮನುಷ್ಯ ವರ್ಗದ ಎಲ್ಲಾ ಅವಸ್ಥೆಗಳಿಗೂ ಅನುಕೂಲವಾದ ತತ್ತ್ವಗಳನ್ನು ಒಳಗೊಂಡಿದೆ. ಇದರಲ್ಲಿ ವೇದಾಂತದ ಕಡೆಯ ಎಲ್ಲೆಯಲ್ಲಿ ಸುಳಿಯುವ ಜ್ಞಾನಿಯಿಂದ ಹಿಡಿದು ಸಾಮಾನ್ಯ ಜೀವನದಲ್ಲಿ ಬೀಳುತ್ತ ಏಳುತ್ತ ದೇವರನ್ನು ಒಬ್ಬ ಮನುಷ್ಯನಂತೆ ಭಾವಿಸಿ ಅವನ ಕೃಪೆಯನ್ನು ಸಂಪಾದಿಸುವುದಕ್ಕೆ ಅವನಿಗೆ ತೆಂಗಿನ ಕಾಯಿ ಒಡೆಯಬೇಕು ಎನ್ನುವ ಸಾಮಾನ್ಯ ಜ್ಞಾನಿಯವರೆಗೆ ಎಲ್ಲ ಮಟ್ಟದ ಸಂಸ್ಕಾರದ ಜನಕ್ಕೂ ಸ್ಥಳವಿದೆ; ಮಾನವ ಹೃದಯದ ಎಲ್ಲ ಭಾಗಕ್ಕೂ ಒಂದು ಅವಕಾಶವಿದೆ; ಇರುವಲ್ಲಿಂದ ಮುಂದಕ್ಕೆ ಒಯ್ಯಲು ದಾರಿಯಿದೆ. ಇದರ ತತ್ತ್ವಗಳು ಇಷ್ಟೇ ಎಂದು ಹೇಳುವಂತಿಲ್ಲ. ಅದರಿಂದ ಇದು ಒಂದು ಮತವೇ ಎಂದು ಕೆಲವರು ಪ್ರಶ್ನೆಮಾಡುವಂತೆ ಕೂಡ ಆಗಿದೆ. ಇದು ತತ್ತ್ವ ಕೆಲವನ್ನು ಹೇಳಿ ಅದಕ್ಕೆ ಒಪ್ಪಿದವರೇ ತನ್ನವರೆನ್ನುವುದಿಲ್ಲ. ಬಂದ ಎಲ್ಲಾ ಜನರನ್ನು ತನ್ನವರೆಂದು ಅವರ ಬದುಕನ್ನು ವ್ಯವಸ್ಥೆಗೊಳಿಸುವುದಕ್ಕೆ ಏರ್ಪಾಡು ಮಾಡಿದೆ. ಇದರಲ್ಲಿ ಸಮಾಜದ ಬೆಳವಣಿಗೆಗೆ ವ್ಯಕ್ತಿಯ ಬೆಳವಣಿಗೆಗೆ ಆವಶ್ಯಕವಾದ ಮುಖ್ಯ ಸೂತ್ರಗಳೆಲ್ಲ ಅಡಕವಾಗಿವೆ; ದಿನದ ಆಚಾರ, ವ್ಯವಹಾರ, ಪೂಜೆ ಪುರಸ್ಕಾರ, ಹಬ್ಬಹುಣ್ಣಿಮೆ, ಇರುವುದು ಹೋಗುವುದು, ಕಷ್ಟ ಸುಖ, ಎಲ್ಲವೂ ಒಂದು ಉಚ್ಚ ನಿಯಮಕ್ಕೆ ವಿಧೇಯವಾಗಿ ನಡೆದುಕೊಳ್ಳುತ್ತವೆ. ಇದು ಜನದ ಜೀವನದಲ್ಲಿ ಗಾಳಿಯಂತೆ ಬೆಳಕಿನಂತೆ ಎಲ್ಲೆಡೆಯನ್ನು ವ್ಯಾಪಿಸಿ ಅದನ್ನು ಸಾಧ್ಯವಾದಲ್ಲೆಲ್ಲ ತಿದ್ದುತ್ತ ಇದ್ದಿದೆ.

ಸ್ಮಾರ್ತ ಮತವು ತಿಳಿವನ್ನೆಲ್ಲ ಜನರಿಂದ ಮರೆಯಿಸಿತ್ತೆಂದೂ ಸಾಮಾನ್ಯ ಜನರನ್ನೆಲ್ಲ ಪುರೋಹಿತ ವರ್ಗಕ್ಕೆ ಅಧೀನವಾಗಿ ಮಾಡಿತ್ತೆಂದೂ ಪಾಶ್ಚಾತ್ಯ ಧರ್ಮಜ್ಞರು ಹೇಳುವುದುಂಟು. ಇತ್ತೀಚಿಗೆ ನಮ್ಮ ಜನರೂ ಈ ಮಾತನ್ನು ಹೇಳುತ್ತಿದಾರೆ. ಜನರಿಗೆಲ್ಲ ಓದುಬರಹ ಕಲಿಸಲು, ಜನರಿಗೆ ಜ್ಞಾನಸಂಪಾದನೆಯ ಸಾಧನವನ್ನು ಕೊಡಲು, ಹಿಂದೆ ಸಾಕಾದಷ್ಟು ಪ್ರಯತ್ನ ನಡೆಯಲಿಲ್ಲವೆಂದರೂ ಜನಾಂಗದ ಜ್ಞಾನದ ಸಾರವನ್ನು ಜನರಲ್ಲಿ ಹರಡುವುದಕ್ಕೆ ನಮ್ಮ ಪೂರ್ವಿಕರು ಪ್ರಯತ್ನಮಾಡದೆ ಬಿಡಲಿಲ್ಲವೆಂದು ಈ ಮೊದಲೇ ಸೂಚಿಸಿದೆ. ಈ ಮತವು ಮುಖ್ಯವಾದ ಆಚಾರವನ್ನು ವಿಧಿಸಿ ಬದುಕನ್ನು ತಿದ್ದಿತು. ನಾವು ಈಚಿಗೆ ಕರ್ಮವೆಂದರೆ ಹಾಸ್ಯ ಮಾಡುವುದಕ್ಕೆ ಆರಂಭಮಾಡಿದೇವೆ. ಸಂಧ್ಯಾವಂದನೆಯನ್ನೇಕೆ ಮಾಡಬೇಕು ಎನ್ನುವೆವು. ನಮ್ಮ ತಾತಂದಿರು ಕಟ್ಟುನಿಟ್ಟಾಗಿ ಒಂದು ಗಳಿಗೆಯಾದರೂ ದೇವರನ್ನು ನೆನೆಯುತ್ತಿದ್ದ ಸಂದರ್ಭದಲ್ಲಿ ನಾವು ಒಂದು ಕ್ಷಣವಾದರೂ ನೆನೆಯುವುದಿಲ್ಲ. ದೇವರ ಪೂಜೆಗೆ ದೇವಾಲಯಕ್ಕೆ ಏಕೆ ಹೋಗಬೇಕು ಎನ್ನುವೆವು; ದೇವಾಲಯಕ್ಕೆ ಹೋಗುವುದೂ ಇಲ್ಲ, ಬೇರೆಕಡೆ ದೇವರನ್ನು ಪೂಜಿಸುವುದೂ ಇಲ್ಲ. ಮಾಡಬೇಕಾದದ್ದೆಂದು ನಿರ್ಧಾರವಾದ ಕೆಲಸವನ್ನು ಜನರು ಮಾಡುವರು. ಇಂದು ಅದರ ಅರ್ಥ ತಿಳಿಯದಿದ್ದರೂ ಮುಂದೆ ಅದನ್ನು ಅವರು ತಿಳಿಯಬಹುದು. ಕರ್ಮವನ್ನು ನಿಯಮಿಸುವುದರ ಉದ್ದೇಶ ಇದು. ಅನೇಕ ಸಂದರ್ಭದಲ್ಲಿ ಮೊದಲು ಅರ್ಥ ತಿಳಿದಿದ್ದು ಆಮೇಲೆ ಮರೆಯುವುದೂ ನಿಜ. ಆದರೆ ಅದರಿಂದ ಮೊದಲು ಏರ್ಪಾಡು ಮಾಡಿದವರಮೇಲೆ ತಪ್ಪು ಹೊರಿಸುವುದು ಸರಿಯಲ್ಲ. ಸ್ಮಾರ್ತ ಮತವು ಮೊದಲು ವಿಶೇಷವಾಗಿ ಕರ್ಮವನ್ನು ವಿಧಿಸಿ ಸಾಮಾನ್ಯಜನರ ಬಾಳನ್ನು ಸಂಸ್ಕರಿಸಲು ಯತ್ನಮಾಡಿತು. ಬರಿಯ ಕರ್ಮದಿಂದ ಜನ ಉದ್ಧಾರವಾಗಲಿಲ್ಲವೆಂದು ಹೊಸ ಮತಗಳು ಏಳಲು ಅವುಗಳ ಉತ್ತಮ ಭಾಗಗಳನ್ನು ಸ್ವೀಕರಿಸಿ ಭಕ್ತಿಮಾರ್ಗವನ್ನು ಜನರಲ್ಲಿ ಪ್ರಚಾರಕ್ಕೆ ತಂದಿತು. ಇತರ ಮತಗಳು ದೇಶಭಾಷೆಗಳ ಸಹಾಯದಿಂದ ನೀತಿಯನ್ನು ಕಲಿಸಬಂದದ್ದನ್ನು ನೋಡಿ ತಾನೂ ದೇಶಭಾಷೆಯ

ಸಹಾಯವನ್ನು ತೆಗೆದುಕೊಂಡಿತು. ಕಾಲಾನುಗುಣವಾಗಿ ಹೊಸ ಪದ್ಧತಿಗಳನ್ನು ಅನುಸರಿಸುತ್ತ ತನ್ನ ಕರ್ತವ್ಯವನ್ನು ಸಾಧ್ಯವಾದಷ್ಟುಮಟ್ಟಿಗೆ ನಡೆಯಿಸುತ್ತ ಬೆಳೆಯಿತು.

ಸ್ಮಾರ್ತ ಮತವು ಸಾಮಾನ್ಯ ಜನರನ್ನು ಮರೆಯಲಿಲ್ಲವೆನ್ನುವುದು ಶಂಕರಾಚಾರ್ಯರ ಮತ್ತು ಅವರ ಶಿಷ್ಯರ ಶ್ಲೋಕಮಂಜರಿಗಳಿಂದ ವ್ಯಕ್ತವಾಗುತ್ತದೆ. ಈ ಶ್ಲೋಕಗಳಿಗಿಂತ ಸರಳವಾದ ಭಾಷೆಯಲ್ಲಿ ಇವು ಹೇಳುವಷ್ಟು ತತ್ತ್ವವನ್ನು ಹೇಳುವ ಶ್ಲೋಕಗಳನ್ನು ಮತ್ತೆ ಯಾವ ಭಾಷೆಯಲ್ಲಿಯಾದರೂ ನೋಡುವುದು ದುರ್ಲಭ. ಆ ಶ್ಲೋಕಗಳಲ್ಲಿ ಹೇಳಿರುವ ತತ್ತ್ವಗಳಂತೂ ಹಿರಿಯರು ಕಿರಿಯರಿಗೆನ್ನದೆ ಸರ್ವರಿಗೂ ಬೇಕಾದುವಾಗಿವೆ. ಶಾಂಕರ ಮತವು ಜೀವವನ್ನೇ ಪರಮಾತ್ಮನೆಂದು ಹೇಳುತ್ತದೆಂದೂ, ಸೃಷ್ಟಿಯನ್ನೆಲ್ಲಾ ಮಾಯವೆಂದು ವರ್ಣಿಸುತ್ತದೆಂದೂ, ಆದರಿಂದ ಮನುಷ್ಯನು ಕೆಲಸಮಾಡುವುದಕ್ಕೆ ಕಾರಣವೇ ಇಲ್ಲದೆ ಹೋಗುತ್ತದೆಂದೂ ಒಳ್ಳೆಯತನಕ್ಕೆ ಸಾಕಾದ ಪ್ರಯೋಜನವು ನಾಶವಾಗುತ್ತದೆಂದೂ ಸಾಮಾನ್ಯವಾದ ಭಾವನೆ ಕೆಲವು ಜನರಲ್ಲಿ ಹರಡಿದೆ. ಈ ದೋಷಗಳನ್ನು ಈ ಮತದ ವಿರೋಧಿಗಳು ಇದಕ್ಕೆ ಆರೋಪಿಸುವರು. ಇದೆಲ್ಲ ಭ್ರಮೆಯ ಮಾತು. ಶಾಂಕರಮತವನ್ನು ಅನುಸರಿಸುವವರು ಕೂಡ ಅದ್ವೈತವು ಕಷ್ಟಸಾಧ್ಯವೆಂದು ಬಲ್ಲರು. ಆ ಮತವಾಗಲಿ ಮನುಷ್ಯನನ್ನು ಇಷ್ಟಬಂದಹಾಗೆ ಮಾಡೆಂದು ಹೇಳುವುದಿಲ್ಲ; ಶುಷ್ಕ ಮಾಯಾವಾದದಲ್ಲಿ ಬದುಕನ್ನು ಮುಗಿಸು ಎನ್ನುವುದಿಲ್ಲ; ಒಳ್ಳೆಯದರಿಂದ ಪ್ರಯೋಜನವಿಲ್ಲವೆನ್ನುವುದಿಲ್ಲ. ಆಚಾರ್ಯರ ಭಜಗೋವಿಂದಂ ಶ್ಲೋಕಮಂಜರಿಯಲ್ಲಿ ಈ ಮುಖ್ಯ ತತ್ತ್ವ ಸ್ಪಷ್ಟವಾಗುವುದು. ಗೋವಿಂದನನ್ನು ಭಜಿಸು. ಸಾವು ಬಂದಾಗ ಡುಕೃಂಕರಣೆ ರಕ್ಷಿಸುವುದಿಲ್ಲ. ಜ್ಞಾನದ ಸಲಕರಣೆ ಜ್ಞಾನವಲ್ಲ; ಜ್ಞಾನವನ್ನೇ ಸಂಪಾದಿಸು; ಅದರಂತೆ ನಡೆ. ನಾನು ಯಾರು ಎಲ್ಲಿಂದ ಬಂದೆ ಎಲ್ಲಿಗೆ ಹೋಗುತ್ತೇನೆ ಎಂದು ಯೋಚನೆ ಮಾಡು. ಇದು ಬುದ್ಧಿವಂತನ ಲಕ್ಷಣ. ಸಾಮಾನ್ಯನು ಬಾಲ್ಯದಲ್ಲಿ ಆಟದಲ್ಲಿಯೂ ಯೌವನದಲ್ಲಿ ಸುಖದಲ್ಲಿಯೂ ವಾರ್ಧಿಕ್ಯದಲ್ಲಿ ಚಿಂತೆಯಲ್ಲಿಯೂ ಮಗ್ನನಾಗಿರುತ್ತಾನೆ; ಹೀಗಿರಬಾರದು. ಪರ

ವಸ್ತುವಿನ ಸ್ವರೂಪವನ್ನು ಅರಿ. ಅದರ ವಿಶ್ವನಿಯಮಕ್ಕೆ ಅನುಗುಣವಾಗಿ ನಡೆದುಕೋ. ಸರಿಯಾದ ಭಾವದಿಂದ ಗೀತೆಯ ಒಂದು ಮಾತನ್ನು ಪಾಠ ಮಾಡಿದರೂ ಮುಕ್ತಿಯುಂಟು; ಅದಿಲ್ಲದೆ ಗೀತೆಯೆಲ್ಲವನ್ನೂ ಪಾಠಮಾಡಿ ಪ್ರಯೋಜನವಿಲ್ಲ. ವಿಷಯಸುಖವು ಹೇಯವಾದದ್ದು, ಕ್ಷಣಿಕವಾದದ್ದು; ಅದಕ್ಕೆ ಮನಸ್ಸನ್ನು ಕೊಡಬೇಡ. ನಿತ್ಯಸುಖ ಹಿರಿಯದು; ಅದನ್ನು ಅಪೇಕ್ಷಿಸು; ಅದನ್ನು ಸಂಪಾದಿಸಲು ಯತ್ನಮಾಡು; ಇತ್ಯಾದಿ, ಇತ್ಯಾದಿ. ವೇದಾಂತದ ಸಾರವೇ ಈ ಶ್ಲೋಕಗಳಲ್ಲಿ ಭಟ್ಟಿ ಇಳಿದಿದೆ.

## ಅನುಭವಾಮೃತ ಕಾವ್ಯ

ಕಾಲಕ್ರಮದಲ್ಲಿ ಜನದ ಉಪದೇಶಕ್ಕಾಗಿ ಸ್ಮಾರ್ತಮತಾವಲಂಬಿಗಳಿಂದ ಅನೇಕ ಷಟ್ಪದೀ ಕಾವ್ಯಗಳು ಸೃಷ್ಟವಾದುವು. ಬರಬರುತ್ತ ಜ್ಞಾನವು ಮುಖ್ಯವೇ ಹೊರತು ಅದನ್ನು ಕಲಿಯುವುದು ಯಾವ ಭಾಷೆಯಲ್ಲಿ ಎಂಬುದು ಮುಖ್ಯವಲ್ಲ ಎಂಬುದು ಜನರಿಗೆ ತೋರಿತು. ಇದಿಷ್ಟು ಕಷ್ಟವಾದ ವಿಷಯವೇ ಎಂದು ನಾವು ಕೆಲವರು ಕೇಳಬಹುದು. ನಿಜವಾಗಿಯೂ ಇದು ಬಹಳ ಕಷ್ಟ. ಪ್ರಪಂಚದಲ್ಲೆಲ್ಲಾ ಈ ಕಷ್ಟದ ಅನುಭವ ಉಂಟಾಗಿದೆ. ಲ್ಯಾಟಿನ್, ಗ್ರೀಕ್ ಭಾಷೆಗಳಿಂದ ಕ್ರೈಸ್ತ ಬೈಬಲ್ ಗ್ರಂಥವು ಸಾಮಾನ್ಯ ಜನದ ಭಾಷೆಗಳಿಗೆ ಭಾಷಾಂತರವಾಗಬೇಕಾದರೆ ಸಾವಿರದ ಐದುನೂರು ವರ್ಷ ಕಳೆಯಿತು. ಇಂಥಾ ಭಾವನೆ ಇನ್ನೂ ನಮ್ಮಲ್ಲಿ ಹೋಗಿಲ್ಲ. ಸಂಸ್ಕೃತದ ವಿಷಯದಲ್ಲಿ ಸಂಸ್ಕೃತ ಪಂಡಿತರಿಗಿರುವ ಈ ಭಾವನೆ ಈಗ ಇಂಗ್ಲೀಷ್ ಭಾಷೆಯ ವಿಷಯದಲ್ಲಿ ಇಂಗ್ಲೀಷನ್ನು ಕಲಿತ ನಮಗೆ ಇದೆ. ಇಂಗ್ಲೀಷಿನಲ್ಲಿ ಇರುವ ವಿಷಯವನ್ನು ಕನ್ನಡದಲ್ಲಿ ಹೇಳುವುದು ಸಾಧ್ಯವೇ ಎಂದು ನಮ್ಮಲ್ಲಿ ಅನೇಕರಿಗೆ ಈಗಲೂ ಸಂದೇಹ. ಕನ್ನಡದ ಜನದ ತಲೆಗೆ ಅಂಟಬಹುದಾದ ಭಾವವೆಲ್ಲಾ ಕನ್ನಡದ ನುಡಿಯಲ್ಲಿ ಹೇಳಲು ಸಾಧ್ಯವಾಗುವುದೆಂದು ನಾವು ಒಮ್ಮೆಗೆ ಒಪ್ಪುವುದಿಲ್ಲ. ಹಿಂದೆ ಈ ಭಾವ ಬರುವುದು ಹೀಗೆಯೇ ಸಾವಕಾಶವಾಯಿತು. ಬಂದಾಗ್ಯೆ ಕನ್ನಡ ನಾಡಿನ ಜ್ಞಾನಿಗಳು ಜನರಿಂದ

ಯಾವುದನ್ನೂ ಬಚ್ಚಿಡಲಿಲ್ಲ. ಅನುಭವಾಮೃತವೆಂಬ ಗ್ರಂಥದಿಂದ ಈ ವಿಷಯ ಸ್ಪಷ್ಟವಾಗುತ್ತದೆ.

ಕನ್ನಡವನ್ನು ಸುಲಿದ ಬಾಳೆಯ ಹಣ್ಣಿನಂದ ಕಳೆದ ಸಿಗುರಿನ ಕಬ್ಬಿನಂದ ಎಂದು ಮೊದಲಾಗಿ ಹೊಗಳುವ ಪದ್ಯವನ್ನು ನಾವೆಲ್ಲಾ ಕೇಳಿರುವೆವು. ಆ ಪದ್ಯದಲ್ಲಿಯ ಉಜ್ವಲ ಭಾಷಾಪ್ರೇಮವು ಈಗ ದೇಶ ವತ್ಸಲರೆನ್ನಿಸಿಕೊಳ್ಳುವ ನಮ್ಮಲ್ಲಿ ಕೂಡ ಅನೇಕರಿಗೆ ಇರಲಾರದು. ಸಂಸ್ಕೃತದ ಗಂಧವನ್ನೇ ಅರಿಯದವರಾದರೂ ನಾವು ಸಂಸ್ಕೃತದಲ್ಲೇನಿದೆ ಎಂದು ಹೇಳುವುದಕ್ಕೆ ಹಿಂಜರಿಯುತ್ತೇವೆ. ಇಂಗ್ಲೀಷಿನಲ್ಲೇನಿದೆ ಎಂದು ಯಾರೂ ಹೇಳುವ ಸಂದರ್ಭವೇ ಇಲ್ಲ. ಆದರೂ ಹಲವು ಶತಮಾನಗಳ ಹಿಂದೆ ಅನುಭವಾಮೃತ ಗ್ರಂಥವನ್ನು ಬರೆದ ಕವಿ ಕನ್ನಡವನ್ನು ಸಾಕೆಂದದ್ದಲ್ಲದೆ ಸಂಸ್ಕೃತದಲ್ಲಿ ಇನ್ನೇನಿದೆ ಎಂದನು. ಇವನ ಕಾವ್ಯದಲ್ಲಿ ಹೇಳಿರುವ ವಿಷಯ ಮುಕ್ತಿಸಾಧನೆಯ ಮಾರ್ಗ. ತಿಳಿವನ್ನು ಎಲ್ಲರಿಗೂ ಎರಚುವುದೇ, ಬೇಡಿಬಂದವರಿಗೆ ಮಾತ್ರ ಕೊಡುವುದೇ, ಎಂಬುದು ಚರ್ಚಾರ್ಹವಾದ ವಿಷಯ. ಸಂತೆಯಲ್ಲಿ ತತ್ತ್ವವನ್ನು ಬೋಧಿಸುವುದು ಮೂರ್ಖತನ ಎಂಬ ಸಂಪ್ರದಾಯವಿರುವಲ್ಲಿ ಬೇಕಾದವರು ಓದಲಿ ಎಂದು ಈತನು ಕನ್ನಡದಲ್ಲಿ ಈ ಗ್ರಂಥವನ್ನು ಬರೆದಿಟ್ಟನು. ಇದನ್ನು ನೋಡಿದರೆ ನಮಗೆ ಈತನ ಔದಾರ್ಯ ಎಷ್ಟು ಹಿರಿಯದೆಂದು ವ್ಯಕ್ತವಾಗುವುದು. ಈ ಗ್ರಂಥವು ಜನದಲ್ಲಿ ಬಹಳ ವಾಡಿಕೆಗೆ ಬಂದಿತು. ದತ್ತಪುತ್ರನಿಗೆ ಏತಕ್ಕೆ ಪಿತೃಭಕ್ತಿ ಎಂಬ ರೀತಿಯ ಮಾತುಗಳು ಈ ಗ್ರಂಥದಲ್ಲಿ ಹಲವು ಬರುತ್ತವೆ. ಇಂಥಾ ನಾಣ್ನುಡಿಗಳನ್ನು ಜನಕ್ಕೆ ಈ ಗ್ರಂಥವೇ ಕೊಟ್ಟಿರ ಬಹುದು. ಸ್ಮಾರ್ತಮತದಿಂದ ಜನರಲ್ಲಿ ಹರಡಿತೆನ್ನುವ ತಿಳಿವಿನ ಲಕ್ಷಣ ಗಳು ಈ ಗ್ರಂಥದ ಕೆಲವು ಅಧ್ಯಾಯಗಳನ್ನು ನೋಡುವುದರಿಂದ ನಮಗೆ ತಿಳಿದುಬರುವುದು.

ಮುಕ್ತಿಯೇ ಶಾಶ್ವತವಾದ ಸುಖ, ಅದನ್ನು ಪಡೆಯಲು ಯತ್ನಿಸು ವುದೇ ಮಾನವನಿಗೆ ಯೋಗ್ಯ ಕರ್ತವ್ಯ, ಎನ್ನುವುದೇ ಈ ಗ್ರಂಥದ ಮೂಲಸೂತ್ರ. ಮುಕ್ತಿ ಎಂದರೆ ಬ್ರಹ್ಮಜ್ಞಾನ. ಬ್ರಹ್ಮಜ್ಞಾನಕ್ಕೆ ಅಧಿಕಾರಿ ಯಾರು ಎಂದು ಹೇಳುವುದರಲ್ಲಿ ಕವಿಯು ಸಜ್ಜನನ ಲಕ್ಷಣಗಳನ್ನು

ಹೇಳುತ್ತಾನೆ. ಇಂಥ ಮನುಷ್ಯನು ದಾನ ಧರ್ಮದಯಾನ್ವಿತನಾಗಿರ ಬೇಕು; ನಿರ್ಮಾನಮದಮತ್ಸರನಾಗಿರಬೇಕು; ಜ್ಞಾನಸಾಧನ ಶಮ ದಮಾದಿ ವಿಧಾನ ನಿರತನಾಗಿರಬೇಕು. ದಂಭದರ್ಪಗಳೇನೂ ಇಲ್ಲದ ಶಾಂತನಾಗಿರಬೇಕು. ಬಂದ ಸುಖದುಃಖಗಳು ತನ್ನನ್ನು ಮುಂದು ಗೆಡಿಸಲು ನೋಯದುಬ್ಬದೆ ಬಂದುದೆಲ್ಲವೂ ಈಶ್ವರಾಜ್ಞೆ ಎನ್ನುತ್ತಾ ಧೈರ್ಯವನ್ನು ತಂದು ಮನದಲ್ಲಿ ದೃಢ ವಿರಕ್ತಿಯ ಹೊಂದಿ ಭೋಗ ಭ್ರಾಂತಿಯುಳಿದರೆ ಅಂದು ಮನುಜನು ಮುಕ್ತನೆನಿಸುವನು. ಇಂಥವನು ತರುಣಿಯರು ತನ್ನಿದಿರೊಳೆಸೆದಿರೆ ಕುರುಡನಂತಿರುವನು. ಅನ್ಯರು ಪರರ ನಿಂದೆಯನೊರೆಯಲು ಬಧಿರನಂದದಿ ಕೇಳನದನೊಲಿದು; ಕರವಿಕಲ ನಂದದಲಿ ಹಿರಿದಾದರೂ ಪರಧನವನು ಹಿರಿಯನು. ದುಷ್ಟರು ತನ್ನನ್ನು ಜರಿಯೆ ಮರಳಿ ಜರಿಯ. ಎಡರಿನಲಿ ಎದೆ ಗುಂದದುಬ್ಬದೆ ಪೊಡವಿಗಧಿಪತಿ ಯಾಗೆ ಹಿಗ್ಗದೆ ಬಡತನದಿ ಕಂಗೆಡದೆ ವಿತ್ತವ ಗಳಿಸಿ ಗರ್ವಿಸದೆ ಮಡದಿ ಮನೆ ಮನೆವಾರ್ತೆ ಮಕ್ಕಳ ಗೊಡವಿಯಲಿ ಕಡುಮಮತೆ ಇಲ್ಲದೆ ದೃಢ ವಿರಕ್ತಿಯಲಿರಲು ಮನುಷ್ಯನು ಮೋಕ್ಷ ಪಡೆಯುವನು. ಈ ದಾರಿಗೆ ಮನಸ್ಸನ್ನು ಕೊಡದೆ ಸಂಸಾರದಲ್ಲೇ ಮನಸ್ಸಿಟ್ಟವನು ಕೆಟ್ಟುಹೋಗು ವನು. ಮಾಯೆ ಮೊದಲೇ ಮುಚ್ಚಿದೆ. ಅದರಮೇಲೆ ಸಂಸಾರಕ್ಕೆ ಸೋತರೆ, ಮರುಳು ಹಿಡಿದವನು ಮದ್ದುಗುಳಿಕೆಯನು ತಿಂದಂತಾಯಿತು. ಇಂಥ ಮನುಷ್ಯನಿಗೆ ಬರಬರುತ್ತಾ ಸಂಸಾರದ ತೊಡರು ಹೆಚ್ಚುವುದೇ ಹೊರತು ಕಡಿಮೆಯಾಗಲಾರದು. ತೆರಳೆಯ ಹುಳು ನಡೆದಂತೆಲ್ಲಾ ಅದರ ಭಾರ ಹೆಚ್ಚುವಂತೆ ಇವನ ಸ್ಥಿತಿ. ಇಂಥವರಿಗೆ ಸಂಸಾರದಲ್ಲಿ ಸಿದ್ಧವಾದ ಜರೆ ಮರವು ಮರಣವೆಂಬ ದುಃಖ ತಪ್ಪಿದ್ದಲ್ಲ. ಒರಳಲ್ಲಿ ತಲೆಯಿಟ್ಟವನಿಗೆ ಒನಕೆಯ ಪೆಟ್ಟು ತಪ್ಪಿದ್ದೆ? ಭವಕ್ಕೆ ಸಿಕ್ಕಿದ ಮೇಲೆ ಅದರ ಕಷ್ಟ ಸಿದ್ಧ. ಕೊರಳಿಗೆ ಸುತ್ತಿದ ಹಾವು ಕಚ್ಚದೆ ಮರಳುವುದೆ? ಇಂಥವನು ಮೋಕ್ಷದ ಮಾತನ್ನು ನೆನೆದರೂ ಪ್ರಯೋಜನವಿಲ್ಲ. ಕಣ್ಣು ಕಾಣದವನಿಗೆ ಕನ್ನಡಿಯೇಕೆ? ನಪುಂಸಕನಿಗೆ ರಾಣಿಯೇಕೆ? ಇಷ್ಟಕ್ಕೆ ಅವನು ಅದನ್ನು ಲಕ್ಷಿಸಲೂ ಆರನು. ಕತ್ತೆ ಕತ್ತುರಿಯನ್ನರಿವುದೇ? ದತ್ತಾಗಿ ಹೋದ ಮಗನಿಗೆ ಹೆತ್ತ ತಂದೆಯ ಮೇಲೆ ಭಕ್ತಿ ಹೇಗೆ

ಬರಬೇಕು? ಅವನು ಬೇರೆಯ ಜನಕ್ಕೆ ಸೇರಿದನು. ಸಂಸಾರಕ್ಕೆ ಮಾರು ಹೋದವನಿಗೆ ಪರತತ್ತ್ವದ ಮಾತೇಕೆ? ಇಂಥವನು ವೇದಾಂತದ ಲಾಂಛನವನ್ನು ಧರಿಸಿದರೂ ವೇದಾಂತಿಯಾಗಿರಲಾರನು. ಎತ್ತಿಗೆ ಲಿಂಗಮುದ್ರೆ ಹಾಕಿದರೆ ಅದು ಬಸವನಾಗುವುದು ; ಕತ್ತೆಗೆ ಲಿಂಗಮುದ್ರೆ ಹಾಕಿದರೆ ಕತ್ತೆಯಲ್ಲದೆ ಬಸವನಾಗಲಾರದು. ಅಧಿಕಾರವಿಲ್ಲದವನು ನನಗೇಕೆ ಎಂದು ಬಿಡುವುದಕ್ಕೂ ಇಲ್ಲ. ಅಧಿಕಾರವನ್ನು ಸಂಪಾದಿಸುವುದಕ್ಕೆ, ಅದಕ್ಕೆ ಬೇಕಾದ ಜ್ಞಾನವನ್ನು ಸಂಪಾದಿಸುವುದಕ್ಕೆ, ಯತ್ನ ಮಾಡಬೇಕು. ಜ್ಞಾನವನ್ನು ಸಂಪಾದಿಸದವನ ಬದುಕು ವ್ಯರ್ಥ. ನಿಜವಾದ ಜ್ಞಾನವನ್ನು ಪಡೆಯುವುದು ಸುಲಭವಲ್ಲ. ಬರಿಯ ದಾರಿಯನ್ನರಿತ ಮಾತ್ರದಿಂದ ಅದು ಬರುವುದೂ ಇಲ್ಲ. ಮೀನು ನೀರಿನಲ್ಲಿದ್ದರೆ ಅದಕ್ಕೆ ಸ್ನಾನವಾಯಿತೆ? ಬಕ ಧ್ಯಾನದಲ್ಲಿದ್ದೇನು? ಮರ್ಕಟ ಕಾನನದಲ್ಲಿದ್ದೇನು? ಕೋಗಿಲೆ ಮೌನದಲ್ಲಿದ್ದೇನು? ಇವು ಏನನ್ನೂ ಸಾಧಿಸಲಾರವು. ಹೀಗೆಯೇ ಬರಿಯ ತಪದಿಂದ ಫಲವಿಲ್ಲ. ಹುತ್ತ ಬಡಿದರೆ ಹಾವು ಸಾವುದೇ? ಮೈಯನ್ನು ಒಣಗಿಸಿದರೆ ಆಸೆ ಬತ್ತುವುದೇ? ಮುಖ್ಯ ಮನುಷ್ಯನಿಗೆ ಮನಸ್ಸಿನಲ್ಲಿ ಸಂಸಾರ ಅಸಾರವೆಂಬ ಜ್ಞಾನ ಹುಟ್ಟಬೇಕು. ಆಗ ಅವನು ಬೇರೆಯಾದ ನಿತ್ಯಸುಖವನ್ನು ಅಪೇಕ್ಷಿಸುವನು. ಸಂಸಾರ ಅಸಾರವೆಂಬುದು ಸ್ವಲ್ಪ ಯೋಚಿಸಿದರೆ ತಿಳಿಯುತ್ತದೆ. ಮನುಷ್ಯನು ಹುಟ್ಟುತ್ತ ತಾನೊಬ್ಬ ; ಸಾಯುವಾಗ ತಾನೊಬ್ಬ ; ಮಧ್ಯೆ ಬಂಧುಗಳ ಸಂಸರ್ಗ. ದಾರಿ ನಡೆಯುವ ಮನುಜರು ಅರವಟ್ಟಿಗೆಯಲ್ಲಿ ಸೇರಿ ದಾಹವನ್ನು ಕಳೆದುಕೊಂಡು ಆಮೇಲೆ ತಮ್ಮ ತಮ್ಮ ದಾರಿಯಲ್ಲಿ ಹೋಗುವಂತೆ ಸಂಸಾರ; ಮರದಮೇಲೆ ನೂರಾರು ಹಕ್ಕಿಗಳು ಸೇರಿ ಗಜಿಬಿಜಿ ಮಾಡಿ ಸ್ವಲ್ಪ ಹೊತ್ತುಹೋದನಂತರ ತಮ್ಮ ತಮ್ಮ ಕಡೆಗೆ ಹಾರುವಂತೆ ಸಂಸಾರ. ಮನುಷ್ಯನಿಗೆ ಸ್ಥಿರವಾದ ನಂಟು ಒಂದೂ ಇಲ್ಲ. ಒಂದೊಂದು ವಯಸ್ಸಿನಲ್ಲಿ ಒಬ್ಬೊಬ್ಬರು ರಕ್ಷಕರು. ದೇಹ ನೀರಮೇಲಣ ಗುಳ್ಳೆಯಂತೆ. ಅದನ್ನು ಉಳಿಸಿಕೊಳ್ಳುವೆನೆಂಬ ಪ್ರಯತ್ನ ನೀರ ಗುಳ್ಳೆಗೆ ಹಾಕುವ ಲೋಹದ ಕಟ್ಟು. ಮೃತ್ಯುವಿಗೆ ಸೇರಿದ ಮೈಯನ್ನು ಮನುಷ್ಯನು ಮುದ್ದಿಸುವುದು ಜಾರೆಯಾದ

ಹೆಂಡತಿಯ ಮಗುವನ್ನು ತನ್ನದೆಂದು ಭ್ರಮಿಸುವಂತೆ. ಹಿಂಸೆಗೆಂದು ಜನಿಸಿರುವ ನಾವು ಏನೋ ಸ್ವಲ್ಪ ಸುಖದ ಕಡೆ ನೋಡುತ್ತೇವೆ; ಹರಕೆಗೆ ತಂದ ಕುರಿ ತೋರಣದ ಚಿಗುರನ್ನು ತಿಂದಂತೆ. ಸರ್ಪದ ಬಾಯಲ್ಲಿರುವ ಕಪ್ಪೆ ಹತ್ತಿರ ಬಂದ ನೊಣವನ್ನು ಕಬಳಿಸುವುದಕ್ಕೆ ನೋಡುವಂತೆ, ಕೇಡಿಗೆ ಉದ್ದಿಷ್ಟರಾದ ನಾವು ಇತರರಿಗೆ ಕೇಡನ್ನು ಬಗೆಯುವೆವು. ಧನವಿರಲು ನಂಟರು, ಇಲ್ಲದಿದ್ದರೆ ಯಾರೂ ಇಲ್ಲ. ಇತರರಿಗೆ ಅನ್ಯಾಯ ಮಾಡಿ ತನ್ನವರನ್ನು ಸಾಕುವುದೂ ಬೇರೆಯವರನ್ನೆಲ್ಲಾ ಬಿಟ್ಟು ತನ್ನ ಹೆಂಡತಿ ಮಕ್ಕಳೆಂದು ಇವರನ್ನೇ ಸಾಕುವುದೂ ಪಾಪಕ್ಕೆ ದಾರಿ. ಎಲ್ಲರೂ ಕಾಲವಶರು. ಎಲ್ಲವೂ ಕರ್ಮಾಧೀನ. ಜಗದ ಕೆಲಸವೆಲ್ಲ ನಿಯಮವನ್ನನುಸರಿಸಿ ನಡೆಯುತ್ತಿದೆ. ಇದನ್ನು ತಿಳಿದು ನಾವು ಇದೆಲ್ಲ ಈಶ್ವರಾಜ್ಞೆಯೆನ್ನಬೇಕು. ಇದು ತಿಳಿಯದಿದ್ದರೆ ಮನುಷ್ಯನು ಉದ್ಧತನಾಗುವನು. ಕೋಪ ಕೆಟ್ಟದು; ಕಾಮ ಕೆಟ್ಟದು; ನೋಡಿದರೆ ಸ್ತ್ರೀಸಂಗ ಅಸಹ್ಯಕರ. ಒಂದೊಂದೇ ಇಂದ್ರಿಯವು ಕೇಡಿಗೆ ಕಾರಣ. ಇಂಥದರಲ್ಲಿ ನಾವು ಅನೇಕ ಇಂದ್ರಿಯಗಳಿಗೆ ಮನಗೊಟ್ಟರೆ ಗತಿಯೇನು? ಆದ್ದರಿಂದ ಮನುಷ್ಯನು ಮುಕ್ತಿಯೆಂಬ ನಿತ್ಯ ಸುಖದ ದಾರಿಯನ್ನು ನೋಡಬೇಕು. ಅದಿಲ್ಲದಿದ್ದರೆ ಇಲ್ಲಿಯ ಕ್ಷಣಿಕ ಸುಖ ಸ್ವರ್ಗದ ಕಲ್ಪದ ಸುಖ ಇದನ್ನು ಕಷ್ಟದೊಂದಿಗೆ ಬೆರಸಿ ಅನುಭವಿಸುತ್ತಾ ಸಂಸಾರ ಚಕ್ರದಲ್ಲಿ ಸುಮ್ಮನೆ ಸುತ್ತುವುದಾಗುತ್ತದೆ.

## ತಿಳಿವು; ತಿಳಿವಿನ ಆಭಾಸ

ಅನುಭವಾಮೃತ ಕಾವ್ಯದ ಒಂದೆರಡು ಅಧ್ಯಾಯಗಳ ಈ ಸಾರಾಂಶ ಶ್ರವಣದಿಂದ ಈ ಗ್ರಂಥದಲ್ಲಿ ಎಷ್ಟು ಗಹನವಾದ ವಿಷಯ ಎಷ್ಟು ಲಲಿತವಾಗಿ ಸರ್ವರಿಗೂ ಸಿಕ್ಕುವಂತೆ ಹೇಳಲ್ಪಟ್ಟಿತೆಂದು ತೋರುತ್ತದೆ. ಇದಿಷ್ಟು ವಿಷಯವೂ ಜನರಿಗೆಲ್ಲ ಸರಿಯಾಗಿಯೇ ತಿಳಿದಿತ್ತೆಂದಾಗಲಿ ಅಥವಾ ತಿಳಿದಿದ್ದರೂ ಎಲ್ಲರ ಜೀವನದಲ್ಲೂ ಅದು ಅನುಷ್ಠಾನಕ್ಕೆ ಬಂದಿತೆಂದಾಗಲಿ ಯಾರೂ ಹೇಳುವಂತಿಲ್ಲ. ಮುಖ್ಯವಾಗಿ ತಿಳಿವು ಎನ್ನುವುದನ್ನು ಜೀವನದಲ್ಲಿ ಸಾಧನೆಗೆ ತರುವುದು ವ್ಯಕ್ತಿಗಳಿಗೇ ಕಷ್ಟ

ಸಾಧ್ಯ. ಇನ್ನು ಜನಾಂಗದ ಮಾತೇನು? ಮನುಷ್ಯನಿಗೆ ಬಹು ಜನ್ಮಗಳ ಸಂಸ್ಕಾರದಿಂದ ಜ್ಞಾನ ಲಭಿಸುವುದೆಂದು ಗೀತೆಯಿಂದ ತಿಳಿಯುತ್ತದೆ. ಇನ್ನು ಒಂದು ಜನ್ಮದಲ್ಲೇ ಒಳ್ಳೆಯದು ಸಿದ್ಧಿಗೆ ಬರುವುದೆಂದು ಯಾರು ಹೇಳಿಯಾರು? ಅಲ್ಲದೆ ಚಿನ್ನಕ್ಕೆ ಕಾಗೆಯ ಬಂಗಾರದಂತೆ ಒಳ್ಳೆಯದಾದ ಎಲ್ಲ ವಸ್ತುವಿಗೂ ಒಂದು ಆಭಾಸರೂಪವುಂಟು. ವೇದಾಂತಿಯ ಸಹನೆಯನ್ನು ಅನುಕರಿಸಹೋಗಿ ಸಾಮಾನ್ಯನು ಹೇಡಿಯಾಗಬಹುದು. ಎಲ್ಲರೂ ಸಮನೆಂದು ಕಾಣಬೇಕೆಂದು ಕಲಿತ ಮನುಷ್ಯನು, ಯಾವ ಜೀವವೂ ಸಣ್ಣದಲ್ಲವೆಂದು ನಿಕೃಷ್ಟ ಜೀವಕ್ಕೂ ಒಂದು ಕನಿಕರವನ್ನು ತೋರುವ ಬದಲು ತನ್ನ ಗುರುವನ್ನೂ ರಾಜನನ್ನೂ ತನಗಿಂತ ಹಿರಿಯರಲ್ಲವೆಂದು ಭಾವಿಸುವುದರಲ್ಲಿ ಮುಗಿಯಬಹುದು. ನಮ್ಮ ಸೀಮೆಯಲ್ಲಿ ವೇದಾಂತದಿಂದ ಇಂಥ ವಿಕಾರ ಫಲಗಳು ಉಂಟಾಗಲಿಲ್ಲವೆಂದು ನಾವು ಹೇಳುವುದಿಲ್ಲ. ಆದರೆ ಅದು ವೇದಾಂತದ ದೋಷವೂ ಅಲ್ಲ; ಆದನ್ನು ಸಾಮಾನ್ಯರಿಗೆ ಸುಲಭವಾಗಿ ಮಾಡಿದವರ ದೋಷವೂ ಅಲ್ಲ. ವೇದಾಂತದ ಸಾರವನ್ನು ಜನರ ಮುಂದಿಟ್ಟ ಜನರೇ ಅಧಿಕಾರವನ್ನು ಸಂಪಾದಿಸು ಎಂದೂ ಗುರುವಿನ ಮೂಲಕ ಜ್ಞಾನವನ್ನು ಸಂಪಾದಿಸು ಎಂದೂ ಹೇಳಿದರು. ಗುರುವಿಂದ ಕಲಿ ಎನ್ನುವುದರಲ್ಲಿ ಉದ್ದೇಶ ಅನುಷ್ಠಾನದ ದಾರಿ ಸರಿಯಾಗಿ ತಿಳಿಯಲಿ ಎನ್ನುವುದೇ. ಇಲ್ಲದಿದ್ದರೆ ವೇದಾಂತದ ಆಭಾಸಾಭ್ಯಾಸದಿಂದ ಬರುವ ದುಷ್ಪರಿಣಾಮವನ್ನು ಭಾವಿಸಬಹುದು. ನಿಜವಾದ ವೈರಾಗ್ಯಕ್ಕೆ ಬದುಕನ್ನು ಬಿಡುವುದು ಆವಶ್ಯಕವಲ್ಲ. ಆಸೆಯನ್ನು ಬಿಟ್ಟವನು ಏನನ್ನಾದರೂ ಕಟ್ಟಿಕೊಳ್ಳಬಹುದು; ಅವನು ಮುಕ್ತನು. ಆಸೆಯನ್ನಿಟ್ಟುಕೊಂಡವನು ಏನನ್ನು ಬಿಟ್ಟರೂ ಮುಕ್ತನಲ್ಲ. ವೈರಾಗ್ಯ ಬೋಧೆಯ ಉದ್ದೇಶವು, ಕ್ಷಣಿಕವಾದ ಅಲ್ಪವಾದ ಸುಖವನ್ನು ಅಪೇಕ್ಷಿಸಬೇಡ, ನಿತ್ಯಸುಖವನ್ನು ಅಪೇಕ್ಷಿಸು, ಅದಕ್ಕಾಗಿ ವ್ಯವಸಾಯಮಾಡು ಎಂದಿತ್ತು. ಆದರೆ ಜನರಲ್ಲಿ ಈ ಎರಡನೇ ಮೆಟ್ಟಲು ಅಷ್ಟು ವಾಡಿಕೆಗೆ ಬರಲಿಲ್ಲ. ಬದುಕಿನಲ್ಲೇನಿದೆ ಎಂದು ಎಂಥವನೂ ಹೇಳಬಹುದು; ಅದು ಮೋಕ್ಷಕ್ಕೆ ಸಾಧನವಾಗುತ್ತದೆ ಎಂದು ಹೇಳುವುದು ತಿಳಿದವರಿಗೆ ಮಾತ್ರ ಸಾಧ್ಯ.

ಸ್ಮಾರ್ತಮತದ ವೈರಾಗ್ಯ ಬೋಧೆ ಆಭಾಸದಿಂದ ಜನದಲ್ಲಿ ತಾಮಸ ವೈರಾಗ್ಯವಾದಂತೆ ಅದರ ಕರ್ಮ ವಿಧಿ ಜನರಲ್ಲಿ ಒಂದು ತಾಮಸ ರೀತಿಯಲ್ಲಿ ಪ್ರಚುರಕ್ಕೆ ಬಂದಿತು. ಕರ್ಮವೆನ್ನುವುದು ಜನರಲ್ಲಿ ಸ್ಥಿರವಾದ ಎಲ್ಲ ಮತಗಳಲ್ಲಿಯೂ ಒಂದು ಕಟ್ಟುಪಾಡಿಗೆ ಬರಲೇ ಬರುತ್ತದೆ. ಸನಾತನ ಧರ್ಮದಲ್ಲಿ ಆರಂಭದಲ್ಲಿ ಸಾಮಾನ್ಯವಾಗಿದ್ದ ಯಜ್ಞಗಳು ಬರಬರುತ್ತ ಬಹಳ ಹೆಚ್ಚಿಕೊಂಡು ಬೌದ್ಧ ಧರ್ಮದಲ್ಲಿ ಯಜ್ಞಗಳು ತಿರಸ್ಕಾರಕ್ಕೆ ಗುರಿಯಾದುವು. ಬೌದ್ಧಮತದಿಂದ ವಿನಿವೃತ್ತವಾಗುವುದರಲ್ಲಿ ಸ್ಮಾರ್ತಮತವು ಪ್ರಾಯಶಃ ಕರ್ಮಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡಬೇಕಾಗಿ ಬಂದಿತು. ನಾನು ಈ ಮೊದಲು ಉದಾಹರಿಸಿರುವ ಜವರೇಗೌಡನು ಆ ಮಾತು ಈ ಮಾತು ಆಡುತ್ತಾ "ನಾವೇನು ಬ್ರಾಹ್ಮಣರೇ ಸ್ವಾಮಿ, ಇತ್ತಲಾಗಿ ಪಾಪಮಾಡಿ, ಇತ್ತಲಾಗಿ ಸಂಧ್ಯಾವಂದನೆ ಮಾಡಿ ಅದನ್ನು ಕಳೆದುಕೊಳ್ಳುವುದಕ್ಕೆ" ಎಂದನು. ಇದೀಗ ಕರ್ಮಕಾಂಡದ ವಿಪರೀತಾವಸ್ಥೆ. ತಪ್ಪುಮಾಡಿದವನಿಗೆ ಬೇಡಿದಲ್ಲಿ ಭಗವಂತನಲ್ಲಿ ಕ್ಷಮೆಯುಂಟು. ಆದರೆ ಬೇಡುವ ಎಂದೇ ಮನಸ್ಸು ಮಾಡಿಕೊಂಡು ತಪ್ಪುಮಾಡಿದರೆ? ಮನುಷ್ಯನು ಪತಿತನಾಗುವನು. ಆದರೆ ಜನರಲ್ಲಿ ಈ ಭಾವನೆ ಹುಟ್ಟಿರುವುದು ನಿಜ. ಹೀಗೆಂದಮಾತ್ರಕ್ಕೆ ಇಂಥ ಕುತರ್ಕ ನಮ್ಮ ಸೀಮೆಗೆ ವಿಲಕ್ಷಣವಾದದ್ದೆಂದು ತಿಳಿಯಬಾರದು. ರಷ್ಯಾ ರಾಜ್ಯದಲ್ಲಿ ರ್‍ಯಾಸ್‌ಪುಟಿನ್ ಎಂಬಾತನು ಮುಕ್ತಿಗೆ ಪಶ್ಚಾತ್ತಾಪ ಆವಶ್ಯಕವೆಂಬ ಕ್ರೀಸ್ತನ ಉಪದೇಶವನ್ನು ಇದೇ ರೀತಿಯಲ್ಲಿ ವಿಪರೀತ ರೂಪಕ್ಕೆ ಇಳಿಸಿದನಂತೆ. ಪಶ್ಚಾತ್ತಾಪಪಡಬೇಕಾದರೆ ತಪ್ಪುಮಾಡಿರಬೇಕಲ್ಲವೆ? ಆದ್ದರಿಂದ ರ್‍ಯಾಸ್‌ಪುಟಿನ್ "ತಪ್ಪುಮಾಡದೆ ಇದ್ದರೆ ಪಶ್ಚಾತ್ತಾಪ ಸಾಧ್ಯವಿಲ್ಲ; ಪಶ್ಚಾತ್ತಾಪವಿಲ್ಲದೆ ಮುಕ್ತಿಯಿಲ್ಲ; ಆದ್ದರಿಂದ ತಪ್ಪು ಮಾಡದೇ ಇದ್ದವನಿಗೆ ಮುಕ್ತಿಯಿಲ್ಲ. ಆದ್ದರಿಂದ ಜನರೆಲ್ಲ ತಪ್ಪುಮಾಡಿ ಬದುಕಿ" ಎಂದನಂತೆ. ರ್‍ಯಾಸ್‌ಪುಟಿನ್ ಹೀಗೆ ಹೇಳದೆ ಇದ್ದರೂ ಅನೇಕ ಜನರು ಹೀಗೆ ತಿಳಿದುಕೊಂಡದ್ದೇನೋ ಉಂಟು. ಇಂಥಾ ಆಭಾಸ ಎಲ್ಲಾ ತತ್ತ್ವಪ್ರಚಾರದ ಉದ್ಯಮಗಳಿಗೂ ಸಹಜವಾದ ಒಂದು ಪರಿಣಾಮ.

ಕರ್ಮವು ಜೀವನದಲ್ಲಿ ಈ ಸ್ಥಿತಿಗೆ ಬಂದಾಗ್ಗೆ ಅದರ ಸುಧಾರಣೆ ಒಡನೆಯೇ ಬರುತ್ತದೆ. ಕರ್ಮದಲ್ಲಿ ಬಾಹ್ಯ ವ್ಯಾಪಾರ ಮುಖ್ಯವಲ್ಲ; ಅದನ್ನು ಯಾವ ಭಾವನೆಯಿಂದ ಮಾಡುವೆವೆನ್ನುವುದು ಮುಖ್ಯ. ಎಂದರೆ ಶೀಲ ವಿನಯ ಭಕ್ತಿಗಳು ಮುಖ್ಯ. ಶೀಲವೇ ವಿನಯವೇ ಭಕ್ತಿಯೇ ಮುಖ್ಯವೆಂಬ ಭಾವನೆ ಯಾವ ಒಂದು ಮತದ ಆಸ್ತಿಯಲ್ಲ. ಅದು ಎಲ್ಲ ಮತದಲ್ಲಿಯೂ ಅಡಗಿದೆ. ಆದರೆ ಕಾಲದಿಂದ ಕಾಲಕ್ಕೆ ಅದು ಮರೆತು ಹೋಗಿ ಮತ್ತೆ ಉದ್ಬೋಧನೆ ಅವಶ್ಯವಾಗುತ್ತದೆ. ಸಂಧ್ಯಾ ವಂದನೆಯೆಂದರೆ ಕುಳಿತು ಬೆರಳೆಣಿಸುವುದೂ ತುಟಿಯನ್ನು ಪಿಟಪಿಟ ಅಲುಗಿಸುವುದೂ ಹೊರಕ್ಕೆ ಕಾಣುತ್ತವೆ. ಅನೇಕರು ಸಂಧ್ಯಾವಂದನೆ ಮಾಡುವಾಗ ಮಾಡುವ ಕರ್ಮ ಅಷ್ಟೇ; ಅದರ ಅರ್ಥ ಅವರಿಗೆ ತಿಳಿದಿರುವುದಿಲ್ಲ. ತಿಳಿದಿದ್ದರೂ ಅವರು ಅದನ್ನು ಆಗ ನೆನೆಯುವುದಿಲ್ಲ. ಕರ್ಮ ಈ ರೀತಿಯಲ್ಲಿ ಶುಷ್ಕವಾದಾಗಲೇ ದೇಶದಲ್ಲೆಲ್ಲ ಭಕ್ತಿ ಪಂಥಗಳ ಗುಂಪುಗಳು ಎದ್ದು ನಿಂತವು.

## ವೀರಶೈವ ಮತ

ಇಂಥ ಮತಗಳಲ್ಲಿ ವೀರಶೈವ ಮತ ಒಂದು ಮುಖ್ಯವಾದ ಮತ. ದ್ರಾವಿಡ ದೇಶದಲ್ಲಿ ಶೈವ ಸಂಪ್ರದಾಯ ಅನೇಕ ಶತಮಾನಗಳಿಂದ ಇದ್ದಿದೆ. ಕರ್ಣಾಟಕದ ಈ ಸಂಪ್ರದಾಯ ಆ ಸಂಪ್ರದಾಯದ ಜೊತೆಯ ಸಂಪ್ರದಾಯವೋ ಅಥವಾ ಅಲ್ಲಿಂದ ಇಲ್ಲಿಗೆ ಬಂದದ್ದೋ ಎಂಬುದನ್ನು ಸಂಪ್ರದಾಯಗಳ ಚರಿತ್ರಕಾರರು ಹೇಳಬೇಕು. ಅಂತು ವೀರಶೈವ ಮತಕ್ಕೆ ಕರ್ಣಾಟಕದ ಮಹನೀಯನೊಬ್ಬನು ಪ್ರತಿಷ್ಠಾಪಕನಾದನು. ಈ ಮಹನೀಯನ ಚರಿತ್ರೆ ತಿಳಿದಿರುವುದು ಸ್ವಲ್ಪ ಮಾತ್ರ. ಆ ಸ್ವಲ್ಪ ಎಲ್ಲರಿಗೂ ತಿಳಿದೇ ಇದೆ. ಈತನು ಬ್ರಾಹ್ಮಣ ಕುಲದಲ್ಲಿ ಜನಿಸಿ ಕುಲವೆಂದೂ ಕರ್ಮವೆಂದೂ ಹೆಮ್ಮೆಪಡುತ್ತಿದ್ದ ತನ್ನ ಸುತ್ತಣ ಸಮುದಾಯವನ್ನು ನೋಡಿ ಬೇಸರದಿಂದ ಬ್ರಾಹ್ಮಣ ಸಮುದಾಯವನ್ನು ಬಿಟ್ಟು ವೀರಶೈವಾಚಾರವನ್ನು ಅನುಸರಿಸಿದನೆನ್ನುವುದು ಅದರ ಮುಖ್ಯಾಂಶ. ಇವನು ಹೀಗೆ ಮಾಡುವ ಮೊದಲೇ ದೇಶದಲ್ಲಿ ಕರ್ಮವೆನ್ನುವುದರ ವಿಷಯದಲ್ಲೂ ಕುಲವೆನ್ನುವುದರ ವಿಚಾರದಲ್ಲೂ ಬಹಳ ಬೇಸರ ಹುಟ್ಟಿರ

ಬೇಕು. ಬಸವಣ್ಣನವರು ಪ್ರಾಪ್ತವಯಸ್ಕರಾಗಿ ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಪದವಿಗೆ ಬಂದರು; ವೀರಶೈವ ಮತದ ತತ್ವವನ್ನು ಜನಗಳಲ್ಲಿ ಹರಡಿದರು; ಅದಕ್ಕೆ ಒಂದು ಹಿರಿಯ ಸ್ಥಾನವನ್ನು ಸಂಪಾದಿಸಿದರು; ಅದರ ತತ್ವಗಳನ್ನು ಪ್ರಚಾರಗೊಳಿಸುವುದಕ್ಕೆ ಜಂಗಮರ ಸಂಸ್ಥೆಯನ್ನು ಉಪಯೋಗಿಸಿದರು. ಕಡೆಗೆ ವೀರಶೈವ ಮತವು ರಾಜ್ಯಗಳನ್ನು ಎಬ್ಬಿಸಿ ರಾಜ್ಯಗಳನ್ನು ಉರುಳಿಸುವ ಪ್ರಬಲ ಶಕ್ತಿಯಿಂದ ತುಂಬಿತು. ಆಗಿನ ಕಾಲದಲ್ಲಿ ಇಂಥ ಪಂಥಗಳು ಯಾವ ರೀತಿಯಲ್ಲಿ ಹಬ್ಬುತ್ತಿದ್ದುವೆಂಬುದು ನಮಗೆ ಈಗ ಊಹೆಗೆ ಕೂಡ ಸಿಕ್ಕದಂತೆ ಆಗಿದೆ. ಉತ್ತರ ಕರ್ಣಾಟಕದಲ್ಲೆಲ್ಲ ವೀರಶೈವ ಮತವು ಒಂದೇ ಸಮನೆ ಹರಡಿತು. ಎಲ್ಲೆಲ್ಲೂ ಮಠಗಳು; ಎಲ್ಲೆಲ್ಲೂ ಜಂಗಮರು; ವೀರಶೈವ ಮತದ ತತ್ತ್ವಗಳನ್ನು ಇವರು ಪದ್ಯಗಳಾಗಿ, ವಚನಗಳಾಗಿ, ಗೀತೆಗಳಾಗಿ ಜನರಲ್ಲೆಲ್ಲಾ ಪ್ರಚಾರಕ್ಕೆ ತಂದರು. ಹೀಗೆ ವೀರಶೈವ ಮತವು ಬ್ರಾಹ್ಮಣ ಮತಕ್ಕೂ ಕ್ರೀಸ್ತಮತಕ್ಕೂ ಎಲ್ಲ ಒಳ್ಳೆಯದೆಂಬ ಮತಕ್ಕೂ ಆಧಾರವಾದ ಮೂಲ ತತ್ತ್ವಗಳನ್ನೇ ಕರ್ಣಾಟಕದಲ್ಲಿ ಸರ್ವಸುಲಭವಾಗಿ ಮಾಡಿತು. ಕರ್ಣಾಟಕದಲ್ಲಿ ಈಗ ಈ ಮತದ ಅನುಯಾಯಿಗಳು ಸುಮಾರು ನಲವತ್ತು ಲಕ್ಷದಷ್ಟು ಇದಾರೆ. ಇವರ ಭಾವನೆಯೆಲ್ಲ ವೀರಶೈವ ಮತದ್ದು, ವೀರಶೈವ ವಚನಗಳದು. ಈ ಕಾರಣದಿಂದ ಈ ವಚನಗಳ ಸ್ವರೂಪವನ್ನು ಸ್ವಲ್ಪಮಟ್ಟಿಗೆ ವರ್ಣಿಸುವುದು ಆವಶ್ಯಕ. ವಚನಸಾಹಿತ್ಯದಲ್ಲಿ ವೀರಶೈವ ಮತದ ಉತ್ತಮವಾದ ಲಕ್ಷಣಗಳು ತೋರಿಬರುವುದಲ್ಲದೆ ಅದು ಹೇಗೆ ಜನಸಾಮಾನ್ಯದ ಸಂಸ್ಕೃತಿಯ ಸಾಧಕ ಕಾರಣವೂ ಫಲವೂ ಆಯಿತೆನ್ನುವುದು ವ್ಯಕ್ತವಾಗುವುದು.

## ಬಸವಣ್ಣನವರ ವಚನಗಳು

ನಮ್ಮ ತತ್ತ್ವಸೋಪಾನದಲ್ಲೆಲ್ಲ ಮೊದಲನೆಯ ಮೆಟ್ಟಲು ಸಂಸಾರವು ಸುಖವಲ್ಲವೆಂಬ ಮಾತು. ಮನುಷ್ಯನು ಅಪೇಕ್ಷಿಸುವುದು ಸುಖ. ಕಾಲ ದೇಶ ಅವಸ್ಥೆಗಳು ಭಿನ್ನವಾದಂತೆ ಭಿನ್ನವಾಗುವ ಸುಖ ಸುಖವಲ್ಲ. ಮನುಷ್ಯನು ಬೇರೆಯಾದಂತೆ ಬೇರೆಯಾಗುವ ಸುಖ ಸುಖವಲ್ಲ.

ನಿಜವಾದ ಸುಖ ಕಾಲ ದೇಶ ವರ್ತಮಾನಗಳನ್ನು ಮೀರಿದ್ದು. ಅಪೇಕ್ಷೆ ಪಟ್ಟು ಅದನ್ನು ತೃಪ್ತಿಗೊಳಿಸುವುದರಿಂದ ಬರುವ ಸುಖ ಸುಖವಲ್ಲ. ಅಪೇಕ್ಷೆಯನ್ನು ಕಾಣದ ಮರ ಕಲ್ಲು ಮೊದಲಾದ ಜಡವಸ್ತುಗಳ ಇರವು ಸುಖವಲ್ಲ. ಅಪೇಕ್ಷೆಯನ್ನರಿತು ಅದರ ಕೋಟಲೆಗೆ ಒಳಗಾಗ ದಿರುವ ಸುಖ ಸುಖ. ಈ ಸುಖ ಹಿರಿಯದೆಂದು ತಿಳಿಯಬೇಕಾದರೆ ಇದಲ್ಲದ ಇನ್ನೆಲ್ಲ ತರದ ಸುಖವೆಂಬ ಅವಸ್ಥೆಯೂ ಇದಕ್ಕೆ ಕೀಳಾ ದದ್ದೆಂದು ತಿಳಿಯಬೇಕು. ಇದನ್ನು ತಿಳಿಸುವುದಕ್ಕೆ ನಮ್ಮವರು ಸಂಸಾ ರವು ಅಸಾರವೆಂದು ಒತ್ತಿ ಒತ್ತಿ ಹೇಳುತ್ತಿದ್ದರು. ಬಸವಣ್ಣನವರ ವಚನಗಳಲ್ಲಿ ಈ ವಿಚಾರ ಬಹಳ ಮುಖ್ಯವಾಗಿ ಹೇಳಲ್ಪಟ್ಟಿದೆ. "ಕಪ್ಪೆ ಸರ್ಪನ ನೆರಳಿನಲ್ಲಿ ಇರ್ಪಂತೆ ಸಂಸಾರ", "ಅಕಟಕಟಾ ಸಂಸಾರ ವೃಥಾ ಹೋಯಿತು! ಕರ್ತೃ ಕೂಡಲಸಂಗಮದೇವ ಇವನು ತಪ್ಪಿಸಿ ಎನ್ನನು ರಕ್ಷಿಸಯ್ಯಾ ಪ್ರಭುವೇ." "ಶೂಲದ ಮೇಲಣ ಭೋಗ ಸಂಸಾರವೇನಾದೊಡೇನೋ; ನಾನಾವರ್ಣದ ಸಂಸಾರ ಹಾವ ಹಾವಾ ಡಿಗನ ಸ್ನೇಹದಂತೆ." "ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ" "ಸಂಸಾರವೆಂಬ ಸರ್ಪ ಮುಟ್ಟಲು ಪಂಚೇಂದ್ರಿಯದ ವಿಷಯವೆಂಬ ವಿಷದಿಂದ ಮನುಷ್ಯನು ಮುಂದುಗೆಟ್ಟ." "ಎಂದ್ಯೋ ಸಂಸಾರ ದಂದುಗ ಹಿಂಗುವುದು. ಎಂದೋ ಮನದಲ್ಲಿ ಪರಿಣಾಮವಹುದೆನಗೆ. ಎಂದೋ ಎಂದೋ ಕೂಡಲಸಂಗಮದೇವಾ. ಇನ್ನೆಂದೋ ಪರಮ ಸಂತೋಷದಲ್ಲಿಹುದೆನಗೆಂದೋ." ಆದರೆ ಭಗವಂತನ ಕೃಪೆ ಬರುವ ತನಕ ಇದರಿಂದ ಬಿಡುಗಡೆಯ ದಾರಿಯಿಲ್ಲ. "ಲೇಸಕಂಡು ಮನದಲ್ಲಿ ಬಯಸಿ ಆಸೆಮಾಡಿದಡಿಲ್ಲ ಕಂಡಯ್ಯಾ. ತಾಳಮರಕ್ಕೆ ಕಯ್ಯನೀಡಿ ಮೇಲೆ ನೋಡಿ ಗೋಣು ನೊಂದುದಯ್ಯಾ. ನೀನೀವ ಕಾಲಕ್ಕಲ್ಲದೆ ಇಲ್ಲ ಕಂಡಯ್ಯಾ." ಮನಸ್ಸು ಸಿಕ್ಕಿದಂತೆ ಆಡುವುದು "ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದು ಎನ್ನ ಮನ. ನಿಂದಲ್ಲಿ ನಿಲ್ಲ ಲೀಯದೆನ್ನ ಮನ. ಹೊಂದಿದಲ್ಲಿ ಹೊಂದಲೀಯದು . . . ." "ಮರನ ನೇರಿದ ಮರ್ಕಟದಂತೆ ಹಲವು ಕೊಂಬಿಂಗೆ ಹಾರುತಲಿದ್ದೇನೆ. ಬೆಂದ ಮನವನು ನಾನೆಂತು ನಂಬುವೆನಯ್ಯ." ಸಾಲದ್ದಕ್ಕೆ ಆಸೆಗಳಿಗೆ ಮೊದಲು

ಕೊನೆಯಿಲ್ಲ. ಅದನ್ನು ತಡೆಯುವ ಯೋಗ್ಯತೆ ನಮಗಿಲ್ಲ. "ವಿಷಯ ವೆಂಬ ಹಸುರನೆನ್ನ ಮುಂದೆ ತಂದು ಪಸರಿಸದಿರಯ್ಯ ; ಪಶುವೇನ ಬಲ್ಲದು ಹಸುರೆಂದೆಳಸುವುದಲ್ಲದೆ? ವಿಷಯ ರಹಿತನ ಮಾಡಿ ಭಕ್ತಿರಸವ ದಣಿಯ ಮೇಯಿಸಿ ಸುಬುದ್ಧಿ ಎಂಬ ಉದಕವನೆರೆದು ನೋಡಿ ಸಲಹು" ಇದಕ್ಕೇನು ಗತಿ? ಆಸೆಯೇ ಇಲ್ಲದಂತೆ ಆಗುವುದೇ ಗತಿ. "ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯಾ ತಂದೆ. ಸುತ್ತಿಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ. ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯಾ ತಂದೆ. ನಿಮ್ಮ ಶರಣರ ಪಾದವಲ್ಲದೆ ಇತರ ವಿಷಯಕ್ಕೆಳಸದಂತೆ ಇರಿಸು." ಹಾಗಾದರೆ ಈ ಪಾಪ, ಈ ಸಂಸಾರ ಬಂಧನ ಹೋಗುವುದು ಹೇಗೆ? "ಕರಿಯಂಜುವುದು ಅಂಕುಶಕಯ್ಯ, ಗಿರಿಯಂಜುವುದು ಕುಲಿಶಕಯ್ಯ, ತಮಂಧವಂಜುವುದು ಜ್ಯೋತಿಗಯ್ಯಾ, ಕಾನನವಂಜುವುದು ಬೇಗೆಗಯ್ಯಾ, ಪಂಚಮಹಾಪಾತಕಗಳಂಜುವುದು ಕೂಡಲ ಸಂಗಮದೇವರ ನಾಮಕ್ಕಯ್ಯಾ." "ಓಂ ನಮಃ ಶಿವಾಯ ವೆಂಬುದೇ ಮಂತ್ರ. ಓಂ ನಮಃ ಶಿವಾಯವೆಂಬುದೇ ತಂತ್ರ. ನಮ್ಮ ಕೂಡಲ ಸಂಗಮದೇವರ ನೆನೆವುದೇ ಮಂತ್ರ." "ಎನ್ನ ಭವಬಂಧನ ದುರಿತಂಗಳ ಗೆಲುವೊಡೆ ಓಂ ನಮಃ ಶಿವಾಯ ಶಿವ ಶರಣೆಂದರೆ ಸಾಲದೆ." "ಪಾತಕ ಶತಕೋಟಿಗಳನೊರಸಲು ಸಾಲದೆ ಒಂದೆ ಶಿವನಾಮ ಸಾಲದೆ ಒಂದೆ ಹರನ ನಾಮ." ಹಾಗಾದರೆ ಸುಮ್ಮನೆ ಶಿವ ಶಿವ ಎಂದರೆ ಸಾಕೊ? "ಒಳಗೆ ಕುಟಿಲ ಹೊರಗೆ ವಿನಯವಾಗಿ ಭಕ್ತರೆನಿಸಿಕೊಂಬುವರ ಒಲ್ಲನೊಲ್ಲನಯ್ಯಾ ಲಿಂಗವು. ಅವರು ಶಿವಪಥಕ್ಕೆ ಸಲ್ಲರು ಸಲ್ಲರಯ್ಯ. ಒಳಹೊರಗೊಂದಾಗದವರಿಗೆ ಅಳಿಯಾಸೆದೋರಿ ಬೀಸಾಡುವನವರ ಜಗದೀಶ." ಮನೆಯೊಳಗೆ ಮನೆಯಾತನಿರಲು ಕಸ ಇರುವುದಿಲ್ಲ; ಅಂಗಳದಲ್ಲಿ ಹುಲ್ಲು ಬೆಳೆದಿರುವುದಿಲ್ಲ. ಅದರಂತೆ ಹೃದಯದಲ್ಲಿ ಶಿವನಿದ್ದರೆ ಮನಸ್ಸು ನಿರ್ಮಲವಾಗಿರುವುದು, ಬದುಕು ಚೆನ್ನಾಗಿರುವುದು. ಅವನು ಒಳಗೆ ಇಲ್ಲದಿದ್ದರೆ ಬಯಲ ಡಂಭವಾಯಿತೇ ಹೊರತು ಅದರಿಂದ ಯಾರಿಗೂ ಪ್ರಯೋಜನವಿಲ್ಲ; ಬದುಕು ಕೊಳಕಾಗಿಯೇ ಇರುತ್ತದೆ. "ಕುಂಬಳದ ಕಾಯಿಗೆ ಕಬ್ಬುನದ ಕಟ್ಟುಕೊಟ್ಟರೆ ಕೊಳೆವುದಲ್ಲದೆ

ಬಲುಹಾಗಬಲ್ಲದೆ. ಅಳಿಮನದಂಗೆ ಶಿವದೀಕ್ಷೆ ಕೊಟ್ಟರೆ ಭಕ್ತಿ ಎಂತಹುದೋ ? ಮುನ್ನಿನಂತೆ." "ಸಗಣಿಯ ಬೆನಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ ರಂಜನೆಯಹುದಲ್ಲದೆ ಅದರ ಗಂಜಳ ಬಿಡದಣ್ಣ. ಮಣ್ಣ ಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದರೆ ನಿಚ್ಚ ನಿಚ್ಚ ಕೆಸರಹುದಲ್ಲದೆ ಅದರಚ್ಚುಗ ಬಿಡದಣ್ಣ. ಲೋಕದ ಮಾನವರಿಗೆ ಶಿವದೀಕ್ಷೆಯ ಕೊಟ್ಟರೆ ಕೆಟ್ಟವನೇಕೆ ಸದ್ಭಕ್ತನಹನು." "ಎನಿಸುಕಾಲ ಕಲ್ಲು ನೀರೊಳಗಿದ್ದರೇನು. ನೆನೆದು ಮೃದುವಾಗಬಲ್ಲುದೆ? ಎನಿಸುಕಾಲ ನಿಮ್ಮ ಪೂಜಿಸುವೆನಯ್ಯಾ ಮನದಲ್ಲಿ ದೃಢವಿಲ್ಲದನ್ನಕ್ಕರ ?" ಉದ್ಧಾರವಾಗುವೆನೆನ್ನುವವನು ಲೋಕದಲ್ಲಿ ಸರಿಯಾಗಿ ನಡೆದುಕೊಳ್ಳಬೇಕು. ಇಲ್ಲಿ ಏನಿದೆ ಎಂದು ಬದುಕನ್ನು ನಿರ್ಲಕ್ಷಿಸಬಾರದು. "ಮರ್ತ್ಯಲೋಕವೆನ್ನುವುದು ಕರ್ತಾರನ ಕಮ್ಮಟ. ಇಲ್ಲಿ ಸಲ್ಲುವರು ಅಲ್ಲಿ ಸಲ್ಲುವರು, ಇಲ್ಲಿ ಸಲ್ಲದವರು ಅಲ್ಲಿ ಸಲ್ಲರು." ಒಳ್ಳೆಯ ಜೀವನ ಆವಶ್ಯಕ. ಒಳ್ಳೆಯ ಬಾಳೇ ದೇವಲೋಕ; ಕೆಟ್ಟ ಬಾಳೇ ಮರ್ತ್ಯಲೋಕ. ಮನುಷ್ಯನು ದಯಾವಂತನಾಗಿರಬೇಕು; ದೇವರಲ್ಲಿ ನಿಜವಾದ ಭಕ್ತಿಯನ್ನು ಸಾಧಿಸಬೇಕು. ಹಲವು ದೇವರನ್ನು ನಂಬುವುದು ಸರಿಯಲ್ಲ. ದೇವರ ಭಕ್ತನೆಂದು ಹೆಸರಿಟ್ಟುಕೊಂಡು ಕೊಳಕು ಜೀವನದಲ್ಲಿರುವುದು ಸರಿಯಲ್ಲ. ದೇವರೆಂದ ಮೇಲೆ ದಿನ ವಾರಗಳ ಶುದ್ಧಿಯೆಂಬ ಅಜ್ಞಾನದಲ್ಲಿರುವುದು ಸರಿಯಲ್ಲ. ದೇವರ ಶರಣರೆಲ್ಲ ಒಂದೇ ಜಾತಿ. ಒಳ್ಳೆಯ ನಡತೆ ಒಳ್ಳೆಯ ಜಾತಿ; ಕೆಟ್ಟ ನಡತೆ ಕೆಟ್ಟ ಜಾತಿ. ಮನುಷ್ಯನ ಬದುಕು ಚೆನ್ನಾಗಬೇಕಾದರೆ ಅವನ ಮನಸ್ಸು ಒಳ್ಳೆಯದಕ್ಕೆ ಸೋಲಬೇಕು. ಮನಸ್ಸು ಎಂದಿನಂತೆ ಇದ್ದರೆ ಹೊಳೆಯಲ್ಲಿ ಮಿಂದು ಪ್ರಯೋಜನವಿಲ್ಲ. ಭಕ್ತಿ ಸುಲಭವಲ್ಲ; ಕರಗಸದಂತೆ ಹೋಗುತ್ತಾ ಕೊಯ್ಯುತ್ತದೆ ಬರುತ್ತಾ ಕೊಯ್ಯುತ್ತದೆ. ನಾನು ಭಕ್ತನೆಂದರೆ ದೇವರು ಪರೀಕ್ಷೆಮಾಡಿ ನೋಡುವನು. ಶರಣಾಗತಿ ಹಿರಿದು. ತನು ನಿನ್ನದು, ಮನ ನಿನ್ನದು, ಧನ ನಿನ್ನದು ಎಂದು ಎಲ್ಲವನ್ನೂ ದೇವರಲ್ಲಿ ಅರ್ಪಣೆಮಾಡಿದರೆ ಮನುಷ್ಯನು ನಿಜವಾದ ಸುಖವನ್ನು ಪಡೆಯುವನು.

## ಈ ಮತದ ಅನುಭಾವ

ಬಸವಣ್ಣನವರ ವಚನಗಳಿಂದಲೂ ಬದುಕಿನಿಂದಲೂ ಆತ್ಮೋದ್ಧರಣದ ಮೂಲ ಸೂತ್ರಗಳಾದ ಈ ತತ್ತ್ವಾರ್ಥಗಳು ಜನರಲ್ಲೆಲ್ಲ ವಾಡಿಕೆಗೆ ಬಂದುವು. ವೀರಶೈವ ಮತವು ಈ ವಿಷಯಗಳನ್ನು ಜನರಿಗೆಲ್ಲ ತಿಳಿಸುವುದಕ್ಕೆ ಜಂಗಮರನ್ನು ಏರ್ಪಡಿಸಿತು. ಬಸವಣ್ಣನವರ ಪ್ರಭಾವದಿಂದ ಅವರ ಮಾತುಗಳಲ್ಲಿ ಕಾಣಬರುವ ಆತ್ಮಜ್ಞಾನವೂ ನಿರ್ದಾಕ್ಷಿಣ್ಯವಾದ ಆತ್ಮಪರೀಕ್ಷೆಯೂ ಹತ್ತಾರು ಜನರಲ್ಲಿ ಕಂಡುಬಂದಿತು. ಈ ಮತದ ಮುಖ್ಯ ವಚನಕಾರರಲ್ಲಿ ಹಲವರು ಹೆಂಗಸರೂ ಇದಾರೆ. ಉಡುತಡಿಯ ಮಹಾದೇವಿಯಕ್ಕನ ವಚನಗಳು ಇನ್ನು ಯಾವ ಭಕ್ತ ಶಿರೋಮಣಿಯ ವಚನಗಳಿಗಿಂತಲೂ ಕಡಿಮೆಯಿಲ್ಲವೆಂಬಂತೆ ಇವೆ. ಈ ವಚನಕಾರರಲ್ಲಿ ಅನೇಕರು ಪಂಡಿತರಲ್ಲ. ಆದರೆ ಇವರ ಸಾಧನೆ ಬರಿಯ ಪಾಂಡಿತ್ಯದ ಅಂತಸ್ತನ್ನು ಮೀರಿದ್ದು. ಪಾಂಡಿತ್ಯಕ್ಕೆ ನಿಲುಕದ ಸಿದ್ಧಿಗೆ ಈ ವಚನಕಾರರು ಊರ ಸಾಮಾನ್ಯ ಜನರ ಮಾತುಗಳಲ್ಲೇ ರೂಪನ್ನು ಕೊಟ್ಟರು. ಇವರು ಸಾಮಾನ್ಯ ಜನರಿಂದ ಬಂದ ಸಿದ್ಧರು; ಅವರ ಬಾಳನ್ನು ಬಲ್ಲವರು; ಆದ್ದರಿಂದ ಸಾಮಾನ್ಯರ ಅನುಭವಗಳನ್ನೇ ತೆಗೆದುಕೊಂಡು ತತ್ತ್ವಗಳನ್ನು ಪ್ರತಿಪಾದಿಸಿದಾರೆ. ಇವರ ಉದಾಹರಣೆಗಳು ಹಳ್ಳಿಯವು, ಇವರ ಉಪಮೆಗಳು ಹಳ್ಳಿಯ ಬದುಕಿನಿಂದ ಬಂದವು. ವೀರಶೈವ ಮತವು ಹಳ್ಳಿಯ ಜನರಿಂದ ಹಳ್ಳಿಯ ಜನಕ್ಕಾಗಿ ಹಳ್ಳಿಯ ಮಾತಿನಲ್ಲಿ ಪ್ರಚಾರ ಮಾಡಲ್ಪಟ್ಟಿತು. ಈ ಕಾರಣದಿಂದ ಅತ್ಯಲ್ಪ ಕಾಲದಲ್ಲಿಯೇ ಇದು ಜನಾಂಗದ ಜೀವನದ ಅಂತರ್ಯವನ್ನೇ ಮಾರ್ಪಡಿಸಿತು.

ಶಿವಶರಣರೆಲ್ಲರೂ ಜನರಿಗೆ ಉಪದೇಶಮಾಡಿದರೆಂದು ಹೇಳಬಹುದು. ಅವರಲ್ಲಿ ವಚನಗಳನ್ನು ರಚಿಸಿದವರು ನೂರಾರು ಜನ. ಶ್ರೀಮಾನ್ ಹಳಕಟ್ಟಿ ಗುರುಶಾಂತಪ್ಪ ಫಕೀರಪ್ಪನವರು ಅಚ್ಚುಹಾಕಿಸಿರುವ ವಚನಶಾಸ್ತ್ರಸಾರದಲ್ಲಿ ಸುಮಾರು ಇನ್ನೂರು ಜನ ಶರಣರ ವಚನಗಳು ಕಾಣುತ್ತವೆ. ಅವುಗಳ ನೀತಿಬೋಧೆಯು ಎಷ್ಟು ವಿಸ್ತಾರವಾದದ್ದೆಂಬುದನ್ನು ಆ ಗ್ರಂಥದ ವಿಷಯ ಸೂಚಿಕೆಯಿಂದಲೇ ಕಾಣಬಹುದು.

ಲಿಂಗಾಂಗಿ ಸದಾಚಾರಿಯಾಗಿರಬೇಕು. ಮನುಷ್ಯನು ಸತ್ಯವನ್ನು ನುಡಿಯಬೇಕು, ಕಳವು ಮಾಡಬಾರದು, ಜೀವಹಿಂಸೆ ಮಾಡಬಾರದು; ಎಲ್ಲರೂ ಸಮನೆಂದು ಭಾವಿಸಬೇಕು, ಸಮಾಧಾನಿಯಾಗಿರಬೇಕು. ಮನುಷ್ಯನಿಗೆ ದುರಾಶೆ ಕೂಡದು, ಲೋಭ ಕೂಡದು, ಅಹಂಕಾರ ಕೂಡದು ; ವ್ಯಭಿಚಾರ ಕೂಡದು, ಭಕ್ತನೆಂಬ ಹೆಮ್ಮೆ ಕೂಡದು. ಮನುಷ್ಯನು ಸ್ತ್ರೀಯರನ್ನು ಮನ್ನಿಸಬೇಕು, ಶರಣರನ್ನು ಮನ್ನಿಸಬೇಕು ; ಶುದ್ಧನಾಗಿರಬೇಕು, ನಿಷ್ಠೆಯುಳ್ಳವನಾಗಿರಬೇಕು ; ವ್ರತನಿಯಮವನ್ನು ಬಿಡಬಾರದು, ಆದರೆ ತಾಮಸ ವ್ರತನಿಯಮಗಳನ್ನು ಹಿಡಿಯಬಾರದು. ಈ ರೀತಿಯಲ್ಲಿ ಸದ್ವರ್ತನೆಯ ಮುಖ್ಯ ಸೂತ್ರಗಳೆಲ್ಲ ಈ ವಿಷಯ ಸೂಚಿಯಲ್ಲಿ ಕಂಡುಬರುತ್ತವೆ. ಈ ಮತವು ಸಾಮಾನ್ಯರೆಂದು ಎನಿಸಬಹುದಾದ ಎಂಥೆಂಥವರಲ್ಲಿದ್ದ ದೊಡ್ಡತನವನ್ನು ಹೊರಗೆಡಹಿತೆನ್ನುವುದಕ್ಕೆ ಶರಣರಲ್ಲಿ ಕೆಲವರ ಹೆಸರನ್ನು ನೋಡಿದರೆ ಸಾಕು. ಮಡಿವಳ ಮಾಚಯ್ಯ, ಸೌದೆ ಮಾರುವ ಮಾರಯ್ಯ, ಮಾದಾರ ಚನ್ನಯ್ಯ, ಮಾದಾರ ಧೂಳಯ್ಯ, ತಳವಾರ ಕಾಮಿದೇವ, ಕಿರಾತ ಸಂಗಯ್ಯ, ಹೊಡೆಹುಲ್ಲ ಬಂಕಣ್ಣ, ಗಾಣದ ಕನ್ನಪ್ಪ, ತುರುಗಾಹಿ ರಾಮಣ್ಣ, ಮೇದರ ಕೇತಯ್ಯ, ಕೊಟ್ಟಣದ ಸೋಮವ್ವ, ಹಡಪದ ರೇಚಣ್ಣ, ಹಡಪದ ಅಪ್ಪಣ್ಣ, ಕಾಮಾಟದ ಭೀಮಣ್ಣ. (ಮನುಷ್ಯನು ಹಿರಿಯನಾಗುವುದು ಅವನು ಮಾಡುವ ಕೆಲಸದಿಂದಲ್ಲ; ಅವನ ಅಂತರ್ಯದ ಪರಿಶುದ್ಧಿಯಿಂದ.) ವೀರಶೈವ ಮತವು ಮಾಡಿದ ದೊಡ್ಡ ಕೆಲಸವೆಂದರೆ ಹೀಗೆ ಸಾಮಾನ್ಯರಲ್ಲಿ ಹಿರಿಯರನ್ನು ಕಾಣಿಸಿದ್ದು. ಇದರಂತೆಯೇ ಹೆಂಗಸರು ಹತ್ತಾರು ಜನ ವಚನಗಳನ್ನು ಹೇಳಿದ್ದಾರೆ. ಬಸವಣ್ಣನವರ ಪತ್ನಿ ಗಂಗಾಂಬಿಕೆ; ಮೋಳಿಗೆ ಮಾರಯ್ಯ ಕೊಂಡೇ ಮಂಚಣ್ಣ ರಾಯಸದ ಮಂಚಣ್ಣ ಉರಿಲಿಂಗ ಪೆದ್ದಿ, ಇವರ ಪತ್ನಿಯರು, ಉಡುತಡಿಯ ಮಹಾದೇವಿಯಕ್ಕ, ಇಬ್ಬರು ಕಾಳವ್ವೆಯರು, ಇಬ್ಬರು ರೆಮ್ಮವ್ವೆಯರು, ರೇಚವ್ವೆ, ಸತ್ಯಕ್ಕ, ಗೊಗ್ಗವ್ವ, ರೇಕಮ್ಮ; ಹೀಗೆಯೇ ಇನ್ನು ಹತ್ತು ಜನ. ಇಷ್ಟು ಜನ ಹೆಂಗಸರಲ್ಲಿ ವಚನಗಳನ್ನು ನುಡಿಯುವಷ್ಟು ಆತ್ಮಗೌರವ ಉಂಟಾಗಬೇಕಾದರೆ ಈ ಮತವು ಸ್ತ್ರೀಯರನ್ನು ಎಷ್ಟು ಮರ್ಯಾದೆಯಿಂದ ಕಂಡಿತೆಂಬುದೂ ಇದರಿಂದ ಎಷ್ಟು

ಶುಭ ಉಂಟಾಯಿತೆಂಬುದೂ ವ್ಯಕ್ತವಾಗಬೇಕು. ತನ್ನ ಅಂತರಂಗವನ್ನು ತಾನು ನೋಡಿಕೊಳ್ಳುವುದು ತಿದ್ದಿಕೊಳ್ಳುವುದು ಈ ಮತದಿಂದ ಜನರಲ್ಲಿ ವಾಡಿಕೆಯಾಯಿತು. ಇದು ಬೆಳವಣಿಗೆಯ ಮೂಲ ಮಂತ್ರ. ದೇವರು ಒಬ್ಬನೇ ಎಂಬುದೂ, ಕ್ಷುದ್ರ ದೇವತೆಗಳನ್ನು ಪೂಜಿಸಬಾರದೆಂಬುದೂ, ಭಾವ ಶುದ್ಧಿಯೇ ಪೂಜೆ ಎಂಬುದೂ, ಜಾತಿ ಜಾತಿ ಎನ್ನಬಾರದೆಂಬುದೂ, ಪ್ರಾಣಿಹಿಂಸೆ ಮಾಡಕೂಡದೆನ್ನುವುದೂ, ತಿಥಿ ವಾರ ನಕ್ಷತ್ರವೆಂದು ಕ್ಲೇಶ ಪಡಬಾರದೆಂಬುದೂ ಜನರಲ್ಲಿ ವಾಡಿಕೆಯಾಯಿತು. ಇದೆಲ್ಲ ಜನರಲ್ಲಿ ಸಿದ್ಧಿಯಾಯಿತೆಂದಲ್ಲ; ಜ್ಞಾನವು ಅಷ್ಟು ಸುಲಭವಾಗಿ ಸಿದ್ಧಿಯಾಗುವುದಿಲ್ಲ. ಆದರೆ ನಾವು ತಿಳಿದುಕೊಂಡಿರುವುದಕ್ಕಿಂತಲೂ ಸರಿಯಾದದ್ದು ಬೇರೆ ಒಂದು ದಾರಿ ಇದೆ ಎಂದು ಜನಕ್ಕೆ ತೋರುವುದೇ ಒಂದು ವಿಶೇಷ. ಧ್ಯೇಯವೊಂದು ಕಣ್ಣಿಗೆ ಬಿದ್ದು ಹಿಂದಿನಿಂದ ಬಂದ ಕೆಟ್ಟ ಕಟ್ಟು ಸಡಿಲವಾಗುವುದೇ ಒಂದು ಶುಭ ಚಿಹ್ನೆ. ಸಂಸ್ಕಾರಕರು ನಮಗೆ ಮಾಡಬೇಕಾದದ್ದೂ ಇದೇ ಸಹಾಯ. ವೀರಶೈವ ಮತದಿಂದ ಜನಜೀವನದ ಹಿಂದಣ ಬಂಧನಗಳು ಬಹಳ ಮಟ್ಟಿಗೆ ಕಡಿಮೆಯಾದವು; ಜನರ ವಿವೇಕದ ಮಟ್ಟವೇ ಏರಿತು. ತಿಳಿವು ಬೇರೊಂದು ಭಾಷೆಯಲ್ಲಿರುತ್ತ ಸಾರ ಮಾತ್ರ ಜನಕ್ಕೆ ಎಂಬ ಅಜ್ಞಾನ ಹೋಯಿತು. ಧ್ಯಾನವೂ ಭಕ್ತಿಯೂ ದೇವರ ಸಾನ್ನಿಧ್ಯದಲ್ಲಿ ಸೇವೆ ಎನ್ನುವುದೂ ಕೆಲವರಿಗೆ ಮಾತ್ರ ಸೇರಿದ ಅಧಿಕಾರವಲ್ಲ, ಸರ್ವ ಸಾಮಾನ್ಯವಾದ ಪ್ರಯೋಜನಗಳೆಂದು ಜನರಲ್ಲಿ ಭಾವನೆಯುಂಟಾಯಿತು.

## ಸರ್ವಜ್ಞ

ಜನರಲ್ಲಿ ಈ ಉಚ್ಚಭಾವನೆಗಳು ಹರಡಿ ಎಂಥ ಸಂಸ್ಕಾರವುಂಟಾಯಿತೆನ್ನುವುದು ನಮಗೆ ಸರ್ವಜ್ಞನ ತ್ರಿಪದಿಗಳಲ್ಲಿ ಕಾಣುತ್ತದೆ. ಸರ್ವಜ್ಞನ ಕೃತಿ ಸಾಮಾನ್ಯ ಜನರ ತಿಳಿವಿನ ಫಲ. ಅವನು ಹುಟ್ಟಿದ್ದು ಕುಂಬಾರರಲ್ಲಿ; ಕಲಿತದ್ದೆಲ್ಲಿ ಎಂದು ಹೇಳುವುದಕ್ಕಿಲ್ಲ. ಪ್ರಾಯಶಃ ಅವನು ಕಲಿತ ಶಾಲೆ ಅವನ ಸುತ್ತಣ ಜೀವನವೇ. ಅವನು ಎಲ್ಲವನ್ನೂ ಬದುಕಿನ ಗರುಡಿಯಲ್ಲಿ ಕಲಿತನೆಂದು ಕಾಣುತ್ತದೆ. ಅವನ ಮಾತು ಜನದ ಮಾತು; ನಯವಾಗಿದೆ ನಿಜ; ಆದರೆ ತಿಳಿದ ಜನರ ಮಾತಾದದ್ದರಿಂದ ನಯವಾಗಿದೆ. ಅವನು ಎಲ್ಲ

ವಿಷಯುವನ್ನೂ ಬಲ್ಲನು ; ಎಲ್ಲವನ್ನೂ ಚೆನ್ನಾಗಿ ಹೇಳುತ್ತಾನೆ. ಜನದ ಬಾಯಲ್ಲಿ ನಡೆದು ನಡೆದು ಇವನ ಮಾತು ನಾಣ್ಯವಾಗಿದೆ. ಸಣ್ಣ ಮಾತಿಗೆ ದೊಡ್ಡ ಅರ್ಥವೆಂದರೆ ಸರ್ವಜ್ಞನ ಪದಗಳಲ್ಲಿ ಕಾಣಬೇಕು. ಇವನ ಕಾಲದಲ್ಲಿ ಜನರಲ್ಲಿ ಹರಡಿದ್ದ ಜ್ಞಾನ ಎಂಥದೆಂದು ಅವನ ತ್ರಿಪದಿಗ ಳಿಂದ ತಿಳಿಯುತ್ತದೆ. ಮನುಷ್ಯನು ಸತ್ಯವನ್ನು ತಿಳಿದುಕೊಳ್ಳಬೇಕು ; ಇದಕ್ಕೆ ಗುರುವನ್ನು ಆಶ್ರಯಿಸಬೇಕು ; ಅವನನ್ನು ಎತ್ತಂತೆ ತೊತ್ತಂತೆ ಹಿತ್ತಲಿನ ಗಿಡದಂತೆ ಪಾದದ ಕೆರದಂತೆ ಸೇವಿಸಬೇಕು. ಅದರಂತೆಯೇ ಗುರುವಾದವನು ನೆಲೆಯರಿತವನಾಗಿರಬೇಕು. ಆದಿಲ್ಲದಿದ್ದರೆ ಅವನನ್ನು ನಂಬಿದ ಶಿಷ್ಯನು ಕೊಳವನ್ನು ಹೊಕ್ಕ ಕುರುಡನಂತಾಗುತ್ತಾನೆ. ನಿಷ್ಠೆ ಯಿಂದ ಶಿವನು ಸಿಕ್ಕುತ್ತಾನೆ. ಅವನಿಗೆ ಆಗಿಲ್ಲ ಹೋಗಿಲ್ಲ ; ಮೇಗಿಲ್ಲ ಕೆಳಗಿಲ್ಲ ; ದೇಗುಲವು ಇಲ್ಲ. ಅವನು ಹೃದಯದೊಳಗಿದಾನೆ. ಅವನೊ ಬ್ಬನೆ. ಕಣಿಕವೊಂದರಿಂದ ಹಲವು ಅಡಿಗೆಯಾಗುವಂತೆ ಅವನಿಂದ ಸರ್ವವೂ ಆಗಿದೆ. ಅವನನ್ನು ಇದ್ದಲ್ಲೇ ನೆನೆಯಬಹುದು. ನೆನೆಯು ವುದೇ ಆದರೆ ಮನೆಯಲ್ಲಿ ನೆನೆದರೂ ಮರದಲ್ಲಿ ನೆನೆದರೂ ಫಲವೊಂ ದೇನೆ. ತಾರಣಪುರುಷನು ಒಳಗಿರಲಾಗಿ ವಾರಣಾಸಿಗೆ ಹೋಗುವ ಕಾರಣವಿಲ್ಲ. ತತ್ತ್ವವನ್ನರಿಯದೆ ವೇಷಮಾಡುವುದು ವ್ಯರ್ಥ. ಕತ್ತೆ ಬೂದಿಯಲ್ಲಿ ಹೊರಳಿದರೆ ಯತಿಯಪ್ಪುದೇ ? ವಿಭೂತಿಯಿಂದ ಯತಿ ಯಾಗುವುದಿಲ್ಲ. ತಿಳಿದವನು ವಿನಯದಿಂದ ಶೋಭಿಸುತ್ತಾನೆ. ಅವ ನನ್ನು ಇತರರು ತಾವಾಗಿ ಬಂದು ಆಶ್ರಯಿಸುವರು. ಕನ್ನಡಿಯು ನನ್ನನ್ನು ಬಂದು ನೋಡಿ ಎಂದು ಯಾರಿಗೂ ಹೇಳುವುದಿಲ್ಲ. ಎಲ್ಲರೂ ಅದರ ಬಳಿ ತಾವೇ ಬರುತ್ತಾರೆ. ಬದುಕಿರುವಾಗ ಸಂಸಾರ, ಆಮೇಲೆ ಮೋಕ್ಷ, ಎಂದು ತಿಳಿಯುವುದು ತಪ್ಪು. ಜೀವ ಇರುವಾಗ ಸರಿಯಾದ ದಾರಿಯನ್ನು ತಿಳಿದು ಅದರಲ್ಲಿ ನಡೆಯಬೇಕು. ಒಡಲನ್ನು ದಂಡಿಸಿ ಮುಕ್ತಿ ಪಡೆಯುವೆನೆನ್ನುವುದು ಹುತ್ತ ಹೊಡೆದು ಹಾವನ್ನು ಕೊಲ್ಲುವೆ ವೆಂಬ ರೀತಿ ಅಸಮಂಜಸ. ವೇಷ ಲಾಂಛನಗಳು ಮುಖ್ಯವಲ್ಲ ; ಒಳ್ಳೆಯ ಅಂತರ್ಯ ಮುಖ್ಯ. ಜ್ಞಾನಿಗೆ ಕುಲವಿಲ್ಲ ; ಸ್ವರ್ಗದಲ್ಲಿ ಹೊಲ ಗೇರಿಯಿಲ್ಲ. ಒಳ್ಳೆಯವರಾದವರು ಒಂದು ಕುಲ, ಒಂದು ಜಾತಿ.

ನಡೆಯುವುದು ಒಂದೇ ಭೂಮಿಯ ಮೇಲೆ; ಕುಡಿಯುವುದು ಒಂದೇ ನೀರು; ಎಲ್ಲರ ಮನೆಯಲ್ಲಿಯೂ ಸುಡುವುದು ಒಂದೇ ಅಗ್ನಿ; ಇನ್ನು ಕುಲವು ಬೇರೆ ಹೇಗೆ? ಜಾತಿ ಹೀನರ ಮನೆಯ ಜ್ಯೋತಿ ಹೀನವಾದದ್ದೇನು? ಜಾತಿ ವಿಜಾತಿ ಎನ್ನಬಾರದು. ದೇವನೊಲಿದಾತನು ಜಾತ.

ಇದೆಲ್ಲ ತತ್ತ್ವ ಮತ ಇವುಗಳನ್ನು ಕುರಿತ್ತ ಮಾತು. ಇದರಲ್ಲಿ ಕಾಣುವ ವಿಶಾಲವಾದ ಪ್ರಾಜ್ಞತೆಯೇ ಸರ್ವಜ್ಞನ ವ್ಯವಹಾರ ವಿಷಯಕ ವಚನಗಳಲ್ಲಿಯೂ ಕಾಣುತ್ತದೆ. ಅವುಗಳಲ್ಲಿ ಅಲ್ಲಲ್ಲಿ ಸುಂದರ ವಾದ ಹಾಸ್ಯ ಕಾಣುತ್ತದೆ. ದಾನಮಾಡಬೇಕಾದರೆ ಸಮಯವರಿತು ಮಿತವಾಗಿ ಮಾಡಬೇಕು. ಸೊಡರಿನಲ್ಲಿ ಎಣ್ಣೆ ತೀರಿದರೆ ಕೊಡವನ್ನೆತ್ತಿ ಹುಯ್ಯುವರೆ? ಸ್ವಲ್ಪ ಹಾಕುವರು. ಹಾಗೆಯೇ ಬೇಡಿದವರಿಗೆ ಕೊಡು ವುದೆಂದು ಅತಿಯಾಗಿ- ಕೊಡಬಾರದು; ಇಲ್ಲವೆಂದು ಬರಿಯ ಕಯ್ಯಲ್ಲಿ ಕಳುಹಿಸಬಾರದು. ಸೇವಕನಾದವನು ಸ್ವಾಮಿ ಕಾರ್ಯಕ್ಕೆ ಮಡಿಯ ಲಾದರೂ ಬೇಕು; ಹಿಂಜರಿಯಬಾರದು. ಅಡಿಯನ್ನು ಮುಂದಿಟ್ಟರೆ ಸ್ವರ್ಗ; ಹಿಂದಕ್ಕಿಟ್ಟರೆ ನರಕ. ಬಲ್ಲಿದರೊಡನೆ ಜಗಳ ಬಾರದು; ಪಾಚಿ ಕಟ್ಟಿರುವ ಕಲ್ಲಮೇಲೆ ಅಡಿಯಿಡಬಾರದು. ಮಾಳಿಗೆ ಸಡಲಿದರೆ ಅಲ್ಲಿರಬಾರದು; ಹಲ್ಲುದುರಿದ ಸೂಳೆಯ ಬಳಿ ನಿಲ್ಲಬಾರದು. ದೊರೆ ಸುಳ್ಳು ಹೇಳಿದರೆ ಅಲ್ಲಿಂದ ತೊಲಗುವುದು ಕ್ಷೇಮ. ಹೊಲೆಯನು ಸಂಪಾದಿಸುವುದನ್ನು ಹೆಂಡಕ್ಕಿಡುತ್ತಾನೆ; ಕೃಷಿಕನು ಸಂಪಾದಿಸುವು ದನ್ನು ದಂಡಕ್ಕಿಡುತ್ತಾನೆ; ಹಾರುವನು ಸಂಪಾದಿಸುವುದನ್ನು ಪಿಂಡಕ್ಕೆ ಇಡುತ್ತಾನೆ. ಅಲಸಿಕೆಯ ಮನುಷ್ಯನಿಗೆ ಕಲಸುವುದಕ್ಕೆ ಅಂಬಲಿಯಿಲ್ಲ; ಅಲಸಿಕೆಯಿಲ್ಲದವನಿಗೆ ಬೇರಿಂದ ಹಲಸು ಕಾತಂತೆ ತುಂಬ ಧನ ಧಾನ್ಯ ಸೇರುತ್ತವೆ. ಅನ್ನದೇವರ ಮುಂದೆ ಇನ್ನು ದೇವರು ಯಾಕೆ? ಅನ್ನವಿ ರುವ ತನಕ ಪ್ರಾಣ. ಜಗದಲ್ಲಿ ಅನ್ನವೇ ದೈವ. ಏನಾದರೂ ಕೊಟ್ಟು ಜ್ಞಾನಿಯ ಕೆಳೆಯನ್ನು ಸಂಪಾದಿಸು. ಅಜ್ಞಾನಿಗೆ ಬೇಕಾದದ್ದನ್ನು ಕೊಟ್ಟು ದೂರ ಕಳುಹಿಸು. ಅಕ್ಕಸಾಲೆಯ ಮಗು ಚಿಕ್ಕದೆಂದೆನ್ನ ಬೇಡ; ಚಿಕ್ಕಾಡು ವೈಕಡಿವಂತೆ ಕಮ್ಮಟವನಿಕ್ಕುತಲೆ ಕಳುತಾನೆ. ಗಾಣಿಗನು ಈಶ್ವರನನ್ನು ಕಾಣನೆಂಬುದು ನಿಜ. ಈಶ್ವರನು ಬಂದರೂ ಗಾಣಿಗ

ಆವನಿಂದ ಗಾಣವಾಡಿಸುವನು. ನಲ್ಲ ಒಲ್ಲಿ ಓ ಒಲ್ಲ; ಒಳ್ಳೆ ಅಕ್ಕಿ ಅನ್ನ ಒಲ್ಲ; ಏಕೆ? ಇಲ್ಲದ್ದಕ್ಕೆ ಒಲ್ಲ. ಗೌಡನಲ್ಲಿ ಹಗೆತನ, ಕಿವುಡನಲ್ಲಿ ಏಕಾಂತ, ತವುಡು ತಿಂದಂತೆ. ಹುಲ್ಲೆಯ ಚರ್ಮವನ್ನು ಹೊದ್ದು ಕಲ್ಲಮೇಲೆ ಮಲಗುವ ತಪಸ್ವಿಯ ಮನಸ್ಸು ಕೂಡ ಹೆಣ್ಣಿಗೆ ಸೋಲುತ್ತದೆ. ನಿನ್ನ ಪ್ರಿಯೆಯನ್ನು ಕೊಂಕುಗುರುಳ ರಂಭೆ, ಪಂಕಜಗಂಧಿ ಎಂದು ಹೊಗಳ ದಿರು. ಒಲಿದವನಿಗೆ ಮಂಕೇ ಮಾಣಿಕ್ಯ. ಹೆಂಗಸರನ್ನು ಒಲಿಸಿಕೊಳ್ಳ ಬೇಕಾದರೆ ನಾರು ಬೇರು ಇಡಬೇಡ; ಅದರಿಂದೇನೂ ಆಗುವುದಿಲ್ಲ. ನಾರಿಯಾಗಲಿ ಜಗವಾಗಲಿ ಒಲಿಯಬೇಕಾದರೆ ಹೊನ್ನಿನ ಬೇರನ್ನಿಕ್ಕು ಒಲಿಯುತ್ತಾರೆ.

ಸರ್ವಜ್ಞನ ಜ್ಞಾನ ವಿಶಾಲವಾದದ್ದು, ಉದಾರವಾದದ್ದು, ಜೀವ ನದ ಒಳಗಿಂದ ಬಂದದ್ದು, ಸುತ್ತಣ ಬಾಳನ್ನು ಅವಲಂಬಿಸಿ ಬೆಳೆದದ್ದು. ಇವನ ಭಾವನೆ ಉದಾತ್ತವಾದದ್ದು. ಇವನ ಪರಿಹಾಸ್ಯ ನಿಸರ್ಗಜನ್ಯ ವಾದದ್ದು. ಮಾತು ಸರಳ, ಸುಂದರ, ಅರ್ಥಗರ್ಭಿತ. ಸರ್ವಜ್ಞನು ಆ ಕಾಲದ ಜನದ ತಿಳಿವಿನ ಮಟ್ಟವನ್ನು ಸೂಚಿಸುತ್ತಾನೆ. ಅವನು ಆ ತಿಳಿವಿನ ಸಾರವನ್ನು ಬರೆದಿಟ್ಟನು. ಆದರಿಂದ ಮುಂದಿನ ತಲೆಮಾರು ಗಳಿಗೆ ಜ್ಞಾನಕ್ಕೆ ದಾರಿಯಾಯಿತು. ಸರ್ವಜ್ಞನ ಮಾತುಗಳನ್ನು ನಮ್ಮ ಜನ ಆಗಾಗ ಹೇಳುತ್ತಲೇ ಇರುವರು. ನೀಲಗಿರಿಯ ಬಡಗರಲ್ಲಿ ಓಡಿ ಯಾಡಿದ ನಮ್ಮ ಮಿತ್ರರೊಬ್ಬರು ಅವರಲ್ಲಿ ಸರ್ವಜ್ಞನ ಪದಗಳು ಬಹಳ ರೂಢಿಯಲ್ಲಿವೆ ಎಂದು ಹೇಳಿದರು. ಸರ್ವಜ್ಞನ ಮಾತುಗಳು ನಾಣ್ಣುಡಿ ಗಳಾಗಿವೆ. ಇವುಗಳ ಸಂಘರ್ಷಣದಿಂದ ನಮ್ಮ ಜನಕ್ಕೆ ಜನವೇ ತ್ರಿಪದಿ ಗಳನ್ನು ಬರೆಯುವ ವಾಡಿಕೆಯನ್ನು ಕಲಿಯಿತೆನ್ನಬಹುದು. ಸರ್ವಜ್ಞನ ವೆಂದು ಹೇಳುವ ಅನೇಕ ತ್ರಿಪದಿಗಳು ಸರ್ವಜ್ಞನವೋ ಬೇರೆಯವರವೋ ಎಂದು ಅನೇಕವೇಳೆ ಸಂದೇಹವುಂಟಾಗುತ್ತದೆ. ಇವನ ಹೆಸರಿಲ್ಲ ದಿದ್ದರೂ ಜನರಲ್ಲಿ ರೂಢಿಯಲ್ಲಿರುವ ಬಹು ಪದ್ಯಗಳು ತ್ರಿಪದಿಗಳು. ಇವುಗಳೆಲ್ಲದರ ಸ್ಫೂರ್ತಿಯೂ ಸರ್ವಜ್ಞನಿಂದ ಬಂದದ್ದೆಂದು ಹೇಳಿದರೆ ತಪ್ಪಾಗಲಾರದು.

## ಭಕ್ತಿಮಾರ್ಗ

ಸ್ಮಾರ್ತ ಮತ ವೀರಶೈವ ಮತಗಳಲ್ಲದೆ ಕನ್ನಡ ನಾಡಿನ ಜನ ಸಂಸ್ಕೃತಿಗೆ ಸಹಾಯಕವಾದ ಮತ್ತೊಂದು ಚಳವಳಿ ಹರಿದಾಸರದು ಎಂದು ಮೊದಲೇ ಹೇಳಿದೆ. ಹರಿದಾಸ ಮತವು ಮುಖ್ಯ ಮತದ ಒಂದು ವಿಶೇಷ ಗುಣವನ್ನೇ ಬೆಳೆಯಿಸಿತು. ಭಕ್ತಿ ಭಗವದನುಸಂಧಾನಕ್ಕೆ ಅವಶ್ಯಕವೆನ್ನುವುದು ಮುಖ್ಯ ಮತದಲ್ಲೇ ಪ್ರಸಿದ್ಧವಾಗಿದ್ದ ಒಂದು ಮಾರ್ಗ. ಮುಖ್ಯ ಮತವು ಒಂದು ದಾರಿಯನ್ನು ಪ್ರಶಂಸಿಸಿ ಮತ್ತೊಂದನ್ನು ಬಿಡುವುದಕ್ಕೆ ಆಗುವುದಿಲ್ಲ; ಎಲ್ಲಾ ತರಗತಿಯ ಜನಕ್ಕೆಂದು ದಾರಿಗಳನ್ನು ತೋರಿಸಿಕೊಡಬೇಕು. ಒಂದೊಂದುವೇಳೆ ಎಲ್ಲರೂ ಎಲ್ಲಾ ದಾರಿಯನ್ನೂ ನಡೆಯುವುದಕ್ಕೆ ನೋಡುವರು; ಯಾರಿಗೂ ಯಾವ ದಾರಿಯೂ ಇಲ್ಲದೆಹೋಗುವುದು. ಇಂಥ ಸಂದರ್ಭದಲ್ಲಿ ಯಾರಾದರೂ ಒಬ್ಬರಿದ್ದು ಜನಸಾಮಾನ್ಯಕ್ಕೆ ಯಾವುದು ಮುಖ್ಯ ಎಂದು ತೋರಿಸಬೇಕಾಗುವುದು. ಬರಬರುತ್ತ ಜನರಿಗೆ ಭಕ್ತಿಯ ದಾರಿಯೇ ಸುಲಭ, ಸರಿ, ಎಂಬ ಭಾವನೆ ನೆಲೆಸುತ್ತ ಬಂದಿತು. ಅದರಿಂದಲೇ ಸೀಮೆಯಲ್ಲೆಲ್ಲ ಭಕ್ತಿ ಪಂಥಗಳು ಹೇರಳವಾಗಿ ಎದ್ದದ್ದು. ದೇವರು ಇರುವನೆ ಇಲ್ಲವೆ? ಇದ್ದರೆ ಅವನ ಸ್ವರೂಪವೇನು? ಅವನ ನಮ್ಮ ಸಂಬಂಧ ಯಾವುದು? ನಾವು ಹೇಗೆ ತಿಳಿದುಕೊಳ್ಳಬೇಕು? ಎಂಬ ವಿಚಾರ ಮಾಡುವುದು ಎಲ್ಲ ಬುದ್ಧಿಗೂ ಸಾಧ್ಯವಲ್ಲ. ಆದರೆ ದೇವರು ಒಬ್ಬನೆ, ಅವನು ಎಲ್ಲರಿಗೂ ತಂದೆ, ಅವನ ಮುಂದೆ ಎಲ್ಲರೂ ಸಮಾನರು, ಅವನ ಇಷ್ಟದಂತೆ ಜೀವನವನ್ನು ನಡೆಯಿಸಬೇಕು ಎಂದು ತಿಳಿದವರು ಹೇಳಿದರೆ ಅದನ್ನು ನಂಬಿ ಅದರಂತೆ ನಡೆಯುವುದು ಸಾಧ್ಯ. ಇದೇ ಭಕ್ತಿಮಾರ್ಗದ ಮೂಲ ಮಂತ್ರ. ಮುಖ್ಯ ಮತದಲ್ಲಿ ಯೋಗ್ಯತೆಗೆ ತಕ್ಕಂತೆ ದಾರಿಯೆಂದು ಭಾವನೆ. ಈ ಮತದಲ್ಲಿ ಎಲ್ಲರಿಗೂ ಒಂದೇ ದಾರಿ ಅಥವಾ ಈ ದಾರಿ ಎಲ್ಲರಿಗೂ ತಕ್ಕದ್ದು ಎಂಬುದು ಮುಖ್ಯ ಭಾವನೆ. ಸ್ಮಾರ್ತ ಮತದ ಮಧ್ಯದ ತಾಳನ್ನು ಬಿಡದಂತೆ ಎಲ್ಲರಿಗಾಗಿ ಈ ಮತವನ್ನು ಮುಖ್ಯವೆಂದು ಬೋಧಿಸಿದವರಲ್ಲಿ ರಾಮಾನುಜಾಚಾರ್ಯರು ಮೊದಲನೆಯವರೆಂದು ಹೇಳಬಹುದು. ಅವರ ಹಿಂದೆ ತಮಿಳು ನಾಡಿನಲ್ಲಿ ಆಳ್ವಾರುಗಳೆಂದು ಈ ಮತದ

ಆಚಾರ್ಯರು ಇದ್ದರು. ಅವರು ಅನುಷ್ಠಿಸಿದ್ದ ಮತವನ್ನು ರಾಮಾನುಜಾಚಾರ್ಯರು ಎಲ್ಲರಿಗಾಗಿ ಪ್ರಕಟಗೊಳಿಸಿದರು. ಇದನ್ನು ರಹಸ್ಯವಾಗಿ ಇಡಬೇಕೆಂದು ಗುರು ಹೇಳಿದಂತೆಯೂ ಆಚಾರ್ಯರು ಅವರ ಆಜ್ಞೆಯನ್ನು ಉಲ್ಲಂಘಿಸಿ ಅದನ್ನು ಪ್ರಕಟಿಸಿದರೆಂದೂ ಸಂಪ್ರದಾಯದಲ್ಲಿ ಹೇಳುತ್ತಾರೆ. ಇದು ಭಕ್ತಿ ಪಂಥದ ಮುಖ್ಯ ಲಕ್ಷಣ. ಎಲ್ಲರೂ ಮುಕ್ತರಾಗಬೇಕು, ಎಲ್ಲರಿಗೂ ಇದು ಸಾಧ್ಯ, ಶರಣಾಗತಿಯೇ ಇದಕ್ಕೆ ದಾರಿ, ಎಂದು ಈ ಮತದ ಗುರುಗಳೆಲ್ಲ ಹೇಳುತ್ತಾರೆ. ತಮಿಳು ನಾಡಿನಲ್ಲಿ ರಾಮಾನುಜಾಚಾರ್ಯರಿಂದ ಪ್ರಕಟವಾಗಿ ಭಕ್ತಿ ಮತವು ಭಾರತವರ್ಷದಲ್ಲೆಲ್ಲ ಹರಡಿತು. ಆಚಾರ್ಯರು ಕನ್ನಡನಾಡಿನಲ್ಲಿ ಸಂಚಾರ ಮಾಡಿದರು; ಅಲ್ಲಲ್ಲಿ ದೇವಾಲಯಗಳನ್ನು ಸ್ಥಾಪಿಸಿದರು; ಇಲ್ಲಿಯ ಕನ್ನಡದ ರಾಜನಾದ ವಿಷ್ಣುವರ್ಧನನನ್ನು ತಮ್ಮ ಮತಕ್ಕೆ ಸೇರಿಸಿಕೊಂಡು ಅವನ ಮೂಲಕ ಮತವನ್ನು ಪ್ರಚುರಮಾಡಿದರು. ಒಂದೆರಡು ದೇವಾಲಯಗಳಲ್ಲಿ ಪಂಚಮರಿಗೆ ಕೂಡ ಹೋಗಿಬರುವುದಕ್ಕೆ ಅಧಿಕಾರವನ್ನು ಆಚಾರ್ಯರು ಕಲ್ಪಿಸಿದರು.

## ಹರಿದಾಸರು: ಪುರಂದರದಾಸರು

ಇದಾದ ಕೊಂಚಕಾಲದಲ್ಲಿಯೇ ಭಕ್ತಿಪಂಥದ ಈ ಏಳಿಗೆ ಕನ್ನಡ ನಾಡಿನಲ್ಲಿ ಮಧ್ವಾಚಾರ್ಯರಲ್ಲಿ ಮೂರ್ತಿಗೊಂಡಿತು. ಈ ಮತವು ಜನರ ಸೇವೆಗಾಗಿ ದಾಸಕೂಟವನ್ನು ಏರ್ಪಡಿಸಿತು. ಈ ಕೂಟಕ್ಕೆ ಮೂಲಪುರುಷರು ನರಹರಿತೀರ್ಥರೆಂದು ಹೇಳುತ್ತಾರೆ. ಅವರನಂತರ ವ್ಯಾಸರಾಯರು ಬಂದರು. ಪುರಂದರದಾಸರು ಇವರ ಶಿಷ್ಯರಂತೆ. ಹರಿದಾಸರ ಸಮುದಾಯದಲ್ಲಿ ಪುರಂದರದಾಸರು ಸಾರ್ವಭೌಮರು. ಇವರ ಹೆಸರಾದ ಮೇಲೆ ಕನಕದಾಸರದು ಬಹಳ ದೊಡ್ಡ ಹೆಸರು. ಇವರಂತೆಯೇ ಇತರ ಹರಿದಾಸರು ಇನ್ನೂ ನೂರಾರು ಜನ ಬಂದರು; ಈ ಪದ್ಧತಿಯಲ್ಲಿ ಜನಕ್ಕೆ ತತ್ತ್ವವನ್ನು ಬೋಧಿಸಿದರು. ದಾಸ ಕೂಟದ ಮೂಲ ಪುರುಷರ ಪದ್ಯದಲ್ಲಿಯೇ ಅವರ ಪಂಥದ ಗುಣಗಳು ಕಾಣಬರುತ್ತವೆ. ಆದರೆ ಅದರ ವಿಸ್ತಾರವನ್ನು ತಿಳಿಯಬೇಕಾದರೆ ಪುರಂದರದಾಸರ ಪದಗಳನ್ನು ನೋಡಬೇಕು. ಇವರು ತ್ಯಾಗಿಗಳಾದದ್ದು ಹೇಗೆಂದು

ಸಂಪ್ರದಾಯದಲ್ಲಿ ಒಂದು ಕತೆಯಿದೆ. ಇವರು ಮೊದಲು ಎಲ್ಲರಂತೆ ಸಂಸಾರಿಗಳಾಗಿದ್ದು ಆಮೇಲೆ ಬೇಸರಗೊಂಡು ನಿವೃತ್ತಿ ಮಾರ್ಗವನ್ನು ಹಿಡಿದಂತವರೆಂದು ಇದರಿಂದ ಕಾಣುತ್ತದೆ. ಇವರ ಗ್ರಂಥಗಳನ್ನು ನೋಡಿದರೂ ಹೀಗೆಂದೇ ಕಾಣುವುದು. ಇವರ ಪದ್ಯಗಳಲ್ಲಿ ಸಾಮಾನ್ಯನ ಜೀವನದ ಅರಿವು ಇದೆ. ಒಂದುಸಲ ಇವರು ಅನಂತ ಅಪರಾಧ ಎನ್ನಲ್ಲಿ ಇರಲಾಗಿ ಬಿನ್ನಹಕೆ ಬಾಯಿ ಇಲ್ಲವಯ್ಯಾ ಎನ್ನುತ್ತಾರೆ. ಸಂಸಾರದಲ್ಲಿ ಭಂಗಪಟ್ಟರೆ ದೇವರ ಕಡೆಗೆ ಮನಸ್ಸು ತಿರುಗುವುದು ಎಂದು ಅಭಿಪ್ರಾಯ ಬರುವಂತೆ "ಹಂಗಿಸಿ ಹಂಗಿಸಿ ಎನಗೆ ಹರಿನಾಮ ನಿಲಿಸಿದರು" ಎಂದು ಒಂದು ಸಂದರ್ಭದಲ್ಲಿ ಹೇಳುತ್ತಾರೆ. ಅದೇ ಅನುಭವ "ನಿನ್ನನೇ ನಂಬಿದೆನು ನೀನೆನ್ನ ಸಲಹಯ್ಯ" ಎಂಬ ಪದ್ಯದ ಲ್ಲಿಯೂ ಕಾಣುತ್ತದೆ. ಜೀವನದಲ್ಲಿ ಬಹಳ ಬೇಸರವಾದಾಗ "ಕಂಡು ಕಂಡು ಎನ್ನ ಕೈ ಬಿಡುವರೆ ಕೃಷ್ಣ" ಎಂದು ಮೊರೆ ಹೇಳಿದಾರೆ. ಕ್ಷಣ ವೊಂದು ಯುಗವಾಯಿತಂತೆ ಇವರಿಗೆ, ಇವರು ತೃಣಕ್ಕಿಂತ ಕಡೆಯಾದ ರಂತೆ. ಜನರನ್ನು ಉದ್ಧಾರ ಮಾಡಲು ತಮ್ಮ ಕೆಲಸವನ್ನು ಕೈಕೊಂಡ ಇವರು ಸೀಮೆಯನ್ನು ಸುತ್ತುವಲ್ಲಿ, ಹೋದಕಡೆ ಜನರಲ್ಲಿ ಆದರವಿಲ್ಲ ದಿರಲು "ಯಾಕೆನ್ನ ಈ ರಾಜ್ಯಕೆಳತಂದೆ ಹರಿಯೇ . ." ಎಂದುಕೊಂಡಿರ ಬೇಕು. ಇನ್ನೊಂದು ಸಂದರ್ಭದಲ್ಲಿ "ಆರು ಬದುಕಿದರು ಹರಿ ನಿನ್ನ ನಂಬಿ . . . . ದೊರೆ ಪುರಂದರವಿಠಲ ನಿನ್ನ ನಂಬಿದರೆ ತಿರುಪೆಯೂ ಹುಟ್ಟಲೊಲ್ಲದು ಕೇಳು ಹರಿಯೇ . . . . . ." ಎಂದು ಹೇಳಿದರು. ಭಕ್ತಿಯ ಮಾರ್ಗ ಸುಲಭವಲ್ಲ. ಬಸವಣ್ಣನವರು ಹೇಳಿದಂತೆ ಭಕ್ತಿ ಕರಗಸ; ಹೋಗುತ್ತ ಕೊಯ್ಯುವುದು, ಬರುತ್ತ ಕೊಯ್ಯುವುದು! ಆದರೆ ಇವರ ಮನಸ್ಸಿನ ಸಿದ್ಧಾಂತ "ವಾರಿಜನಾಭನ ಕರುಣವೆ ಸ್ಥಿರ! ಸಂಸಾರ ಎರವು ಕೇಳಾತ್ಮಾ" ಎಂಬ ಮಾತುಗಳಲ್ಲಿ ಸ್ಪಷ್ಟವಾಗಿ ಕಾಣು ವುದು. ಪುರಂದರದಾಸರ ಅನುಭವ ಬಹಳ ವಿಸ್ತಾರವಾದದ್ದು. ಅವರ ಮಾತುಗಳಲ್ಲಿ ಈ ಅನುಭವದ ಬೆಳಕು ತುಂಬಿ ಅವುಗಳನ್ನು ಜ್ಯೋತಿ ರ್ಮಯವನ್ನಾಗಿ ಮಾಡಿದೆ. ವಿಸ್ತಾರವಾದ ಅನುಭವದಿಂದ ಇವರ ಭಾವನೆ ಉದಾರವಾಯಿತು. ಬೇರೆ ಬೇರೆ ಮಟ್ಟದ ಎಲ್ಲ ಜನರ

ಮನೋಧರ್ಮವನ್ನೂ ಇವರು ಊಹಿಸಬಲ್ಲವರಾಗಿದ್ದರು. ಸಂಸಾರವು ನೀರ ಕಡೆದಂತೆ ನಿಷ್ಪ್ರಯೋಜನವೆಂದು ಇವರ ಅಭಿಪ್ರಾಯವಾದರೂ "ಹಂಗಾಗಿರಬೇಕು ಸಂಸಾರದಲ್ಲಿ ಹಿಂಗೆ ಬರೆದಿತ್ತು ಪ್ರಾಚೀನದಲ್ಲಿ...." ಎಂದು ಹೇಳಿದಾರೆ. ಹುಟ್ಟಿದ ಆವರಣದಲ್ಲಿ ತನ್ನ ಭಾಗಕ್ಕೆ ಬಂದ ಕೆಲಸವನ್ನು ಮಾಡಿಯೇ ಮನುಷ್ಯನು ಉದ್ಧಾರವಾಗಬೇಕು. ಸಂಸಾರದಲ್ಲಿಯೇ ಇದ್ದುಕೊಂಡು ಮುಕ್ತನಾಗಿರಬೇಕು. "ಈಸಬೇಕು ಇದ್ದು ಜೈಸಬೇಕು." ಮನಸ್ಸಿಗೆ ಸಮಾಧಾನ ಸ್ಥಿತಿ ಬಂದಮೇಲೆ ಅವರು ರಚಿಸಿದ ಗೀತೆಗಳಲ್ಲಿ "ನಾನಿನ್ನ ಧ್ಯಾನದೊಳಿರಲು ಹೀನ ಮಾನವರಿಂದ ಎನಗೇನಾಗುವುದು" ಎಂದು ಹೇಳಿದಾರೆ. ಪುರಂದರದಾಸರು ಎಲ್ಲರಂತೆ ಸಂಸಾರದ ದಾರಿಯಲ್ಲಿ ನಡೆದು ಈಸಿ ಜಯಿಸಿದರು. ಅವರ ಪದ್ಯಗಳಲ್ಲಿ ಒಂದು ಹಿರಿಯ ಜೀವನದ ಹೆಗ್ಗುರುತುಗಳು ಸಿಕ್ಕುತ್ತವೆ. ಬರಿಯ ಅವರ ಪದ್ಯಗಳನ್ನೇ ತೆಗೆದುಕೊಂಡು ಒಂದು ಜೀವನ ಧರ್ಮಶಾಸ್ತ್ರವನ್ನೇ ರಚಿಸಬಹುದು. ಅವರ ಜ್ಞಾನವು ಸರ್ವ ವ್ಯಾಪಿ. ಅವರ ಭಕ್ತಿ ಅಗಾಧವಾದದ್ದು; ಎಲ್ಲರೊಡನೆ ನಡೆದು ಅವರ ಮಾತು ಸರಳವಾಗಿ ಸುಲಭವಾಗಿ ಎಲ್ಲರ ಹೃದಯವನ್ನು ಹೊಗುವಂತಾಗಿತ್ತು. ಸಾಮಾನ್ಯ ಜನರಲ್ಲಿ ಹುಟ್ಟಿ ವೇದಾಂತಿಗಳಾದದ್ದರಿಂದ ಇವರು ವೇದಾಂತದ ಸಾರವನ್ನೇ ಜನರ ತಿಳಿವಿನಲ್ಲಿ ಕಲೆಸಿಹೋದರು.

## ದಾಸರ ಜೀವನ ಧರ್ಮಶಾಸ್ತ್ರ

ಪುರಂದರದಾಸ ಕನಕದಾಸರ ಅನಂತರ ಬಂದ ದಾಸರೂ ಅವರವರ ಅನುಭವವನ್ನು ದೇವರ ಕೀರ್ತನೆಗಳಲ್ಲಿ ಬರೆದಿಟ್ಟಿದಾರೆ. ಆತ್ಮೀಯವಾದ ಅನುಭವವನ್ನೂ ಭಾವನೆಗಳನ್ನೂ ಬರೆಯುವುದು ಹೀಗೆ ಒಂದು ಸಂಪ್ರದಾಯವಾಯಿತು. ಗುರುವಿನಿಂದ ಶಿಷ್ಯ, ಶಿಷ್ಯನಿಂದ ಪ್ರಶಿಷ್ಯ; ಹೀಗೆ ಹಿರಿಯರ ಮಾತು ಬೀದಿಬೀದಿಯಲ್ಲಿಯೂ ಹಾಡಿನಲ್ಲಿ ಕೇಳಬಂದಿತು. ಹರಿದಾಸರಿಂದ ಹೀಗೆ ಸಂಪ್ರದಾಯವಾದ ಜೀವನ ತತ್ತ್ವವನ್ನು ಜನರಲ್ಲಿ ವಾಡಿಕೆಯಲ್ಲಿರುವ ಕೆಲವು ಹಾಡುಗಳಿಂದ ನಾವು ತಿಳಿಯಬಹುದು. "ನರ ಜನ್ಮ ಸುಖವಿಲ್ಲ. ವೈ ಒಂದು ಹಿರಿಯವಸ್ತುವಲ್ಲ.

ಬದುಕು ನಿತ್ಯವಲ್ಲ. ಇದನ್ನು ತಿಳಿಯದವನು ಸಂತೆಗೆ ಬಂದ ಕುರುಡು ನಾಯಂತೆ ಬಾಳನ್ನು ಹಾಳುಮಾಡಿಕೊಳ್ಳುವನು. ಐಶ್ವರ್ಯ ಸ್ಥಿರವಲ್ಲ, ಮನುಷ್ಯರಿಗೆ ಚಿಂತೆ ತಪ್ಪಿದ್ದಲ್ಲ. ವೇಷದಿಂದ ಪ್ರಯೋಜನವಿಲ್ಲ. ನಿಜವಾದ ಸೇವೆ ಮಾಡು. ಸರಿಯಾದುದನ್ನು ಮಾಡುವುದಕ್ಕೆ ನಾಚಿಕೆ ಪಡಬೇಡ. ಸಾಧನೆಯ ದಾರಿ ತಿಳಿದೇ ಇದೆ. ಎಲ್ಲವನ್ನೂ ಭಗವಂತನಲ್ಲಿ ಅರ್ಪಿಸು. ತಪಸ್ಸು ಆವಶ್ಯಕವಿಲ್ಲ. ಈ ದೇಹವನ್ನು ದಂಡಿಸಿ ಪ್ರಯೋಜನವಿಲ್ಲ. ಮನುಷ್ಯನಿಗೆ ದೇವರಿಲ್ಲದೆ ಹಿಂದಿಲ್ಲ ಮುಂದಿಲ್ಲ. ಅವನಿರಬೇಕಾದರೆ ಬಡತನವಿಲ್ಲ. ಶರಣಾಗತನಾಗು. ಬಿಡೆ ನಿನ್ನ ಪಾದವ ಎಂದು ಹರಿಯ ಪಾದವನ್ನು ಹಿಡಿ. ಇದರಿಂದ ಒಳ್ಳೆಯದು ಖಂಡಿತ ಬರುತ್ತದೆ. ರಂಗಯ್ಯನನ್ನು ನಂಬಿ ಕೆಟ್ಟವರಿಲ್ಲ. ನಂಬದೆ ಕೆಟ್ಟವರುಂಟು. ಒಳ್ಳೆಯವರಂತೆ ನಡೆ. ನಡೆಯುತ್ತೇನೆಂದು ಆಣೆಯಿಟ್ಟುಕೋ. ಹೀಗೆ ಮಾಡಿದ ಮೇಲೆ ಧೈರ್ಯವಾಗಿರು. ಬಂದದ್ದೆಲ್ಲಾ ಬರಲಿ ಗೋವಿಂದನ ದಯೆ ಒಂದಿರಲಿ.

ದೇವರನಾಮಗಳಲ್ಲಿ ಜನರಿಗೆ ಜೀವನದಲ್ಲಿ ನಡೆಯಬೇಕಾದ ದಾರಿ ತಿಳಿದುದಲ್ಲದೆ ಬದುಕಿನಲ್ಲಿರುವ ಸೊಗಸೂ ಅನೇಕ ಸೂಕ್ಷ್ಮತತ್ತ್ವಗಳೂ ತಿಳಿದುವು. "ನೀಮಾಯೆಯೊಳಗೊ ನಿನ್ನೊಳು ಮಾಯೆಯೊ" ಎನ್ನುವ ಪದ್ಯದಲ್ಲಿ ಕನಕದಾಸರು ವೇದಾಂತದ ಕೊನೆಯ ಮಾತನ್ನು ಸಾಮಾನ್ಯವಾದ ನುಡಿಯಲ್ಲಿ ವಿವರಿಸಿಬಿಟ್ಟಿದಾರೆ. ಇವರೇ ರಚಿಸಿರುವ "ತನು ನಿನ್ನದು ಜೀವನು ನಿನ್ನದೋ" ಎಂಬ ಪದ್ಯದಲ್ಲಿ "ಸ್ವಾತಂತ್ರ್ಯವೆನ್ನುವುದು ದೇವರದು. ಮನುಷ್ಯನಿಗಿರುವುದು ಪಾರತಂತ್ರ್ಯ ಮಾತ್ರ. ನಮ್ಮ ಎಲ್ಲ ಕರ್ಮವೂ ದೇವರಿತ್ತಶಕ್ತಿಯಿಂದ ಅವನ ಪ್ರೇರಣೆಯಂತೆ ನಡೆಯುತ್ತದೆ." ಎಂಬದು ಹೃದಯಂಗಮವಾಗಿ ವಿವರಿಸಲ್ಪಟ್ಟಿದೆ. ಇಷ್ಟೇ ಅಲ್ಲದೆ "ಭಾಗ್ಯದ ಲಕ್ಷ್ಮಿ ಬಾರಮ್ಮ" ಎಂದು ಲಕ್ಷ್ಮೀದೇವಿಯರನ್ನು ಸ್ತೋತ್ರಮಾಡುವ ಪದ್ಯದಲ್ಲೂ, "ಶ್ರೀಶ ಕೊಳಲನೂದುತ ಬಂದ," "ಕೊಳಲನೂದುವ ಚದುರನಾರೇ ಪೇಳಮ್ಮಯ್ಯ," "ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿದ್ದಂತಿದೆ" ಮುಂತಾದ ಕೃಷ್ಣದೇವರನ್ನು ವರ್ಣಿಸುವ ಪದ್ಯಗಳಲ್ಲಿಯೂ ಜನರಿಗೆ ಸುಂದರವಾದ ಕಾವ್ಯದ ಸುಖ ದೊರೆತಿತು. ಹೀಗೆ ಹರಿದಾಸರ ಪಂಥದ

ಉತ್ತಮ ಕೃತಿಗಳಿಂದ ಜನರು ಉದಾತ್ತವಾದ ನೀತಿಯನ್ನು ಕಲಿತರು; ಉತ್ತಮ ಸಾಹಿತ್ಯವನ್ನು ಪಡೆದರು; ಗಹನವಾದ ತತ್ತ್ವವನ್ನು ತಿಳಿದರು.

## ಹರಿದಾಸರ ಕತೆಗಳು

ವೈಷ್ಣವ ಸಂಪ್ರದಾಯದ ಅನೇಕ ಮುಖ್ಯತತ್ತ್ವಗಳು ಜನರಲ್ಲಿ ದಾಸರನ್ನು ಕುರಿತ ಹಲವು ಕತೆಗಳಿಂದ ಹರಡಿವೆ. ದೇವರು ಎಲ್ಲಾ ಕಡೆಯಲ್ಲಿಯೂ ಇದ್ದಾನೆ ಎಂಬುದು, ಕನಕದಾಸರಿಗೆ ಅವರ ಗುರು ಒಂದು ಹಣ್ಣು ಕೊಟ್ಟು ಯಾರೂ ಇಲ್ಲದ ಕಡೆ ತಿನ್ನು ಎಂದು ಹೇಳಿದಾಗ, ಅವರು ಎಲ್ಲಾ ಕಡೆಯೂ ದೇವರಿದ್ದಾನೆ, ಎಲ್ಲಿಯೂ ತಿನ್ನಲಾಗದು ಎಂದು ಹೇಳಿದರು ಎನ್ನುವ ಕತೆಯಲ್ಲಿ ಗರ್ಭಿತವಾಗಿದೆ. ಯಾವ ಭೂತಕ್ಕೆ ತೃಪ್ತಿಯಾದರೂ ಭಗವಂತನಿಗೇ ತೃಪ್ತಿ ಎನ್ನುವ ಮಾತು ಕನಕದಾಸರು ರೊಟ್ಟಿಯನ್ನು ಕದ್ದ ಒಂದು ನಾಯಿಗೆ ಬೆಲ್ಲವನ್ನು ತೆಗೆದುಕೊಂಡು ಹೋಗಿ ಕೊಟ್ಟರು ಎಂಬ ಕತೆಯಲ್ಲಿ ಗರ್ಭೀಕೃತವಾಗಿದೆ. ಎಲ್ಲರ ಅಂತರಂಗದಲ್ಲಿಯೂ ಒಬ್ಬನೇ ದೇವರು, ಅಪರೋಕ್ಷ ಜ್ಞಾನಿಗಳಿಗೆ ಒಬ್ಬರ ಮನಸ್ಸಿನ ಯೋಚನೆ ಇನ್ನೊಬ್ಬರಿಗೆ ತಿಳಿಯುತ್ತದೆ ಎಂಬುದು ಕನಕದಾಸರ ಮಾನಸ ಪೂಜೆಯ ಕತೆಯಲ್ಲಿ ಗರ್ಭೀಕೃತವಾಗಿದೆ. ಕುಲ ಹಿರಿಯುದಲ್ಲ, ಯೋಗ್ಯತೆ ಹಿರಿಯುದು ಎನ್ನುವುದು ಕನಕನ ಕಂಡಿಯ ಕತೆಯಿಂದ ವ್ಯಕ್ತವಾಗುವುದು. ಅಹಂಕಾರ ಹೋದರೆ ಮುಕ್ತಿಯೆನ್ನುವುದು ಕನಕದಾಸರು ಗುರುವಿಗೆ ನಾನು ಹೋದರೆ ಮುಕ್ತಿಗೆ ಹೋಗುತ್ತೇನೆ, ಎಂದು ಹೇಳಿದರು ಎಂಬ ಕತೆಯಿಂದ ವ್ಯಕ್ತವಾಗುತ್ತದೆ. ಇಂತ ಕತೆಗಳು ಹರಿಕತೆಗಳ ಮೂಲಕ ಜನರಲ್ಲೆಲ್ಲ ಹರಡಿ ಈ ಪಂಥದ ತತ್ತ್ವಗಳು ಜನರ ಬದುಕಿನಲ್ಲಿ ಕಲೆತವು. ಅಲ್ಲದೆ ಭಕ್ತಿಮಾರ್ಗದ ಸಾರ ವಿಷಯವನ್ನು ಕನಕದಾಸರೂ ಜಗನ್ನಾಥದಾಸರೂ ಹರಿಭಕ್ತಿಸಾರ ಹರಿಕಥಾಮೃತಸಾರ ಎಂಬ ಗ್ರಂಥಗಳಲ್ಲಿ ಸೇರಿಸಿಟ್ಟು ಎಲ್ಲರಿಗೂ ಶಾವ್ಯವಾಗಿ ದೊರೆಯುವಂತೆ ಮಾಡಿದರು.

## ಸುಲಭ ಕಾವ್ಯಗಳು : ಸಾಂಗತ್ಯಗಳು

ವೀರಶೈವ ಮತದಿಂದಲೂ ಹರಿದಾಸ ಕೂಟದಿಂದಲೂ ತಿಳಿವು ಎಲ್ಲರಿಗೂ ಬೇಕಾದದ್ದೆಂಬ ಭಾವನೆಯಲ್ಲಿ ಸ್ವಲ್ಪ ಕೆಲಸ ನಡೆದಮೇಲೆ

ಸಾಮಾನ್ಯರಿಗಾಗಿ ಬರೆದ ಒಂದು ಸಾಹಿತ್ಯವೂ ಆರಂಭವಾಯಿತು. ಸಂಸ್ಕೃತದ ವೃತ್ತವು ಎಷ್ಟೇ ಸುಲಭವಾದರೂ ಸಾಮಾನ್ಯರಿಗೆ ತಿಳಿಯುವುದು ಕಷ್ಟ. ಅದರಲ್ಲಿ ಮಾತಿನ ಕಟ್ಟು ಬಿಗಿ; ಸಂಪ್ರದಾಯದಲ್ಲಿ ಸಂಸ್ಕೃತದ ಸಮಸ್ತ ಪದಗಳನ್ನು ಹೆಚ್ಚಾಗಿ ಹಾಕುವುದು ವಾಡಿಕೆಗೆ ಬಂದಿದೆ. ಷಟ್ಪದಿಯಲ್ಲಿ ಮಾತು ಆಡುವ ಮಾತಾಗಿರುತ್ತದೆ. ಇನ್ನು ಸ್ವಲ್ಪ ಕಾಲವಾದ ಮೇಲೆ ಸಾಂಗತ್ಯಗಳ ಬರಹ ವಾಡಿಕೆಗೆ ಬಂದಿತು. ಹೀಗೆ ವಾಡಿಕೆಯಾದ ಕಾವ್ಯಗಳಲ್ಲಿ ಕುಮಾರವ್ಯಾಸ ಭಾರತ, ಜೈಮಿನಿ ಭಾರತ, ಸಾಂಗತ್ಯಗಳಲ್ಲಿ ಕನಕದಾಸರ ಮೋಹನತರಂಗಿಣಿ ಇವು ಮುಖ್ಯ. ಈ ಕಾವ್ಯಗಳ ವಿಷಯ ಹೆಚ್ಚಾಗಿ ಹೇಳಬೇಕಾದದ್ದಿಲ್ಲ. ಕೇವಲ ಕವಿತೆಯೆಂದೇ ನೋಡಿದರೆ ಜೈಮಿನಿ ಭಾರತದ ಪದ್ಯಗಳೂ ಕುಮಾರವ್ಯಾಸನ ಪದ್ಯಗಳೂ ಅತ್ಯುತ್ತಮ ತರಗತಿಗೆ ಸೇರುತ್ತವೆ. ಸಂಸಾರದ ಚಿತ್ರವನ್ನು ಸ್ಫುಟವಾಗಿ ನೀತಿಬೋಧಕವಾಗಿ ಚಿತ್ರಿಸುವುದರಲ್ಲಿ ಕುಮಾರವ್ಯಾಸನಿಗಿಂತ ಹಿರಿಯ ಚಿತ್ರಕಾರರು ಇಲ್ಲವೆನ್ನಬಹುದು. ಅವನೇ ಹೇಳಿರುವಂತೆ, ಅವನ ಕಾವ್ಯವು ಅರಸುಗಳಿಗೆ ವೀರ, ದ್ವಿಜರಿಗೆ ವೇದಸಾರ, ಮಂತ್ರಿಗಳಿಗೆ ಬುದ್ಧಿಸಾರ, ಎಲ್ಲರಿಗೆ ಎಲ್ಲವೂ ಆಗಿದೆ. ಎಂದರೆ ಈ ಕಾವ್ಯವು ಕರ್ಣಾಟಕದ ಆಗಣ ಜೀವನದ ವಿಶ್ವಕೋಶವೆನ್ನಬಹುದು. ಕನಕದಾಸರ ಮೋಹನತರಂಗಿಣಿಯನ್ನು ನಾನು ಯಾವಾಗಲಾದರೂ ಸ್ವಲ್ಪ ಕೇಳಿದ್ದು ಎಷ್ಟೋ ಅಷ್ಟೆ. ಇದನ್ನು ಹೆಂಗಸರು ಹೇಳುತ್ತಾರೆ. ಇದರಲ್ಲಿ ಎಲ್ಲ ವಿಷಯವೂ ಬಂದಿರುವಂತೆ ಕಾಣುತ್ತದೆ. ಮುಖ್ಯ ಹೆಂಗಸರಿಗೆಂದೇ ಬರೆದುವಾದರೂ ಸಾಂಗತ್ಯಗಳು ನೀರಸವಾಗಿಯಾಗಲಿ ಅಸಡ್ಡೆಯಿಂದಲಾಗಲಿ ಬರೆದ ಕಾವ್ಯಗಳಲ್ಲ. ಜೈನಕವಿ ರತ್ನಾಕರನಿಂದ ರಚಿತವಾದ ಭರತೇಶ ವೈಭವ ಇಂಥ ಒಂದು ಕಾವ್ಯ. ಅದರ ವರ್ಣನೆಗಳು ಆಶ್ಚರ್ಯವಾಗುವಂತಿವೆ. ಯಾವ ವಿಷಯವನ್ನು ತೆಗೆದುಕೊಂಡರೂ ಕವಿ ಅದನ್ನು ಕೊನೆಮುಟ್ಟಿಸಿಬಿಟ್ಟಿದಾನೆ. ನಾಟಕದ ವಿಚಾರ, ಆರೋಗಣೆಯ ವಿಚಾರ, ಸರಸದ ವಿಚಾರ, ಎಲ್ಲವೂ ಅಂದವಾಗಿ ಬಂದಿದೆ. ಮುಖ್ಯ ಈ ಕಾವ್ಯವನ್ನು ಚೆನ್ನಾಗಿ ಓದಿದರೆ ಆಗಿನ ಜನರಿಗೆ ಸಂಪೂರ್ಣವಾದ ಪ್ರಪಂಚ ಜ್ಞಾನ ಉಂಟಾಗುತ್ತಿತ್ತೆಂದು

ತೋರುತ್ತದೆ. ಭರತೇಶವೈಭವವನ್ನು ದಿನವೂ ಹೇಳಿ ಕೇಳಿ ಕಂಡಿದ್ದ ಹೆಂಗಸರೂ ಗಂಡಸರೂ ಸಂಸಾರದಲ್ಲಿ ಹೇಗೆ ನಡೆಯಬೇಕೆಂಬುದನ್ನು ಕಲಿಯುತ್ತಿದ್ದರೆಂದು ನಾವು ಖಂಡಿತವಾಗಿ ಹೇಳಬಹುದು. ಹೀಗೆಯೇ ಕುಮಾರವ್ಯಾಸನ ಭಾರತವನ್ನುಓದಿ ಕೇಳಿ ಧರ್ಮನ ನಡತೆ ಶ್ರೀಕೃಷ್ಣನ ನಡತೆಯನ್ನು ಕುರಿತು ಯೋಚಿಸಿಯೇ ನಮ್ಮ ಜನರು ಗ್ರಾಮಗಳಲ್ಲಿ ಗಂಭೀರವಾಗಿ ಮರ್ಯಾದೆಯಿಂದ ನಡೆದುಕೊಳ್ಳುವುದನ್ನು ಕಲಿಯುತ್ತಿದ್ದರು. ಈ ಭಾರತದಲ್ಲಿ ಶ್ರೀಕೃಷ್ಣನು ಹಿರಿಯ ನಾಯಕನಂತೆ ಆಡುವ ಮಾತುಗಳೆಲ್ಲ ಕರ್ಣಾಟಕದ ಯಾವನೊಬ್ಬ ದೊಡ್ಡ ಮನುಷ್ಯನು ಆಡುವ ಮಾತುಗಳೆಂದೇ ಭಾವಿಸುವುದು ಸಾಧ್ಯವಾಗುತ್ತದೆ. ಮಾತಿನ ರೀತಿ ಹಾಗಿದೆ. ಹೀಗೆ ಈ ಕಾವ್ಯಗಳಲ್ಲಿ ಕವಿಗಳು ಜನದ ನಡತೆಯನ್ನು ಚಿತ್ರಿಸಿದರಲ್ಲದೆ ಅವುಗಳಿಂದ ಜನರಿಗೆ ನೀತಿಯ ಆದರ್ಶಗಳನ್ನು ಮಾಡಿಟ್ಟರು.

## ಜನದ ಲಾವಣಿ ಸಾಂಗತ್ಯಗಳು

ವಿದ್ಯಾವಂತರು ಈ ರೀತಿಯಲ್ಲಿ ಕೆಲಸಮಾಡುತ್ತಿರುವ ಜನರಲ್ಲಿ ಅರಿವಿನ ಸಂಪ್ರದಾಯ ಜೀವಂತವಾಗಿರುತ್ತದೆ. ಹೀಗೆ ಜೀವಂತವಾಗಿರುವ ಜನರಲ್ಲೆಲ್ಲ ವಿದ್ಯಾವಂತರು ಕಾವ್ಯಗಳನ್ನು ರಚಿಸುತ್ತಿರುವಂತೆಯೇ ಅವಿದ್ಯಾವಂತರೂ ರಚಿಸುತ್ತಿರುತ್ತಾರೆ. ಅನೇಕ ಸಂದರ್ಭದಲ್ಲಿ ವಿದ್ಯಾವಂತರು ಜನರಿಗೆ ಬೇಕಾದ ಕಾವ್ಯಗಳನ್ನು ರಚಿಸದೆಹೋದರೂ ಅವಿದ್ಯಾವಂತರೇ ಆ ಕೆಲಸವನ್ನು ಮಾಡಿಕೊಳ್ಳುತ್ತಾರೆ. ಹೀಗೆ ಇಂಗ್ಲೀಷ್ ಸಾಹಿತ್ಯದಲ್ಲಿ ೧೫ನೇ ಶತಮಾನದಲ್ಲಿ ಸಾಂಗತ್ಯಗಳು ಅನೇಕವಾಗಿ ರಚಿತವಾದುವು. ಹೀಗೆ ನಮ್ಮ ಸೀಮೆಯಲ್ಲಿ ಎಲ್ಲ ಕಡೆಯಲ್ಲೂ ಕಾವ್ಯ ರಚನೆ ಆಗಿದೆ. ಈ ವಿಷಯವನ್ನು ಕುರಿತ ಒಂದು ಉಪನ್ಯಾಸದಲ್ಲಿ ನಾನು ಕೋಲಾರ ತುಮಕೂರು ಕಡೆಯ ಮುದ್ದಲಗುಮ್ಮನ ತೆಲುಗು ಪದಗಳನ್ನೂ, ಮೈಸೂರಿನ ಕಡೆಯ ಗಂಜಾಂ ಲಾವಣಿ, ಧಾರವಾಡದ ಕಡೆಯ "ಗೆಳತಿ ಕರೆಯುತಾಳೆ" "ಕರ್ಣಾಟಕದ ಹೆಣ್ಣೇ", ಚಿಕ್ಕಮಗಳೂರಿನ ಕಡೆಯ ಮಲೆನಾಡಿನ ಲಾವಣಿಗಳು, ಸೀರ್ಯದ ಕಡೆಯ ಜೋಗಿಯ ಭಾರತದ ಹಾಡು ಇಂಥ ಹಲವು ಕವಿತೆಗಳನ್ನು ಕುರಿತು ಪ್ರಸ್ತಾಪ

ಮಾಡಿದೇನೆ. ಈಚೆಗೆ ಮುದ್ದಲಗುಮ್ಮನ ಪದಗಳು ಇನ್ನೂ ಕೆಲವನ್ನೂ ಇತರ ಪದ್ಯಗಳನ್ನೂ ಕೇಳಿದೇನೆ. ನಮ್ಮ ಮಿತ್ರರಾದ ಧಾರವಾಡದ ಗೆಳೆಯರ ಗುಂಪಿನ ಕವಿಗಳು ಉತ್ತರ ಕರ್ಣಾಟಕದ ಹಲವು ಪದ್ಯಗಳನ್ನು ಸಂಗ್ರಹಮಾಡಿ ಜಯಕರ್ಣಾಟಕದಲ್ಲಿ ಪ್ರಕಟಿಸಿದಾರೆ. ಸಂಪ್ರದಾಯ ಸಜೀವವಾಗಿದ್ದರೆ ಕಾವ್ಯ ಬಂದರೂ ಬಾರದಿದ್ದರೂ ಕವನ ನಿಲ್ಲದೆ ನಡೆಯುತ್ತದೆ. ಕೆಲವು ವರ್ಷಗಳ ಹಿಂದೆ ಕೊರಟಗೆರೆಯಲ್ಲಿ ಶಾಸ್ತ್ರಿಗಳೊಬ್ಬರು ಗುತ್ತಿಗೆಯ ಮನುಷ್ಯ ಗುತ್ತಿಗೆ ಧಾನ್ಯ ಸರಿಯಾಗಿ ಕೊಡದ ಸಂದರ್ಭದಲ್ಲಿ ಅಮಲ್ದಾರ್ ವೀರಾಸಾಮಿ ಮೊದಲಿಯಾರ್ರಿಗೆ ಅರ್ಜಿ ಬರೆಯಬೇಕಾದರೆ ಒಂದು ಕಗ್ಗ ಬರೆದರು. ಇದನ್ನು ನಾನು ಓದಿ ಕೇಳಿದೇನೆ. ಮೈಸೂರಲ್ಲಿ ಕರಿಬಸವಶಾಸ್ತ್ರಿಗಳೆನ್ನುವವರು ಮನೆಯಲ್ಲಿ ಕಳವಾಗಿ ಪೋಲೀಸಿನವರಿಂದ ವಸ್ತು ಪತ್ತೆಯಾಗಲಿಲ್ಲವೆಂದು ಶ್ರೀಮನ್ಮಹಾರಾಜರಿಗೆ ಅರ್ಜಿ ಹಾಕಬೇಕಾದರೆ ಷಟ್ಪದಿಯಲ್ಲಿ ಬರೆದರು. ಕವನ ಸಂಪ್ರದಾಯ ಜೀವಂತವಾಗಿರುವ ಕಡೆಯಲ್ಲೆಲ್ಲ ಜನದಲ್ಲಿಯೂ ಸಹಜವಾಗಿ ಕಾವ್ಯ ಸೃಷ್ಟಿಯಾಗುತ್ತಿರುತ್ತದೆ. ಜನಸಾಮಾನ್ಯದ ಕಾವ್ಯವೆಂದಮಾತ್ರಕ್ಕೆ ಕವನ ಸಾಮಾನ್ಯವೆಂದು ಭಾವಿಸಬೇಕಾದದ್ದಿಲ್ಲ. ಜನದ ಬದುಕು ವಾಸ್ತವವಾಗಿ ನಡೆದಷ್ಟು, ಜನದ ನಯ ಆಳವಾಗಿ ಇಳಿದಷ್ಟು, ಜನದ ನುಡಿಗೆ ಭಾವ ವ್ಯಂಜನೆಯ ಶಕ್ತಿಯೂ ಸೊಗಸೂ ನೆರೆಯುವುವು. ಧಾರವಾಡದ ಕಡೆಯ ಒಂದು ಪದ್ಯವನ್ನು ಉದಹರಿಸಿ ಈ ವಿಷಯವನ್ನು ವ್ಯಕ್ತಪಡಿಸಬಹುದು. "ಜನಕರಾಯನ ಮಗಳು ವನಕೆ ತೊಟ್ಟಿಲಕಟ್ಟಿ ಕುಶಲವರನಿಟ್ಟು ತೂಗ್ಯಾಳೋ ಸೀತಾದೇವಿ ನಗುತೆ ವನವಾಸ ಕಳೆದಾಳೋ." ಜನಕರಾಯನು ಮಗಳು ಎನ್ನುವಲ್ಲಿ ಕವಿ ಆಕೆಯ ತೌರಸೌಭಾಗ್ಯವೆಂತದೆಂದು ಸೂಚಿಸುತ್ತಾನೆ. ದಶರಥರಾಯನ ಸೊಸೆ ಎಂದು ಹೇಳಿಲ್ಲ; ಸೊಸೆಗೆ ಮಾವನ ಹಿರಿಮೆಯಲ್ಲಿ ಭಾಗವಿದೆ ಎಂದು ಹೇಳುವುದಕ್ಕಾಗುವುದಿಲ್ಲ. ಆದರೆ ಯಾವ ಹೆಣ್ಣುಮಗುವಿಗೂ ತೌರುಮನೆಯ ಕನಿಕರ ಬೆನ್ನ ಹಿಂದೆಯೇ ಬರುತ್ತದೆ. ಇದು ನಮ್ಮ ನಾಡು ನಮ್ಮ ಮನೆಗಳ ಸಂಪ್ರದಾಯವನ್ನು ಸೂಚಿಸುತ್ತದೆ. ಇಂಥ ಐಶ್ವರ್ಯದ ಮಗಳು ವನಕೆ ತೊಟ್ಟಿಲ ಕಟ್ಟಿದಳಂತೆ. ಕಂಬಕ್ಕೆ ಸಂಸಾರ ಮಾಡುವುದೇ ಎನ್ನುವಂತೆ ವನಕ್ಕೆ

ತೊಟ್ಟಿಲು ಕಟ್ಟುವುದು ಎನ್ನುವಲ್ಲಿ ಕನ್ನಡ ನುಡಿಯ ಒಂದು ಹದಿರು ಕಾಣುತ್ತದೆ. ಮಾತಿನ ಅರ್ಥ ಅಗಾಧವಾಗಿಹೋಗುತ್ತದೆ. ಅರಮನೆಗೆ ಅಲ್ಲ ವನಕ್ಕೆ; ಮರಕ್ಕೆ ಅಲ್ಲ ವನಕ್ಕೆ; ಇಂದು ಒಂದು ಮರ, ನಾಳೆ ಒಂದು ಮರ. ಅಲ್ಲದೆ ಉದ್ಯಾನದಲ್ಲಿ ಗಾಳಿ ಬೀಸುವಂತೆ ವಿನೋದ ವಾಗಿರುವಂತೆ ಮರಕ್ಕೆ ಎಂದು ಎಣಿಸಬಾರದು. ವನಕ್ಕೆ; ಕಾಡಿಗೆ; ಕಾಡಿನಲ್ಲಿ ವಾಸಮಾಡುವ ಇರುಳಿಗ ಸೋಲಿಗರಂತೆ ಅಥವಾ ಮನೆ ಯಿಲ್ಲದೆ ಅಲೆಯುವ ಕೊರಮ ಕೊರಚ ಹಂದಿಜೋಗಿಗಳಂತೆ, ಈ ರಾಜ ಪುತ್ರಿ ಮಗುವನ್ನು ತೂಗುವ ತೊಟ್ಟಿಲನ್ನು ಕಾಡಿನ ಮರಕ್ಕೆ ಕಟ್ಟಿದಳು. ಅದರಲ್ಲಿ ಕುಶಲವರನ್ನಿಟ್ಟು ತೂಗಿದಳು ಎಂದರೆ ತನ್ನ ನೋವನ್ನು ಬಹಳ ನೆನೆದಿರಬೇಕಲ್ಲವೆ? ಇಲ್ಲ. ತನ್ನ ಮಕ್ಕಳೆರಡನ್ನೂ ಆ ತೊಟ್ಟಿಲಲ್ಲಿಟ್ಟು ತೂಗುತ್ತ—ತೂಗಲು ಚೀಟಿಯಿಲ್ಲ, ಇದ್ದರೂ ಈಕೆ ಬಿಡುತ್ತಾ ಇರಲಿಲ್ಲ, ಮಾತೆಯ ಮಮತೆ ಹಿರಿದು—ನಗುತ ವನವಾಸ ಕಳೆದಳು. ಮಕ್ಕಳನ್ನು ನೋಡುತ್ತಾ ನೋವನ್ನು ಮರೆಯಿಸಿಕೊಂಡಳು. ನಗು ಮಾತ್ರ ಕಾಣು ತ್ತಿತ್ತು. ಕವಿ ಮೊದಲಲ್ಲಿ ಕತ್ತಲ ತೆರೆಯನ್ನು ಬರೆದು ಅದರ ಮೇಲೆ ಲೋಕಮಾತೆಯ ಈ ಹಸನ್ಮುಖವನ್ನು ಹಚ್ಚಿದಾನೆ. ಆ ನಗೆಯ ಹಿಂದೆ ಹಿರಿದಾದ ಅಳಲು ಕಾಣುತ್ತಿದೆ. ಇಲ್ಲಿ ಕಾಣುವ ಭಾವನೆಯ ಸೊಗಸೂ ಮಾತಿನ ಚಾತುರ್ಯವೂ ಅಸಾಧಾರಣವಾದುವು. ಇಂಥ ಅಸಾಧಾರಣ ವಾದ ಕಾವ್ಯಶಕ್ತಿ ನಮ್ಮಲ್ಲಿ ಸಾಧಾರಣವಾಗಿತ್ತು ಎನ್ನುವುದು ನಾಡ ಪದಗಳನ್ನು ನೋಡಿದವರಿಗೆಲ್ಲ ಕಾಣುವುದು. ಗೆಳೆಯರ ಗುಂಪಿನಿಂದ ಪ್ರಕಟವಾಗಿರುವ ಪದ್ಯಗಳಲ್ಲಿ ನಮ್ಮ ನಾಡ ಹೆಣ್ಣುಮಕ್ಕಳ ಮನಸ್ಸು ಎಷ್ಟು ಅಚ್ಚ ಎಷ್ಟು ಎಳಸು ಎಷ್ಟು ಸರಸ ಎನ್ನುವುದು ತಿಳಿಯುತ್ತದೆ; ನಮ್ಮ ನಾಡ ತಾಯಂದಿರು ತಮ್ಮ ಮಕ್ಕಳನ್ನು ಎಷ್ಟು ಪ್ರೀತಿಯಿಂದ ಕಾಣುತ್ತಾರೆ, ಅವಕ್ಕಾಗಿ ಎಷ್ಟು ಕಷ್ಟವನ್ನು ಸಹಿಸುತ್ತಾರೆ, ಅವು ಗಳಲ್ಲಿ ಎಷ್ಟು ಸುಖಗಳನ್ನು ಕಾಣುತ್ತಾರೆ ಎನ್ನುವುದು ತಿಳಿಯುತ್ತದೆ; ಗಂಡನಿಗೆ ಹೆಂಡತಿಯಲ್ಲಿ ಹೆಂಡತಿಗೆ ಗಂಡನಲ್ಲಿ ಎಷ್ಟು ಹಿರಿದಾದ ಪ್ರೇಮ ವಿರುತ್ತದೆ ಎಂಬುದು ಕಾಣುತ್ತದೆ. ಇದೆಲ್ಲಾ ವರ್ಣಿಸಲ್ಪಟ್ಟಿರುವ ಮಾತು ದಿನದ ಬಳಕೆಯ ಮಾತು; ಅರ್ಥಯುಕ್ತವಾದದ್ದು; ತಿಳಿವಿನಿಂದ

ಉಪಯೋಗಿಸಲ್ಪಟ್ಟಿದೆ. ಈ ಪದ್ಯಗಳಲ್ಲಿ ಉದಾರವಾದ ಭಾವನೆಗಳು ಆಳವಾದ ರಾಗಗಳು ಇರುವಂತೆ ನಯವಾದ ಪರಿಹಾಸ್ಯವೂ ಸೇರಿದೆ. ನಮ್ಮ ನಾಡ ಸಾಂಗತ್ಯಗಳು ಅನೇಕವೇಳೆ ನೀತಿಬೋಧೆಗಾಗಿ ಕೆಲವು ವೇಳೆ ಸಂಪ್ರದಾಯದ ಕತೆಗಳನ್ನು ಹೇಳುವುದಕ್ಕಾಗಿ ಉಪಯೋಗಿಸಲ್ಪಟ್ಟಿವೆ. ಎಲ್ಲಮ್ಮನ ಕತೆಯೆಂದು ಮಲೆನಾಡಿನಲ್ಲಿ ವಾಡಿಕೆಯಾಗಿರುವ ಕತೆ ಜನರಿಗೆ ದಾನಶೀಲತೆಯನ್ನು ಕಲಿಸುವುದಕ್ಕೆ ಬರೆಯಲ್ಪಟ್ಟಿತು ಎಂದು ಅದರಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಮುದುಕಿ ಮಗನ ಕತೆ ಎನ್ನುವುದರಲ್ಲಿ ಒಬ್ಬ ಅಕ್ಕ ತಮ್ಮನ ಮೈಮೇಲಿದ್ದ ಚಿನ್ನದ ಕಾಪಿನ ಆಸೆಗಾಗಿ ಅವನನ್ನು ಕೊಂದು ಅಧಿಕಾರಿಗಳ ಕೈಗೆ ಸಿಕ್ಕಿಕೊಳ್ಳುವ ವಿಷಯವನ್ನು ಹೇಳಿದೆ. ಸರಕಾರ ಇದೆ, ತಪ್ಪುಮಾಡಿದವರನ್ನು ದಂಡಿಸುತ್ತದೆ ಎಂದು ತಿಳಿಸುವುದೇ ಇದರ ಉದ್ದೇಶ. ಈಚೆಗೆ ನಾನು ನೋಡಿದ ದೊಂಬರ ಚೆನ್ನಿ ಎಂಬದೊಂದು ನಾಡಗೀತೆಯಲ್ಲಿ ರಾಜನ ಗುರು ದೊಂಬರ ಹುಡುಗಿ ಚೆನ್ನಿಯನ್ನು ಮೋಹಿಸಿ ಅವಳ ಜೊತೆಗೆ ಹೊರಟುಹೋಗಲು ದೊರೆಯೂ ಅವನ ಹಿಂದೆಯೇ ಹೋದನೆಂದೂ ಆಮೇಲೆ ಪ್ರಸಾದವನ್ನು ಕೇಳಿ ತೆಗೆದುಕೊಳ್ಳಲಾಗಿ ಗುರುವೂ ಗುರುಪ್ರೇಯಸಿ ಚೆನ್ನಿಯೂ ಈಶ್ವರ ಪಾರ್ವತಿಯರೆಂದು ತಿಳಿಯಿತೆಂದೂ ಹೇಳಿದೆ. ಇದರ ಉದ್ದೇಶ ಗುರುವಿನಲ್ಲಿ ಹೆಚ್ಚು ನಂಬಿಕೆಯಿರಬೇಕು ಎನ್ನುವುದನ್ನು ಕಲಿಸುವುದು. ಜನರು ಕಲಿತದ್ದು ಈ ಜನತೆಯ ಕೃತಿಯಲ್ಲಿ ರೂಪುಗೊಂಡು ಇತರ ಜನಕ್ಕೆ ಅದೇ ಕಲಿವು ಸುಲಭವಾಗಿರುವುದು ಇಲ್ಲಿ ನಮಗೆ ಕಾಣುವುದು.

## ಊರುಗಳ ಹೆಸರುಗಳು

ಪ್ರವಾಹದಿಂದ ನೆಲದಮೇಲೆ ಬರುವ ಎಕ್ಕಲು ಮಣ್ಣಿನಂತೆ ಇಂತ ಕೃತಿ ಜನರ ಬದುಕಿನಲ್ಲಿ ಉತ್ತಮ ಫಲಕ್ಕೆ ಕಾರಣವಾಗುತ್ತದೆ. ಇದೇ ರೀತಿಯಲ್ಲಿ ಸದಾ ಜನರ ಮನಸ್ಸನ್ನು ಹಿರಿಯ ಸಹವಾಸದಲ್ಲಿಟ್ಟು ಅವರ ಅಂತಸ್ತನ್ನೇ ಹೆಚ್ಚಿಸತಕ್ಕ ಒಂದು ಸೊಗಸು ನಮ್ಮ ಸೀಮೆಯ ಊರ ಹೆಸರುಗಳಲ್ಲೂ ಕಾಣುತ್ತದೆ. ನಾನು ಬೇರೆ ಒಂದು ಸಂದರ್ಭದಲ್ಲಿ ನಮ್ಮ ಸೀಮೆಯ ಲೇಪಾಕ್ಷಿ, ಮದಲಿಂಗನ ಕಣಿವೆ, ಬಂದಳಿಕೆ ಎಂಬ ಮೂರು

ಸ್ಥಳಗಳ ಹೆಸರುಗಳನ್ನು ಕುರಿತು ಕತೆಗಳನ್ನು ಹೇಳಿದೇನೆ. ಹೀಗೆಯೇ ತಿರುಗಣ ಎಂಬ ಹಳ್ಳಿಯನ್ನು ಕುರಿತು, ಅಂತರಗಂಗೆಯನ್ನು ಕುರಿತು, ಬಾಬಾಬುಡನ್‌ಗಿರಿ, ಮಾರ್ಕಂಡೇಯನ ಗುಡ್ಡ, ಖಾಂಡ್ಯ, ಬಸವನಗುಡಿ, ನಿಜಗಲ್‌ದುರ್ಗ, ಚಿತ್ರದುರ್ಗ ಮುಂತಾದ ಅನೇಕ ಊರುಗಳನ್ನು ಕುರಿತು ಧಾರ್ಮಿಕ ಐತಿಹಾಸಿಕ ಕತೆಗಳು ಹಲವು ಜನರಲ್ಲಿ ವಾಡಿಕೆಯಾಗಿವೆ. ಇವುಗಳಂತೆ ಬೇರೆ ಕಾರಣಗಳಿಂದ ಸೊಗಸಾದ ಇತರ ಹೆಸರುಗಳು ಅನೇಕ ಇವೆ. ಅರಳಮಲ್ಲಿಗೆ, ಮಲ್ಲಿಗೆವಾಳು, ಕುಡುಮಲ್ಲಿಗೆ, ಮಲ್ಲಿಗೇನಹಳ್ಳಿ; ಈ ಹೆಸರುಗಳನ್ನು ಇಟ್ಟ ಜನರು ಮಲ್ಲಿಗೆ ಎನ್ನುವ ಮಾತನ್ನು ನುಡಿಯುವುದರಲ್ಲಿ ನಾಲಗೆಗೆ ಇರುವ ಸುಖವನ್ನೂ, ಮಲ್ಲಿಗೆ ಎಂಬ ಮಾತಿನಿಂದ ಮನಸ್ಸಿನ ಮುಂದೆ ಬರುವ ಚಿತ್ರದ ಸೊಗಸನ್ನೂ, ಮಲ್ಲಿಗೆಯ ಭಾವನೆಯಿಂದ ಆತ್ಮಕ್ಕೆ ಉಂಟಾಗುವ ಶುದ್ಧ ಪರಿತೃಪ್ತಿಯನ್ನೂ ಬಲ್ಲವರು. ಇದನ್ನು ಹೇಳುವ ಜನರು ತಿಳಿದೋ ತಿಳಿಯದೆಯೋ ಆ ಹೆಸರಿಂದ ಬರುವ ಸಂಸ್ಕೃತಿಯಲ್ಲಿ ಭಾಗಿಗಳಾಗುತ್ತಾರೆ. ಹೀಗೆಯೇ ಸೊಗಸಾಗಿರುವ ಹೆಸರುಗಳು, ಇಲ್ಲಿ ಸಿರಿವಾಸಿ, ಇಲ್ಲಿ ಸಿರಿಯಂಗಳ, ಇಲ್ಲಿ ಸಿರಿವಂತೆ, ಇಲ್ಲಿ ಸಿರಿಯೂರು; ಸೊಗದವಾಣಿ, ಮಾದಲ, ಹಿಪ್ಪಲ; ಪೂನಾಡು, ಬೆಳವಲ, ಸಂಪಿಗೆ; ಅಮೃತಾಪುರ, ಅಮೃತೂರು. ಈ ಹೆಸರುಗಳಲ್ಲಿ ಬಹಳ ಸೊಗಸಡಗಿದೆ. ಇದರಿಂದೆಲ್ಲ ನಮ್ಮ ಜನರಲ್ಲಿ ಪೂರ್ವದ ಸಂಸ್ಕೃತಿಯ ನೆನವು ನಿಂತಿದೆ.

ಈ ಹೆಸರುಗಳಿಂದ ದೊಡ್ಡವರಲ್ಲೂ ತಿಳಿದವರಲ್ಲೂ ಹಿರಿಯ ಸಂಸ್ಕಾರವುಂಟಾಗುತ್ತದೆಯೇ? ರಾಮಾಯಣದ ಕತೆಯನ್ನು ಓದಿ ತಿಳಿಯಬಲ್ಲ ಜನಕ್ಕೆ ರಾಮಾಯಣದ ಕತೆಗೆ ಸಂಬಂಧಪಟ್ಟ ಹೆಸರುಗಳಿಂದ ಆಗಬೇಕಾದ ಪ್ರಯೋಜನವೇನು ಎಂದು ಕೆಲವರಿಗೆ ತೋರಬಹುದು. ರಾಮಾಯಣವನ್ನು ಸ್ವತಃ ಓದಬಲ್ಲವರಿಗೆ ಆ ಓದುವ ವಯಸ್ಸು ಬಂದಾಗ್ಗೆ ಇಂಥ ಹೆಸರಿನಿಂದ ಪ್ರಯೋಜನವಿರುತ್ತದೆಯೋ ಇಲ್ಲವೋ ಹೇಳಲಾಗುವುದಿಲ್ಲ. ಕೆಲವರಿಗೆ ಆಗುತ್ತದೆ; ಕೆಲವರಿಗೆ ಇಲ್ಲ. ರಾಮಾಯಣದಲ್ಲಿ ಮಾತ್ರ ಓದಿದಾಗ ಸೀತಾದೇವಿ ಮನಸ್ಸಿಗೆ ದೈವೀ ಸ್ತ್ರೀಯಾಗಿ ಕಾಣಬಹುದು. ನಮ್ಮೂರ ಹೊಳೆಯ ಬಳಿ ಆಕೆ ಇಲ್ಲಿ ಸ್ನಾನಮಾಡಿದರು,

ಆಗಿನಿಂದ ನೀರು ಇಲ್ಲಿ ನೋಡಿ, ಅರಿಸಿನದ ಬಣ್ಣದಿಂದ ಹರಿಯುತ್ತದೆ ಎಂದರೆ ಸೀತಮ್ಮ ನಮ್ಮ ಮನಸ್ಸಿಗೆ ಇನ್ನು ಸ್ವಲ್ಪ ಹತ್ತಿರ ಬರುತ್ತಾರೆ. ಇದು ಹೇಗಾದರೂ, ತಿಳಿಯದ ಜನಕ್ಕೆ ಮಕ್ಕಳಿಗೆ ಇಂಥ ಕತೆಗಳಿಂದ ಮನಸ್ಸು ವಿಕಾಸವಾಗುವುದೆನ್ನುವುದರಲ್ಲಿ ಸಂದೇಹವಿಲ್ಲ. ಅರಿತವರಿಗೆ ಕಟ್ಟುಕತೆಯಾಗಿ ಕಾಣತಕ್ಕದ್ದು ಇಂತಹ ಸರಳ ಮತಿಗಳಿಗೆ ನಿಜವಾದ ಚರಿತ್ರೆಗಿಂತಲೂ ಹೆಚ್ಚು ನಿಜವಾಗಿ ಕಾಣುತ್ತದೆ. ಬಾಲ್ಯದಿಂದ ಜನದ ಊಹೆ ಇಂಥ ಹಿರಿಯ ವ್ಯಕ್ತಿಗಳನ್ನು ಕುರಿತು ಚಿತ್ರಗಳನ್ನು ಮಾಡಿಕೊಳ್ಳುತ್ತಾ ಪರಿಶುದ್ಧವಾಗುತ್ತದೆ. ಇದರಿಂದ ಬದುಕು ಪರಿಷ್ಕಾರವಾಗುತ್ತದೆ. ನಾವು ಹುಟ್ಟಿ ಬೆಳೆದ, ನಾವು ಓಡಿಯಾಡಿದ ದೇಶದ ವಿಷಯವಾಗಿ ನಮ್ಮಲ್ಲಿ ಮಮತೆ ಬೆಳೆಯುವುದಕ್ಕೆ ಇದೆಲ್ಲ ಕಾರಣ. ಈ ಸ್ಥಳಗಳನ್ನು ಕುರಿತ ಪ್ರೇಮವು ದೇಶಲತೆಯ ಕೊಡಿಗಳಂತೆ ನಮ್ಮ ಹೃದಯವನ್ನು ಸುತ್ತಿಕೊಂಡು ನಾಡೆಂದ ಮಾತ್ರಕ್ಕೆ ಅದನ್ನು ಹಿಡಿದು ಅಲುಗಿಸುತ್ತದೆ. ಇವುಗಳ ನೆನವು ನಮ್ಮ ನಾಡ ಗಾಳಿಯಲ್ಲಿ ಕಸ್ತೂರಿಯ ಗಂಧದಂತೆ ಹರಡಿ ಎಲ್ಲಾ ವೇಳೆಯಲ್ಲಿಯೂ ಸೌಖ್ಯವನ್ನುಂಟುಮಾಡುತ್ತದೆ.

## ಜನಸಾಮಾನ್ಯದ ಕಾವ್ಯಗಳು

ಸಣ್ಣ ಪದ್ಯಗಳಲ್ಲಿ ಊರ ಹೆಸರುಗಳಲ್ಲಿ ಕಾಣುವ ಇದೇ ಸಂಸ್ಕೃತಿ ಸಾಮಾನ್ಯ ಜನರ ಕಾವ್ಯಗಳನ್ನೂ ರಚಿಸಿದೆ. ಇದಕ್ಕೆ ಎರಡು ಉದಾಹರಣೆಗಳನ್ನು ಹೇಳಬಹುದು. "ಧರಣಿಮಂಡಲ ಮಧ್ಯದೊಳಗೆ ಮೆರೆಯುತಿಹ ಕರ್ಣಾಟದೇಶದಿ ಇರುವ ಕಾಳಿಂಗನೆಂಬ ಗೊಲ್ಲನ ಪರಿ" ಯನ್ನು ನಾವೆಲ್ಲ ಕೇಳಿದ್ದೇವೆ. ಈ ಸಣ್ಣ ಕಾವ್ಯದಲ್ಲಿ ಉತ್ತಮ ಕಾವ್ಯದ ಎಲ್ಲಾ ಲಕ್ಷಣಗಳೂ ಕಾಣುತ್ತವೆ. ಈ ಕವಿ ಹಳ್ಳಿಯ ಮಾಳದ ಎಳೆಯ ಮಾವಿನ ಮರದ, ಇನ್ನೂ ಇದೇ ರೀತಿಯ ಇತರವಾದ, ಪ್ರಕೃತಿ ಸೌಂದರ್ಯವನ್ನು ಬಲ್ಲನು; ಹಿರಿಯ ನಡತೆಯನ್ನು ಬಲ್ಲನು. ಸತ್ಯವೆಂಬುದು ತಾಯಿತಂದೆ ಸತ್ಯವೆಂಬುದು ಬಂಧುಬಳಗ ಎನ್ನುತ್ತಾನೆ. ಈ ಕಾವ್ಯದ ಹಸು ಕೊಟ್ಟ ಭಾಷೆಯನ್ನು ತಪ್ಪಲಾರದು. ಇವನಿಗೆ ಹಸುಗಳೆಂದರೆ ಬಹಳ ಪ್ರೀತಿ. ಗಂಗೆ ಬಾರೇ ಗೌರಿ ಬಾರೇ ತುಂಗಭದ್ರೆ ನೀನು

ಬಾರೇ ಎಂದು ಇವನು ಹಸುಗಳನ್ನು ಅಚ್ಚುಮೆಚ್ಚಾಗಿ ಕರೆಯುತ್ತಾನೆ. ಕತೆಯನ್ನು ಹೇಳುತ್ತಾ ನಮ್ಮ ಮನಸ್ಸನ್ನು ಹಿಂಡುವುದು ಇವನಿಗೆ ಸುಲಭ ವಾಗಿದೆ. ತಾಯಿ ಕರುವಿಗೆ ಹೇಳುವ ಮಾತೂ ಜೊತೆಯ ಹಸುವಿಗೆ ಹೇಳುವ ಮಾತೂ, ಕರು ತಾಯಿಗೆ ಹೇಳುವ ಮಾತೂ ಕರುಳನ್ನು ನುಲಿ ಸುತ್ತವೆ. ಕಾವ್ಯದಲ್ಲಿ ಒಂದು ಭಾವನೆಯಾದರೂ ಸಹಜವಲ್ಲದ್ದಿಲ್ಲ. ಕವಿ ನೀತಿಯನ್ನು ಮುಖ್ಯವಾಗಿಟ್ಟು ಕತೆ ಬರೆದಿದ್ದಾನೆ. ಆದರೆ ಈ ನೀತಿ ಬೇಸರವಾಗುವಂತೆ ಮುಂದೆ ಬಂದು ಕತೆಯನ್ನು ಕೆಡಿಸಿಲ್ಲ. ಹಸುಗಳನ್ನು ಸಾಕಿ ಜೀವಿಸುವ ಜನಾಂಗದ ಮನಸ್ಸಿನ ಹಿರಿಯ ಗುಣಗಳನ್ನೆಲ್ಲಾ ಕವಿ ಇಲ್ಲಿ ಚಿತ್ರಿಸಿದ್ದಾನೆ. ಈ ಕಾವ್ಯ ತುರುಗಾಹಿ ಜನದ ಸಂಸ್ಕೃತಿಯ ಸಂಕ್ಷೇಪ ಕೋಶ. ಇದು ನಮ್ಮ ಜನರಲ್ಲಿ ಆದರಪಡೆದಿರುವುದನ್ನು ನೋಡಿದರೆ ಅವರ ಸಾಹಿತ್ಯಾಭಿರುಚಿ ಎಷ್ಟು ಶ್ರೇಷ್ಠವಾದದ್ದೆಂಬುದು ತಿಳಿಯುವುದು. ಹಾಗೆಯೇ ಅವರ ಮನಸ್ಸನ್ನು ಇದು ಎಷ್ಟು ಚೆನ್ನಾಗಿ ಚಿತ್ರಿಸಿರುವುದೆಂಬುದೂ ಕಾಣುವುದು. ಈ ಕತೆಯನ್ನು ಕೇಳದವರೇ ಇಲ್ಲ. ಈ ರೀತಿಯ ಸಾಹಿತ್ಯದಲ್ಲಿ ಸ್ವಲ್ಪ ದೊಡ್ಡ ಕಾವ್ಯಗಳ ಉದಾಹರಣೆಗಾಗಿ ಯಕ್ಷಗಾನ ನಳಚರಿತ್ರೆ ಎಂಬ ಒಂದು ಕೃತಿಯನ್ನು ಕುರಿತು ನಾಲ್ಕು ಮಾತನ್ನು ಹೇಳಬಹುದು. ಇದರಲ್ಲಿ ನಳದಮಯಂತಿಯರ ಕತೆ ಜನದ ಮನಸ್ಸಿಗೆ ತೋರುವ ರೀತಿಯಲ್ಲಿ ವರ್ಣಿಸಲ್ಪಟ್ಟಿದೆ. ನಳನು ರಾಜನು. ಆದರೆ ಅವನ ಮಾತೆಲ್ಲಾ ಹಳ್ಳಿಯ ರೀತಿಯ ಮಾತು. ಅವನ ಮಂತ್ರಿಯೂ ಹಳ್ಳಿಯ ಒಬ್ಬ ದೊಡ್ಡ ಮನುಷ್ಯ. ಹಂಸಗಳೂ ಕತೆಯ ರೀತಿಯವು. ಪಂಡಿತರಾದ ಕವಿಗಳು ಕೂಡಾ ಹಂಸಗಳನ್ನು ನೋಡಿಲ್ಲವೆಂದ ಮೇಲೆ ಈತನು ನೋಡಿಲ್ಲವೆಂದರೆ ಆಶ್ಚರ್ಯವೇನು? ಪಕ್ಷಿಯೊಂದು ಮರದ ಮೇಲೆ ಕುಳಿತಿರಲು ಅದನ್ನು ಹಿಡಿಯುವುದಕ್ಕೆ ನಳನು ಮಂತ್ರಿಯನ್ನು ಮರ ಹತ್ತು ಎನ್ನುತ್ತಾನೆ. ಸದ್ಯ ನಮ್ಮಲ್ಲಿ ಮಂತ್ರಿ ಕೆಲಸಕ್ಕೆ ಹಾಗಿರಲಿ ಸಾಮಾನ್ಯ ವಾದ ಒಂದು ತಾಲ್ಲೂಕಿನ ಯಜಮಾನಿಕೆಗೆ ಕೂಡ ಮರ ಹತ್ತುವುದರಲ್ಲಿ ಪರೀಕ್ಷೆಯಿಲ್ಲ. ಹಾಗೆ ಇದ್ದಿದ್ದರೆ ನಮ್ಮಲ್ಲಿ ಅನೇಕರಿಗೆ ಕೆಲಸ ಸಿಕ್ಕುತ್ತಿರಲಿಲ್ಲ. ಹೆಣ್ಣುಮಗಳು ಎಂತ ಅಲಕ್ಷ್ಯವೆಂತಲೋ ಸೊಸೆಯನ್ನು ಪ್ರೀತಿಯಿಂದ ಕಾಣುವುದಿಲ್ಲವೆಂತಲೋ ನಮ್ಮ ಸಂಸಾರಗಳ ರೀತಿಯ ಮಾತು

ಸಹಜವಾಗಿ ಅಲ್ಲಲ್ಲಿ ಬರುತ್ತದೆ. ಮಧ್ಯೆ ಒಂದು ಸ್ಥಳದಲ್ಲಿ ಕೊನೆಯಲ್ಲಿ ಒಂದು ಸ್ಥಳದಲ್ಲಿ ಕವಿ ತನ್ನ ಗುರುಗಳನ್ನು ಸ್ಮರಿಸಿ ತನ್ನ ಹೆಸರನ್ನು ಹೇಳುತ್ತಾನೆ. ಕೃತಿ, ಕಂದ, ವಚನ, ಯಾಲಪದ್ಯ, ಸೀಸಪದ್ಯ, ಸೊಬಗಿನ ಸೋನೆ ಮುಂತಾದ ಮಾದರಿ ಮಾದರಿಯ ಪದ್ಯಗಳು ಬರುತ್ತವೆ. ಮರಗಳು ದೊಡ್ಡ ಕಾವ್ಯದಲ್ಲಿರುವಂತೆ ಕಂಡದ್ದು ಕಾಣದ್ದು ಎಲ್ಲಾ ಬರುತ್ತವೆ. ವಿರಹವೂ ಶೃಂಗಾರವೂ ಕಾವ್ಯದ ರೀತಿಯವು. ಅಂತೂ ಕವಿ ಎಲ್ಲಿಯೂ ತಡೆಯದೆ ತನ್ನ ಕವಿತಾಶಕ್ತಿಯ ವಿಷಯದಲ್ಲಿ ಸಂದೇಹ ಸಂಕೋಚಗಳಿಲ್ಲದೆ ಧಾರಾಳವಾಗಿ ಬರೆಯುತ್ತಾನೆ. ಇಂಥ ಕತೆಗಳು ಅನೇಕ ಇವೆ. ಸಾಮಾನ್ಯಜನರು ಇವುಗಳನ್ನೇ ವಿಶೇಷವಾಗಿ ಓದುವುದು.

## ಗಾದೆಗಳು

ಜನದ ಮನಸ್ಸು ಕಾವ್ಯದಲ್ಲಿ ಕಾಣುವಂತೆ ಅವರ ಗಾದೆಗಳಿಂದಲೂ ಕಾಣುತ್ತದೆ. ಜನಾಂಗದಲ್ಲಿ ಪ್ರಚಾರದಲ್ಲಿರುವ ತಿಳಿವು ತಕ್ಕ ಮನಸ್ಸಿನಲ್ಲಿ ಬಿದ್ದಾಗ ನಾಲ್ಕು ಮಾತಿನಲ್ಲಿ ಘನಿಸಿ ಮುತ್ತಿನಂತಾಗುತ್ತದೆ. ಹಲವರ ಭಾವ ಒಬ್ಬನ ಮಾತಿನಲ್ಲಿ ಕಂಡು ಆ ಮಾತು ಹಲವರ ಮಾತಾಗುತ್ತದೆ. ಗಾದೆಗಳನ್ನು ನೋಡಿದರೆ ಜನಾಂಗದ ಮನಸ್ಸು ಎಂಥದೆಂದು ಊಹಿಸುವುದಕ್ಕೆ ಸಾಧ್ಯವಾಗುವುದಕ್ಕೆ ಇದೇ ಕಾರಣ. ನಮ್ಮ ಸೀಮೆಯ ಗಾದೆಗಳಲ್ಲಿ ಕಾಣುವ ಬುದ್ಧಿ ವೈಶಾಲ್ಯವು ಅದ್ಭುತವಾದದ್ದು. ಇವುಗಳಲ್ಲಿ ಕೆಲವು ಜನರ ಮೂಢ ಭಾವನೆಗಳನ್ನು ತಿದ್ದುವುದಕ್ಕೆ ಹೊರಟಿವೆ; ಇನ್ನು ಕೆಲವು ಜಾತಿಗಳ ತಪ್ಪುಗಳನ್ನು ತಿದ್ದುವುದಕ್ಕೆ ಹೊರಟಿವೆ; ಇನ್ನು ಕೆಲವು ಎಲ್ಲರಿಗೂ ಬುದ್ಧಿ ಹೇಳುವುವು, ಇನ್ನು ಕೆಲವು ಜನರ ಸ್ವಭಾವವನ್ನು ವರ್ಣಿಸುವುವು. ಎಲ್ಲದರಲ್ಲಿಯೂ ವಿಶಾಲವಾದ ಪ್ರಪಂಚಜ್ಞಾನವಿದೆ. ಅನೇಕ ಗಾದೆಗಳಲ್ಲಿ ಸರಸವಾದ ಹಾಸ್ಯವಿದೆ. ಇದು ಕಾಣುವಂತೆ ಇಲ್ಲಿ ಕೆಲವು ಉದಾಹರಣೆಗಳನ್ನು ಕೊಡಬಹುದು. ಜನರಿಗೆ ಕೆಲಸ ಮುಖ್ಯವಲ್ಲ; ಅದನ್ನು ಯಾರು ಮಾಡುತ್ತಾರೆ ಎನ್ನುವುದು ಮುಖ್ಯ. ಶಂಖದಿಂದ ಬಿದ್ದರೆ ತೀರ್ಥ. ಅಕ್ಕಸಾಲೆ ಕಿವಿ ಚುಚ್ಚಿದರೆ ನೊಚ್ಚಗೆ. ಅವನು ಕೆಡಿಸಿದರೂ ಸರಿಯೆ; ಇನ್ನು

ಯಾರಾದರೂ ಚುಚ್ಚಿದರೆ ಅದು ಸರಿಯಾಗಿದ್ದರೂ ಒಪ್ಪುವುದಿಲ್ಲ. ಕಾಸಿನ ಆಸೆಗೆ ಕಯ್ಯಲ್ಲಿದ್ದ ಸುಖವನ್ನು ಬಿಟ್ಟು ಎಲ್ಲೋ ಅಲ್ಪ ಸ್ವಲ್ಪ ಉಳಿಸಿ ಕೊಳ್ಳುವುದಕ್ಕೆ ದುಡ್ಡಿನ ಆಸೆಗೆ ಬೆಲ್ಲ ಮಾರಿ ಗೋಣಿಚೀಲ ನೆಕ್ಕಿದ ಎಂಬ ಗಾದೆ. ಸಾಮಾನ್ಯವಾಗಿ ಎಲ್ಲರೂ ನೆನೆದಿರಬೇಕಾದ ವಿವೇಕ "ಅಡಕೆಗೆ ಹೋದ ಮಾನ ಆನೆ ಕೊಟ್ಟರೂ ಬಾರದು", "ಕುಣಿಯೋಕೆ ನಿಂತಮೇಲೆ ಕೊನೆಮುಸುಕು ಯಾಕೆ", "ಕುಂತುಕೊಂಡು ಉಂಬುವ ನಿಗೆ ಕುಡಿಕೆಯ ಹಣ ಸಾಲದು", "ಗಂಡಸು ಕೂತು ಕೆಟ್ಟ, ಹೆಂಗಸು ತಿರುಗಿ ಕೆಟ್ಟಳು", "ತಾಯನ್ನು ನೋಡಿ ಮಗಳನ್ನ ತಕ್ಕೊ, ಹಾಲು ನೋಡಿ ಎಮ್ಮೆ ತಕ್ಕೊ", ಎಂಬ ಗಾದೆಗಳಲ್ಲಿ ಕಾಣುತ್ತದೆ. ಜಾತಿಗಳ ಬುದ್ಧಿಗಳು "ಅಕ್ಕನ ಚಿನ್ನ ಆದರೂ ಅಕ್ಕಸಾಲೆ ಟೊಣೆಯದೆ ಬಿಡ", "ಹಾರುವನ ಆಳಾಗಬೇಡ ಗಾಣಿಗನ ಎತ್ತಾಗಬೇಡ", "ಹೊಲೆಯ ನಿಗೆ ಒಲ್ಲಿ ಕೊಟ್ಟರೆ ಕಲ್ಲು ಕಟ್ಟಿ ಹರಿದ", "ಕಂಕುಳಲ್ಲಿ ಕುರುಸಲ್ಲ ಕೋಮಟಿಗನ ನೆರೆಸಲ್ಲ", ಮುಂತಾದ ಗಾದೆಗಳಲ್ಲಿ ಕಾಣುತ್ತವೆ. "ಕತ್ತೆ ಯಂತ ಅತ್ತೆ ಬೇಕು ಮುತ್ತಿನಂತ ತಾಯಿ ಬೇಕು" ಎಂಬ ಸೊಸೆಯ ಮಾತಿನಲ್ಲಿ ಹೆಣ್ಣುಮಕ್ಕಳ ಹಾರೈಕೆಗೆ ರೂಪು ಬಂದಿದೆ. "ನುಚ್ಚು ಉಂಡ ಮಗ ಇಚ್ಚೇಲಿ ಇದ್ದ, ತುಪ್ಪ ಉಂಡಳಿಯ ತಿಪ್ಪೇಲಿ ನಿಂತು ಬಗುಳಿದ" ಎಂಬ ಮಾತಿನಲ್ಲಿ ಮಗ ಅಳಿಯಂದಿರ ವ್ಯತ್ಯಾಸವನ್ನು ಹೇಳಿದೆ. "ಪೋಲೀಗೆ ತಾಲಿ ಕಟ್ಟಿದರೆ ಪೋಲಿ ಪೋಲಿ ತಾಲಿ ತಾಲಿ" ಎಂಬ ಮಾತಿನಲ್ಲಿ ಜನರ ಹುಟ್ಟು ಸ್ವಭಾವ ತಿದ್ದಿ ಚೆನ್ನಾಗಿ ಆಗುವುದಿಲ್ಲ ಎಂದು ಹೇಳಿದೆ. "ಅರಸನ ಚಿತ್ತ ಮರದ ನೆರಳು", "ಆದರೊಂದು ಅಡಿಕೇ ಮರ, ಹೋದರೊಂದು ಗೋಟಡಿಕೆ", "ಆಲಕ್ಕೆ ಹೂವಿಲ್ಲ ಸಾಲಕ್ಕೆ ಕೊನೆಯಿಲ್ಲ", "ತಂಗಳ ಉಂಡ ಬಡ್ಡಿ ಗಂಡನ ಹಸಿವು ಬಲ್ಲಳೇ", "ತಾಯಿ ಇದ್ದರೆ ತವರುಮನೆ ನೀರಿದ್ದರೆ ಬಾವಿ", "ನೀರಿನಲ್ಲಿರುವ ಕಪ್ಪೆ ಕುಡಿದರೂ ಕುಡಿಯಿತು, ಕುಡಿಯದಿದ್ದರೂ ಕುಡಿಯಿತು" ಎಂಬ ಗಾದೆಗಳಲ್ಲಿ ವಿಶಾಲವಾದ ಪ್ರಪಂಚಜ್ಞಾನ ಕಾಣುತ್ತದೆ. ಹಾಸ್ಯರಸ ಕಾಣುವ ಗಾದೆಗಳು ಮೇಲೆಯೇ ಕೆಲವು ಬಂದಿವೆ. "ಅಭ್ಯಾಸವಿಲ್ಲದ ಹಾರುವ ಹೋಮ

ಮಾಡಿ ಗಡ್ಡ ಮೀಸೆ ಸುಟ್ಟುಕೊಂಡ", "ಗಾಣಿಗನ ಸಂಗಡ ಹೊಡೆದಾಡಿ ಒಣರೊಟ್ಟಿ ತಿಂದನಂತೆ", "ಹನುಮಂತರಾಯ ಹಗ್ಗ ತಿನ್ನುವಾಗ ಪೂಜಾರಯ್ಯ ಶಾವಿಗೆ ಬೇಡಿದ", "ಅಜ್ಜಾ ಮದುವೆ ಎಂದರೆ ಯಾರಿಗೆ ಸಂಗಾ ಎಂದಂತೆ", ಎಂಬ ಗಾದೆಗಳಲ್ಲಿ ಈ ಹಾಸ್ಯ ಎಷ್ಟು ಸರಸವಾಗಿದೆ ಎಂದು ಕಾಣುವುದು. ಕೆಲವು ಗಾದೆಗಳಂತೂ ನಾಲ್ಕು ಮಾತಿನಲ್ಲಿ ಹೇಳಿರುವ ಕತೆಗಳಂತಿವೆ. "ಓಡಿಹೋಗೋ ಬಡ್ಡಿ ಹಾಲಿಗೆ ಹೆಪ್ಪು ಹಾಕುತಾಳೆಯೇ", "ಬೆಟ್ಟ ಎತ್ತಿ ತಲೆಯ ಮೇಲಿಟ್ಟರೆ ಎಷ್ಟು ದೂರ ಹೊತ್ತೇನೋ" ಎಂಬ ಗಾದೆಗಳು ಎರಡೂ ಎರಡು ಕತೆಯಾಗಿವೆ.

## ಈ ಸಂಸ್ಕೃತಿಯಲ್ಲಿ ಕಾಣುವ ಗುಣಗಳು

ಈ ಉಪನ್ಯಾಸದಲ್ಲಿ ಮೊದಲು ನಮ್ಮ ಜನದ ಸಂಸ್ಕೃತಿಯನ್ನು ಬೆಳೆಸಿದ ಹಲವು ಮತಗಳನ್ನುಸೂಚಿಸಿ ಆಮೇಲೆ ಅವುಗಳಿಂದ ಸಂಸ್ಕೃತಿ ಬೆಳೆದ ರೀತಿಯನ್ನು ಸ್ವಲ್ಪಮಟ್ಟಿಗೆ ವಿವರಿಸಿ ಅನಂತರ ಆ ಸಂಸ್ಕೃತಿ ಜನದ ಪದ್ಯಗಳಲ್ಲಿ ಕತೆಗಳಲ್ಲಿ ಗಾದೆಗಳಲ್ಲಿ ಹೇಗೆ ಕಾಣುತ್ತದೆಂಬುದನ್ನು ಸಂಕ್ಷೇಪವಾಗಿ ತೋರಿಸಿದ್ದಾಯಿತು. ಈಗ ಈ ಸಂಸ್ಕೃತಿಯ ಏರ್ಪಾಡಿನಲ್ಲಿ ತತ್ತ್ವಗಳಲ್ಲಿ ಕಾಣುವ ಗುಣದೋಷಗಳನ್ನು ಸ್ವಲ್ಪಮಟ್ಟಿಗೆ ಚರ್ಚೆ ಮಾಡಬಹುದು.

ಈ ಸಂಸ್ಕೃತಿಯ ಗುಣಗಳಲ್ಲಿ ಮೊದಲನೆಯದೆಂದರೆ ಅದು ಪ್ರವೃತ್ತಿಯ ದಾರಿಯನ್ನು ತೋರಿಸುವುದೆನ್ನುವುದು. ನೇತಿ ನೇತಿ ಎಂದು ಪರತತ್ತ್ವವನ್ನು ಅರಸುತ್ತ ಉಳಿದದ್ದೆಲ್ಲವನ್ನು ನಿರಾಕರಿಸುವುದು ಜ್ಞಾನದ ಮೇಲಣ ಮೆಟ್ಟಲುಗಳಲ್ಲಿ ಕೆಲವರಿಗೆ ಮಟ್ಟಿಗೆ ಸಾಧ್ಯವಾಗುವ ನಿಲುವು. ಸಾಮಾನ್ಯರಿಗೆ ಕೆಲವು ಗೊತ್ತಾದ ನಂಬಿಕೆಗಳಮೇಲೆ ಜೀವನದ ಅಸ್ತಿವಾರ ಹಾಕಿಕೊಡಬೇಕು. ಈ ಸಂಸ್ಕೃತಿಯಲ್ಲಿ ಈ ಗುಣ ಇದೆ. ದೇವರು ಇದಾನೆ; ಎಲ್ಲರನ್ನೂ ನೋಡಿಕೊಳ್ಳುತಿದಾನೆ; ಅವನ ಆಳ್ವಿಕೆಯಲ್ಲಿ ಸದ್ಯಕ್ಕೆ ಅಲ್ಲದಿದ್ದರೂ ಕೊನೆಗೆ ಸತ್ಯಕ್ಕೇ ಜಯ; ಸುಳ್ಳಿಗಲ್ಲ. ನಾವು ಸದಾ ಅವನ ಸಾನ್ನಿಧ್ಯದಲ್ಲಿದೇವೆ ಎಂಬುದನ್ನು ನೆನೆದು ಸರಿಯಾಗಿ ನಡೆದು ಕೊಳ್ಳಬೇಕು. ಇವೇ ಮೊದಲಾಗಿ ಜೀವನ ಪಥದಲ್ಲಿ ಸಹಾಯವಾಗುವ

ಹಲವು ತತ್ತ್ವಗಳು ಈ ಸಂಸ್ಕೃತಿಯಲ್ಲಿ ಮುಖ್ಯಾಂಶವಾಗಿ ಸೇರಿವೆ. ಈ ಸಂಸ್ಕೃತಿ ಬೇರೆ ಬೇರೆಯ ಮಟ್ಟದ ತಿಳಿವಳಿಕೆಯನ್ನು ಒಟ್ಟು ಗೂಡಿಸಿಕೊಂಡು ಬಹು ಮತದ ಜನರು ಸೌಹಾರ್ದದಿಂದ ನಡೆಯು ವುದು ಸಾಧ್ಯವಾಗುವಂತೆ ಮಾಡಿದೆ; ಅವರವರ ಮನೋಧರ್ಮಕ್ಕೆ ಅನು ಗುಣವಾದ ರೀತಿಯಲ್ಲಿ ಅವರವರು ನಡೆಯಬಹುದೆಂಬ ಸಮಾಧಾನ ಸ್ಥಿತಿ ಯನ್ನು ಜನರಲ್ಲಿ ವಾಡಿಕೆಗೆ ತಂದಿದೆ. ಕೇವಲ ವಿಚಾರ ಪದ್ಧತಿಯ ಬೌದ್ಧ ಮತದಿಂದ ತಾಮಸ ಪೂಜೆಯೆಂಬ ಶಿಲಾ ಪೂಜೆಗಳವರೆಗೆ ಎಲ್ಲ ರೀತಿಯ ಧರ್ಮಕ್ಕೂ ಇದು ಎಡೆಗೊಟ್ಟು ಎಲ್ಲದರ ಸಮುಚ್ಚಯವಾಗಿದೆ. ಇದು ಸಾಧ್ಯವಾಗುವಂತೆ ಇದು ಒಳಗಿಂದ ತನ್ನನ್ನು ತಾನು ತಿದ್ದಿಕೊಳ್ಳಬಲ್ಲ ಸಂಸ್ಕೃತಿಯಾಗಿದೆ. ಎಂದರೆ ಇದು ಸಜೀವವಾದ ಸಂಸ್ಕೃತಿ. ದೋಷ ಗಳು ತಲೆದೋರಿದಹಾಗೆಲ್ಲ ಅವನ್ನು ಸರಿಪಡಿಸುವ ಏರ್ಪಾಡುಗಳು ತಲೆಯೆತ್ತಿರುವುದು ಇದರ ಚರಿತ್ರೆಯಲ್ಲಿ ಕಾಣಬರುವುದು. ಈ ತಿದ್ದು ಪಡಿಯನ್ನಾಗಲಿ ಇದು ಒಂದೇ ಏರ್ಪಾಡಿನಲ್ಲಿ ದೇಶಕ್ಕೆಲ್ಲ ಹರಡುತ್ತೇನೆ ಎಂಬ ಸಾಹಸವನ್ನು ಮಾಡಿಲ್ಲ. ಇದರ ಧ್ಯೇಯ ಉತ್ತಮರೀತಿಯ ಮನುಷ್ಯನನ್ನೂ ಸಣ್ಣ ಸಣ್ಣ ಸಮಾಜವನ್ನೂ ಮಾಡತಕ್ಕದ್ದು; ಉತ್ತಮ ಜನಾಂಗವನ್ನಲ್ಲ. ಈ ಧ್ಯೇಯ ಉತ್ತಮವಾದದ್ದು ಆದರೂ ಮಿತವರಿತದ್ದು. ಇದರಲ್ಲಿ ತಿಳಿವಿಗೆ ಬೆಲೆಕಟ್ಟುವ ಧಾರ್ಷ್ಟ್ಯವಿಲ್ಲ. ಪುರಾಣ ಹೇಳು ವವನು ಹೇಳುತ್ತಾನೆ; ಕೊಡುವವನು ಬೇಕಾದದ್ದನ್ನು ಕೊಡಬಹುದು. ನೀತಿ ಹೇಳುವವನು ಹಾಡಿಕೊಂಡು ಬರುತ್ತಾನೆ; ನಿಮಗೆ ಇಷ್ಟವಿದ್ದರೆ ಹಿಡಿ ಅಕ್ಕಿ ಹಾಕಬಹುದು, ಇಲ್ಲದಿದ್ದರೆ ಬಿಡಬಹುದು. ಪ್ರತಿಯೊಂದು ಶಾಖೆಯಲ್ಲಿ ಕಾರ್ಯ ಉತ್ತಮವಾಗಲೆಂದು ಇದು ಪಂಗಡ ಪಂಗಡಗಳಿಗೆ ಕೆಲಸವನ್ನು ಹಂಚಿದೆ. ತಿಳಿದವರು ತಿಳಿಯದವರಿಗಾಗಿ ಜ್ಞಾನವನ್ನು ಹರಡುವ ಪ್ರಯತ್ನಮಾಡುವುದಕ್ಕೆ ಇದರಲ್ಲಿ ಏರ್ಪಾಡಿದೆ. ಇದರಲ್ಲಿ ಎಲ್ಲ ಕಲೆಗಳೂ ಜನ ಜೀವನದ ಪರಿಷ್ಕರಣಕ್ಕೆ ನೆರವಾಗಿ ಕರೆಯಲ್ಪಟ್ಟಿವೆ. ಇದು ಜನಕ್ಕೆಲ್ಲ ತಿಳಿವು ಸುಲಭವಾಗುವಂತೆ ಕತೆಯಿಂದ ಪುರಾಣದಿಂದ ಇತಿಹಾಸದಿಂದ ನೀತಿಯನ್ನು ವಿವರಿಸಿದೆ. ಇದು ಸಾಹಿತ್ಯ, ಧರ್ಮ ಶಾಸ್ತ್ರ, ಮತ, ತತ್ತ್ವ ಎಲ್ಲವನ್ನೂ ಒಳಗೊಂಡಿದೆ. ಇವು ಪಾಠಕ್ಕಾಗಿ

ಅಭ್ಯಾಸಕ್ಕಾಗಿ ಬೇರೆಬೇರೆಯಾದರೂ ಬಾಳಿನ ಏಳಿಗೆಗೆ ಎಲ್ಲವೂ ಒಂದೇ ಎಂಬ ವಿವೇಚನೆ ಈ ಸಂಸ್ಕೃತಿಯಲ್ಲಿ ಮೇಲ್ಗಡೆಯೇ ಕಾಣುತ್ತದೆ.

## ಇದರ ಕೆಲವು ಕೊರತೆಗಳು

ಇಷ್ಟು ಗುಣಗಳಿವೆಯೆಂದಮೇಲೆ ಕೆಲವು ದೋಷಗಳೂ ಕಾಣುವುದರಲ್ಲಿ ಏನೂ ಆಶ್ಚರ್ಯವಿಲ್ಲ. ಪ್ರಾಯಶಃ ಆ ದೋಷಗಳು ಈ ಗುಣಗಳ ಮೂಲಕವೇ ಬಂದುವೆಂದು ಹೇಳಬಹುದು. ಮುಖ್ಯ ತತ್ತ್ವವನ್ನು ಹಿಡಿದು ನಡೆಯುವುದು ಸಾಕು ಎಂದೂ, ವಿಚಾರ ಎಲ್ಲರಿಗೂ ಸಾಧ್ಯವಲ್ಲ ಎಂದೂ ಹೇಳಿದ್ದರಿಂದ ಈ ಸಂಸ್ಕೃತಿಯಲ್ಲಿ ವಿಚಾರಕ್ಕೆ ಸ್ಥಳವೇ ಇಲ್ಲವೊ ಎನ್ನುವಂತಾಗಿದೆ. ದೇವರು ಇದ್ದಾನೆಯೇ, ಧರ್ಮವೇ ಜಯಿಸುವುದೆನ್ನುವುದು ನಿಜವೇ ಎಂಬ ಪ್ರಶ್ನೆಗಳೇ ತಪ್ಪು ಎಂಬ ಭಾವನೆ ಜನರಲ್ಲಿ ಊರಿ ಹೋಗಿದೆ. ಇದರಿಂದ ಜನರಿಗೆ, ಹೊರಗೆ ದೀಪವಿರುವಾಗ ಕಣ್ಣೇಕೆ ಬೇಕು ಮುಚ್ಚಿಕೊ, ಎಂದು ಹೇಳಿದಂತಾಗಿದೆ. ಈ ಸಂಸ್ಕೃತಿಯು ಮಾಯಾ, ಕರ್ಮ, ಸ್ವಾತಂತ್ರ್ಯ ಮುಂತಾದ ಮಾತುಗಳನ್ನು ಜನರಲ್ಲಿ ವಾಡಿಕೆಗೆ ತಂದು ಅವುಗಳ ಭಾವಕ್ಕೆ ಸಾಕಾದಷ್ಟು ಗಮನವನ್ನು ಸೆಳೆಯದೆ ಇದ್ದದ್ದರಿಂದ ಚಿನ್ನಕ್ಕೆ ಬದಲು ಕಾಗೆಯ ಬಂಗಾರದಂತೆ ಸರಿಯಾದ ಭಾವನೆಗಳಿಗೆ ಪ್ರತಿಯಾಗಿ ತಪ್ಪು ಭಾವನೆಗಳು ಹಲವು ಜನರಲ್ಲಿ ವಾಡಿಕೆಗೆ ಬರುವಂತಾಯಿತು. ಹಿಡಿ ಹಿಡಿ ಜನರನ್ನು ಸರಿಪಡಿಸುವುದರಲ್ಲಿ ತೊಡಗಿ ಇದು ಜನರಲ್ಲಿ ನಮ್ಮ ನಾಡು ನಮ್ಮ ರಾಜ ಎಂಬ ಭಾವವನ್ನು ಉಂಟು ಮಾಡುವ ವಿಷಯಕ್ಕೆ ಸಾಕಾದಷ್ಟು ಗಮನಕೊಡಲಿಲ್ಲ; ರಾಜ್ಯದ ಒಳ್ಳೆಯದಕ್ಕಾಗಿ ಒಂದು ಪಂಗಡ ನಷ್ಟವನ್ನು ಅಂಗೀಕರಿಸುವ ಮನೋಧರ್ಮವನ್ನು ಜನರಲ್ಲಿ ಬಿತ್ತಲಿಲ್ಲ. ಜನಾಂಗದ ಒಂದೊಂದು ಪಂಗಡ ಒಂದೊಂದು ಕೆಲಸವನ್ನು ಕೈಗೊಳ್ಳಲಿ ಎಂದು ಹೇಳಿದ್ದರಿಂದ ಧರ್ಮಪ್ರಚಾರದ ಕೆಲಸದವರನ್ನು ಅತಿಸ್ವತಂತ್ರರನ್ನಾಗಿ ಮಾಡಿತು, ಇತರರಿಗೆ ಈ ಮಾತು ಬೇಡವೆಂದು ಹೇಳಿತು; ಇದರಿಂದ ಹಲವು ಅನರ್ಥಗಳು ಉಂಟಾದವು. ಧರ್ಮಪ್ರಚಾರದವರ ಕೆಲಸವನ್ನೂ ಕಟ್ಟುನಿಟ್ಟಿನಲ್ಲಿಟ್ಟು ಅನಂತವಾದ ಧರ್ಮತತ್ತ್ವಗಳಿಗೆ ಒಂದು ಅಂತ್ಯವನ್ನು ಕಲ್ಪಿಸಿತು.

ಜ್ಞಾನದ ಭಾವಿಯನ್ನು ತೋಡುತ್ತ ನೀರಕಣ್ಣು ಸಿಕ್ಕುವವರೆಗೂ ಆಳ ಪಡಿಸಿ ಎಷ್ಟು ಸೇದಿದರೂ ನೀರು ಇರುವಂತೆ ಮಾಡುವುದಕ್ಕೆ ಪ್ರತಿಯಾಗಿ, ಮೈಸೂರಿನ ಅಗ್ರಹಾರಗಳ ಆಚಾರವಂತರ ಬಾವಿಗಳಂತೆ ಸ್ವಲ್ಪ ತೋಡಿ ಮೇಲಿಂದ ಎಷ್ಟು ನೀರು ಬಿಟ್ಟರೆ ಅಷ್ಟು ನೀರು ಅದರಲ್ಲಿರುವಂತೆ ಮಾಡಿತು; ಮನುಷ್ಯನ ಅಂತರಾಳದಲ್ಲಿರುವ ಜ್ಞಾನದ ಮೂಲವನ್ನು ಎಚ್ಚರಗೊಳಿಸಲಿಲ್ಲ. "ದೊಡ್ಡವರು ಹೇಳಿದಂತೆ, ನಮಗೇನು?" ಎಂಬ ತಾಮಸ ವಿಧೇಯತೆಯನ್ನು ಜನರಲ್ಲಿ ವಾಡಿಕೆಗೆ ತಂದಿತು. ದೇವರು ಎಲ್ಲವನ್ನೂ ಸರಿಪಡಿಸುತ್ತಾನೆ ಎಂದು ಹೇಳುವಲ್ಲಿ ಅನ್ಯಾಯವನ್ನು ಕಂಡಾಗ ಸಾಕಾದಷ್ಟು ಪ್ರಯತ್ನದಿಂದ ಅದನ್ನು ಪರಿಹರಿಸುವ ಕೆಲಸವನ್ನು ದೇವರು ನಮ್ಮ ಮೇಲೆ ಹೊರಿಸಿದಾನೆ ಎನ್ನುವುದನ್ನು ಹೇಳಲಿಲ್ಲ. ದೇವರ ಸ್ವರೂಪವನ್ನು ವರ್ಣಿಸುವ ಪುರಾಣಗಳನ್ನು ಹರಡಿ ಎಲ್ಲಿ ಯಾರು ಯಾವ ಅದ್ಭುತ ನಡೆಯಿತೆಂದರೂ ಇರಬಹುದು ಎಂದು ಸುಮ್ಮನಾಗುವುದನ್ನು ಪದ್ಧತಿ ಮಾಡಿತು. ಸೀಮೆಯಲ್ಲಿ ಎಲ್ಲಿ ನೋಡಿದರೂ ಅದ್ಭುತಗಳೇ, ಎಲ್ಲೆಲ್ಲಿಯೂ ಆಶ್ಚರ್ಯಗಳೇ. ಹಲವು ರೀತಿಯ ಮನೋಧರ್ಮಕ್ಕೆ ಹಲವು ಸಾಧನಗಳು ಇವೆ ಎಂಬ ಪಾಠ ಹೇಳುವಲ್ಲಿ ಒಬ್ಬರನ್ನೊಬ್ಬರು ತಿದ್ದುವುದು, ಸಾಧ್ಯವಾದರೆ ಎಲ್ಲರೂ ಮೇಲಣ ದಾರಿಯನ್ನು ಹಿಡಿಯುವುದು, ಎನ್ನುವ ಪ್ರಯತ್ನವಿಲ್ಲದಂತೆ ಮಾಡಿತು. ಮನುಷ್ಯನು ಬೆಳೆಯುವುದಕ್ಕೆ ಹಲವು ಜನ್ಮಗಳಿವೆ ಎಂಬ ತತ್ತ್ವದ ಫಲವಾಗಿ ಈ ಜನ್ಮದಲ್ಲಿ ಸಾಧ್ಯವಾದಷ್ಟು ಮೇಲಕ್ಕೇಳಬೇಕು ಎಂಬ ಭಾವನೆಯನ್ನು ಕುಗ್ಗಿಸಿತು. ತಿಳಿದವರಿಗೆ ಹೆಚ್ಚಿನ ವಿಷಯ ಇರಲಿ, ಸಾಮಾನ್ಯ ಜನರಿಗೆ ಅವರ ಯೋಗ್ಯತೆಗೆ ತಕ್ಕಷ್ಟು ತತ್ತ್ವವನ್ನು ಹೇಳುವುದು, ಎನ್ನುತ್ತ ಹೀಗೆ ಹೇಳುವಾಗ ಹೆಚ್ಚಾದದ್ದು ಬೇರೆ ಇದೆ ಎಂದು ಸಾಮಾನ್ಯರಿಗೆ ಹೇಳುವುದನ್ನು ಮರೆತಿತು.

ಹೀಗೆಂದ ಮಾತ್ರಕ್ಕೆ ನಮ್ಮ ಜನಾಂಗ ತಾನು ಮಾಡಬೇಕಾಗಿದ್ದ ಕೆಲಸದಲ್ಲಿ ಸೋತುಹೋಯಿತು ಎಂದು ಅರ್ಥವಲ್ಲ. ಜನಜನಕ್ಕೇ ಉತ್ತಮ ಜ್ಞಾನ ಹರಡುವ ಮೊದಲು ಈ ಅವಸ್ಥೆಗಳೆಲ್ಲಾ ಮಧ್ಯೆ ಬರಲೇಬೇಕು. ಜನ ಬೆಳೆಯುವ ರೀತಿಯೇ ಇದು. ಅಲ್ಲದೆ ಸಂಸ್ಕೃತಿ

ಯಾವುದೋ ಒಂದು ಸಮಯದಲ್ಲಿ ಬೆಳೆಯುವುದನ್ನು ಮುಗಿಸಿ ನಿಂತ ಹಾಗೆ ಭಾವಿಸುವುದು ಚರ್ಚೆಯ ಅನುಕೂಲಕ್ಕಾಗಿ ಹೊರತು ನಿಜವಾಗಿ ಅದು ನಿಂತಿರುವುದಿಲ್ಲ; ಸದಾ ಬೆಳೆಯುತ್ತಲೇ ಇರುತ್ತದೆ. ತಪ್ಪು ಮಾಡಿದಾಗಲೂ ಅದು ಸರಿಯ ಕಡೆಗೆ ಒಂದು ಹೆಜ್ಜೆಯನ್ನು ಇಡುತ್ತಿದೆ. ಅಲ್ಲದೆ ಈ ದೋಷಗಳು ಬೇಕೆಂದು ಸ್ವೀಕರಿಸಿದುವಲ್ಲ; ಒಳ್ಳೆಯದಕ್ಕೆಂದು ಮಾಡಿರುವ ಏರ್ಪಾಡಿನಿಂದ ತಾವಾಗಿ ಬಂದು ಸೇರಿದುವು. ಇವುಗಳಿಂದ ಬಿಡುಗಡೆ ಹೊಂದಲು ಈ ಮೊದಲೇ ಯತ್ನಗಳು ನಡೆದಿವೆ. ಈ ವಿಮರ್ಶೆಯ ಉದ್ದೇಶ ಮುಂದೆ ನಾವು ಏನು ಮಾಡಬೇಕು ಎಂದು ವಿಚಾರಿಸಿ ನಮ್ಮ ಜನಾಂಗ ಈ ಸಂಸ್ಕೃತಿಯನ್ನು ಇನ್ನೂ ಚೆನ್ನಾಗಿ ಮಾಡುವ ಪ್ರಯತ್ನಕ್ಕೆ ಕೈಹಾಕಲಿ ಎನ್ನುವುದು ಮಾತ್ರ. ಈ ವಿಷಯವನ್ನು ವಿಚಾರಮಾಡುವುದು ಜನರ ಮುಖಂಡರ ಕರ್ತವ್ಯ.

## ಮುಂದಿನ ಮಾತು

ಮುಖ್ಯ ನಾವು ತಿಳಿಯಬೇಕಾದ ವಿಷಯ ಇದು. ಮಾನವ ವರ್ಗವೇ ಸತ್ಯದ ಅನ್ವೇಷಣದಲ್ಲಿ ತೊಡಗಿದೆ; ಕಂಡಷ್ಟು ಸತ್ಯಕ್ಕೆ ತನ್ನ ನಾಗರಿಕತೆಯಲ್ಲಿ ದೇಹವನ್ನು ಕೊಟ್ಟಿದೆ. ಆ ನಾಗರಿಕತೆಯ ತಿರುಳು ಸಂಸ್ಕೃತಿ. ಕಾಲ ಬಂದಹಾಗೆ ಆ ನಾಗರಿಕತೆ ಖಿಲವಾಗುತ್ತದೆ. ಆಗ ಸಂಸ್ಕೃತಿ ಆ ದೇಹವನ್ನು ಬಿಡಬೇಕು; ಬೇರೆ ದೇಹವನ್ನು ತೆಗೆದುಕೊಳ್ಳಬೇಕು. "ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಽಪರಾಣಿ | ತಥಾ ಶರೀರಾಣಿ ವಿಹಾಯ ಜೀರ್ಣಾನ್ಯನ್ಯಾನಿ ಸಂಯಾತಿ ನವಾನಿ ದೇಹೀ" ಎಂದು ಒಂದೊಂದು ಜೀವಾತ್ಮವನ್ನು ಕುರಿತು ಹೇಳಿದ ಮಾತು ಜನಾಂಗದ ಜೀವಕ್ಕೂ ಅನ್ವಯಿಸುವುದು. ನಾಗರಿಕತೆಯ ಹಿಂದಿನ ಏರ್ಪಾಡುಗಳು ಖಿಲವಾಗಿ ಶುಷ್ಕವಾದಾಗ ಅವುಗಳನ್ನು ಹಿಡಿದುಕೊಂಡು ಕುಳಿತಿರುವುದೇ? ಜೀವವನ್ನು ಹಿಡಿಯಲು ನೋಡುವುದೆ? ಕಾಷ್ಠವಾದ ದೇಹವನ್ನು ಬಿಟ್ಟು ಜೀವವನ್ನು ಹಿಡಿಯುವುದೇ ಸರಿ. ಹೀಗೆ ಮಾಡದೆ ವಾಡಿಕೆಯ ಮಮತೆಯಿಂದ ಈ ದೇಹ ಇರಲಿ ಎಂದು ಅದನ್ನು ಹಿಡಿದು ಅದರಲ್ಲಿದ್ದ

ಜೀವವನ್ನು ಮರೆತರೆ ಭೀಮನ ಶವವನ್ನು ಹೊತ್ತುಕೊಂಡು ನಡೆದ ಧರ್ಮ ರಾಯನಂತೆ ನಾವು ಪ್ರಧಾನ ತತ್ತ್ವವನ್ನು ತೊರೆದು ಗೌಣವಾದದ್ದನ್ನು ಅವಲಂಬಿಸಿದಂತೆ ಆಗುತ್ತದೆ. ಇಂಥ ಮೋಹ ಸಹಜ; ಅದನ್ನು ಬಿಡು ವುದು ಸುಲಭವಲ್ಲ. ಆದರೆ ಅದನ್ನು ಬಿಟ್ಟರೆ ಮಾತ್ರ ನಾವು ಉದ್ಧಾರ ವಾಗಬಹುದು. ದೇಶದೇಶದ ಜನರು ಸೇರಿ ಸಾವಿರಾರು ಶತಮಾನ ಕಾಲದಿಂದ ಯತ್ನಮಾಡಿ ಮಾನವ ವರ್ಗದ ಧ್ಯೇಯಗಳನ್ನು ಉತ್ತಮ ವಾಗಿ ಮಾಡುತ್ತ ಬಂದಿದಾರೆ. ಇದಕ್ಕೆ ನಮ್ಮ ಜನರು ಸಹಾಯ ಮಾಡಿದಾರೆ; ಇದೇ ಕೆಲಸವನ್ನು ನಾವು ಮುಂದಕ್ಕೂ ಮಾಡಬೇಕು.

ಪ್ರಪಂಚದ ಪ್ರಕೃತ ಸ್ಥಿತಿಯನ್ನು ನೋಡಿದರೆ ನಾವು ನಮ್ಮ ಜನರಲ್ಲಿ ಹರಡಬೇಕಾದ ಭಾವನೆಗಳು ಯಾವುವೆಂದು ನಮಗೆ ತೋರು ವುದು. ದೇವರಿದಾನೆ ಎನ್ನುವುದು ನಮ್ಮಲ್ಲಿ ಎಲ್ಲ ತರಗತಿಯ ಮನಸ್ಸಿಗೂ ಪರಿಚಿತವಾದ ಭಾವನೆ. ಅವನು ಎಲ್ಲ ಲೋಕದ ದೇವರು ಎನ್ನುವುದು ನಮಗೆ ತಿಳಿದ ವಿಷಯ. ಆದರೆ ಅದು ಮನಸ್ಸಿಗೆ ಬಂದಿಲ್ಲ. ವಿಶ್ವವೆಲ್ಲ ಒಂದೇ ಕುಟುಂಬ. ಹಲವು ದೇಶದಲ್ಲಿ ಹಲವು ಹೆಸರಿನಿಂದ ಪೂಜಿಸುತ್ತಿರುವ ಪರವಸ್ತು ಒಂದೇ ; ಶಿವ ದೊಡ್ಡವನೋ ಹರಿ ದೊಡ್ಡವನೋ ಎನ್ನುವುದು ಹಸ್ತಿ ದೊಡ್ಡದೋ ಆನೆ ದೊಡ್ಡದೋ ಎಂದು ಕೇಳಿದರೆ ಹೇಗೋ ಹಾಗೆ ಅವಿವೇಕ; ಭೇದವಿರುವುದು ದೇವರನ್ನುಕುರಿತ ಭಾವಗಳಲ್ಲಿ; ಎಷ್ಟು ಜನ ಇದಾರೋ ಅಷ್ಟು ಭಾವಗಳು ಸಾಧ್ಯ. ಅಷ್ಟು ಮತಗಳು ಸಾಧ್ಯ ; ಆದದ್ದ ರಿಂದ ಒಬ್ಬೊಬ್ಬನೂ ಮತ್ತೊಬ್ಬನ ಮತದ ವಿಷಯದಲ್ಲಿ ಸಮಾಧಾನ ವಾಗಿ ನಡೆಯಬೇಕು ; ಸಾಧ್ಯವಾದಲ್ಲಿ ತನ್ನ ಅವನ ಭಾವನೆಯನ್ನು ಸರಿ ಪಡಿಸಿಕೊಳ್ಳಲು ಯತ್ನ ಮಾಡಬೇಕು. ಪರತತ್ತ್ವದ ಮುಖವಾಗಿ ನಡೆಯು ವುದೇ ಮನುಷ್ಯನ ಸ್ವಭಾವಕ್ಕೆ ಸರಿಯಾದ ಬೆಳವಣಿಗೆ; ಎಲ್ಲ ನಡತೆಯೂ ಪರತತ್ತ್ವಕ್ಕೆ ಒಪ್ಪುವಂತೆ ಇರಬೇಕು ; ಇದೇ ಧರ್ಮ ; ಇದಕ್ಕೆ ವಿರೋಧ ವಾದದ್ದೆಲ್ಲ ಅಧರ್ಮ. ಮನುಷ್ಯನ ಪರಮ ಸುಖ ಧರ್ಮದಲ್ಲಿ ನಡೆಯುವುದ ರಲ್ಲಿಯೇ ಇದೆ; ಅದೇ ಸ್ವರ್ಗ ; ಧರ್ಮವೆನ್ನುವುದು ಎಲ್ಲಿದ್ದರೂ ಧರ್ಮವೆ ; ಅಧರ್ಮ ನಮ್ಮಲ್ಲಿದ್ದರೂ ಅಧರ್ಮವೆ. ಧರ್ಮಕ್ಕೆ ಸರಿಯಾಗಿ ನಡೆಯದೆ ಹೋದರೆ ಮನುಷ್ಯನು ತನ್ನ ನಿಜವಾದ ಸ್ವಭಾವಕ್ಕೆ ವಿರೋಧವಾಗಿ

ಆಚರಿಸಿ ತನ್ನ ಜನ್ಮವನ್ನು ತಾನೇ ವ್ಯರ್ಥಮಾಡಿಕೊಳ್ಳುತ್ತಾನೆ; ಅದಕ್ಕೆ ಬೇರೆ ಶಿಕ್ಷೆ ಆವಶ್ಯಕವಿಲ್ಲ; ಇಲ್ಲಿ ಕರ್ಮದಲ್ಲಿಯೇ ಶಿಕ್ಷೆ ಅಡಗಿದೆ. ಒಬ್ಬೊಬ್ಬ ಮನುಷ್ಯನೂ ಉತ್ತಮಸ್ಥಿತಿಗೆ ಬರಬೇಕು ; ಎಲ್ಲ ಜನವನ್ನೂ ಸಮವಾಗಿ ಕಾಣಬೇಕು ; ಇದರಿಂದ ಒಬ್ಬೊಬ್ಬನ ಬಾಳು ಸಾರ್ಥಕವಾಗುವುದು. ಇದರಂತೆಯೇ ನಮ್ಮ ಜನಾಂಗದ ಬಾಳು ಸಾರ್ಥಕವಾಗಬೇಕಾದರೆ ನಾವು ಈ ತತ್ತ್ವಗಳನ್ನು ಅನುಸರಿಸಿ ಪ್ರಪಂಚದ ಬೆಳವಣಿಗೆಗೆ ಸಹಾಯರಾಗಬೇಕು. ದೇಶವೆಂಬ ಬುದ್ಧಿಯಿಂದ ಒಂದಾಗಿ ನಡೆದು ಜನಾಂಗಗಳಲ್ಲಿ ದಕ್ಷರೆನಿಸಿಕೊಳ್ಳಬೇಕು. ರಾಜ್ಯವೆನ್ನುವುದು ಜನವೆಲ್ಲ ಸೇರಿ ಮಾಡಿರುವ ಒಂದು ಸಂಸ್ಥೆ ; ಪ್ರಜೆಗಳೂ ಅಧಿಕಾರಿಗಳೂ ಎಲ್ಲ ಕೆಲಸದಲ್ಲಿಯೂ ಈ ಹಿರಿಯ ದೃಷ್ಟಿಯಿಂದ ತೊಡಗಬೇಕು. ಇದು ನಮ್ಮ ಜನರಲ್ಲಿ ಹರಡಬೇಕಾಗಿರುವ ತಿಳಿವು. ಒಟ್ಟಿನಲ್ಲಿ ಇದುವರೆಗೆ ಜನಾಂಗ ಮಾಡಿರುವ ಅನ್ವೇಷಣವೆಲ್ಲ ಸಾರ್ಥಕವಾಗುವಂತೆ ನಾವು ಹೊಸದೊಂದು ಕಾರ್ಯಕ್ರಮವನ್ನು ಏರ್ಪಡಿಸಿಕೊಂಡು ಮುಂದುವರಿಯಬೇಕು. ಹೀಗೆ ಮಾಡಿದರೆ ಕನ್ನಡ ನಾಡು ತನ್ನ ಶ್ರೇಯಸ್ಸನ್ನು ಸಾಧಿಸಿಕೊಳ್ಳುತ್ತದೆ ; ಭಾರತವರ್ಷಕ್ಕೆ ಹೆಸರನ್ನು ತರುತ್ತದೆ. ಹಾಗೆಯೇ ಅದು ಮಾನವವರ್ಗದ ಉಚ್ಚಧ್ಯೇಯಗಳ ಸಾಧನೆಯಲ್ಲಿ ತನ್ನ ಯೋಗ್ಯತೆಗೆ ತಕ್ಕಂತೆ ಸಹಾಯಮಾಡಿದಂತಾಗುತ್ತದೆ.

ಇದೆಲ್ಲ ಬರಿಯ ಕನಸಿನ ಮಾತೇನೂ ಅಲ್ಲ. ಸಾವಿರಾರು ವರುಷದ ನಾಗರಿಕತೆಯ ಫಲವಾಗಿ ಉತ್ತಮ ಸಂಸ್ಕೃತಿಯುಳ್ಳ ಸಂಸಾರಗಳಲ್ಲಿ ಹುಟ್ಟಿ ಉತ್ತಮ ರೀತಿಯ ವಿದ್ಯೆಯನ್ನು ಪಡೆದು ಪೂರ್ವದೇಶದ ಭಾವ ಪಶ್ಚಿಮದೇಶದ ಭಾವಗಳ ಉತ್ತಮ ಭಾಗವನ್ನು ಹೀರಿ ನಮ್ಮ ದೇಶದಲ್ಲಿ ಈಚೆಗೆ ಅನೇಕ ಮಹನೀಯರು ದೇಶದ ಸೇವೆಯನ್ನು ಮಾಡಿದಾರೆ. ಇಂಥ ಅನೇಕ ರತ್ನಗಳ ಮಧ್ಯೆ ಜೀವರತ್ನವಾಗಿ ಮಹಾತ್ಮಾ ಗಾಂಧಿಯವರು ಈಗ ನಮ್ಮೆಲ್ಲರ ಕಣ್ಣೆದುರಿಗೇ ದೇಶವನ್ನು ಉದ್ಧಾರಮಾಡುತ್ತಿದಾರೆ. ಅವರ ಮಹಿಮೆಯಿಂದ ಅನೇಕ ಉತ್ತಮ ಭಾವಗಳು ಜೀವನದಲ್ಲಿ ಈಗಾಗಲೇ ಹರಡಿವೆ. ಹಿರಿಯ ಧ್ಯೇಯದಲ್ಲಿ ನಂಬಿಕೆಯಿರುವ ಅನೇಕರು ಕೆಲಸಮಾಡಿ ಜನತೆಯ ಏಳ್ಗೆಯನ್ನು ಮುಂದಾಗಿಟ್ಟು

ಕೊಂಡು ಜನರ ಭಾಷೆಗಳಲ್ಲಿ ಅಲ್ಲಲ್ಲಿ ಬರೆದು ನುಡಿದು ಚರ್ಚಿಸಿ ಸಮಾಜ ದಲ್ಲಿ ತಿಳಿವು ಹರಡುವಂತೆ ಮಾಡುವುದಾದರೆ ಬಹು ಬೇಗದಲ್ಲಿ ನಮ್ಮ ಜನಾಂಗ ಹಿಂದಿನಂತೆ ಹಿರಿದಾಗುವುದು. ಧ್ಯೇಯದಲ್ಲಿ ನಂಬಿಕೆ ಬೇಕು; ಅದರ ಸಾಧನೆಗೆ ದಾರಿ ಯಾವುದೆಂದು ಹುಡುಕುವ ಆತುರ ಬೇಕು. ಇವೆರಡೂ ಬಂದರೆ ಕೆಲಸಕ್ಕೆ ಸಾಕಾದ ಜನ ಇದೆ, ಬೇಕಾದ ದಾರಿ ಇದೆ, ಎಲ್ಲ ಸಾಧನ ಸಂಪತ್ತಿಯೂ ಸಿದ್ಧವಾಗಿದೆ. ಕರ್ಣಾಟಕದಲ್ಲಿ ಈ ಕೆಲಸ ಎಷ್ಟು ಬೇಗ ಆರಂಭವಾಗುವುದೆನ್ನುವುದು ಕನ್ನಡದ ಜನರನ್ನು ಅವಲಂಬಿಸಿದೆ. ಕೆಲಸವೇನೋ ಇಂದಲ್ಲದಿದ್ದರೆ ನಾಳೆ ಆಗುತ್ತದೆ. ಆದರೆ ಅದನ್ನು ಆರಂಭಿಸುವ ಪುಣ್ಯ ನಮ್ಮದಾಗಲೆಂದು ಈ ತಲೆಮಾರಿನ ಜನ ಯತ್ನ ಮಾಡಬೇಕು.

---

Printed by U. Narasimha Mallya, Proprietor, B. B. D. Power Press, Cottonpet, Bangalore City

# ಕರ್ಣಾಟಕದ ಜನಪದ ಸಾಹಿತ್ಯ

ಮಾಸ್ತಿ ವೆಂಕಟೇಶ ಐಯಂಗಾರ್

೧೯೩೭

# ಮುನ್ನುಡಿ

ಈ ಉಪನ್ಯಾಸದಲ್ಲಿ ಉದಾಹರಿಸಿರುವ ಅನೇಕ ಪದ್ಯಗಳನ್ನು ಧಾರವಾಡದ ನಮ್ಮ ಮಿತ್ರರ 'ಗರತಿಯ ಹಾಡಿ'ನಿಂದಲೂ 'ಜಯಕರ್ನಾಟಕ' ಪತ್ರಿಕೆಯಿಂದಲೂ ತೆಗೆದುಕೊಂಡಿದೆ. ಕೆಲವು ಪದ್ಯಗಳನ್ನು ಸಂಗ್ರಹಿಸಿದ ಅಥವಾ ಬರೆದುಕೊಟ್ಟ ಗೆಳೆಯರ ಹೆಸರನ್ನೂ ಉಪನ್ಯಾಸದಲ್ಲಿ ಅಲ್ಲಲ್ಲಿ ಹೇಳಿದ್ದೇನೆ. ಶ್ರೀಮತಿ ದೊಡ್ಡ ಸಾಕಮ್ಮನವರೂ ಶ್ರೀಮಾನ್ ಹೊಸಕೊಪ್ಪದ ಕೃಷ್ಣರಾಯರೂ ಅವರ ಪ್ರಾಂತದ ಪದ್ಯಗಳನ್ನು ಬರೆಯಿಸಿ ಬಹು ವಿಶ್ವಾಸದಿಂದ ಕಳುಹಿಸಿಕೊಟ್ಟರು. ಇದಕ್ಕಾಗಿ ಇವರಿಗೂ ಹೀಗೆ ಬೇರೆ ಬೇರೆ ವಿಧದಲ್ಲಿ ಸಹಾಯಮಾಡಿದ ಇತರ ಮಿತ್ರರಿಗೂ ನಾನು ಇಲ್ಲಿ ವಂದನೆಯನ್ನು ಸಲ್ಲಿಸುತ್ತೇನೆ.

ಸೋಮಪ್ಪನ ಲಾವಣಿಯನ್ನು ಬರೆದವರು ಶ್ರೀಮಾನ್ ಬೆಳ್ಳಾವೆ ನರಹರಿ ಶಾಸ್ತ್ರಿಗಳು ಎಂದು ಮಿತ್ರರಿಂದ ಈಚೆಗೆ ತಿಳಿಯಿತು. ಇದು ಹೌದೇ ಎಂದು ನಾನು ಶಾಸ್ತ್ರಿಗಳನ್ನು ಕೇಳಿ ನಿರ್ಧರಿಸಿಲ್ಲ. ಹೌದು ಎಂಬ ದೃಷ್ಟಿಯಿಂದ ಅವರನ್ನು ಈ ವಿಚಾರದಲ್ಲಿ ಅಭಿನಂದಿಸಲು ಅಪೇಕ್ಷಿಸುತ್ತೇನೆ.

ಉಪನ್ಯಾಸವನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿ ಅದು ಈ ಪುಸ್ತಕ ರೂಪದಲ್ಲಿ ಬರುವಂತೆ ಪ್ರತಿಗಳನ್ನು ಮಾಡಿಸಿಕೊಟ್ಟದ್ದಕ್ಕಾಗಿ ನಾನು 'ಪ್ರಬುದ್ಧ ಕರ್ಣಾಟಕ'ದ ಕರ್ತರಿಗೆ ಕೃತಜ್ಞನಾಗಿದ್ದೇನೆ.

ಬೆಂಗಳೂರು, **ಮಾಸ್ತಿ ವೆಂಕಟೇಶ ಐಯಂಗಾರ್.**

ಧಾತು ಸಂ|| ಫಾಲ್ಗುಣ ಶುದ್ಧ ಪ್ರಥಮೆ.

# ಕರ್ಣಾಟಕದ ಜನಪದ ಸಾಹಿತ್ಯ

## ೧

ಕನ್ನಡ ನಾಡಿನ ಲಾವಣಿ ಸಾಂಗತ್ಯಗಳನ್ನು ಕುರಿತು ಈಗ ಕೆಲವು ವರ್ಷಗಳ ಹಿಂದೆ ನಾನು ಒಂದು ಉಪನ್ಯಾಸವನ್ನು ಬರೆದೆನು. ಜನತೆಯ ಸಾಹಿತ್ಯವನ್ನು ಕುರಿತ ಕುತೂಹಲ ನಮ್ಮ ದೇಶದ ವಿದ್ಯಾವಂತರಲ್ಲಿ ಆಗ ಅಲ್ಲಲ್ಲಿ ತಲೆದೋರುತ್ತಿತ್ತು. ಅದರ ಈಚೆಗೆ ನಮ್ಮ ಜನರು ಈ ವಿಷಯದಲ್ಲಿ ಅನೇಕ ಕಡೆ ಉತ್ಸಾಹದಿಂದ ಕೆಲಸಮಾಡಿದ್ದಾರೆ. ಇದರ ಫಲವಾಗಿ ಹಲವು ಪತ್ರಿಕೆಗಳಲ್ಲಿ ಜನಪದ ಸಾಹಿತ್ಯವೆಂಬ ಹೆಸರಿಂದ ಬಹುರೀತಿಯ ಕೃತಿ ಪ್ರಕಟವಾಗಿದೆ. ಈ ಕೃತಿಯೆಲ್ಲ ಒಂದೇ ಮಟ್ಟದ ಒಂದೇ ಬೆಲೆಯ ಕವಿತೆಯಲ್ಲ. ಇವನ್ನು ಬರೆದವರು ಬಹುಜನ; ಅವರ ಭಾಷಾಜ್ಞಾನ ಕಾವ್ಯಸಂಸ್ಕೃತಿ ವ್ಯತ್ಯಾಸವಾಗಿದ್ದಂತೆ ಅವರ ಕವನದ ಯೋಗ್ಯತೆಯೂ ಹೆಚ್ಚು ಕಡಮೆ ಆಯಿತು. ವಿದ್ಯಾವಂತರ ಕವಿತೆಯಲ್ಲಿಯೂ ಬರೆಯುವವನ ಯೋಗ್ಯತೆಯನ್ನನುಸರಿಸಿ ಕಾವ್ಯದ ಯೋಗ್ಯತೆ ಹೆಚ್ಚು ಕಡಮೆ ಆಗುತ್ತದೆ. ಆದರೆ ಜನತೆಯ ಕೃತಿಯಲ್ಲಿ ಒಂದು ವಿಶೇಷ. ಪಾಂಡಿತ್ಯದ ಕಾವ್ಯ ಬಹು ಕಡಮೆಯ ರೀತಿಯದಾದಾಗ ಬರಿಯ ವೇಷವಾಗುತ್ತದೆ. ಬಹು ನಿಕೃಷ್ಟವಾದ ಜನತೆಯ ಕಾವ್ಯಕ್ಕಾದರೂ ಇಂಥ ಕವಿತೆಯನ್ನು ಕೈಬಿಡುವ ಸಹಜತೆ ಅಂಟಿಕೊಂಡಿರುತ್ತದೆ. ಬೆಲೆಯದಾದರೂ ಬೆಲೆಯಿಲ್ಲದ್ದಾದರೂ ಜನತೆಯ ಕವಿತೆ ಈ ಕಾರಣದಿಂದ ಗಮನಕ್ಕೆ ಅರ್ಹವಾದದ್ದು. ಅದು ಜನತೆಯ ಸಹಜವಾದ ನುಡಿ. ಜನದ ಕ್ಷೇಮವನ್ನು ಬಯಸುವವರೆಲ್ಲ ಈ ಕವಿತೆಯನ್ನು ದೃಷ್ಟಿಯಿಟ್ಟು ನೋಡಬೇಕು, ಮನಸ್ಸು ಕೊಟ್ಟು ತಿಳಿಯಬೇಕು. ಇನ್ನು ಯಾವ ರೀತಿಯಿಂದಲಾದರೂ ತಿಳಿಯಲಾಗದ ಕೆಲವು ವಿಷಯಗಳು ನಮಗೆ ಈ ಕವಿತೆಯಿಂದ ತಿಳಿಯುತ್ತವೆ. ಇದನ್ನು ಕುರಿತ ಕೆಲವು ಸಂಗತಿಯನ್ನು ನಮ್ಮ ಜನತೆಯ ಸಂಸ್ಕೃತಿಯ ವಿಷಯವಾದ ಒಂದು ಉಪನ್ಯಾಸದಲ್ಲಿ ಸೂಚಿಸಿದೆ. ಅದೇ ವಿಷಯವನ್ನು ಹಿಡಿದು ಈಚೆಗೆ

ನಮಗೆ ದೊರೆತಿರುವ ಕೃತಿಗಳಿಂದ ಉದಾಹರಣೆಗಳನ್ನು ಎತ್ತಿ ಈ ಲೇಖನದಲ್ಲಿ ಇನ್ನೆರಡು ಮಾತನ್ನು ಹೇಳಿದೆ.

೨

ಜನತೆಯ ಕಾವ್ಯವನ್ನು ನೋಡುವಲ್ಲಿ ನಮಗೆ ಮೊದಲು ಕಾಣುವ ಲಕ್ಷಣ ಅದರ ವೈವಿಧ್ಯ. ಚೆನ್ನಪಟ್ಟಣದ ಶ್ರೀಪರ್ಾ ವಾಸುದೇವಯ್ಯನವರ ಬಾಲ ಬೋಧೆಯ ಕಡೆಯಲ್ಲಿ ಕೊಟ್ಟಿರುವ "ಯಾಕಳುವೆ ಎಲೆ ರಂಗ" ಎಂಬ ಹಾಡಿನಿಂದ ಹೊರಟು, ಫ್ಲೀಟರು ಇಂಡಿಯನ್ ಆಂಟಿಕ್ವೆರಿಯಲ್ಲಿ ಪ್ರಕಟಿಸಿದ ಕಥೆಗಳನ್ನು ಮುಟ್ಟಿ, ಗೋಪಿನ ಕಥೆ ಶನಿಮಾಹಾತ್ಮ್ಯೆ ನಳಚರಿತ್ರೆಯ ಮೇಲೆ ಹಾದು, ಧಾರವಾಡದ ಗೆಳೆಯರು ಪ್ರಕಟಿಸಿದ ಗರತಿಯ ಹಾಡು ಜೀವನಸಾಂಗತ್ಯಗಳನ್ನು ಸೇರುವ ವೇಳೆಗೆ ನಮಗೆ ಅನೇಕ ರೀತಿಯ ಕವಿತೆ ಕಂಡಿರುತ್ತದೆ. ಜೋಗುಳದ ಪದ, ಪ್ರಣಯದ ಗೀತ, ಪುರಾಣದ ಕತೆ, ಇತಿಹಾಸ, ನೀತಿಯ ಕತೆ, ವಿಕಟಗೀತ, ವಿಡಂಬನ ಕಾವ್ಯ, ಕೋಲಾಟದ ಪದ, ಹಚ್ಚಿಹಸೆ ಆರತಿಯ ಪದಗಳು, ಸ್ಥಳಗಳ ಕಥೆಗಳು, ಬೀಸುವ ಪದಗಳು—ಜೀವನದ ಎಲ್ಲ ಸಂದರ್ಭಕ್ಕೂ ಸಂಬಂಧಪಟ್ಟ ಕವಿತೆಯನ್ನು ಈ ಸಾಹಿತ್ಯದಲ್ಲಿ ನಾವು ಕಾಣಬಹುದು. ವಸ್ತುವಿನ ವೈವಿಧ್ಯವು ಇದರ ಛಂದಸ್ಸಿನಲ್ಲಿಯೂ ಕಾಣುತ್ತದೆ. ತ್ರಿಪದಿ, ಚೌಪದಿ, ಅಷ್ಟಪದಿ, ಗೀತ, ಹಾಡು. ನಳಚರಿತ್ರೆಯಂತಹ ಕಾವ್ಯದಲ್ಲಿ ಛಂದಸ್ಸಿನ ಗ್ರಂಥಗಳಲ್ಲೇ ದೊರೆಯದ ಸೊಬಗಿನ ನೋನೆ ಎಂಬ ಹೆಸರಿನ ಛಂದೋರೂಪ. ಇದರ ಜೊತೆಗೆ ನಮ್ಮ ಜನತೆ ಸುಖದಿಂದ ಕೇಳುವ ಕವಿತೆಯಲ್ಲಿ ಭಾಷಾವೈವಿಧ್ಯವೂ ಇದೆ. ತೆಲುಗು ಕನ್ನಡ ಬೆರೆಯುವ ಕಡೆ ತೆಲುಗಿನ ಪದಗಳು, ತಮಿಳು ಕೊಂಕಣಿ ತುಳು ಬೆರೆದಲ್ಲಿ ಆಯಾ ಭಾಷೆಯ ಪದಗಳು, ಮೈಸೂರ ಕಡೆ ಅಲ್ಲಿಯ ಕನ್ನಡ, ಧಾರವಾಡದ ಕಡೆ ಅಲ್ಲಿಯದು; ಜನದ ಕಾವ್ಯಲಾಲಸೆಯನ್ನು ತುಂಬುವ ಈ ಕವಿತೆ ಜನದ ಭಾಷೆಯಲ್ಲೇ ಇದೆ. ಒಟ್ಟಿನಲ್ಲಿ ಈ ಸಾಹಿತ್ಯ ಜನತೆಯ ಸ್ಥಿತಿ ಗತಿ ಆಸ್ಥೆ ಅವಸ್ಥೆ ಎಲ್ಲವನ್ನೂ ಅನುಸರಿಸಿ ಎಲ್ಲಕ್ಕೂ ರೂಪು ಕೊಡುತ್ತದೆ. ಕಲಿತವರ ಕವಿತೆಯದರಂತೆ ಈ ಕವಿತೆಯದೂ ಪ್ರತ್ಯೇಕವಾದ ಒಂದು ರಾಜ್ಯ. ಇದರದೇ ಒಂದು ವಿಸ್ತಾರ ಉಂಟು, ಇದರಲ್ಲಿಯೂ ಒಂದು ನೀತಿ ರೀತಿ ಉಂಟು.

೩

ಜನತೆಯ ಕಾವ್ಯದ ಅರ್ಥವನ್ನು ತಿಳಿಯುವುದಕ್ಕೆ ಅನೇಕ ವೇಳೆ ಅಭ್ಯಾಸ ಇರಬೇಕು. ಮುಖ್ಯವಾಗಿ ಇದು ಹಾಡುವ ಕೇಳುವ ಕೃತಿ; ಬಲ್ಲವರು ಹಾಡಿ ಸಹೃದಯರು ಕೇಳಿ ಅರ್ಥವಾಗುವ ಕವಿತೆ. ವಿದ್ಯಾವಂತರೆನ್ನುವ ನಾವು ಈ ಕವಿತೆಗೆ ಬಹು ವೇಳೆ ಬಲ್ಲವರೂ ಅಲ್ಲ ಸಹೃದಯರೂ ಅಲ್ಲ. ಮೊದಲಲ್ಲೇ ನಮಗೆ ಒಂದು ಕಷ್ಟ ಈ ಕೃತಿಯನ್ನು ಹಾಡುವುದಕ್ಕೆ ಕೇಳುವುದಕ್ಕೆ ಪ್ರತಿಯಾಗಿ ಅಚ್ಚಿನಲ್ಲಿ ಮೌನವಾಗಿ ಓದುವುದರಿಂದ ಬರುತ್ತದೆ. ಧಾರವಾಡದ ಪ್ರಾಂತದ ಹೆಣ್ಣುಮಕ್ಕಳ ಪದಗಳನ್ನು ಶ್ರೀಮಾನ್ ಬೇಂದ್ರೆಯವರು ಮೈಸೂರು ಸೀಮೆಯ ಸಭೆಗಳಲ್ಲಿ ಓದಿ ಹೇಳಿದಾಗ ಅದನ್ನು ಮೆಚ್ಚದ ಜನವಿರಲಿಲ್ಲ. ಆದರೆ ಅದೇ ಜನ ಅನೇಕ ವೇಳೆ ತಾವೇ ಓದಿದರೆ, ಆ ಪದಗಳಲ್ಲಿ ಅಷ್ಟು ಸೊಗಸನ್ನು ಕಾಣಲಿಲ್ಲ. "ಹಾಲ್ಬೇಡಿ ಹರಿದತ್ತ, ನೀರ್ಬೇಡಿ ನಿಂತತ್ತ, ಮೊಸರ್ಬೇಡಿ ಕೆಸರು ತುಳಿದತ್ತ" ಎನ್ನುವ ಮಾತುಗಳನ್ನು ಕಾಗದದ ಮೇಲೆ ನೋಡಿ ಇದರ ಅರ್ಥವೇನೆಂದು ನಾವು ವೃಥಾ ಚಿಂತಿಸುತ್ತೇವೆ. ಹಾಲ್ಬೇಡಿ ಹರಿದತ್ತ ಏನಾಯಿತು? ನೀರ್ಬೇಡಿ ನಿಂತ ಕಡೆ ಏನಾಯಿತು? ಮೊಸರು ಬೇಡಿ ಕೆಸರು ತುಳಿದಲ್ಲಿ ಏನಾಯಿತು? ಎಂದು ನಮ್ಮ ಪ್ರಶ್ನೆ. ಇದಕ್ಕೆಲ್ಲ ಕಾರಣವೇನೆಂದರೆ 'ಹರಿದತ್ತ, ತುಳಿದತ್ತ, ನಿಂತತ್ತ' ಎನ್ನುವುದನ್ನು, ಅತ್ತ ಇತ್ತ ಎತ್ತ ಎಂದರೆ ಅಲ್ಲಿ ಇಲ್ಲಿ ಎಲ್ಲಿ ಎಂಬ ಮಾತಿನ ಸರಣಿಯಿಂದ ಓದುವುದು. ಮೊದಲು ಒಂದು ಸಲ ಓದುವಾಗ ಈ ರೀತಿ ಅದನ್ನು ಓದಿಕೊಂಡು ಬಿಟ್ಟರೆ ಮನಸ್ಸು ತಪ್ಪುದಾರಿಯಲ್ಲಿ ಹರಿದು ಹೋಗಿ ಅರ್ಥ ನಮ್ಮ ಕೈಗೆ ಸಿಕ್ಕದೆಯೇ ಹೋಗುತ್ತದೆ. ಈ ಪದ್ಯದಲ್ಲಿ ಅತ್ತ ಎನ್ನುವುದು ಅಗಲವಾದ ಅಕಾರದ ಸ್ಥಳವಾಚಕಪದವಲ್ಲ. ಅಳು ಧಾತುವಿನ ಭೂತವಾಚಕಶಬ್ದ; ಕಡಮೆ ಅಗಲದ ಅಕಾರದ ಕ್ರಿಯಾಪದ. ಕೃಷ್ಣಯ್ಯನು ಹಾಲುಬೇಡಿ ಹರಿದು ಅತ್ತನು, ನೀರು ಬೇಡಿ ನಿಂತು ಅತ್ತನು, ಮೊಸರು ಬೇಡಿ ಕೆಸರು ತುಳಿದು ಅತ್ತನು. ಇಷ್ಟಾದ ಮೇಲೆ ಈ ಕೆಸರು ತುಳಿದು ಅಳುವುದು ಏನು, ಮಗು ಏನಾದರೂ ಕೆಸರಿಗೆ ಓಡಿಹೋಗಿ ತುಳಿದನೋ ಎಂದು ಪ್ರಶ್ನೆ ತಲೆದೋರುತ್ತದೆ. ಮಗು ಹಠದ ಸ್ವಭಾವದವನು. ತುಂಬ ಕೋಪ ಬಂದಾಗ ತೊಪ ತೊಪ ತೊಪನೆ ಕುಣಿಯುತ್ತ ಗಲಭೆ ಮಾಡಿ ಅಳುವುದು ಅವನ ವಾಡಿಕೆ.

ಕಟ್ಟಡದ ಕೆಲಸಕ್ಕೆ ಕೆಸರು ತುಳಿಯುವವನು ಅದರಲ್ಲಿ ಹೀಗೆ ತೊಪ ತೊಪ ತೊಪನೆ ಕುಣಿಯುತ್ತಾನೆ. ಇಲ್ಲಿ ಮಗು ಕೆಸರು ತುಳಿಯುವವನಂತೆ ಕುಣಿದನು. ಇದೂ ಆದ ಮೇಲೆ ಪದ್ಯದ ಪದ್ಧತಿಯನ್ನು ಕಾಣದೆ ಇರುವುದರಿಂದ ಅದನ್ನು ಅರ್ಥಮಾಡಿಕೊಳ್ಳದೆ ಹೋಗುವುದೂ ಉಂಟು. ತರುಣನಾದ ಪತಿ ಹೆಂಡತಿಯನ್ನು ಹೊಡೆದನು; ಅವಳು ಒಳಗೆ ಹೋಗಿ ಅಳುತ್ತ ಇದ್ದರೆ ತಾನೂ ಹೋಗಿ ಅವಳನ್ನು ಸಂತೈಸಿದನು; ಸೆರಗನ್ನು ಹಿಡಿದು "ನಿನಗೆ ನಾನು ಹೆಚ್ಚೊ, ನಿನ್ನ ತೌರು ಹೆಚ್ಚೊ" ಎಂದು ಕೇಳಿದನು. ಈ ಪದ್ಯವನ್ನು ಕುರಿತ ಒಂದು ವಿಮರ್ಶೆಯಲ್ಲಿ ಆ ಗಂಡನು ತನ್ನ ಹೆಂಡತಿಯನ್ನು ಯಾವುದೋ ಕಾರಣದಿಂದ ಹೊಡೆದನು ಎಂದು ಹೇಳಿದೆ. ಹೊಡೆದದರ ಕಾರಣ ಪದ್ಯದಲ್ಲಿ ಸ್ಪಷ್ಟವಾಗಿದೆ. ಅದನ್ನು ನಾವು ತಿಳಿದುಕೊಳ್ಳಬೇಕು ಅಷ್ಟೇ. ತೌರಿಗೆ ಹೋಗಬೇಕೆಂದು ಹೆಂಡತಿ ಅಪೇಕ್ಷೆಯನ್ನು ತೋರಿಸಿದ್ದಾಳೆ. ತನಗೆ ಇವಳನ್ನು ಬಿಟ್ಟು ಇರುವುದಕ್ಕೆ ಇಷ್ಟವಿಲ್ಲ, ಇವಳಿಗೆ ಮಾತ್ರ ತನ್ನನ್ನು ಬಿಟ್ಟುಹೋಗುವುದು ಇಷ್ಟವಾಗಿದೆಯಲ್ಲ ಎಂದು ಇವನಿಗೆ ಕೋಪ. ಆದದರಿಂದಲೇ ಅವನು ಅವಳನ್ನು ಹೊಡೆದನು. ಪದ್ಯವನ್ನು ಓದಿದವರು ಇದನ್ನು ಕಾಣದೆ ಇದ್ದರೂ ಪದ್ಯದ ಸೊಗಸಿನ ಸ್ವಲ್ಪ ಭಾಗವನ್ನು ತಿಳಿಯಬಹುದು. ಆದರೆ ಅದರ ಸಂಪೂರ್ಣವಾದ ಅರ್ಥ ತಿಳಿಯಬೇಕಾದರೆ ನಡೆದ ಈ ಸಂಗತಿಯನ್ನು ಊಹಿಸಿಕೊಳ್ಳಬೇಕು. ಇಷ್ಟೆಲ್ಲ ಆದ ಮೇಲೂ ತಿಳಿಯದೆ ನಿಲ್ಲುವ ಭಾಗ ಸ್ವಲ್ಪವಿದೆ. ಹೆಂಗಸೊಬ್ಬಳು ಕೆರೆಯ ಏರಿಯ ಮೇಲೆ ಹೋಗುತ್ತಿದ್ದಾಗ ರಸಿಕನೊಬ್ಬನು ಅವಳಿಗೆ "ಪಡಿಜೋಳ ಅಳೆಯೋಣ ಬಾ" ಎಂದು ಹೇಳುತ್ತಾನೆ. ಹೀಗೆಂದರೆ ಏನೆಂದು ನನಗೆ ಈಗಲೂ ತಿಳಿಯದು. ಆದರೆ ಏನಿರಬಹುದು ಎಂದು ಅವಳ ಉತ್ತರ ಸೂಚಿಸುತ್ತದೆ. ಅವಳು "ಹೋಗು, ಇದು ಯಾತರ ಮಾತು, ನಿನಗಿಂತ ಚೆಲುವ ಮನೆಯ ರಾಯ" ಎನ್ನುತ್ತಾಳೆ. ಹೀಗೆ ಈ ಸಾಮಾನ್ಯ ಜನದ ಸಾಮಾನ್ಯ ಕವಿತೆಯನ್ನು ಅರ್ಥಮಾಡಿಕೊಳ್ಳುವುದಕ್ಕೂ ನಾವು ಯಾಸ್ಕಸಾಯಣರ ಊಹೆ ಉಪಕರಣಗಳನ್ನು ತರಬೇಕಾಗುತ್ತದೆ.

೪

ಗುಡ್ಡವಿಾದ ದಾನಿಲ್ಲು ಮತ್ತು ಕಟ್ಟವಿಾದ ಕದಿರಿಗಾಡು ಎಂಬ ತೆಲುಗು ಪದ್ಯಗಳನ್ನು ಕುರಿತು ಹಿಂದಣ ಉಪನ್ಯಾಸದಲ್ಲಿ ಎರಡು ಮಾತನ್ನು ಹೇಳಿದೆ.

ಇದೇ ರೀತಿಯ ಇನ್ನು ಕೆಲವು ಪದ್ಯಗಳನ್ನು ನಮ್ಮ ಮಿತ್ರರೊಬ್ಬರು ಆ ಮೇಲೆ ನನಗೆ ಹೇಳಿದರು—

ಬಳ್ಳಾರಿ ಸೀಮವಾಡಾ ಬಾರೀ ರುಮಾಲುವಾಡಾ
ಬಾರೀ ರುಮಾಲು ಪೈನ ತಗಲಿಂದಿ ನಾ ಮನಸು
ರಾ ರಾ ಮುದ್ದುಲಗುಮ್ಮಾ ||

ನಲ್ಲಚೀರ ಕಟ್ಟುಕೋನೀ ತೆಲ್ಲರವಿಕ ತೊಡುಕ್ಕೋನೀ
ಪಿಲ್ಲಕಾಯಿ ರಂಗನ್ನಿ ಪಿಲುಚುಕೋನಿ ವಸ್ತುಂದಿ
ರಾ ರಾ ಮುದ್ದುಲಗುಮ್ಮಾ ||

ಕಟ್ಟಮಿಾದ ಕದಿರಿಗಾಡೂ ಕಟ್ಟಕಿಂದ ಕದಿರಿ ಉಂದೀ
ಕಟ್ಟಕಿಂದ ಕತ್ತಾಳ್ಳೀ ಮೇಮ್ಮರಚಿ ಪೋದಾಮು
ರಾ ರಾ ಮುದ್ದುಲಗುಮ್ಮಾ ||

ಮೇಲೆ ಮೇಲೆ ನೋಡಿದರೆ ಈ ಪದ್ಯಗಳು ಸ್ವಲ್ಪ ಅನೀತಿಯ ಕೃತಿಗಳೆಂದು ಕಾಣುತ್ತದೆ. ಆದರೆ ಇವನ್ನು ಹೇಳಿ ನಗುವ ಜನದ ಜಾಳು ಏನು ಎಂದು ಊಹಿಸಿಕೊಂಡರೆ ಇವನ್ನು ಅಷ್ಟು ದುಷ್ಟಪದ್ಯಗಳೆಂದು ನಾವು ಹೇಳುವುದಿಲ್ಲ. ಬಳ್ಳಾರಿಯ ದೊಡ್ಡ ಮನುಷ್ಯ ಕಂಟ್ರಾಕ್ಟು ಕೆಲಸಮಾಡುತ್ತಿದ್ದಾನೆ. ನಾಲ್ಕು ಗಂಡಾಳು ಆರು ಹೆಣ್ಣಾಳು ಕಟ್ಟಡದ ಕೆಲಸದಲ್ಲಿ ತೊಡಗಿದ್ದಾರೆ. ಗಂಡಾಳು ಒಬ್ಬನು ಬಳ್ಳಾರಿ ಸೀಮವಾಡಾ ಎಂದು ಗೀತವನ್ನು ಎತ್ತುತ್ತಾನೆ. ಆರು ಹೆಣ್ಣಾಳಿನ ಪೈಕಿ ಯಾವ ಒಬ್ಬಳು ಕಂಟ್ರಾಕ್ಟರ ಭಾರೀ ರುಮಾಲಿನ ಕಡೆ ನಾಲ್ಕು ಸಲ ನೋಡಿರುತ್ತಾಳೋ ಅಥವಾ ನೋಡಿರುವಳೆಂದು ಆ ಸಂದರ್ಭದಲ್ಲಿ ಕಲ್ಪನೆಯೋ ಅವಳನ್ನು ಸ್ವಲ್ಪ ಪರಿಹಾಸ್ಯಮಾಡಬೇಕೆಂದು ಅವನ ಉದ್ದೇಶ. ಕಂಟ್ರಾಕ್ಟರ ಕಡೆ ನೋಡಬೇಕೆಂಬ ಮನಸ್ಸಿಲ್ಲದ ಹೆಣ್ಣಾಳಿಗೂ, ನೋಡಿ ಉಪಯೋಗವಿಲ್ಲವೆಂಬ ಪರಿಣತ ವಯಸ್ಸಿನ ಹೆಣ್ಣಾಳಿಗೂ ಸ್ವಲ್ಪ ಇದರಿಂದ ತಮಾಷೆ, ಸಂತೋಷ. ಚೆಲುವೆ ನಾಚಿಕೊಂಡೋ ತಲೆ ಕೊಡವಿಯೋ 'ನೀವಿನ್ನೇನು ಮಾಡೀರಿ' ಎಂದು ಹೇಳುವಳು. ತನ್ನನ್ನು ಕುರಿತು ಈ ಮಾತನ್ನು ಹೇಳುತ್ತಿರುವರಲ್ಲ ಎಂದು ಅವಳಿಗೆ ನಿಜವಾಗಿ ಮನಸ್ಸಿನಲ್ಲಿ ಸಂತೋಷ. ನಾಲ್ಕು ಜನದ ಕೌತುಕಕ್ಕೆ ವಿಷಯವಾಗುವುದೇ ಯಶಸ್ಸು, ಕೀರ್ತಿ. ಆದರೂ ಅವಳು ಅಸಮಾಧಾನವನ್ನು ನಟಿಸಬೇಕು,

ನಟಿಸುತ್ತಾಳೆ. ಗಂಡಾಳೆಲ್ಲ ಗೊಳ್ಳೆಂದು ನಗುತ್ತಾರೆ. ಮಧ್ಯೆ ಇಟ್ಟಿಗೆ ತರುವವರು ತರುತ್ತ, ಕೆಸರನ್ನು ಎತ್ತಿ ಕೊಡುವವರು ಕೊಡುತ್ತ, ಕಟ್ಟಡದ ಕೆಲಸ ಮುಂದೆ ಸಾಗುತ್ತಿರುತ್ತದೆ. ಈ ಪ್ರಣಯದಲ್ಲಿ ಕಲ್ಮಷವಿಲ್ಲ. ಇಲ್ಲಿ ಕೊಳೆಯಾಗುವುದು ಮಣ್ಣನ್ನು ಮುಟ್ಟುವ ಇವರ ಕೈ ಮಾತ್ರ. ಈ ಹಾಸ್ಯದಲ್ಲಿ ಹೊಕ್ಕು ಇವರ ಮನಸ್ಸು ಶುಚಿಯಾಗಿಯೇ ಇರುತ್ತದೆ. ಗುಡ್ಡದ ಮೇಲಿನ ಹೆಂಗಸೂ ಕದಿರಿಯ ಹೆಂಡತಿಯೂ ತಮ್ಮ ಪ್ರಿಯರೊಂದಿಗೆ ಹೊರಟುಹೋದದ್ದು ಹಿಂದೆ ಉದಾಹರಿಸಿದ ಪದ್ಯಗಳಲ್ಲಿ ಕಂಡಿದೆ. ಕದಿರಿಗನು ಒಂಟಿಯಾದನಲ್ಲಾ ಎಂದು ಚಿಂತಿಸುವವರು ಯಾರಾದರೂ ಇದ್ದರೆ, ಅವರು ಈ ಮೂರನೆಯ ಪದ್ಯದಿಂದ ಸಮಾಧಾನ ತಂದುಕೊಳ್ಳಬಹುದು. ಆ ಓಡಿಹೋದ ಹೆಂಗಸೋ ಬೇರೊಬ್ಬಳೋ ಕದಿರಿ ಇಲ್ಲಿ ಕದಿರಿಗನನ್ನೇ ಬಾ ಎಂದು ಕರೆಯುತ್ತಾಳೆ.

೫

ಇವು ತೆಲುಗಿನ ಪದ್ಯಗಳು; ಕನ್ನಡನಾಡಿನ ಒಂದು ಅಂಚಿನಲ್ಲಿ ದೊರೆಯತಕ್ಕವು. ಅಲ್ಲಿಯೇ ದೊರೆಯುವ ಕನ್ನಡದ ಕೃತಿ ನಮಗೆಲ್ಲ ಚಿಕ್ಕಂದಿನಿಂದ ಪರಿಚಿತವಾದದ್ದು: ಶ್ರೀಮಾನ್ ವಾಸುದೇವಯ್ಯನವರ ಬಾಲಬೋಧೆಯ ಜೋಗುಳದ ಪದ್ಯ—

ಯಾಕಳುವೆ ಎಲೆ ರಂಗ ಬೇಕಾದ್ದು ನಿನಗಿದೆ
ನಾಕೆಮ್ಮೆ ಕರೆದ ನೊರೆಹಾಲು ಸಕ್ಕರೆ
ನೀ ಕೇಳಿದಾಗ ಕೊಡುವೆನು ||

ಅಂಗಿಯಾ ತೊಟ್ಟರೆ ರಂಗನಾ ಸರಿಯೆಂಬೆ
ಚುಂಗುಬಿಟ್ಟರೆ ನವಿಲೆಂಬೆ ಕೃಷ್ಣಯ್ಯ
ಶೃಂಗಾರವಾಗೆ ದೊರೆಯೆಂಬೆ ||

ಅತ್ತು ಕಾಡುವನಲ್ಲ ಮತ್ತೆ ಬೇಡುವನಲ್ಲ
ಎತ್ತಿಕೊಳ್ಳೆಂಬ ಹಠವಿಲ್ಲ ನಿನ್ನಂಥ
ಹತ್ತು ಮಕ್ಕಳು ಇರಬಹುದು ||

ಹಾಲ್ಬೇಡಿ ಹರಿದತ್ತ ನೀರ್ಬೇಡಿ ನಿಂತತ್ತ
ಮೊಸರ್ಬೇಡಿ ಕೆಸರು ತುಳಿದತ್ತ ಕೃಷ್ಣಯ್ಯ
ಹಸುರಂಗಿ ಬೇಡಿ ಹಸಿದನು ||

ಈ ಪದ್ಯಗಳ ಸೊಗಸನ್ನು ಕಾಣದವರು ಯಾರು? ಹಾಡಿನಲ್ಲಿ ಹೊಗಳುವ ಸಮೃದ್ಧಿಗೂ ಹಾಡುವ ಮನೆಯ ಬಡತನಕ್ಕೂ ಬಹು ವೇಳೆ ತುಂಬ ಅಂತರ ವಿರುತ್ತದೆ. ಸೂರೆಹಾಲು ಸಕ್ಕರೆಯೂ ಅಂಗಿ ಚುಂಗೂ ಎಲ್ಲ ಮಕ್ಕಳ ಪಾಲಿಗೂ ಬೇಕಾದುವೇ. ಇಲ್ಲದ ಕಡೆ ಅದನ್ನು ತಾಯಿ ಊಹಿಸಿಕೊಳ್ಳಬೇಕು. ಅದು ಯಾವುದಿದ್ದರೂ ಇಲ್ಲದಿದ್ದರೂ ಮಗು ದೊರೆಯಂತೆ ನವಿಲಂತೆ ದೇವರಂತೆ ತನ್ನ ತಾಯಿಗೆ ಕಾಣುವುದು ನಿತ್ಯಸತ್ಯ. ನಗುತ್ತಿರುವಾಗ ಅದು ಬಹು ಒಳ್ಳೆಯ ಮಗುವೆಂದು ಅವಳಿಗೆ ಕಾಣುತ್ತದೆ; ಇಂಥ ಮಕ್ಕಳು ಹತ್ತನ್ನು ಸಾಕಬಹು ದೆಂದು ತೋರುತ್ತದೆ. ತಾಯಿಗೆ ಅದರ ಅಳುವೂ ಚೆನ್ನವೇ, ಹಠವೂ ಒಪ್ಪಿಗೆಯೇ. ಇದು ಬೇಕು ಅದು ಬೇಕು ಎಂದು ಮಗು ಹಗರಣಮಾಡಿದಾಗ ಅವಳಿಗೆ ಕಾಣುವುದು ತನ್ನ ಕಷ್ಟವಲ್ಲ; ಅದು ಆಯಾಸಪಟ್ಟು ಹಸಿಯುತ್ತದಲ್ಲಾ ಎನ್ನು ವುದು. ತಾಯಿತನದ ಮುಖ್ಯ ತತ್ತ್ವ ಈ ಪದಗಳಲ್ಲಿ ಉಕ್ತವಾಗಿದೆ. ಇದು ಮಾತೃ ಸಂಹಿತೆ, ಧಾತ್ರೀ ಉಪನಿಷತ್.

ಧಾರವಾಡದ ಮಿತ್ರರು ಪ್ರಕಟಿಸಿರುವ ಗರತಿಯ ಹಾಡಿನ ಪದಗಳಲ್ಲಿ ಇಂಥ ಜೋಗುಳದ ಪದ್ಯಗಳು ಅನೇಕ ದೊರೆಯುತ್ತವೆ. ಮಗುವಿಗೆ ಜೋಗುಳ ವೆಂದರೆ ಆಸೆ—

ಜೋಗುಳಾ ಹಾಡಿದರೆ ಆಗಳೇ ಕೇಳ್ಯಾನ
ಹಾಲ ಹಂಬಲವ ಮರತಾನ ಕಂದಯ್ಯಗೆ
ಜೋಗುಳಾದಾಗ ಅತಿ ಮುದ್ದ ||

ಮಗುವಿನ ಹಠವನ್ನು ತಾಯಿ ವರ್ಣಿಸುತ್ತಾಳೆ—

ಯಾತಕಳುತಾನೆಂದು ಎಲ್ಲಾರು ಕೇಳ್ಯಾರ
ಕಾಯದ ಹಾಲ ಕೆನೆ ಬೇಡಿ ಕಂದಯ್ಯ
ಕಾಡಿ ಕೈಬಿಟ್ಟು ಇಳಿಯಾನ ||

ಅಳುವ ಮಗು ಹೇಗೆ ಕಾಣುತ್ತದೆ? ಈ ತಾಯಿ ಒಂದು ಚಿತ್ರವನ್ನು ಮಾಡು ತ್ತಾಳೆ—

ಅಳುವ ಕಂದನ ತುಟಿಯು ಹವಳದಾ ಕುಡಿ ಹಂಗೆ
ಕುಡಿಹುಬ್ಬು ಬೇವಿನೆಸಳ್ಹಂಗೆ ಕಣ್ನೋಟ
ಶಿವನ ಕೈ ಅಲಗು ಹೊಳೆದ್ಹಂಗೆ ||

ಮಗುವಿನ ಆಕಾರ ಹೀಗೆ—

ಕಾಡಿಗ್ಗಚ್ಚಿದ ಕಣ್ಣು ತೀಡಿಮಾಡಿದ ಹುಬ್ಬು
ಮಾವೀನ ಹೋಳ ನಿನ ಕಣ್ಣು ||

ಅಜ್ಜಿಯೋ ಚಿಕ್ಕಮ್ಮನೋ ಬಂದು ಮಗುವನ್ನು ನೋಡುತ್ತಾರೆ—

ತೊಟ್ಟೀಲದಾಗೊಂದು ತೊಳೆದ ಮುತ್ತನು ಕಂಡೆ
ಹೊಟ್ಟೆ ಮೇಲಾಗಿ ಮಲಗ್ಯಾನ ಕಂದಯಗೆ
ಮುತ್ತೀನ ದೃಷ್ಟಿ ತೆಗದೇನ ||

ಮಗುವಿನೊಂದಿಗೆ ತಾಯ ಸಖಿ ಆಟವಾಡುತ್ತಾಳೆ. ಅವನು ಎತ್ತಲೋ ಹೋಗುವಾಗ ಕರೆದಂತೆ ಮಾಡುತ್ತಾಳೆ. ಅವನು ತನ್ನ ಕಡೆಗೆ ಬರಲು ನಿನ್ನನ್ನು ಯಾರು ಕರೆದರು ಎನ್ನುತ್ತಾಳೆ—

ಹೌವಲ್ಲೆ ಎಂದರೆ ಹೋಗೋನು ತಿರಿಗ್ಯಾನ
ಎಲ ನಿನ್ನ ಯಾರು ಕರೆದವರು ನಾವು ನಮ್ಮ
ಗಿಣಿರಾಮನನ್ನ ಕರದೇವು ||

ಮಗುವಿನ ಮೇಲೆ ಅಕ್ಕರೆಯಿಂದ ಅವನಿಗೆ ಏನೇನು ಉಪಚಾರಮಾಡ ಬಹುದೆಂದು ತಾಯಿ ಯೋಚಿಸುತ್ತಾಳೆ—

ಆಡಿಬಾ ನನ ಕಂದ ಅಂಗಾಲ ತೊಳದೇನು
ತೆಂಗೀನಕಾಯ ತಿಳಿನೀರು ತಕ್ಕೊಂಡು
ಬಂಗಾರಮೋರೆ ತೊಳದೇನು ||

ಮಗು ಅಳುವಾಗ ಮನೆಯ ದೊಡ್ಡವರು ಸುಮ್ಮನೆ ಕೆಲಸವನ್ನು ಕೆಡಿಸು ತ್ತಾನೆಂದು ಅವನನ್ನು ದೂರಲು ಅವನ ತಾಯಿ—

ಅತ್ತರೆ ಅಳಲವ್ವ ಈ ಕೂಸು ನನಗಿರಲಿ
ಕೆಟ್ಟರೆ ಕೆಡಲಿ ಮನೆ ಕೆಲಸ ಕಂದನಂಥ
ಮಕ್ಕಳಿರಲವ್ವ ಮನೆತುಂಬ ||

ಎನ್ನುತ್ತಾಳೆ. ಯಾರು ಬೇಸತ್ತರೂ ಪ್ರಪಂಚ ನಿಲ್ಲುವುದಿಲ್ಲ. ತಾಯಿ ಬೇಸತ್ತರೆ ಗತಿಯೇನು?

೬

ಜೋಗುಳದ ಈ ಪದಗಳಲ್ಲಿ ಕಾಣುವ ತಾಯ ಅಕ್ಕರೆ ಮಿತಿಮೀರೆಯಿಲ್ಲದ್ದು. ಅದರ ಬಹು ವಿವರ ಕೇವಲಸಾಹಿತ್ಯವಾದ ಕವಿತೆಯಲ್ಲಿ ಕಾಣದ್ದು ; ನಿಜವಾಗಿ ಬಾಳಿನಲ್ಲಿ ಮಾತ್ರ ಪ್ರತ್ಯಕ್ಷವಾಗತಕ್ಕದ್ದು. ಈ ತಾಯಿ ಮಗುವಿನ ಮುಖವನ್ನು ತೊಳೆಯುವುದಕ್ಕೆ ತೆಂಗಿನಕಾಯ ತಿಳಿನೀರನ್ನು ತೆಗೆದುಕೊಳ್ಳುತ್ತಾಳೆ. ಎಳನೀರಲ್ಲಿ ಮುಖ ತೊಳೆದ ಮೇಲೆ ನೀರಿನಿಂದ ತೊಳೆಯದೆ ಬಿಡುವಂತಿಲ್ಲ. ಹಾಗಾದರೆ ಎಳನೀರು ಏಕೆಂದರೆ ತೊಳೆಯುವ ಆ ಮುಖ ಬಹು ಬೆಲೆಯುದಾದದ್ದರಿಂದ. ಪೇಷ್ವೆಗಳು ಪುಣ್ಯವಂತಿಕೆಯಲ್ಲಿ ಹಾಲಿನಿಂದ ಕೈತೊಳೆದುಕೊಳ್ಳುತ್ತಿದ್ದರು. ಉಳಿದವರಿಗೆ ಹಾಲು ಬೆಲೆಯ ವಸ್ತು. ತಮಗೆ ಅದು ಕೈತೊಳೆಯುವುದಕ್ಕೆ ಬೇಕಾದಷ್ಟು ವಿಪುಲವಾಗಿ ಉಂಟು ಎಂದು ತೋರಿಸುವುದು ಅವರ ಉದ್ದೇಶಗಳಲ್ಲಿ ಒಂದಾಗಿದ್ದಿರಬೇಕು. ಅದು ಐಶ್ವರ್ಯದ ಉತ್ಕರ್ಷ. ಮಗುವಿನ ಮುಖಕ್ಕೆ ಎಳನೀರು ತರುವುದು ತಾಯ ಮಮತೆಯ ಉತ್ಕರ್ಷ.

ಹಸುಮಗು ಚಿನ್ನವೆ ಮಿಸುನಿ ಹೊಂಬಣ್ಣವೆ
ಬಸುರಿಯರ ಹಣೆಯ ತಿಲುಕವೆ ನನ್ನಯ್ಯ
ಹೊಸ ಮುತ್ತು ಹೊನ್ನ ಕಲಶವೆ ||

ಎಂದು ತಾಯಿ ಮಗನನ್ನು ಕೊಂಡಾಡುತ್ತಾಳೆ.

ಹಾವಿನ ಹೆಡೆ ಚೆಂದ ಮಾವಿನ ಮಿಡಿ ಚೆಂದ
ಹಾರಾಡಿ ಬರುವ ಗಿಣಿ ಚೆಂದ ಕಂದಯ್ಯ
ನೀ ಚೆಂದ ನಮ್ಮ ಮನೆಗೆಲ್ಲ ||

ಮಗುವಿನಿಂದ ಹೆಂಗಸಿನ ಹಾರೈಕೆಯೆಲ್ಲ ತುಂಬುತ್ತದೆ—

ತೋಳುದ್ದ ತಲೆದಿಂಬು ಮಾರುದ್ದ ಹಾಸಿಗೆ
ಮಾಣಿಕ್ಯದಂಥ ಮಗ ಮುಂದೆ ಮಲಗಿರಲು
ಮಾರಾಯ್ರು ಗೊಡವಿ ನನಗೇನ ||

ಮಗನು ಬಹಳ ಒಳ್ಳೆಯದನ್ನು ತರತಕ್ಕವನು—

ಮಕ್ಕಳ ತಾಯವ್ವ ಕೆಟ್ಟೆನೆನ್ನಲು ಬೇಡ
ಪಕ್ಷಿ ಜಾತ್ಯಾಗೆ ಗರುಡನು ತನ್ನವ್ವನ
ಹುಟ್ಟಿದ ಸೆರೆಯ ಬಿಡಿಸ್ಯಾನು ||

ಸರಕಾರ ಎನ್ನೋದು ದರಕಾರ ನನಗಿಲ್ಲ
ಸರಕಾರದಾಗ ಸರಿಪಾಲು ತರುವಂಥ
ಸರದಾರ ಮಗನು ಮನೆಯಾಗ ||

ಮಕ್ಕಳನ್ನು ನೋಡುತ್ತ ತಾಯಿ ಎಲ್ಲ ಕಷ್ಟವನ್ನೂ ಮರೆಯುವಳು—

ಜನಕರಾಯನ ಮಗಳು ವನಕೆ ತೊಟ್ಟಿಲ ಕಟ್ಟಿ
ಕುಶಲವರನಿಟ್ಟು ತೂಗ್ಯಾಳು ಸೀತಾದೇವಿ
ನಗುತ ವನವಾಸ ಕಳೆದಾಳು ||

ಎಂಥ ಬಡತನವಾದರೂ ತಾಯಿಗೆ ಮಕ್ಕಳೆಂದರೆ ಬೇಸರವಿಲ್ಲ—

ಬಡತನ ನನಗಿರಲಿ ಬಹಳ ಮಕ್ಕಳಿರಲಿ
ಮೇಲಿ ಗುರುವಿನ ದಯೆಯಿರಲಿ ನನ ಗುರುವೆ
ಬಡತನದ ಚಿಂತೆ ನಿನಗಿರಲಿ ||

೭

ಈ ಉತ್ಸಾಹವೆಲ್ಲ ಗಂಡು ಮಕ್ಕಳನ್ನು ಕುರಿತದ್ದು. ಹೆಣ್ಣು ಮಕ್ಕಳೆಂದರೆ ಈ ಸಾಹಿತ್ಯದಲ್ಲಿ ಸಮ್ಮ ಜೀವನದಲ್ಲಿ ಹೇಗೋ ಹಾಗೆ ತುಂಬ ಪ್ರೇಮವೇ ಇದೆ. ಒಂದೊಂದು ಸಲ ಈ ಕೃತಿ

ಹೆಣ್ಣು ಹುಟ್ಟಿದ ಮನಿ ಹೆಗ್ಗಣ್ಣತ್ತಿದ್ಹಾಂಗ
ಗಂಡಸಾ ಮಗ ಗಜಭೀಮ ಹುಟ್ಟಿದರೆ
ಚಿಲಕಿ ಚಿತ್ತರ ನಗತಾವ ||

ಎಂದು ಹೆಣ್ಣು ಮಗುವನ್ನು ನಿಕೃಷ್ಟವೆಂಬಂತೆ ಹೇಳುವುದುಂಟು. ಆದರೆ ಒಟ್ಟಿನಲ್ಲಿ ಇದರ ಭಾವ

ಹೆಣ್ಣು ಹುಟ್ಟಿದೆ ಅಂತ ಹೇಳಿಕಳುವಲು ಬೇಡ
ಹೆಣ್ಣಂದರವರು ಹೆದರ‍್ಯಾರ ಕಂದವ್ವ
ಹೆಣ್ಣಲ್ಲ ನಮಗೆ ರವೆ ಚಿನ್ನ ||

ಎನ್ನುವ ಮಾತಿನದು. ಹೆಣ್ಣು ಮಗುವೆಂದರೆ ತಂದೆ ಮಾವನಿಗೆ ಸಂತೋಷ ಕಡಮೆ. ಆದರೆ ತಾಯಿಗೆ ಅದು ರವೆ ಚಿನ್ನ. ಹೆಣ್ಣೆಂದರೆ ತಂದೆ ತಾತನಾದರೂ ಚಿಂತಿಸುವುದು ಹೆಣ್ಣು ಗಂಡಿಗಿಂತ ಕಡಮೆ ಎನ್ನುವ ಕಾರಣದಿಂದ ಅಲ್ಲ;

ಹೆಣ್ಣು ಮಗುವಿನ ಬಾಳ ದಾರಿ ಗಂಡಿನ ದಾರಿಗಿಂತ ತೊಡಕಾದದ್ದರಿಂದ, ತಿದ್ದು ವುದಕ್ಕೆ ಸಿಕ್ಕದೆ ಹೋಗುವುದರಿಂದ, ಅದರ ಪರಿಣಾಮ ಶಂಕಾವಹವಾಗಿರುವುದ ರಿಂದ. ಮಗಳನ್ನು ಗಂಡನು ಸರಿಯಾಗಿ ಕಾಣದೆ ಇರಬಹುದು, ಅತ್ತೆ ಅಸೂಯೆ ಯಿಂದ ನೋಡಬಹುದು, ಮೈದುನ ಎರಡು ಮಾತನ್ನು ಹೇಳಬಹುದು. ಅವಳು ಕಪ್ಪಗಿದ್ದರೆ ಅವರಿಗೆ ಅಲಕ್ಷ್ಯ, ಕೆಂಪಗಿದ್ದರೆ ಸಂಶಯ. ಅವಳಿಗೆ ಮಕ್ಕಳು ಆಗದೆ ಹೋದರೆ ಬಂಜೆತನದ ಬಂಧನ. ತೌರಿಗೆ ಹೋಗೋಣವೆಂದರೆ ತಾಯಿ ಇದ್ದಾಗ ಆಗಬಹುದು; ಅತ್ತಿಗೆಯ ವಿಶ್ವಾಸಕ್ಕೆ ಕಾಯಬೇಕಾದರೆ ಅದು ತೌರಲ್ಲ. ಅಪವಾದವೇನಾದರೂ ಬಂತೋ ಸಂಟಿಲ್ಲ ತಲೆತಗ್ಗಿಸಬೇಕು.

ಹೆಣ್ಣು ಹಡೆದವ್ವನ ಹೆಮ್ಮೆಯೇನು ದೊಡ್ಡದು
ಹಣ್ಣು ಬಂದಾವ ತಿನಬಾರ ಹಡದವ್ವ
ಹೆಣ್ಣೀನ ಹರಲಿ ಹೊರಬಾರ ||

ಈ ಕವಿತೆ ಹೇಳುವಂತೆ

ಸೀತಾದೇವಿಯಷ್ಟು ಸಿರಿಯನುಂಡವರಿಲ್ಲ
ದ್ರೌಪದಿಯಷ್ಟು ಹರಲಿಯ ಹೊತ್ತವರು
ಈ ಲೋಕದಾಗ ಯಾರಿಲ್ಲ ||

ಎಷ್ಟು ಪುಣ್ಯವಂತರಲ್ಲಿ ಹುಟ್ಟಿ ಎಂಥ ಅರಮನೆಯನ್ನು ಹೊಕ್ಕರೂ ಹೆಣ್ಣು ಮಗುವಿನ ಬಾಳು ಕಷ್ಟವನ್ನು ಬಿಟ್ಟದ್ದಲ್ಲ.) ಬಡತನದಲ್ಲಿ ಹುಟ್ಟಿ ಗುಡಿಸಿಲನ್ನು ಹೊಕ್ಕು ಮಡದಿಯಾಗಿ ಮಕ್ಕಳನ್ನು ಹೆತ್ತು ಲೋಕವನ್ನು ಬೆಳೆಯಿಸಬೇಕಾ ದರೆ ಅದರ ಮಾತನ್ನು ಇನ್ನು ಹೇಳಬೇಕೆ? ಜೀವನಪಥ ಇಷ್ಟು ಕಷ್ಟವಾದದ್ದ ರಿಂದಲೇ ಜನ ಅದನ್ನು ನಡೆಯಬೇಕಾದ ಮಗು ತಮಗೆ ಬೇಡವೆನ್ನುವರು. ಆದರೆ ಹುಟ್ಟುವ ಮೊದಲು ಮಗು ಗಂಡಾಗಲಿ ಎಂದು ಅಪೇಕ್ಷಿಸಿದರೂ ಹೆಣ್ಣು ಹುಟ್ಟಿದರೆ ಅದು ಕಡಮೆಯೆಂಬ ಭಾವನೆ ಜನಕ್ಕೆ ಇಲ್ಲ. ಆ ಜೀವನದ ವಿಷಯ ದಲ್ಲಿ ಕನಿಕರ ಮೂಡುತ್ತದೆ. ಜನಪದ ಸಾಹಿತ್ಯದಲ್ಲಿ ಮಗನನ್ನು ಕುರಿತ ಮುಖ್ಯ ವಾದ ಭಾವ ಹೆಮ್ಮೆ, ಮೆಚ್ಚಿಗೆ. ಮಗಳನ್ನು ಕುರಿತ ಮುಖ್ಯವಾದ ಭಾವ ಮರುಕ, ಕನಿಕರ.

೮

ಈ ಭಾವನೆಯ ಆವರಣದಲ್ಲಿ ಬೆಳೆಯುವ ಹೆಣ್ಣುಜೀವದ ನಿಲುವು ಗರತಿಯ ಹಾಡಿನಲ್ಲಿ ಪ್ರಕಟವಾದ ಜಾತಿಯ ತ್ರಿಪದಿಗಳಲ್ಲಿ ಸುಲಕ್ಷಣವಾಗಿ ಚಿತ್ರಿತವಾಗಿದೆ. ಆ ಸಂಗ್ರಹದ ಸ್ವರೂಪವನ್ನು ವರ್ಣನೆಯಿಂದ ತಿಳಿಸಿಕೊಡುವುದು ಅಸಾಧ್ಯ. ತಿಳಿಯಬೇಕೆನ್ನುವವರು ಆ ಪದಗಳನ್ನೇ ಓದಬೇಕು. ಇಲ್ಲಿ ಉದಾಹರಣೆಗಾಗಿ ಕೆಲವನ್ನು ಉದ್ಧರಿಸಿ ತೋರಿಸಬಹುದು. ಹೆಣ್ಣುಮಗಳು ತಾನು ಬೇರೆಯವರ ಪದಾರ್ಥವೆಂದು ಮೊದಲಿಂದಲೂ ತಿಳಿದುಕೊಳ್ಳುತ್ತಾಳೆ—

ತಾವರೆಯ ಗಿಡ ಹುಟ್ಟಿ ದೇವರಿಗೆ ನೆರಳಾಯ್ತು
ನಾ ಹುಟ್ಟಿ ಮನೆಗೆ ಎರವಾದೆ ಅಣ್ಣಯ್ಯ
ನೀ ಹುಟ್ಟಿ ಮನೆಗೆ ಹೆಸರಾದೆ ||

ಗಂಡನ ಮನೆಗೆ ಹೋಗಿ ಮಗಳು ತಂದೆತಾಯನ್ನು ನೆನೆಯುತ್ತಾಳೆ—

ತಂದೆಯ ನೆನೆದರೆ ತಂಗಳು ಬಿಸಿಯಾಯ್ತು
ಗಂಗಾದೇವಿ ನನ್ನ ಹಡೆದವ್ವನ ನೆನೆದರೆ
ಮಾಸೀದ ತಲೆಯು ಮಡಿಯಾಯ್ತು ||

ಹಡೆದವ್ವ ಈ ಮಗಳಿಗೆ ಕಾಶಿಯಂತೆ—

ಕಾಶೀಗೆ ಹೋಗಲಕ ಏಸೊಂದು ದಿನ ಬೇಕ
ತಾಸ್ಹೊತ್ತಿನ ಹಾದಿ ತವರೂರು ಮನೆಯಾಗೆ
ಕುಂತಾಳೆ ಕಾಶಿ ಹಡದವ್ವ ||

ತಾಯಿತಂದೆ ತನ್ನನ್ನು ನೆನೆದುಕೊಳ್ಳುವರೆಂದು ಮಗಳಿಗೆ ಧೈರ್ಯ—

ಬಂಗಾರ ಬೆಳೆಯುವರು ತಿಂಗಳ ಹಾದಿಯವರು
ನನ್ನ ಕೊಟ್ಟು ಯಾಕ ಮರತಾರ ಮಾವಿನಹಣ್ಣು
ಉಣುವಾಗ ನನ್ನ ನೆನಸಾರ ||

ಹಾಲುಂಡ ತವರಿಗೆ ಏನೆಂದು ಹಾಡಲಿ
ಹೊಳೆ ದಂಡಿಲಿರುವ ಕರಕೀಯ ಕುಡಿಹಂಗೆ
ಹಬ್ಬಲೀ ಅವರ ರಸಬಳ್ಳಿ ||

ಆದರೆ ಗಂಡನ ಮನೆಯಲ್ಲಿರುವುದೇ ಹೆಣ್ಣಿಗೆ ಮರ್ಯಾದೆ—

ಗಂಜೀಯ ಕುಡಿದರೂ ಗಂಡನ ಮನೆ ಲೇಸ
ಅಂದಣದ ಮೇಲೆ ಚೌರವ ಸಾರಿದರೂ
ಹಂಗೀನ ತೌರುಮನೆ ಸಾಕ ||

ಈ ಕೃತಿಗಳಲ್ಲಿ ಒಡಹುಟ್ಟಿದವರ ಪ್ರೇಮವೂ ಇದೇ ಮಟ್ಟದ್ದು—

ಹೆಣ್ಣೀನ ಜನುಮಾಕ ಅಣ್ಣತಮ್ಮರು ಬೇಕು
ಬೆನ್ನ ಕಟ್ಟುವರು ಸಭೆಯೊಳಗ ಸಾವೀರ
ಹೊನ್ನ ಕಟ್ಟುವರು ಉಡಿಯೊಳಗ ||

ತಮ್ಮನು ಬರುವುದನ್ನು ತಂಗಿಯು ಹೆಮ್ಮೆಯಿಂದ ವರ್ಣಿಸುತ್ತಾಳೆ—

ಸರದಾರ ಬರುವಾಗ ಸುರಿದಾವ ಮಲ್ಲೀಗಿ
ಧೊರೆ ನನ್ನ ತಮ್ಮ ಬರುವಾಗ ಯಾಲಕ್ಕಿ
ಗೊನೆಬಾಗಿ ಹಾಲು ಸುರಿದಾವ ||

ಮಗಳನ್ನು ಅತ್ತೆಯ ಮನೆಗೆ ಕಳುಹಿಸಿ ತಂದೆ ಮರುಗುತ್ತಾನೆ—

ಹೆಣ್ಣು ಮಕ್ಕಳ ಕಳುವಿ ಕಣ್ಣೀಗಿ ನೀರುತಂದು
ಸಣ್ಣ ಸೆಲ್ಲೆದಲಿ ಮುಸುಕು ಹಾಕಿ ಹಡೆದಪ್ಪ
ಹೆಣ್ಣು ಸಾಕೆಂದ ಜಲುಮಾಕ ||

ಅಣ್ಣನೂ ಹೀಗೆಯೇ—

ತಂಗೀನ ಕಳುವ್ಯಾನ ತೆವರೇರಿ ನಿಂತಾನ
ಅಂಗೀಲಿ ನೀರು ಒರಸ್ಯಾನ ನನ್ನಣ್ಣ
ಇಂದೀಗೆ ತಂಗಿ ಎರವೆಂದ ||

ತಾಯಿಯೂ ಹಾಗೆಯೇ—

ಮಗಳೆ ನಿನ್ನ ಕಳುವಿ ಮಾಳೀಗೆ ಏರೇನ
ಮಾವೀನ ಗೊಲ್ಲಿ ಮರೆಯಾಗಿ ಕಂದವ್ವ
ಮಾಣೀಕ ನಮಗೆ ಎರವಾಗಿ ||

ತೌರ ಪ್ರೇಮವು ಅವಳನ್ನು ಹುಡುಕುತ್ತ ಅತ್ತೆಯ ಮನೆಗೆ ಆಗಾಗ ಬರುತ್ತದೆ—

ಅವರಿಗೇ ಅವರಣ್ಣ ಅವಲಕ್ಕಿ ಕಳುವಿದನು
ನಮ್ಮಣ್ಣನೇನು ಬಡವೇನ ಕ್ಯಾದೀಗಿ
ಗರಿಯೊಳಗೆ ಗಳಿಗೆ ಕಳುಸ್ಯಾನ ||

ಒಂದೇ ಊರಿನಲ್ಲಿ ತೌರೂ ಅತ್ತೆಯ ಮನೆಯೂ ಇರಬೇಕಾದರೆ ತಾಯಿ ಮಗಳಿಗೆ ಮಗನ ಕೈಯಲ್ಲಿ ತಿಂಡಿಯನ್ನು ಕಳುಹಿಸಿಕೊಡುತ್ತಾಳೆ—

ಅತ್ತಿಮನೆಯ ಊಟ ಮಟಮಟ ಮಧ್ಯಾಣ
ಚಿಕ್ಕ ಕಂದಮ್ಮ ಹಸಿದಾಳ ನನ ಬಾಳಾ
ಸಕ್ಕರೆಯ ಒಯ್ಯೊ ಸೆರಗೀಲಿ ||

೯

ಈ ಕೃತಿಗಳಲ್ಲಿಯ ಗಂಡಹೆಂಡರ ಪ್ರೇಮದ ಭಾವನೆಯೂ ಬಹು ಶ್ರೇಷ್ಠವಾದದ್ದು. ಗಂಡನು ಹೆಂಡತಿಯನ್ನು ಬಿಟ್ಟು ಇರಲಾರನು—

ಅಡಗೀಯ ಮನೆಯಾಗ ಮಡದೀಯ ಸುಳಿವಿಲ್ಲ
ಅಡಿಗೆ ಬಾಯಿಗೆ ರುಚಿಯಿಲ್ಲ ಹಡೆದವ್ವ
ಮಡದಿ ತವರೀಗೆ ಹೋಗ್ಯಾಳ ||

ಹೆಂಡತಿಯೂ ಗಂಡನನ್ನು ಬಿಟ್ಟು ತೌರಿಗೆ ಹೋಗಲಾರಳು—

ಹಚ್ಚಡದ ಪದರಾಗ ಅಚ್ಚಮಲ್ಲಿಗೆ ಹೂವ
ಬಿಚ್ಚಿ ನನ ಮೇಲೆ ಒಗೆವಂಥ ರಾಯರನ
ಬಿಟ್ಹ್ಯಾಂಗ ಬರಲಿ ಹಡದವ್ವ ||

ಗಂಡನು ಎತ್ತಲೋ ಹೊರಟಾಗ ಹೆಂಡತಿ—

ಎಂದ ಬರತಿರಿ ನನ್ನ ಗಂಧದ ರತಿಗಾರ . . .
ನನ ನಲ್ಲ ಎಂದ ಬರತಿರಿ ನನಗೆ ಹೇಳ ||

ಎಂದು ಕೇಳಿದರೆ ಅವನು

ಕಮ್ಮಳದ ಹೂ ನಿನ್ನ ಕಾಣದೆ ಇರಲಾರೆ
ಮಲ್ಲಿಗೆ ಮಾಯಿ ಬಿಡಲಾರೆ ಕೇದಗೆಯ
ಗರಿ ನಿನ್ನನಗಲಿ ಇರಲಾರೆ ||

ಎನ್ನುವನು.

ಹೆಂಡತಿ ಗಂಡನ ಚೆಲುವನ್ನು ನೋಡಿ ಹಿಗ್ಗುತ್ತಾಳೆ.

ಹೋಗುವ ರಾಯರ ಹೋಲಿಕೇ ನೋಡೇನು
ಕಾಲ ಹಿಮ್ಮಡಿಯು ಕಮಲಾವು ಸಂಜೆಯ
ಚಂದ್ರನಿಗಿಂತ ಬಲುಚೆಲುವು ||

ಅವನು ಇತರರಿಗೆ ಕಡಮೆಯ ಮನುಷ್ಯನಾಗಿ ಕಾಣಬಹುದು. ಅವಳಿಗೆ ಅವನು ಹೆಚ್ಚೇ—

ಕೂಲಿಮಾಡಿದರೇನ ಕೋರಿ ಹೊತ್ತರೇನ
ನನಗೆ ನಮ ರಾಯ ಬಡವೇನ ಬಂಗಾರ
ಮಾಲ ಇದ್ದಂಗ ಮನೆಯಾಗ ||

೧೦

ಗಂಡ ಹೆಂಡಿರು ಹೇಗಿರಬೇಕೆಂಬ ಧ್ಯೇಯದ ಈ ಚಿತ್ರದೊಂದಿಗೆ ಈ ಪದಗಳಲ್ಲಿ ಅನೇಕ ವೇಳೆ ಅವರು ನಿಜವಾಗಿ ಹೇಗಿರುವರೋ ಆ ಸ್ಥಿತಿಯ ಚಿತ್ರವೂ ಕಾಣುತ್ತದೆ.—

ಎಲ್ಲಿ ಹೋಗಿದ್ದಿ ರಾಯ ಸೆಲ್ಲೆ ಯಾಕೆ ಮಾಸಿಯದೆ
ಅಲ್ಲೊಬ್ಬಳ ಕೂಡ ಸಲಗೀಯ ನೀವು ಮಾಡಿ
ಇಲ್ಲೆಂಬುದೇನ ನನ ಮುಂದ ||

ಗಂಡನು ದಾರಿ ತಪ್ಪಿ ನಡೆಯುತ್ತಿರಲು ಮರುಗುವ ಹೆಂಡತಿಯು ಈ ಕೃತಿಯಲ್ಲಿ ಕಾಣುತ್ತಾಳೆ. ಏಕೆ ಹೀಗೆ ಮಾಡುತ್ತೀಯೋ ಎಂದು ಅವನಿಗೆ ಹೇಳುವ ವೃದ್ಧೆಯುಂಟು; ಎಷ್ಟು ದಿನ ಅಲೆಯುತ್ತಾನೆ, ತಾನೇ ಹಿಂತಿರುಗಿ ಬರುತ್ತಾನೆ, ಸುಮ್ಮನಿರು ಎಂಬ ಹಿತಚಿಂತಕಳೂ ಉಂಟು. ಗಂಡನು ಯಾರೊಂದಿಗೋ ನಗುತ್ತಿದ್ದನೆಂದು ಬಂದು ಹೇಳುವ ಹರಟೆಗಾತಿಯೂ ಅಷ್ಟರಿಂದ ಸಂದೇಹಪಡದ ಸರಳಮನಸ್ಸಿನ ಹೆಂಡತಿಯೂ ಇಲ್ಲಿ ಉಂಟು.

ಚಿಂತಾಕನಿಟಕೊಂಡು ಚಿಪ್ಪಾಟಿ ಬಡಿವಾಕೆ
ಚಿಂತಿ ಇಲವೇನೆ ನಿನಗಿಷ್ಟು ನಿನ್ನ ರಾಯ
ಅಲ್ಲೊಬ್ಬಳ ಕೂಡ ನಗತಿದ್ದ ||

ಎಂದು ಅವಳು ಹೇಳಿದರೆ, ಇವಳು—

ನಕ್ಕಾರೆ ನಗಲವ್ವ ನಗುಮುಖದ ಕ್ಯಾದೀಗಿ
ನಾ ಮುಚ್ಚಿ ಮುಡಿವ ಪರಿಮಳದ ಹೂವನ್ನ
ಆವಳೊಂದು ಗಳಿಗೆ ನೋಡಲಿ ||

ಎಂದು ಹೇಳುತ್ತಾಳೆ. ನೋಡಲಿ ಅಲ್ಲ, ಮುಡಿಯಲಿ ಎನ್ನುವ ಪಾಠವೂ ಉಂಟು. ಒಂದು ಹೆಣ್ಣು ಹೀಗೆ ಹೇಳಿದರೂ ಆಶ್ಚರ್ಯವಲ್ಲ.

ಹುಡುಗಿ ಸೇರಿದ ಸ್ಥಳ ಒಳ್ಳೆಯದಲ್ಲದೇ ಇರಲು, ತಾಯಿ—

ಮಲ್ಲಿಗೆಯಂಥಾ ಮಗಳಿಗೆ ಎಲ್ಲಿತ್ತೋ ಒಗೆತನ
ಹುಲಾಗೆ ಬೆಂಕಿ ಒಗೆದ್ಹಂಗ ಗುಡ್ಡದ
ಕಲ್ಲಿಗೆ ಧಾರೆ ಎರದ್ಹಂಗ ||

ಎಂದು ಹೇಳುತ್ತಾಳೆ.

ಈಡಲ್ಲದ ಮುದಿಗಂಡನಿಗೆ ಹೆಣ್ಣನ್ನು ಕೊಡಲು ನೆರೆಯುವಳು ಹೇಳುತ್ತಾಳೆ—

ಹೆಸರ ಬೇಳಿ ಒಯ್ದು ಕೆಸರ ಕಲಸಿದ ಹಂಗೆ
ಹಸುಮಗಳನ್ನು ಒಯ್ದು ಮುದುಕಗೆ ಕೊಟ್ಟರೇ
ದುಸುಮಾನದವರು ತವುರವರು ||

ಗಂಡನು ಒಳ್ಳೆಯವನಾದರೂ ಹೊಂದಿಕೆ ಇಲ್ಲದ ಸಂದರ್ಭದಲ್ಲಿ, ಹೆಂಡತಿ ತಮ್ಮ ಸ್ಥಿತಿಯನ್ನು ಹೇಳುತ್ತಾಳೆ—

ಶಾಲೇನೊ ಒಳ್ಳೇದು ಸೆರಗಿಲ್ಲ ಅಣ್ಣಯ್ಯ
ಗುಣ ಒಳ್ಳೇದು ರಿಣ ಇಲ್ಲ ||

೧೧

ಸಂಸಾರದಲ್ಲಿ ಹೆಣ್ಣಿಗೆ ಬಹು ಕಷ್ಟವಾಗುವುದು ಸವತಿಯ ಕಾರಣದಿಂದ. ಮೊದಲ ಹೆಂಡತಿಗೂ ಇದು ತೊಂದರೆ—

ಅಂಗೀಯ ಮೇಲಂಗಿ ಚಂದೇನ ನನ ರಾಯ
ರಂಬಿ ಮೇಲ ರಂಬಿ ಪ್ರತಿರಂಬಿ ಬಂದರೆ
ಚೆಂದೇನೊ ರಾಯ ಮನೆಯಾಗ ||

ಕಿರಿಯವಳಿಗೂ ಇದು ಸುಖವಿಲ್ಲ—

ಸಾವಿರಾ ಕೊಟ್ಟರೂ ಸವತೀಯ ಮನಿ ಬೇಡ
ಸಾವಿರದ ಮೇಲೆ ಐನೂರು ಕೊಟ್ಟರೂ
ಮಲಮಕ್ಕಳಿರುವ ಮನಿ ಬೇಡ ||

ಗಂಡನು ಸವತಿಯೊಬ್ಬಳನ್ನು ತಂದರೆ ಏನಾಗಬಹುದು ಎಂಬುದನ್ನು ಈ ಕಥೆ ಶಿವನು ಗಂಗೆಯನ್ನು ತಂದ ಸಂದರ್ಭವನ್ನೆತ್ತಿ ವರ್ಣಿಸುತ್ತದೆ—

ಹಳ್ಳದ ದಂಡ್ಯಾಗ ಹೂವು ಕೊಯ್ಯುವ ಜಾಣೆ
ದೇವರಿಗೆ ಐದು ದಯಮಾಡೆ
ದೇವರಿಗೆ ಐದ್ಹೋವ ನಾನು ದಯಮಾಡಿದರೆ
ನಮ್ಮವರು ನನ್ನ ಬೈದಾರು ||

ಅವರು ಬೈಯದ ಹಂಗೆ ಅವರು ಕಾಣದ ಹಂಗೆ
ಸುಮ್ನೆ ಬಾ ಗಂಗೆ ಜಡೆಯಾಗೆ
ಬಂದಾರು ಬಂದೇನು, ನಂಬೀಗಿ ಕಾಣದು
ರಂಭೆ ಇರುವಳು ನಿನ್ನ ಮನೆಯಾಗೆ ||

ಉಕ್ಕೋ ಹಾಲನೆ ತಾರ ಸತ್ಯ ಮಾಡುವೆ ಬಾರ
ರಂಭಿಲ್ಲ ಬಾರ ಮನಿಯಾಗ
ಆರಿದ್ಹಾಲನು ತಾರ ಆಣೆ ಮಾಡುವೆ ಬಾರ
ರಾಣಿಲ್ಲ ಬಾರ ಮನಿಯಾಗ ||

ಇದು ಮೊದಲಭಾಗ. ಇದಾದ ಮೇಲೆ—

ದೇಶ ದೇಶವ ತಿರುಗಿ ಬೇಸತ್ತು ಬಂದಿವ್ನಿ
ಉಗ್ಗರದ ಗೌರಿ ನೀರುಕೊಡು ||

ಹೀಗೆಂದ ಶಿವನಿಗೆ ಗೌರಿ ಎರಡು ಗಿಂಡಿ ನೀರು ಕೊಡುತ್ತಾಳೆ.

ಒಂದ್ಗಿಂಡಿ ಬೇಡಿದರೆ ಎರಡು ಗಿಂಡಿ ಕೊಟ್ಟಲ್ಲೆ
ಇದು ಏನು ಗೌರಿ ನಿನ ಭಾವ ||

ಗೌರಿ—

ಭಾವ ಏನೂ ಬೇರಿಲ್ಲ ಬೇಳಾವ ಮಾಡೊಕಿಲ್ಲ
ಸಿರಿಗಂಗೆಗೊಂದು ನಿನಗೊಂದು ||

ಬಾಗಿ ಬಾ ಶಿವರಾಯ ಬಾಗಿಲು ಬಡದಾವು
ಬಾಯಾಗಿನ ಹಲ್ಲು ಉದುರಾವು ತಲೆಮೇಗಲ
ಬಾಲೆಯನಿಳುವಿ ಬರಬೇಕ ||

ಇದು ಮೂರನೆಯ ಭಾಗ:

ಶಿವರಾಯ್ನ ಮನೆಮುಂದೆ ಮಾವಿನ ಮರಹುಟ್ಟಿ
ಎಲೆ ಎಲೆಗೆ ಒಂದು ಗಿಳಿ ಕೂತು ಹೇಳ್ಯಾವು
ರಾಯ ನಿನ್ಮೇಲೆ ಸವತಿ ತಂದ ||

ಇಂಥ ಸಂದರ್ಭದಲ್ಲಿ ಸುತ್ತಣ ಪ್ರಪಂಚವೇ ಈ ಸೋಲ್ವನ್ನು ಒತ್ತಿ ಒತ್ತಿ ಹೇಳುತ್ತದೆ.

ಗಿಣಿಯ ಮಾತನು ಕೇಳಿ ಮೈಮರಿದು ಎದ್ದಾಳು
ತಣ್ಣನೀರಿನಲಿ ಮೊಕ ತೊಳೆದು ಸಿರಿಗಿರಿಜೆ
ಹೊರಟಾಳು ತನ್ನ ತವರೀಗೆ ||

ಗಿರಿಜೆ ತಣ್ಣ ನೀರಿನಲ್ಲಿ ಮುಖ ತೊಳೆದಳಂತೆ. ತೌರಿನವರು ಹೇಳುತ್ತಾರೆ—

ಎಂದಿಲ್ಲ ಸಿರಿಗೌರಿ ಇಂದೇನು ಬದಿಬಂದೆ
ಕುಂಡ್ರಾಕೆ ಕೊಡಿ ಮಣೆಚೌಕಿ ಗೌರೀಗೆ
ಮೊಕತೊಳೆಯ ಕೊಡಿರೆ ಬಿಸಿನೀರ ||

ಗೌರಿ—

ಕುಂಡ್ರಾಕೆ ಬಂದಿಲ್ಲ ಸಿಂಡ್ರಾಕೆ ಬಂದಿಲ್ಲ
ರಾಯ ನನ ಮೇಲೆ ಸವತೀಯ ತಂದಾನೆಂತ
ಚಿಂತೆಯಲಿ ನಾನು ಬಂದೇನು ||

ತೌರಿನವರು—

ದೇಶವನಾಳುವಗೆ ಏಸು ಮಂದಿ ಹೆಂಡಿರೊ
ಈಸೊಂದು ಚಿಂತೆ ನಿನಗ್ಯಾಕೆ ಸಿರಿಗೌರಿ
ಲೇಸ್ಹೋಗು ನಿನಗೆ ನಮ್ಮಾಣೆ ||

ಗಂಡನು ಸವತಿಯೊಬ್ಬಳನ್ನು ತಂದದ್ದೇ ಆದರೆ ಆ ಹೆಂಡತಿ ಗೌರಿಯಾದರೂ ಏನೂ ಮಾಡುವಂತಿಲ್ಲ. ಅವಳ ತೌರೂ ಬೇರೆ ಉತ್ತರವನ್ನು ಹೇಳುವಂತಿಲ್ಲ. ಅವಳಿಗೆ ತಣ್ಣೀರು ಬೇಕಾಗಿರುವಾಗ ಅವರು ಮರ್ಯಾದೆಯ ಹೆಸರಲ್ಲಿ ಬಿಸಿನೀರನ್ನು ತರುತ್ತಾರೆ.

೧೨

ಗಂಡನು ಇನ್ನೊಬ್ಬಳನ್ನು ಮದುವೆಯಾಗುವ ಸಂದರ್ಭದಲ್ಲಿ ವಾಡಿಕೆಯ ಕಾರಣ ಮೊದಲ ಹೆಂಡತಿಗೆ ಮಕ್ಕಳಾಗಲಿಲ್ಲ ಎನ್ನುವುದು. ಈ ಕಾರಣದಿಂದಲೂ ಮಗುವೆನ್ನುವುದು ಸಹಜವಾಗಿ ಹೆಣ್ಣಿಗೆ ಆವಶ್ಯಕವಾಗಿರುವುದರಿಂದಲೂ ಜನತೆಯಲ್ಲಿ ಬಂಜೆತನವೆನ್ನುವುದು ಬಹು ದೊಡ್ಡ ಕುಂದು ಎಂದು ಭಾವನೆ.

ಬಾಲಕರಿಲ್ಲದಾ ಬಾಲೆದ್ಯಾತರ ಜನ್ಮ
ಬಾಡೀಗಿ ಎತ್ತು ದುಡಿದ್ಹಂಗೆ ದುಡಿದುಡಿದು
ಕಡೆಗೊಂದುದಿವಸ ಮಡಿದ್ಹಂಗೆ ||

ಬಂಜೆಬಾಗಿಲ ಮುಂದೆ ಬಂಗಾರದೊರ್ಳಕಲ್ಲ
ಬಂದು ಕುಟ್ಟ್ಯಾಕ ಸೊಸೆಯಿಲ್ಲ ಮಾನೋವಿ
ಬನ್ನಿ ಮುಡಿಯಾಕ ಮಗನಿಲ್ಲ ||

ಧಾರವಾಡದ ಪದ್ಯಸಂಗ್ರಹದಲ್ಲಿ ಬಿಡಿಯಾಗಿ ಸಿಕ್ಕುವ ಈ ಪದವು ಒಂದು ಕಥೆಯ ಮೊದಲಪದವೆಂದು ಕಾಣುತ್ತದೆ. ಆ ಕಥೆಯನ್ನು ನಾವು ಕೊಡಗಿನಲ್ಲಿ ಕೇಳಿದೆವು. ಜನತೆಯ ಸಾಹಿತ್ಯದ ಕಥೆಗಳಲ್ಲಿ ಒಂದು ಮಾದರಿಯದಾದ್ದರಿಂದ ಅದನ್ನು ಇಲ್ಲಿ ಪೂರ್ತಿ ಕೊಟ್ಟಿದೆ.

### ಹೊನ್ನಮ್ಮನ ಕಥೆ

ಬಂಜೆ

ಹೊನ್ನಮನ ಮನೆಮುಂದೇ ಚಿನ್ನಾದ ಒಳಕಲ್ಲು
ಬಂದು ಕುಟ್ಟ್ಯಾಕೆ ಮಗಳಿಲ್ಲ ಸೊಸಿ ಇಲ್ಲ
ಬಂಜೆ ಮಾಡ್ಯಾಳು ಕಡು ದುಃಖಾ ||

ಆರು ವರಹವನೆ ಕೊಟ್ಟು ಹೂಡಬಸವನ ತಂದೆ
ಹತ್ತಿ ತಿರುಗಾಕ ಮಗನಿಲ್ಲ ಸೊಸೆಯಿಲ್ಲ
ಬಂಜೆ ಮಾಡ್ಯಾಳು ಕಡು ದುಃಖಾ ||

ಮೂರು ವರಹವನೆ ಕೊಟ್ಟು ಪಟ್ಟೆನ ಸೀರೆ ತಂದೆ
ಉಟ್ಟು ತಿರುಗಾಕ ಮಗಳಿಲ್ಲ ಸೊಸಿಯಿಲ್ಲ
ಬಂಜೆ ಮಾಡ್ಯಾಳು ಕಡು ದುಃಖಾ ||

ಒಂದು ಕಂಡುಗದ ಅಕ್ಕಿ ಅಂಗೈಲಿ ಹಸಮಾಡಿ
ಚಂದುಳದು ಅಡಿಗೆ ದುಡಿಸ್ಯಾಳೊ ಹೊನ್ನಮ್ಮ
ಕರಸ್ಯಾಳು ತನ್ನ ಹಿರಿಯೇರ ||

ಹಿರಿಯರನು ಕರಸ್ಯಾಳೋ ಅಣ್ಣತಮ್ಮರ ಕರಸ್ಯಾಳೋ
ಕರಸ್ಯಾಳೊ ತನ್ನ ತಾಯಿತಂದಿ ಹೊನ್ನಮ್ಮ
ನೂರೊಂದು ಎಡೆಯ ಮಾಡ್ಯಾಳೋ ||

ನೂರೊಂದು ಎಡೆಯ ಮಾಡ್ಯಾಳೋ ಹೊನ್ನಮ್ಮ
ಕರಸ್ಯಾಳು ತನ್ನ ಹಿರಿಯೇರ
ಹಿರಿಯಾರು ಉಣಲಿಲ್ಲ ಅಣತಮ್ಮ ಉಣಲಿಲ್ಲ
ಕಾಡಾಗ್ನ ಪಕ್ಷಿ ಉಣಲಿಲ್ಲ ||

ಕಾಡಾಗ್ನ ಪಕ್ಷಿ ಉಣಲಿಲ್ಲ ಹೊನ್ನಮ್ಮನ
ಚಿಕತಮ್ಮ ಬಂದು ನುಡಿದಾನೋ
ಚಿಕತಮ್ಮ ಬಂದು ಏನಂತ ನುಡಿದಾನ
ಬಂಜ್ಯಾಡಿಗಿ ನಾವು ಸಲಬ್ಯಾರದು ||

ಬಂಜ್ಯಾಡಿಗಿ ಸಂದರೇ ನಾವು ಬಂಜಿ ಆದೇವು
ಎಡೆಯಾನ ಬಿಟ್ಟು ಹೊರಟಾರು
ಎಡೆಯಾನೇ ಬಿಟ್ಟು ಹೊರಟಾರು ಹೊನ್ನಮ್ಮ
ಬಂಜಿ ಮಾಡ್ಯಾಳು ಕಡು ದುಃಖಾ ||

ನೂರೊಂದು ಬಂಡಿ ತರಿಸಿ ಬಂಡಿ ಮೇಲೆ ಅನ್ನ ಹಾಕಿ
ಏಳು ಸಮುದರಕೆ ದೂಡಿಸ್ಯಾಳು
ಬಂಡಿ ಬರುವುದು ನೋಡಿ ಸಮುದರ ನುಡಿದಾವು
ಬಂಜ್ಯಾಡಿಗೆ ನಾವು ಉಣಬಾರದು ||

ಬಂಜ್ಯಾಡಿಗೆ ಸಲುವಿದರೆ ನಾವು ಬಂಜ ಆದೇವು
ಸಮುದರ ಬತ್ತಿ ಹೊಳೆ ಬತ್ತಿ ಹೊನ್ನಮ್ಮನ
ಆ ಬಂಡಿ ಹಿಂದೆ ಬಂದಾವು ||

ಆ ಬಂಡಿ ನೂರೊಂದು ಹಿಂದಕೆ ಬಂದಾರೆ
ಹಾಳು ಭಾವೀನ ತೆಗಿಸ್ಯಾರೆ

ಹಾಳು ಭಾವೀ ನೋಡಿ ತೆಗಿಸ್ಯಾರೆ ಸುರಿಸ್ಯಾರೆ
ಬಾವಿಲಿ ಅನ್ನ ಸುರಿಸ್ಯಾರೆ ||

ಹಾಳು ಭಾವಿ ನೋಡಿ ಅನ್ನ ಸುರಿಸ್ಯಾರೆ
ಭಾವಿ ಬಂಜರವು ಹೋಗಿ ಹೊನ್ನಮ್ಮ
ಬಂಜಿ ಮಾಡ್ಯಾಳು ಕಡು ದುಃಖಾ ||

ಬಂಜಿ ಏನ ಮಾಡ್ಯಾಳು ಎಳಕಪ್ಪನಾಗ್ಯಾಳು
ಶಿವನಿಗೆ ಶಾಪ ಕೊಡುತಾಳೆ
ಹೊನ್ನಮ್ಮ ಶಾಪ ಕೊಡುತಾಳೆ ಶಿವನಿಗೆ
ನನಗೊಂದು ಫಲವ ಕೊಡಲಿಲ್ಲೆ ||

ನನಗೊಂದು ಫಲವ ನೀ ಕೊಡಲಿಲ್ಲ ಶಿವರಾಯ
ನನಗೆ ನೀ ಫಲವ ಕೊಡಲಿಲ್ಲ ಶಿವನಂದ
ಕಂಡವರ ಮಕ್ಕಳ ಕರಕೊಳ್ಳೆ ||

ಕಂಡ್ರ ಮಕ್ಕ ಕೊಂಡ್ರೆ ನನಗೇನ ಆದಾರು
ನನಗೊಂದು ಫಲ ನೀ ಕೊಡಲಿಲ್ಲ
ನನಗೆ ಫಲಕೊಡಲಿಲ್ಲ ಅಂದರೆ ಶಿವರಾಯ
ಕಂಡ್ರೆ ಕಲ್ಲನೆ ಒಗಿಯೆಂದ ||

ನಮ್ಮ ಜನ ಬಂಜೆತನವನ್ನು ಎಷ್ಟು ನಿಕೃಷ್ಟವೆಂದು ಭಾವಿಸುತ್ತಾರೆ ಎನ್ನುವುದು ಈ ಪದ್ಯದಲ್ಲಿ ಗೊತ್ತಾಗುತ್ತದೆ. ಬಂಜೆಮಾಡಿದ ಅಡಿಗೆಯನ್ನು ಅತ್ತೆಯ ಮನೆಯವರೂ ದೂರದ ಜನರೂ ತಿನ್ನದೆ ಇರುವುದು ಹಾಗಿರಲಿ ; ಅವಳ ತೌರವರೂ ಅದನ್ನು ತಿನ್ನುವುದಿಲ್ಲ. ಕಾಡಿನಪಕ್ಷಿ ಅದನ್ನು ತಿನ್ನುವುದಿಲ್ಲ; ಅದು ಸಮುದ್ರಕ್ಕೂ ಸಲ್ಲದು. ಅದು ಸಲ್ಲುವುದು ಹಾಳು ಬಾವಿಗೆ ಮಾತ್ರ. ಆದ್ದರಿಂದ ಅವಳು ದತ್ತನ್ನಾದರೂ ಮಾಡಿಕೊಳ್ಳಬೇಕು. ಹೊನ್ನಮ್ಮನಿಗೆ ಇದು ಬೇಡ. ಅವಳು ಶಿವನಿಗೆ ಶಾಪಕೊಡುತ್ತಾಳೆ. ಶಿವನು ಅದಕ್ಕೆ ಪ್ರತಿಯಾಗಿ ಜನಕ್ಕೆ ಬಂಜೆಯನ್ನು ಕಂಡರೆ ಕಲ್ಲೆಸೆಯಿರಿ ಎನ್ನುತ್ತಾನೆ. ಇನ್ನೊಂದು ಪದ್ಯ ಹೇಳುತ್ತದೆ—

ಕಂದನಾ ಕೊಡು ಶಿವನೆ ಬಂಧನಾ ಬಡಲಾರೆ
ಹಂಗೀನ ಬೋನ ಉಣಲಾರೆ ಮರ್‍ತ್ಯದಾಗೆ
ಬಂಜೆಂಬ ಶಬುದ ಹೊರಲಾರೆ ||

೧೩

ತಾಯಿ ಇದ್ದರೆ ತೌರು ಎನ್ನುವುದು ನಮ್ಮ ಜನದಲ್ಲಿ ಒಂದು ಗಾದೆ. ತಾಯಿ ಹೋದ ಮೇಲೆ ತೌರು ಮನೆಯಲ್ಲಿ ಹೆಣ್ಣಿಗೆ ಆದರಣೆಯಿಲ್ಲ. ಅಣ್ಣನಿಗೆ ತಂಗಿ ಬೇಡವೆಂದಲ್ಲ. ಆದರೆ ಮನೆಯಲ್ಲಿ ಅವನು ಏನೂ ಮಾಡುವಂತಿಲ್ಲ; ಆಡಳಿತವೆಲ್ಲ ಅತ್ತಿಗೆಯದು.

ಹಡದವ್ವ ಇಹಳೆಂದು ದಡದಡ ನಾ ಬಂದೆ
ಒಳಗೆ ಅಣ್ಣಯ್ಯನ ಮಡದೀಯ ದನಿಕೇಳಿ
ತಲೆಬಾಗಿಲಿಂದ ತಿರುಗೀದೆ ||

ಅತ್ತಿಗೆಯಿಂದ ಅಣ್ಣನಿಗೆ ತಂಗಿಗೆ ಮನಸ್ತಾಪ ಬರುತ್ತದೆ—

ಕಣ್ಣೀಗೆ ಮೂಗೀಗೆ ಎರಡೇನ ಅತ್ತೀಗಿ
ನಾ ನನ್ನ ಅಣ್ಣ ಎರಡೇನ ಅತ್ತಿಗೆವ್ವ
ನಿನ್ನಿಂದ ಅಣ್ಣ ಎರಡಾದ ||

ಆದರೂ ಆ ಮನೆ ಹೆಣ್ಣಿಗೆ ಬೇಕು; ಅತ್ತಿಗೆ ಹೆತ್ತ ಮಗಳು ತನ್ನ ಮಗನನ್ನು ಮದುವೆಯಾಗಬೇಕು—

ಅತ್ತಿಗೆ ಹಡೆಯಲಿ ಹತ್ತೆವ್ವೆ ಕರೆಯಲಿ
ಹಿತ್ತಲ ಬಾಳಿ ಚಿಗಿಯಲಿ ಅತ್ತೆ ಎಂದು
ಅತ್ತಿಗೆಯ ಮಗಳು ಕರೆಯಲಿ ||

ಒಮ್ಮೊಮ್ಮೆ ಅತ್ತಿಗೆ ಮಗಳನ್ನು ಹೆತ್ತರೂ ಇವಳ ಮಗನಿಗೆ ಕೊಡಲು ಒಪ್ಪದೆ ಹೋಗುವಳು—

ಅಣ್ಣನ ಮನೆಯಾಗೆ ಹೆಣ್ಣು ಬೇಡಲಿ ಹೋದೆ
ಕನ್ನಡಿ ಗೋಡೆ ಮರೆಮಾಡಿ ಅತ್ತಿಗಿ
ಕಣ್ಣು ಚಿವುಟ್ಯಾಳ ಪುರುಷಗ ||

ಒಪ್ಪಬೇಡ ಎಂದು ಅತ್ತಿಗೆ ಗಂಡನಿಗೆ ಸನ್ನೆಮಾಡಲು, ಈ ತಂಗಿ ಅವಳಿಗೆ ಹೇಳುತ್ತಾಳೆ—

ಕಣ್ಣು ಚಿವುಟಲು ಬೇಡ ನಿನ್ಹೆಣ್ಣು ನಾನೊಲ್ಲೆ
ಅನ್ನಿಗರ ಮಗಳು ಅತಿ ಚೆಲುವಿ ಮಾಡಿಕೊಂಡು
ನಿನ್ನೂರ ಮೇಲೆ ಬರುವೇನು ||

ಅಣ್ಣ ಅತ್ತಿಗೆಯರ ಊರ ಮೇಲೆ ಬರುವುದು ಅತ್ತಿಗೆ ಆ ಚೆಲುವೆಯಾದ ಹುಡುಗಿಯನ್ನು ನೋಡಲಿ ಎಂದು.

ಈ ತಂಗಿ ಏನಾದರೂ ಇವರ ಆಶ್ರಯದಲ್ಲಿ ಇರಬೇಕಾಗಿ ಬಂದರೆ ಅಣ್ಣನೂ ಅವಳನ್ನು ಕಸಿಕರದಿಂದ ಕಾಣದೆ ಹೋಗಬಹುದು. ತಂಗಿ ಭತ್ತವನ್ನು ಒಬ್ಬಳೇ ಕುಟ್ಟಲಿಕ್ಕಾಗಲಿಲ್ಲ, ಅತ್ತಿಗೆಯನ್ನು ಸ್ವಲ್ಪ ಸಹಾಯಕ್ಕೆ ಕಳುಹಿಸು ಎಂದಳು—

ದಬ್ಬಣ ಸಾಲಿನ ಬತ್ತ ಒಬ್ಬಳಿಗೆ ನುರಿ ಒಲ್ಲದು
ಎಬ್ಬಿಸಣ್ಣ ನಿನ್ನ ಮಡದೀಯ
ಮಡದೀಗೆ ಎಬ್ಬಿಸಿದರೆ ಅರನಿದ್ದೆ ಆದಾವು
ಎರಡೊಬ್ಬಿ ಮಾಡಿ ತೊಳಸವ್ವಾ ||

ಎರಡೊಬ್ಬಿ ಮಾಡಿದರೆ ಕಡಿನುಚ್ಚು ಆದಾವು
ಎಬ್ಬಿಸಣ್ಣ ನಿನ್ನ ಮಡದಿಯಾ
ಕುಟ್ಟಿದರೆ ಕುಟ್ಟು ತಂಗಿ ಗುರುಗೂಟನಲಿಬೇಡ
ಕೊಟ್ಟಂತ ಮನೆಗೆ ಕಳುಹುವೆನೇ ||

ಯಾತವ ತಾರಣ್ಣ ಮುಟ್ಟಾವ ಬಿಗಿಯಣ್ಣ
ಕೊಟ್ಟಂತ ಮನೆಗೆ ಕಳುಹಣ್ಣ ಅಣ್ಣಯ್ಯ ನೀ
ತಿಪ್ಪೆಯ ನೋಡಿ ತಿರುಗಣ್ಣ ||

ಇನ್ನೊಂದು ಪದ್ಯದಲ್ಲಿ ಇಂಥದೇ ಒಂದು ಸಂದರ್ಭ ಕಾಣುತ್ತದೆ—

ದಂಡೀಗೆ ಹೋದಣ್ಣ ದುಂಡುಮಲ್ಲಿಗೆ ತಂದ
ತಂಗಿ ಕೇಳ್ಯಾರೆ ಇಲ್ಲವೆಂದ ಅಣ್ಣಯ್ಯ
ಮಡದಿ ಕೇಳ್ಯಾರೆ ಮುಡಿಯೆಂದ ||

೧೪

ಮದುವೆಯ ಕಟ್ಟನ್ನು ಮೀರಿದ ಪ್ರಣಯವೂ ಈ ಪದ್ಯಗಳಲ್ಲಿ ಒಮ್ಮೊಮ್ಮೆ ಕಾಣುತ್ತದೆ—

ಕೋಟೆಯ ಮನೆಯವಳೇ ಕೋಗಿಲ ದನಿಯುವಳೇ
ರಾಟೆಯುವಾಲೆ ಕಿವಿಯುವಳೇ ಗೆಣೆಕಾತಿ
ದಾಟಬರಲಾರೆ ದನಿತೋರೇ ||

ಅಡ್ಡಗುಡ್ಡವ ದಾಟಿ ಕದ್ದು ಕಣಿವೆಯ ದಾಟಿ
ಬಿದ್ದೋಡಿಬಂದೆ ನಿನಗಾಗಿ ಗೆಣೆಕಾತಿ
ಕಬ್ಬಿನಂತವಳೆ ದನಿತೋರೇ ||

ಹಿತ್ತಲವರೇಕಾಯಿ ಮೆಟ್ಟಿಕ್ಕಿ ಕುಯ್ಯುವಳೇ
ಸುತ್ತ ಓಣಿಯ ಮನೆಯವಳೇ ಮಾವನ ಮಗಳೇ
ಸುತ್ತಿ ಬರಲಾರೆ ದನಿತೋರೇ ||

ಇದು ಗಂಡು ಹೇಳುವ ಮಾತು. ಇದಿಷ್ಟರಿಂದ ಅವನು ಕರೆಯುವ ಹೆಣ್ಣು ಅವನ ಹೆಂಡತಿಯಾಗಿದ್ದರೂ ಇರಬಹುದು ಎನ್ನುವುದಕ್ಕೆ ಅಡ್ಡಿಯಿಲ್ಲ. ಆದರೆ ಉತ್ತರದಿಂದ ಸಂದರ್ಭ ಇದು ಅಲ್ಲವೆಂದು ಸ್ಪಷ್ಟವಾಗುತ್ತದೆ—

ದನಿ ಹೇಗೆ ತೋರಲಿ ಕದ ಹೇಗೆ ತೆರೆಯಲಿ
ಮಗ್ಗಲಲಿ ರಾಯ ಮಲಗವನೆ ನನ ಗೆಣೆಯ
ಮೊಗ್ಗಾಗಿ ಬಾರೊ ತುರುಬೀಗೆ ||

ನಿನ್ನೊಂದಿಗಾಡಿ ತಾತಿಯನು ನಾ ಮರತೆ
ಹಾಸಿಗೇಲಿ ಮರತೆ ಹವಳವ ನನ ಗೆಣೆಯ
ಮಾತಿನಲಿ ಮರತೆ ಮನೆಯವನ ||

ಇನ್ನೊಂದು ಇಂಥ ಪದ್ಯದಲ್ಲಿ ನೀರು ತರುವುದಕ್ಕೆ ಹರವಿಯೊಂದಿಗೆ ಬಾವಿಗೆ ಹೋಗಿದ್ದ ಒಬ್ಬ ಹೆಂಗಸು ತನ್ನ ಪ್ರಿಯನು ತೀರಿಹೋದನೆಂಬ ಮಾತನ್ನು ಅಲ್ಲಿ ಕೇಳಿ ಚಕಿತಳಾಗಿ ಹರವಿಯನ್ನು ಕೆಳಗೆ ಹಾಕುತ್ತಾಳೆ; ಹೋದ ಪ್ರಿಯನಿಗಾಗಿ ಅಳುತ್ತಾಳೆ. ಪಕ್ಕದಲ್ಲಿರುವವರು ಇದೇನು ಇಷ್ಟು ಅಳುತ್ತೀಯೆ ಎಂದರೆ, ಬಹು ದಿನದಿಂದ ಇಟ್ಟುಕೊಂಡು ಬಳಸಿದ ಹರವಿ ಒಡೆದುಹೋಯಿತು, ಅದಕ್ಕಾಗಿ ಅಳು ಬಂತು ಎನ್ನುತ್ತಾಳೆ. ಪ್ರಣಯದ ಪದ ಇನ್ನೊಂದು ಹೀಗೆ ಆರಂಭವಾಗುತ್ತದೆ—

ದಂಡೀನಾ ದಾರೀಲಿ
ದುಂಡುಮಲ್ಲಿಗೇ ಮಾರೋಳೆ
ಚೆಂಡುಮಲ್ಲಿಗೆ ಮಾರೋಳೆ
ಕೊಂಡಾನ ಕೊಳುತೀನಿ ಹೆಸರ್ಹೇಳೆ
ನೀ ಸೆರಗಾ ಬಿಡೋ ||

ಮೊದಲ ಮಾತು ಗೆಣೆಯನು ಸ್ನೇಹಮಾಡುವುದಕ್ಕಾಗಿ ಹೇಳುವ ಮಾತು.

ಕೊನೆಯ ಮಾತು ಅವಳು ಇವನಿಗೆ ಹೇಳುವ ಉತ್ತರ. ಅವನಿಗೆ ಹೂವು ಬೇಕಾಗಿಲ್ಲ. ಇವಳ ಸಂಗಡ ಮಾತನಾಡುವುದಕ್ಕಾಗಿ ಅವನು ವ್ಯಾಪಾರ ಬೇಕಾದರೆ ಮಾಡುತ್ತೇನೆ ಎನ್ನುತ್ತಾನೆ; ಹೇಳುತ್ತ ಸೆರಗನ್ನು ಹಿಡಿಯುತ್ತಾನೆ. ಅವಳು ನಿಜವಾದ ಸಿಡುಕಿನಿಂದಲೋ ಪ್ರಣಯದ ಸಿಡುಕಿನಿಂದಲೋ ಸೆರಗನ್ನು ಬಿಡೋ ಎನ್ನುತ್ತಾಳೆ. ಇದೇ ರೀತಿಯ ಪದಗಳು ಬೇರೆಯವನ್ನು ಅಲ್ಲಲ್ಲಿ ಕೇಳಬಹುದು.

೧೫

ಈ ಕೃತಿಗಳಲ್ಲಿ ಅನೇಕ ಒಂದೊಂದು ಸ್ಥಳವನ್ನು ಕುರಿತವು. ಅವು ಒಂದು ಊರಿನ ಚರಿತ್ರೆಯ ಯಾವುದಾದರೂ ಒಂದು ಸಂಗತಿಯನ್ನೋ ಅಲ್ಲಿನ ದೈವದ ಐತಿಹ್ಯವನ್ನೋ ಇಲ್ಲವೇ ಆ ಸ್ಥಳದ ಮಾಹಾತ್ಮ್ಯವನ್ನೋ ಹೇಳುತ್ತವೆ. ಇತಿಹಾಸದ ಸಂಗತಿಯನ್ನು ಹೇಳುವ ಪದ್ಯಗಳಿಗೆ ಬಹು ಒಳ್ಳೆಯ ಉದಾಹರಣೆ ಶ್ರೀಮಾನ್ ಪಂಜೆ ಮಂಗೇಶರಾಯರು ಸೇರಿಸಿದ ಶ್ರೀರಂಗಪಟ್ಟಣದ ಲಾವಣಿ.

ಏನು ಮೋಸವಾಯ್ತು ಸುಲ್ತಾನಿ ದೌಲತ್
ಯಾರ ಪಾಲಿಗೆ ಸೇರಿತು ಭಾಗ್ಯದ ಲಕ್ಷ್ಮೀ
ಯಾರ ವಾಸಕೆ ನಿಂತಳೋ ||

ಕತ್ತಿ ಇತ್ತು ಕೋಟೆ ಇತ್ತು
ದಳವಿತ್ತು ಬಳವಿತ್ತು
ಹಾಳು ಹಾಳುಮಾಡಿ
ತೆಗದನಲ್ಲಾ ಹೈದರನು ||

ಚನ್ನಪಟ್ಟಣದಿಂದ ಬಂದ
ಚಿನ್ನತೋಫಿನ ಫಾರಂಗಿ
ಮಾರಿಸತ್ತಿನ ಬಂಗ್ಲಿಯೊಳಗೆ
ಆರು ತಿಂಗಳಡಗಿದ್ದ ||

ಕೋಟೆಮೇಲೆ ನಿಂತುಕೊಂಡು
ಅಸ್ತ್ರ ಶಸ್ತ್ರ ನಿರಿಸಿಕೊಂಡು
ವಸ್ತ್ರ ಬಿಚ್ಚಿ ಕರದನಲ್ಲಾ
ತಾಯಿಗಂಡ ಮಾರಿಸತ್ತ ||

ಕನ್ನೆ ಕನ್ನೆಯರೆಲ್ಲ ಕೂಡಿ
ನಿಂತು ದೇಗುಡಿಯ ಮುಂದೆ
ಹಾಲು ಅನ್ನದ ಬುತ್ತಿ ಮೇಲೆ
ಬಾಸೆ ಮಾಡಿದ ಮಾರಿಸತ್ತ ||

ಪರಂಗರಿಗೆ ಪಟ್ಟವಾಯ್ತು
ಸುಲ್ತಾನರಿಗೆ ದೀನನಾಯ್ತು
ಯಾರ ದೌಲತ್ ಯಾರಿಗಾಯ್ತು
ರಾಣಿಗೆ ದೌಲತ್ ಆಯ್ತು ||

ಸ್ಥಳದ ಇತಿಹಾಸವನ್ನು ಹೇಳುವ ಪದಗಳಿಗೆ ಇನ್ನೊಂದು ಒಳ್ಳೆಯ ಉದಾಹರಣೆ 'ಜಯಕರ್ನಾಟಕ'ದಲ್ಲಿ ಪ್ರಕಟವಾದ ಸೀರಾ ಲಾವಣಿ. ಬಂಧುಗಳಾದ ಇಬ್ಬರು ನಾಯಕರು ಪಗಡೆಯ ಆಟದ ಭರದಲ್ಲಿ ಒಬ್ಬರನ್ನೊಬ್ಬರು ಕೆಟ್ಟಮಾತನ್ನಾಡಿಕೊಂಡು ಅಲ್ಲಿ ಸೋತವನು ಬಹು ಕೊಚ್ಚೆಯಾದ ಒಂದು ರೀತಿಯಲ್ಲಿ ಎದುರಾಳಿಗೆ ಅವಮಾನವನ್ನು ಮಾಡಲಾಗಿ, ಅವನು ಪರರಾಜ್ಯದ ಸುಲ್ತಾನನ ಹತ್ತಿರ ಹೋಗಿ ಅವನು ಸೈನ್ಯವನ್ನು ಕೊಟ್ಟರೆ ಸೀರ್ಯವನ್ನು ಅವನಿಗೆ ಗೆದ್ದುಕೊಡುವುದಾಗಿ ಆಸೆಕೊಟ್ಟು ದಂಡೆತ್ತಿ ಬಂದ ಕಥೆ. ಸೀರ್ಯವು ಸುಲ್ತಾನನ ವಶವಶವಾದ ಕಥೆ ಇದರ ವಿಷಯ. ಈ ಕಥೆಯ ಕೊಚ್ಚೆಯ ಭಾಗದಿಂದ ನಮ್ಮ ಜನತೆಯಲ್ಲಿ ಎಷ್ಟು ನಯದ ಜೊತೆಗೆ ಎಷ್ಟು ಗ್ರಾಮ್ಯವೂ ಸೇರಿದೆ ಎನ್ನುವುದು ಕಾಣುತ್ತದೆ. ಸ್ಥಳದ ದೇವರ ಐತಿಹ್ಯವನ್ನು ಹೇಳುವುದೆಂದರೆ, ತುಂಗೋಟಿಯ ರಂಗನನ್ನು ಕುರಿತ ಹಾಡು ಒಂದು ಉದಾಹರಣೆ. ಈ ಕೃತಿಯಲ್ಲಿ ರಂಗನಾಥನು ದೇವಸ್ಥಾನದಲ್ಲಿರುತ್ತ, ಕುದುರೆಯ ಮೇಲೆ ಏರಿ ಕಾಡಿನಲ್ಲೆಲ್ಲ ಬೇಟೆಯಾಡುತ್ತ, ಊರಿನಲ್ಲಿರುವ ಭಕ್ತರನ್ನೆಲ್ಲ ಸಂರಕ್ಷಿಸುತ್ತ, ಉತ್ಸವ ಕಾಲಗಳಲ್ಲಿ ಮನೆಮನೆಗೂ ಬಂದು ಸತ್ಕಾರವನ್ನು ಸ್ವೀಕರಿಸುತ್ತ ಇರುವ ದೊರೆಯಂತೆ ಬಂಧುವಂತೆ ವರ್ಣಿತನಾಗಿದ್ದಾನೆ. ಇಂಥದು ಇನ್ನೊಂದು ಪದ್ಯ ನಂಜನಗೂಡಿನ ಶ್ರೀಕಂಠೇಶ್ವರ ಚಾಮುಂಡಿ ಬೆಟ್ಟದ ದೇವಿಯರ ಸಂಸಾರವನ್ನು ಕುರಿತದ್ದು—

ಚಾಮುಂಡಿ ಬೆಟ್ಟಕ್ಕೆ ನಡದಾನೆ ನಂಜಯ್ಯ
ಸೇರು ಪಾವಡಕೆ ಬಿಳಿಯೆಲೆ ತಕ್ಕೊಂಡು
ಚಾಮುಂಡಿ ಕದವ ತೆಗೆಯೆಂದ ||

ಚಾಮುಂಡಿ ಬಾಗಿಲನ್ನು ತೆಗೆದು ಕೈಯೆತ್ತಿ ಮುಗಿದು ಮುತ್ತಿನಾರತಿಯನ್ನು ಬೆಳಗುತ್ತಾಳೆ. ಈ ಪದ್ಯದ ಇತರ ಸಂಗತಿಗಳು ಏನು ಎಂದು ನನಗೆ ಸ್ಪಷ್ಟವಾಗಿಲ್ಲ. ಕಾವೇರಿ ಕೋಪಮಾಡುತ್ತಾಳಂತೆ. ಒಂದು ಕಡೆ ಕಾವೇರಿ, ಒಂದು ಕಡೆ ದೇವೇರಿ, ನಡುವೆ ನಂಜಯ್ಯ ಮಲಗಿದ್ದಾನಂತೆ. ಚಾಮುಂಡಿ ನಂಜಯ್ಯನನ್ನು ಒಳಗೆ ಬಿಡುವ ಮೊದಲು ಹೆಸರ ಹೇಳಿ ನಿಮ್ಮ ಕುಲ ಹೇಳಿ ಎಂದು ಕೇಳುತ್ತಾಳೆ. ಅವನು 'ನಂಜನಗೂಡು ಕಾಣೆ | ತೆಂಗಿನ ತೋಪು ಕಾಣೆ | ಲಿಂಗಕಟ್ಟಿದವರ ಮಗು ಕಾಣೆ' ಎನ್ನುತ್ತಾನೆ. ಆ ಮೇಲೆ ನಂಜಯ್ಯ ಕದ್ದು ಸೂಳೆಯ ಮನೆಗೆ ಹೋಗುತ್ತಾನೆ. 'ಒಂದು ಕೂಗು ಹೊಡೆದರೆ ಬೆಟ್ಟೆಲ್ಲ ಕೇಳೀತು' ಎಂಬ ಮಾತು ಮುಂದೆ ಬರುತ್ತದೆ. ಕೂಗಿದವರು ಯಾರೋ ಸ್ಪಷ್ಟವಾಗುವುದಿಲ್ಲ. ಬೆಟ್ಟೆಲ್ಲ ಕೇಳೀತು ಎಂದು ಹೇಳಿರುವುದರಿಂದ ಕೂಗು ಬೆಟ್ಟದಲ್ಲಿರುವ ಚಾಮುಂಡಿಯದು ಎಂದು ಊಹಿಸಬಹುದಾಗಿದೆ. 'ಯಾಕೆ ನಂಜಯ್ಯ ಹೆದರಿದ್ಯೋ' ಎಂಬ ಪ್ರಶ್ನೆಯೂ 'ನಾ ಯಾಕೆ ಹೆದರಲಿ | ನಾ ಯಾಕೆ ಬೆದರಲಿ | ಚಾಮುಂಡಿಗೆ ನಂಜಯ್ಯ ಹೆದರ್ತಾನೆ' ಎಂಬ ಉತ್ತರವೂ ಪದ್ಯದಲ್ಲಿ ಬರುತ್ತವೆ. ಕೊನೆಗೆ ನಂಜಯ್ಯ ಕೊಡುವ ತಪ್ಪುಕಾಣಿಕೆ ಭೋಜನ ಎಣ್ಣೆಹೊಳೆಯ ಪಕ್ಕದ ತೋಪಿನಲ್ಲಿ ನಡೆಯುತ್ತದೆ.

ನಂಜನಗೂಡಿನ ದೈವವನ್ನು ಇನ್ನೊಂದು ಕೃತಿ ಇದೇ ರೀತಿಯ ಆತ್ಮೀಯತೆಯಿಂದ ವರ್ಣಿಸುತ್ತದೆ—

ಅದು ಬೆಟ್ಟ ಇದು ಬೆಟ್ಟವೋ ನಂಜುಂಡ
ನಂದ್ಯಾಲಗಿರಿ ಬೆಟ್ಟವೋ
ನಂದ್ಯಾಲಗಿರಿ ಬೆಟ್ಟಕೇ ನಂಜುಂಡ
ದಾಸಾಳಗಿಡ ಹುಟ್ಟಿತೋ ||

ದಾಸಾಳ ಹೂವ ತಂದೂ ನಂಜುಂಡ
ದಾರ್ಯಾಗೆ ಪೂಜೆಮಾಡಿ
ಹೂ ಬಾಡಿ ಹೋಯಿತಯ್ಯ ನಂಜುಂಡ
ಎದ್ದುಬಾರಯ್ಯ ಮನೆಗೆ ||

ಕರಣಾಟ ಸೀಮೆದವನೇ ನಂಜುಂಡ
ಕರ್ಪೂರವೀಳೆದವನೇ

ನಿನ ಕರುಣೆ ತಪ್ಪಿದಮೇಲೇ ನಂಜುಂಡ
ಪರದೇಶಿ ನಾನಾದೆನೋ ||

ಪರದೇಶಿ ಆದಮ್ಯೇಲೇ ನಂಜುಂಡ
ಪರಪಂಚ ನನಗ್ಯಾತಕೇ
ಪರಪಂಚ ನನಗ್ಯಾತಕೇ ನಂಜುಂಡ
ನನ ಚಿಂತೆ ನಿನಗ್ಯಾತಕೇ ||

ಹಸಿವಾದರೆ ಹಾಲುಕುಡಿಯೋ ನಂಜುಂಡ
ಬಿಸಿಲಾದರೆ ಬೆಣ್ಣೆ ತಿನ್ನೋ
ನಿದ್ದೆ ಬಂದರೆ ತೊಡೆಯ ಮ್ಯೇಲೆ ನಂಜುಂಡ
ತೊಡೆಮ್ಯೇಲೆ ನಿದ್ದೆ ಮಾಡೋ ||

ಸ್ವಾತೀಯ ಮಳೆ ಹುಯ್ಯಿತು ನಂಜುಂಡ
ಸಂಪಂಗಿಕೆರೆ ತುಂಬಿತು
ಸಂಪಂಗಿಕೆರೆಯ ಕೆಳಗೆ ನಂಜುಂಡ
ಕೆಂಬತ್ತಿ ನೆಲ್ಲ ಬಿತ್ತಿ ||

ಹಾಲು ಕೊಡೋಕೆ ಮುಂಚೆ ನಂಜುಂಡ
ಅದು ಮೂರು ಗಿಣಿ ಕೂತವು
ಹಾಲು ಕೊಡಿದ ಮ್ಯೇಲೆ ನಂಜುಂಡ
ಆ ಮೂರು ಗಿಣಿ ಎದ್ದವು ||

ಸಾಲ್ಹಿಡಿದು ಕಬ್ಬ ನೆಟ್ಟು ನಂಜುಂಡ
ಮುಂಬಿಡಿದು ನೀರು ಕೊಟ್ಟು
ಜಲನೋಡಿ ಬಾವಿ ತೆಗೆಯೋ ನಂಜುಂಡ
ಕುಲನೋಡಿ ಹೆಣ್ಣ ತಗೆಯೋ ||

ಮೂಡಲ ಸೀಮೆದವನೇ ನಂಜುಂಡ
ಮುತ್ತಿನ ಹಾರದವನೇ
ಬಡಗಲ ಸೀಮೆದವನೇ ನಂಜುಂಡ
ಬಯಲಾದ ರೂಪದವನೇ ||

ಸುತ್ತೇಳು ಮಂಟಪದವನೇ ನಂಜುಂಡ
ಸೂರ್ಯಚಂದ್ರ ಪಾದದವನೇ

ಉದ್ದುದ್ದ ಮಂಡೆದವನೇ ನಂಜುಂಡ
ತಿದ್ದೂರಬೈಲದವನೇ ||

ಉದ್ದಂಡ ಮಂಡಲಕ್ಕೇ ನಂಜುಂಡ
ತಾನೊಬ್ಬ ಹೊರಟವನೇ
ತಾಯಿತಂದೆ ಇಲ್ಲದವನೇ ನಂಜುಂಡ
ತೊಡೆಮೇಲೆ ನಿದ್ದೆಮಾಡು ||

ಸಾಲು ತೆಂಗಿನಮಾರ ನಂಜುಂಡ
ಮೇಲೆ ನಂಜನ ಗುಡಿಯೋ
ಹದಿನೇಳು ಪರದಕ್ಷಿಣಾ ನಂಜುಂಡ
ಹದಿನೇಳು ತಿರುದಕ್ಷಿಣ ||

ಈ ಪದ್ಯ ಎಲ್ಲವೂ ದೇವರನ್ನು ಕುರಿತು ಹೇಳಿದ ಮಾತಲ್ಲವೆಂದು ಕಾಣುತ್ತದೆ. ಸಂಪಗೆ ಕೆರೆಯೆಂದು ಒಂದು ಕೆರೆ ಎಲ್ಲಿಯೋ ಇರಬೇಕು. ಅದರ ಗದ್ದೆಯ ಒಂದು ಚಿತ್ರವನ್ನೂ, ವ್ಯವಸಾಯದಲ್ಲಿ ಸಂಸಾರದಲ್ಲಿ ಬೇಕಾದ ಒಂದೆರಡು ನೀತಿಯನ್ನೂ ಕೂಡ ಇದು ಒಳಗೊಂಡಿದೆ ಎಂದು ತೋರುತ್ತದೆ. ಅದು ಹೇಗಾದರೂ ಇದರ ಆರಂಭದ ಮಾತಿನಿಂದ ಕಾಣುವ ವಿಶಾಲದೃಷ್ಟಿ, ಆ ವೈಶಾಲ್ಯಕ್ಕೆ ಅನುಗುಣವಾಗಿ ಮಾತಿನಲ್ಲಿ ಬಂದಿರುವ ಬೀಸಿದ ಉಯ್ಯಾಲೆ, ಸಂದ್ಯಾಲ ಬೆಟ್ಟ ಮತ್ತು ಅದರಲ್ಲಿ ಹುಟ್ಟಿದ ದಾಸಾಳದ ಹೂವಿನ ಚಿತ್ರ, ನಂಜುಂಡನನ್ನು ಕರ್ನಾಟ ಸೀಮೆಯವನೇ ಕರ್ಪೂರ ವೀಳ್ಯದವನೇ ಮೂಡಲ ಸೀಮೆಯವನೇ ಮುತ್ತಿನ ಹಾರದವನೇ ಎಂದು ಕರೆಯುವುದರಲ್ಲಿ ಕಾಣುವ ಮರ್ಯಾದೆ, ಮೆಚ್ಚುಗೆ, ಕನಿಕರದಂತೆ ಕಾಣುತ್ತ ವೇದಾಂತದ ಭಾವವನ್ನು ನುಡಿಯುವ ತಂದೆತಾಯಿ ಇಲ್ಲದವನೇ ಎಂಬ ಚಾತುರ್ಯ, ಇವೆಲ್ಲ ಈ ಕೃತಿಗೆ ಅಪೂರ್ವವಾದ ಕಳೆಯನ್ನು ಕೊಡುತ್ತವೆ.

೧೬

ಪೈರನ್ನು ಹೀಗೆ ಹಾಕು, ಹೀಗೆ ನೀರು ಬಿಡು, ಎಂದು ಮುಂತಾಗಿ ವ್ಯವಸಾಯದ ಮತ್ತು ಸಂಸಾರದ ನೀತಿಯನ್ನು ಹೇಳುವ ಈ ಮಾತುಗಳಂತೆ ಜನತೆಯ ಸಾಹಿತ್ಯದಲ್ಲಿ ನೀತಿ ಹೇಳುವುದಕ್ಕಾಗಿಯೇ ಹೊರಟ ಪದ್ಯಗಳು ಅನೇಕ

ದೊರೆಯುತ್ತವೆ. ಧಾರವಾಡದ ಪದಗಳ ಸಂಗ್ರಹದಲ್ಲಿ ಇದಕ್ಕೆ ಹಲವು ಉದಾಹರಣೆ ಇವೆ.

ಬಂಗಾರ ಬಳೆಯಿಟ್ಟು ಬೈಬೇಡ ಬಡವರಿಗೆ
ಬಂಗಾರ ನಿನಗೆ ಸ್ಥಿರವಲ್ಲ ಮಧ್ಯಾನ
ಬಿಸಿಲು ಹೊರಳುವುದು ತಡವಲ್ಲ ||

ಹೆರವರ ಹೆಣ್ಣಿಗಾಗಿ ಹೊರಗೆ ಮಲಗುವ ಜಾಣ
ಗಿಡದ ಮೇಲೆರಡು ಗಿಣಿ ಕೂತು ನುಡಿದಾವ
ಎರವನ್ಹೊ ರಾಯ ನಿನ ಜೀವ ||

ಇಬ್ಬರ ಹೆಂಡರನಾದ ಏಡಿಯ ಮುಳ್ಳಾದ
ಕೋಡಗನಾದ ಕೊರವಾದ ಬಾಲೇರು
ಮಾಡಿಟ್ಟ ಸಿಂಬಿ ಅರಿವ್ಯಾದ ||

ಅನೇಕ ವೇಳೆ ಈ ನೀತಿಯನ್ನು ಉಪಾಯವಾದ ಮಾತಿನಿಂದ ಹೇಳಿದೆ. ಚೆಲುವೆಯಾದ ಹೆಂಡತಿ ಮನೆಯಲ್ಲಿರಲು ಯಾರ ಮೇಲೆಯೋ ಕಣ್ಣು ಹಾಕಿದ ಗೃಹಸ್ಥನೊಬ್ಬನನ್ನು ಕುರಿತು ವೃದ್ಧೆಯೊಬ್ಬಳು ಹೀಗೆನ್ನುತ್ತಾಳೆ—

ಕಾಗೆಗೆ ಕಣ್ಣಿಟ್ಟ ಕರಿಯ ಹುಬ್ಬಿನ ಜಾಣ
ಮಾವಿನ ಹಣ್ಣು ಮನೆಯಾಗೆ ಇಟಕೊಂಡು
ನೇರಿಲಕೆ ಯಾಕೆ ನೆಗೆರಿಟ್ಟ ||

ಹಳ್ಳಿಯ ಹೆಣ್ಣುಮಕ್ಕಳು ಮನೆಯ ಕೆಲಸಕ್ಕೆ ಒದಗದಿದ್ದರೆ ಸಂಸಾರ ನಡೆಯುವುದು ಕಷ್ಟ. ಇದನ್ನು ಅವರಿಗೆ ಹೇಳಿಕೊಡಬೇಕು. ಈ ಉದ್ದೇಶದಿಂದಲೇ ರಚಿತವಾದ ಪದಗಳೂ ಇವೆ. ಒಬ್ಬ ಹೆಣ್ಣುಮಗಳು ಸಂಸಾರದ ಕೆಲಸಕ್ಕೆ ಒದಗದ ಸಯುವಂತರ ಸಂಗ ತನಗೆ ಬೇಡವೆಂದು ಹೇಳುತ್ತಾಳೆ:

ಇಂಥ

ಉತ್ತಮರ ಸಂಗಾ ನನಗೆ ಘಳಿಗೆ ಹೊತ್ತು ಬೇಡಾ
ಜಾಣಾ ನಮ್ಮ ತಂದೆ ||

ಒಕ್ಕಳ ರಾಗಿಯ ನಾ ಬೀಸಲಾರೆ
ಕಸಬರಲ ಹಿಡಿದು ನಾ ಕಸ ತೊಡಿಯಲಾರೆ

ಮನೆ ಬಾಕಲಿಗೆ ಸಗಣಿ ನಾ ಹಾಕಲಾರೆ
ಹತ್ತರಬಿ ನೀರಾ ನಾ ತರಲಾರೆ
ಹಸುಮಕ್ಕಳಿಗೆ ಹಾಲಾ ನಾನೆರೆಯಲಾರೆ
ಹತ್ತು ಮಂಕರಿ ಕಸಾ ನಾ ಹಾಕಲಾರೆ
ಉಳಿ ಆಳು ರೆಟ್ಟು ನಾ ಇಕ್ಕಲಾರೆ
ಆಳುಕಾಳಿಗೆ ಮುದ್ದೆ ನಾ ಹೊರಲಾರೆ
ಹೊಲದಲ್ಲಿ ಕಳೆಸೆತ್ತೆ ನಾ ಕೀಳಲಾರೆ

ಇಂಥಾ

ಉತ್ತಮರ ಸಂಗ ನನಗೆ ಘಳಿಗೊತ್ತು ಬೇಡ
ಜಾಣ ನಮ್ಮ ತಂದೆ ||

ಹೆಣ್ಣಿಗೆ ಈ ತಿಳುವಳಿಕೆ ಇಲ್ಲದೆ ಹೋದಾಗ ಅಥವಾ ಅವಳು ಸುಖದಲ್ಲಿ ಬೆಳೆದವಳೆಸ್ನುವುದನ್ನು ಮರೆತು ಗಂಡನೋ ಅತ್ತೆಯೋ ಅವಳಿಗೆ ತಗದ ಕೆಲಸವನ್ನು ಹೇಳಿದಾಗ ಆಗುವ ಅವಗಡ ಕುಂಬಾರ ಹೆಣ್ಣಿನ ಈ ಪದ್ಯದಲ್ಲಿ ಕಾಣುತ್ತದೆ.

ಕುಂಬಾರ ಅಣ್ಣಯ್ಯಗ್ಯಾಕೊ ಗೊಂಬೆಮಾಟದ ಹೆಣ್ಣು
ತುಳಿ ಬಂದು ಮಣ್ಣು ಹೊರು ಅಂದ ಕುಂಬಾರ
ಹೊತ್ತು ಮಾರೆಂದ ಮಡಕೀಯ ||

ಹೊತ್ತು ನಾ ಮಾರೋಕೆ ಬಡವಾರ ಮಗಳಲ್ಲ
ಅರುವತ್ತು ಹಳ್ಳಿ ಕಸುಬೀನ ಗೌಡರ ಮಗಳು
ತರುವಾಗ ತಮ್ಮ ಅರಿಯಾನೆ ||

ನಿನ್ನನ್ನ ತರುವಾಗೆ ನೀ ಇದ್ದೆ ಸಣ್ಣವಳೆ
ಈಗೆಲ್ಲಿ ಕಲಿತೆ ಹೊಸಮಾತ
ಈಗೆಲ್ಲಿ ಕಲಿತೆ ಹೊಸಮಾತ ಬಣಜಿಗ
ಹೊರುಬಾರೊ ಹಟ್ಟಿ ಶಗಣಿಯ ||

೧೭

ಜನತೆಯ ಸಾಹಿತ್ಯದಲ್ಲಿ ಬಹು ಮುಖ್ಯವಾದ ಒಂದು ಭಾಗ ಹಬ್ಬ ಹುಣ್ಣಿಮೆ ಪ್ರಸ್ತ ಪ್ರಯೋಜನಗಳಲ್ಲಿ ಹೇಳುವ ಪದಗಳದು. ಮನೆಯ ಮಕ್ಕಳ ಮನಸ್ಸಿನ ಅಕ್ಕರೆ, ಎಳಮೆ, ನಯ ಈ ಪದಗಳಲ್ಲಿ ಉಳಿದೆಲ್ಲ ಪದಗಳಲ್ಲಿ ಕಾಣುವುದಕ್ಕಿಂತ

ಚೆನ್ನಾಗಿ ಕಾಣುತ್ತವೆ. ಮೈಸೂರ ಪ್ರಾಂತದ ಹರಿಜನರಲ್ಲಿ ಇರತಕ್ಕವೆಂದು ಶ್ರೀಮಾನ್ ಬಿ. ಎನ್. ರಂಗಸ್ವಾಮಿಯವರು 'ಜಯಕರ್ನಾಟಕ'ದಲ್ಲಿ ಪ್ರಕಟಿಸಿರುವ ಎಣ್ಣೆಶಾಸ್ತ್ರದ ಈ ಪದಗಳು ಈ ರೀತಿಗೆ ಬಹು ಒಳ್ಳೆಯ ಉದಾಹರಣೆ.

ಶಾಸ್ತ್ರವ ಮಾಡಿರಿ ಸೂಸ್ತ್ರದ ಬೊಂಬೆಗೆ
ಲೋಕಪಾಲಕರ ಮಗನೀಗೆ ಮದ್ಲಗಿತ್ತೀಗೆ
ಶಾಸ್ತ್ರವ ಮಾಡಿ ನಡುಮನೆಲಿ||

ಅಕ್ಷತೆ ಇಕ್ಕಿರಿ ಅಚ್ಚಮುತ್ತೈದೇರು
ಪಾರುವತಿ ಪಡೆದ ಮಗನಿಗೆ ಮದ್ಲಗಿತ್ತೀಗೆ
ಅಕ್ಷತೆ ಇಕ್ಕಿ ಐವಾರು||

ಆರೆಣ್ಣೆ ತೂರೆಣ್ಣೆ ಆರು ಮಾನದೊಳ್ಳೆಣ್ಣೆ
ನಾರೀರ ಕೈಯ ಉಗುರೆಣ್ಣೆ ಒತ್ತೀರಿ
ರಾಜ್ಯವಾಳುವರ ಮಗನೀಗೆ||

ಐರಣಕೆ ಹೊಂಟಾರು ಐವಾರು ಚೆಲುವೇರು
ಐವತ್ತು ವರಹಾದ ತೊಡುಗೇಯ ತೊಟ್ಕೊಂಡು
ಐರಣಕೆ ಐವರ್ಹೊಂಟಾರು||

ಚಿನ್ನದ ಕೈಕಡಗ ಚೆನ್ನೇರು ಇಟಕೊಂಡು
ಚಿನ್ನದಾಭರಣಕ್ಕೆ ನಡುಬಾಗಿ ಮುಡಿಜೋಲಿ
ಚೆನ್ನೇರು ಆಗಣಿ ಎರೆದಾರು||

ಇದು ಹರಿಜನರಲ್ಲಿ ಸಿಕ್ಕಿದ ಪದ್ಯ. ಯಾವ ತಪೋವನದಲ್ಲಾಗಲಿ, ಅರಮನೆಯಲ್ಲಾಗಲಿ ಇದಕ್ಕೆ ಮಿಾರಿದ ಸಂಸ್ಕೃತಿ ದೊರೆಯಲಾರದು. ಮಣೆಯಲ್ಲಿ ಕುಳಿತವಸು ದೊರೆಯಲ್ಲ, ವಿಘ್ನೇಶ ಅಥವಾ ಸ್ಕಂದನಲ್ಲ, ಲವಕುಶನಲ್ಲ. ಆದರೆ ಇಲ್ಲಿ ಅಕ್ಷತೆ ಉಂಟು, ತೂರೆಣ್ಣೆ ಉಂಟು, ಅಕ್ಕತಂಗಿಯರ ಕೈಯ ಉಗುರೆಣ್ಣೆ ಉಂಟು, ಚೆನ್ನೆಯರು ಎರೆಯುವ ಆಗಣಿ ಉಂಟು. ಈ ಸೇವೆಯನ್ನೆಲ್ಲ ದೊರೆತನದ ಭೋಗಕ್ಕೆ ಸಮನಾಗಿ ಮಾಡುವ ಪ್ರೀತಿ ಉಂಟು, ಸಂಭ್ರಮ ಉಂಟು. ಬಲ್ಲ ಮನಸ್ಸಿಗೆ ಹಸೆಯ ಮೇಲೆ ಕೂತ ಹೆಣ್ಣೂ ಗಂಡೂ ದೇವರೇ ಸರಿ ಎಂಬ ಭಾವನೆಯೂ ಉಂಟು. ಅಸಂಸ್ಕೃತರೆನ್ನಬಹುದಾದ ಜನರಲ್ಲಿ ಕಾಣುವ ಈ ಸಂಸ್ಕೃತಿಯ ಮೆರುಗನ್ನು ನೋಡಿ ಯಾರಾದರೂ ಆಶ್ಚರ್ಯಪಡಬೇಕು. ಉತ್ತರ

ಕರ್ಣಾಟಕದಲ್ಲಿ ದೊರೆತ ಹೆಣ್ಣೊಪ್ಪಿಸುವ ಪದ ಕೆಲವನ್ನು ನೋಡಿದರೆ ಇದೇ ವಿಷಯ ನಮಗೆ ಗೋಚರವಾಗುತ್ತದೆ. ಇದು ತಾಯಿ ಹೇಳುವ ಮಾತು—

ಒಂಬತ್ತು ತಿಂಗಳು ತುಂಬಿಕೊಂಡು ತಿರುಗೇನು
ಹಂಬಲಿಸಿ ನಿನ್ನ ಹಡದೇನು ಚಿತ್ರದ ಗೊಂಬಿ
ನಿನ್ನ ಒಪ್ಪಿಸಿ ಕೊಡಲ್ಹಿಂಗ ||
ಮೊಸರು ಅನ್ನ ಕಲಸಿ ತುಸುನ ಉಣ್ಣಂತ ಹೇಳಿ
ರಾಶಿಯ ಉಣಿಸಿ ಸಲಹಿದೆ ನನ ಮಗಳೆ
ಕೂಸೆ ನನ ಮನೆಗೆ ಎರವಾದೆ ||

ಅಣ್ಣನು ಹೇಳುವ ಮಾತು ಇದು—

ಸುಣ್ಣದಾ ಬಟ್ಯಾಗೆ ತಣ್ಣೀರು ಹುಯ್ದ ಹಂಗ
ಅಣ್ಣನ ಹೊಟ್ಟೆಯ ಹುಯ್ದಾಡಿ ನನ ತಂಗಿ
ನನ್ನ ಮನೆಗಿಂದು ಎರವಾದೆ ||
ಸಣ್ಣ ತಮ್ಮ ಆಗಿದ್ರೆ ತಣ್ಣಗೆ ಇರುತಿದ್ವೆ
ಮ್ಯಾನ್ಯ ಹೊಲದಾಗೆ ಸರಿಪಾಲು ತಕ್ಕೊಂಡು
ಚಿನ್ನ ನನ ಹಂತಿಲಿರುತಿದ್ದೆ ||

ಆಸ್ತಿಯಲ್ಲಿ ಅರ್ಧ ಹೋಗಿದ್ದರೂ ಇವನು ಯೋಚನೆ ಮಾಡುತ್ತಿರಲಿಲ್ಲ. ಕೂಡ ಹುಟ್ಟಿದ್ದು ಗಂಡಾಗಿದ್ದಿದ್ದರೆ ಜೊತೆಯಲ್ಲಿರಬಹುದಾಗಿತ್ತು ಎಂದು ಒಂದೇ ಆಗ ಚಿಂತೆ. ತಮ್ಮನದಾದರೂ ಇದೇ ಮಾತು—

ಒಮ್ಮನ ಮದ್ದಿಗೆ ಬೆಂಕಿ ಒಮ್ಮಾಲೆ ಕೊಟ್ಟಂಗೆ
ತಮ್ಮನ ಹೊಟ್ಟೆ ತಳಮಳಿಸಿ ಅಕ್ಕ ನನಗೆ
ರಮ್ಮಾಸಿ ಹಣ್ಣು ಕೊಡುತಿದ್ದೆ ||
ಹಿರಿಯ ಅಣ್ಣ ಆಗಿದ್ರೆ ಸರಿಯಾಗಿ ಇರುತಿದ್ವೆ
ಎರೆಯ ಹೊಲದಾಗ ಸರಿಪಾಲು ತಕ್ಕೊಂಡು
ದೊರೆ ನನ್ನ ಹಂತಿಲಿ ಇರುತಿದ್ದೆ ||

ಇದು ಬಳಗದ ಸ್ಥಿತಿ—

ಯಕ್ಕೀಯ ಗಿಡದಾಗ ಹಕ್ಕಿ ಚೋರ‍್ಯಾಡಿದ್ಹಂಗ
ಅಕ್ಕ ನೀಲವ್ವನ ಬಳಗಾದ ಕಣ್ಣೀರು
ಒಕ್ಕಂದ ಹೊಳೆಗೆ ಹರಿದಾವು ||

ನೋಡಿಕೊಳ್ಳಿ ಎಂದು ಹೇಳುವ ಈ ಒಂದು ಮಾತಿನ ಮರುಕದೊಂದಿಗೆ ಈ ಪದಗಳನ್ನು ಮುಗಿಸಬಹುದು—

ಹರೆಯಾಗೆ ನಮ್ಮಗಳು ಹಾಲುಬೋನ ಉಣ್ಣೋವ್ಳು
ತೂಗುಮಂಚದಲಿ ಮಲಗುವಳ ನಮ್ಮಗಳು
ನಗುನಗುತ ಮನೆಯ ಬೆಳಗುವಳ ||

ಮುಂಜಾನೆದ್ನಮ್ಮಗಳು ತುಪ್ಪಬೋನ ಉಣ್ಣುವಳ
ಪಟ್ಟಮಂಚದಲಿ ಮಲಗುವಳ ನಮ್ಮ ಕೂಸ
ಕಟ್ಟ್ಯಾತ ಕತೆಯ ಹೇಳುವಳ ||

ಸಿಂಬೆಯ ಹಣ್ಣನೆ ಸೆಂಬಿ ಗಿಣಿ ಒಯ್ದ್ಹಂಗ
ಇಂದ ನಮ್ಮ ಮಗಳ ಕೊಡುತೇವ ಅತ್ತೆವ್ವ
ಕಂದ್ನ ಸರಿಮಾಡಿ ಸಲಹವ್ವ ||

ಪಕ್ಕದ ಜನರು ಹೇಳುತ್ತಾರೆ:

ಅತ್ತೀನ ಕರಿರವ್ವ ಅತ್ತಿಗೀನ ಕರಿರವ್ವ
ನಾದಿನಿನ ಕರಿರ ಹೊರೆಯಾಕ ಅವರೀಗ
ಪ್ರೀತಿಯ ಮಗಳ ಕೊಡಿರವ್ವ ||

ನಮ್ಮ ಮಗಳಲ್ಲವ್ವಾ ನಿಮ್ಮ ಮಗಳೀಕೆಯಿಂದು
ಚನ್ನಾಗಿ ಮಗಳ ಸಲಹವ್ವ ಅನುತ
ಅತ್ತಿ ಕೈಯಾಗ ಕೊಡಿರವ್ವ ||

ಈ ಮಗಳು ಸುಖದಲ್ಲಿ ಬೆಳೆದವಳು, ಸಂತೋಷದಲ್ಲಿ ಬೆಳೆದವಳು; ಆ ಸಂತೋಷದಿಂದ ತೌರುಮನೆ ಬೆಳಗುತ್ತಿತ್ತು. ಅವಳು ಚತುರೆಯೂ ಹೌದು: ಕಲಿತ ವಿಷಯವನ್ನು ಹೇಳುವುದು ಮಾತ್ರವಲ್ಲ; ಇವಳು ಹೇಳುತ್ತ ಹೇಳುತ್ತ ಕತೆಯನ್ನು ಕಟ್ಟುವಳು. ಇವಳು ಇಂದಿನಿಂದ ನಿಮ್ಮ ಮಗಳು; ನಿಮ್ಮ ಮಗಳನ್ನು ಚೆನ್ನಾಗಿ ಸಾಕಿಕೊಳ್ಳಿ. ಜನಕರಾಯನೂ ಕಣ್ವ ಋಷಿಯೂ ಇದಕ್ಕೆ ಹೆಚ್ಚಿನ ಮಾತು ಏನನ್ನು ಹೇಳಿದರು? ಅವರ ಮನಸ್ಸನ್ನು ವರ್ಣಿಸಿದ ಕವಿತೆ ಈ ಪದಗಳು ಮಾಡಿದ್ದಕ್ಕಿಂತ ಯಾವ ಹೆಚ್ಚಿನ ಕೆಲಸವನ್ನು ಮಾಡಿದುವು?

೧೮

ಬಂಜೆಯ ಕಥೆ ಅಥವಾ ಸಂಜಯ್ಯನ ಕಥೆ ಇರುವಂತೆ ಅನೇಕ ವಿಷಯಗಳನ್ನು ಕುರಿತ ಕಥೆಗಳು ಈ ಪದ್ಯಗಳ ರೂಪದಲ್ಲಿ ಜನರಲ್ಲಿ ವಾಡಿಕೆಯಾಗಿರುತ್ತವೆ. ಬೆಳಗಾಮಿನ ಸಾಹಿತ್ಯ ಸಮ್ಮೇಳನದಲ್ಲಿ ಶ್ರೀಮಾನ್ ಗುರುಪಾದಪ್ಪ ವೀರಪ್ಪ ಹುಲಿಕುಂದ ಎಂಬ ಲಾವಣಿಕಾರರು ಮೂರು ನಾಲ್ಕು ಇಂಥ ಕಥೆಗಳನ್ನು ಒಂದಾದ ಮೇಲೆ ಒಂದಾಗಿ ಸಭೆಯ ಮುಂದೆ ನಿಂತು ಹೇಳಿದರು. ಸಂಗ ಎಂಬ ಹೆಸರಿನ ಕತ್ತೆ ಸತ್ತುಹೋಯಿತೆಂದು ಕೇಳಿದಾಗ ಸಂಗ ಎಂಬ ಹೆಸರಿನ ತನ್ನ ಪ್ರಿಯನು ಹೋದನೆಂದು ತಿಳಿದು ಅಗಸಗಿತ್ತಿ ಅತ್ತಳೆಂದು ಒಂದು ಕಥೆಯ ವಿಷಯ. ಗರ್ಭಿಣಿಯಾಗಿದ್ದೇನೆ, ಮಗುವಿಗೆ ಹೆಸರು ಏನಿಡೋಣ, ಎಂದು ಹೆಂಡತಿ ಕೇಳಲು ಗಂಡನು ಆನಂದಪಟ್ಟು ಮಗುವಿನ ಹೆಸರಿಗಾಗಿ ಅವಳೊಂದಿಗೆ ಬಹಳ ಯೋಚನೆಮಾಡಿ ಕ್ಲೇಶಪಡುತ್ತಿರಲು ಆಕೆ ಗರ್ಭಿಣಿಯಾಗಿರಲಿಲ್ಲವೆಂದು ತಿಳಿದು ಪೆಚ್ಚುಬಿದ್ದನೆನ್ನುವುದು ಇನ್ನೊಂದರ ವಿಷಯ. ವಿಷಯದಷ್ಟನ್ನೇ ನೋಡಿದರೆ ಆ ಕಥೆಗಳ ಸ್ವಾರಸ್ಯ ಎಷ್ಟು ಎನ್ನುವುದು ತಿಳಿಯುವುದಿಲ್ಲ. ಲಾವಣಿಕಾರನು ಕಥೆ ಹೇಳುತ್ತಿರುವಾಗ ಸಭಾ ಭವನದಲ್ಲಿ ತುಂಬಿದ್ದ ಮಂದಿ ನಕ್ಕು ನಕ್ಕು ಆನಂದಪಟ್ಟರು. ಪ್ರಾಕ್ತನ ವಿಮರ್ಶೆಯಲ್ಲಿ ಪ್ರಸಿದ್ಧರಾದ ಶ್ರೀಮಾನ್ ಫ್ಲೀಟರು ಬಹು ವರ್ಷಗಳ ಹಿಂದೆ ಈ ರೀತಿಯ ಕಥೆ ನಾಲ್ಕನ್ನು 'ಇಂಡಿಯನ್ ಆಂಟಿಕ್ವರಿ' ಪತ್ರಿಕೆಯಲ್ಲಿ ಪ್ರಕಟಿಸಿದರು. ಅವು ಶ್ರೀಮಾನ್ ಗುರುಪಾದಪ್ಪನವರು ಹಾಡಿದಂತೆ ಹಾಸ್ಯದ ಕಥೆಗಳಲ್ಲ; ಆದರೂ ಜನದ ಮನಸ್ಸನ್ನು ಹಿಡಿಯತಕ್ಕವು. ಅವುಗಳಲ್ಲಿ ಒಂದರ ವಿಷಯ ಆಂಗ್ಲೇಯ ಸರ್ಕಾರ ತೆರಿಗೆಯ ಹಣ ಎತ್ತುವುದಕ್ಕೆ ಮಾಡಿದ ಯುಕ್ತಿ, ಅದರಿಂದ ಜನಕ್ಕೆ ಆದ ತೊಂದರೆ, ಒಬ್ಬ ಸಾಹೇಬನಿಂದ ಬಂದ ಈ ತೊಂದರೆ ಇನ್ನೊಬ್ಬ ಸಾಹೇಬನಿಂದ ನಿವಾರಣೆಯಾಯಿತೆನ್ನುವುದು.

ಏನ ಹೇಳಲಿ ಜನ್ಮದ ಗೋಳ
ಇಂಗ್ರಾಜಿ ಉಪದರ ಆದಿತು ಬಾಳಾ
ಬಡವರು ಅಳುತಾರು ಗಳಗಳಾ
ಮಾಡತಾರು ಚಿಂತೀ ||

ಎಂದು ಆದರ ಪಲ್ಲವಿ. ತೆರಿಗೆಯನ್ನು ಕೊಟ್ಟು ಸೋತು ಬಂದ ಬಡತನಕ್ಕಿಂತ

ತನ್ನದು ಏನೂ ಇಲ್ಲವೆಂದು ತೋರಿಸುವುದಕ್ಕಾಗಿ ಸಾಹುಕಾರ ಮಾಡಿದ ವೇಷ ವಿಶೇಷವಾಗಿತ್ತು—

ಅವನು ವಸ್ತ್ರ ಒಡವೆ ತೆಗೆದಿಟ್ಟು
ಹರಕು ದೋತರ ಅಂಗಿಯ ತೊಟ್ಟು
ಬಂಗ್ಲೆಗೆ ಹೋದನು ನಾಚಿಕೆ ಬಿಟ್ಟು ||

ಬಾಳಾ ಕೆಟ್ಟದಣ್ಣಾ ಸರಕಾರ
ಬಡವರು ತಂದಾರ ಕಣ್ಣೀರ
ಎಂಥ ವೇಳಿ ತಂದೀ ಈಶ್ವಾರ
ನಮಗ್ಯಾರದಿಲ್ಲಾ ಆದಾರಾ ||

ಕಮರಿಪೇಟಿ ಮುಸಲರು ಬಳೆಗಟ್ಟಿ
ಕೊಡುದಿಲ್ಲ ಹೋಗ್ ಅಂದಾರ ಕರಕಟ್ಟಿ
ಬೇಕಾರ ತಕ್ಕೊಳ್ರಿ ದಂಡಕಟ್ಟಿ
ಇದ್ದರೆ ನಿಮ ಹುಕುಮು ||

ಹೀಗಾಗಿ ಬಹಳ ಗಲಭೆಯಾಯಿತು. ಕೊನೆಗೆ ಎಲಪಾಟ್ ಸಾಹೇಬ ಬಂದು ಇವರ ಕಷ್ಟ ನಿಜವೆಂದು ತಿಳಿದು ತೆರಿಗೆಯನ್ನು ಮನ್ನಿಸುತ್ತಾನೆ. ಈ ಕಥೆಗಳಲ್ಲಿ ಇನ್ನೊಂದು ಆಂಗ್ಲೇಯ ಸರಕಾರದವರು ಜನರಿಂದ ಆಯುಧಗಳನ್ನು ಒಪ್ಪಿಗೆ ಮಾಡಿಸಿಕೊಂಡ ಸಂದರ್ಭವನ್ನು ಕುರಿತದ್ದು. ಕೆಲಜನರು ಆಯುಧವನ್ನು ಕೊಡು ವುದಿಲ್ಲವೆಂದು ಹಠಮಾಡಿ ಅವರ ಮೇಲೆ ಸರಕಾರದ ಸೈನ್ಯ ಬರಬೇಕಾಗಿ ಕದನ ದಲ್ಲಿ ಹಠಮಾಡಿದವರು ಸತ್ತುದ್ದಲ್ಲದೆ ಊರು ಹಾಳಾಯಿತೆನ್ನುವುದು ಇದರ ವಿಷಯ.

ಹೊತ್ತು ಬಂದಿತು ಮತ್ತ ನೋಡಿರಿ ಕತ್ತಿ ಹಿಡಿಯುವ ಜನಕ
ಶಿಟ್ಟಿನ ಮಂದಿ ಭಂಟರ ಹಲಗಲಿ ಮುಟ್ಟಲಿಲ್ಲ ದಡಕ ||

ಎಂದು ಇದು ಆರಂಭವಾಗುತ್ತದೆ. ಈ ಕಥೆ ಹೇಳಿರುವ ರೀತಿ ಬಹಳ ಚೆನ್ನಾ ಗಿರುವುದರಿಂದ ಇದನ್ನು ಸಂಪೂರ್ಣವಾಗಿ ಕೊಟ್ಟಿದೆ.

ಹೊತ್ತು ಬಂದಿತು ಮತ್ತ ನೋಡಿರಿ ಕತ್ತಿ ಹಿಡಿಯುವ ಜನಕ
ಶಿಟ್ಟಿನ ಮಂದಿ ಭಂಟರ ಹಲಗಲಿ ಮುಟ್ಟಲಿಲ್ಲ ದಡಕ ||
ವಿಲಾತಿಯಿಂದ ಹುಕುಮು ಕಳವಿದರ ಕುಂಪಣಿ ಸರಕಾರಾ :
ಎಲ್ಲ ಜನರನಾ ತರಿಸಿ ಜೋರಿಮಾಡಿ ತರಬೇಕ ಹತಾರಾ ;

ಕತ್ತಿಕಟಾರಿ ಕ್ಕೈಚುರಿ ಬಾಕು ಗುರ್ಡಿ ಸುರಾಯಿಚಕ್ರಾ
ಬಾಲಿಯು ಬರ್ಜಿ ಬಿಚ್ಚುಗತ್ತಿಯು ನೋಡ ಬಾಣಬಿಲ್ಲಿನವರಾ
ಪಟಾಕ ಪಿಸ್ತುಲ ಕರಲಿ ತೇಗಾ ಚಾಪಗೊಡ್ಲಿ ಶಸ್ತ್ರಾ
ತೋಫು ತುಬಾಕಿ ಹೊಡವು ಮದ್ದುಗುಂಡ ಬಿಡಬ್ಯಾಡರಿ ಚೂರಾ ;
ಮುಚ್ಚಿಟ್ಟವರಿಗೆ ಮೂರು ವರ್ಷದ ಬೇಡಿಹಾಕರಿ ಪೂರಾ ;
ಕೊಡದೆ ದಿಟಾಯಿ ಮಾಡಿದವರನಾ ಕಡದಹಾಕರಿ ತಾರಾ ;
ಬೇಡಿದಕ್ಷಣಕ ತಾವು ತಂದು ಕೊಡತಾರ ಹಿಡಿಹಿಡಿರ್ ಎಂದು
ವತ್ತ ಕೊಡತೇವ್ ಅನ್ನರಿ ಒಂದೇ ಒಂದು ತಂದು ಕೊಡತಾರ ತಮ್ಮ ಕುಸಿಲಿಂದು.
ಬಂದೀತು ಹುಕುಮು ಹೀಂಗ್ ಎಂದು ಡಂಗರಸಾರಿದರ ಮುಂದು
ಶೂರ ಶಿಪಾಯಿ ಜನರ ತಾವು ತಿಳಿದು ಅಳತಾರು ಕಣ್ಣಿಗೆ ನೀರ್ ತಂದು
ಬಹಳ ಚಿಂತಿಯಾಗಿ ದುಃಖದಿಂದ ಅವರು ಬಿದ್ದರಣ್ಣ ನೆಲಕ || ೧ ||

ಕೇಳುತ ಹುಕುಮಾ ಕೆಲವರ ತಂದ ತಂದ ಕೊಟ್ಟಾರ ಆವಾಗ.
ಬಹಳ ಬೆಲೀವು ಹೆಚ್ಚಿನ ಹತಾರಾ ಮುಚ್ಚಿಟ್ಟರ ವೊಳಗ :
ಸಾಲ ಸಮದಮಾಡಿ ದನಕರ ಮಾರಿ ತಂದಿವ್ವಿ ಹಬ್ಬದಾಗ
ನೋಡ ನೋಡ ಹ್ಯಾಂಗೆಕೊಡುನ್ ಅಂತ ಹುಗಿದಿಟ್ಟರ ನೆಲದಾಗ,
ಶೂರ ಚಟೇಗಾರು ಜಾಯಿರ್ ಸಾಹೇಬ ಬಂದಾರ ಆವಾಗ,
ಸಂದಿಯುಗೊಂದಿ ವೊಂದು ಉಳಿಯುದ್ ಹಂಗ ಹೊಕ್ಕ ಹುಡಿಕೆರ ಮನಿಯಾಗ.
ತಪ್ಸಿತ್ ಉಪಾಯಿ ಇನ್ನ ಯಾತರ ಮಾಡುನ್ ಅಂತರ ಹ್ಯಾಂಗ ;
ವೊಬ್ಬರಮೇಲ್ ಒಬ್ಬರ ಚ್ಯಾಡ ಹೇಳತಾರ ವರ್ಮಸಾಧಿಸಿದ ಹಾಂಗ.
ಜ್ಯಾಡಸಿಹೋದವೊ ಎಲ್ಲಾ ನಾಡ್ ಒಳಗೆ ಏನು ಉಳಿಲಿಲ್ಲಾ
ಅಜ್ಜ ಮುತ್ತೆಕ ಹಿಡುವ ಪಿಸ್ತುಲ ಕಸದು ಹೋದರ ಕಟ್ಟಿಯು ಡಾಲಾ
ಕವಚ ಬೆಳ್ಳಿಯು ಮಕಮಾಲಾ ರತ್ನದ ಹಿಡಿಕಿವ ಹೋದವು ಎಲ್ಲಾ
ಹೋದ ಹತಾರಕ ಹೊಟಿಬ್ಯಾನಿ ಹಚ್ಚಿಕೊಂಡ ನಿಂತರ ಸಾವುದಕ || ೨ ||

ಹಲ್ಲಕಿತ್ತಿದಾ ಹಂಬಿನ ಪರಿಯು ನಮಗೆ ಆದಿತ್ ಅಲ್ಲ,
ರಂಡಿ ಮುಸುಕ ಹಾಕಿ ತಿರಿಗಿದರ ನಮ ಮಾನ ಉಳಿಯುವುದಿಲ್ಲಾ,
ಮಗ್ಗಲದಾಗಿನ ಹೆಣತಿ ಕೊಟ್ಟಂಗ ಆತಿ ಹೇಡಿ ಆದೇವ್ ಅಲ್ಲಾ,
ಸತ್ತ ಹೆಣಕ ಶ್ರಿಂಗಾರಮಾಡಿದ ಪರಿ ಆದಿತ್ ಅಲ್ಲಾ,
ಸಾವಕಾರು ನಮ್ಮ ಜೀವ ಹೋದೀತ್ ಅಂತ ಚಿಂತಿ ಮಾಡೇರ್ ಅಲ್ಲ,
ಹಗಲುಮನೆ ಹೊಕ್ಕು ಹಣಾ ವೋದರ ಕೇಳವರ್ ಯಾರ್ ಇಲ್ಲಾ,

ಪುಂಡ ಪಾಳೆಯಗಾರ ಪಾಚ್ಯ ವಜೀರರು ಪಂತ ಹಿಡಿಯಲಿಲ್ಲ,
ದಂಡನ್ ಆಳುವ ಧೊರೆ ದೌಲತರು ಅಂಜಿ ಕುಳಿತರ್ ಅಲ್ಲಾ :
ದೇವರ ತಂದ ಪಡಿಪಾಟಾ ಚಿಂತಿ ಹತ್ತಿ ಆದರೊ ನಷ್ಟಾ
ಅಧಿಕಾರ ಉಳಿಯಲಿಲ್ಲ ಯೆಳ್ ಅಷ್ಟಾ ಕೇಡಗಾಲ ಬಂದಿತು ಕನಿಕಷ್ಟಾ
ಹೆಂಗಸ್ ಆಗಿ ಶೀರಿಯು ವುಟ್ಟಾ ಸೋಂಡ್ ಒಣಗಿ ಆದೀತೋ ಬೊಬ್ಬಾಟಾ
ಆದ್‌ಹಂಗ್ ಆತಿ ಸ್ತ್ರೀಯರ ಕ್ರೀಡಾರ್ ಆಟಾ ಭಂಟರಿಗೆ ಬಂದಿತೋ ಬಿಕಷ್ಟಾ
ಪಕ್ಕಾಕಿತ್ತ ಪಕ್ಷಿಗತಿ ಆಗಿ ಚಿಂತಿ ಆದರ ಮನಕ || ೩ ||

ಹಲಗಲಿ ಎಂಬುವ ಹಳ್ಳಿ ಮುಧೋಳ ರಾಜ್ಯದಾಗ ಇತ್ತು.
ಪೂಜೇರಿ ಹನುಮಾ ಬಾಲಜಡಗ ರಾಮು ಮಾಡ್ಯಾರ ಮಸಲತ್ತು :
ಕೈನ ಹತಾರ ಕೊಡಬಾರದೊ ನಾವು ನಾಲ್ಕು ಮಂದಿ ಜತ್ತು ;
ಹತಾರ ಹೋದ್ ಇಂದ ಬಾರದ ನಮ್ಮ ಜೀವ ಸತ್ ಓಗುದು ಗೊತ್ತು.
ಸುತ್ತಿನ ಹಳ್ಳಿ ಮತ್ತ ಧೊರಿಗಳಿಗೆ ತಿಳಿಶಿರ ಹೀಂಗ್ ಅಂತು :
ಮಾಡರಿ ಜಗಳಾ ಕೂಡ್ ಇರತೇವು ಕುಮುಕಿ ಯಾವತ್ತು.
ಒಳಗಿಂದ್ ಒಳಗೆ ವಚನಕೊಟ್ಟರೊ ಬ್ಯಾಡರ್ ಎಲ್ಲ ಕಲತು.
ಕಾರಕೂನನ ಕಪಾಳಕ ಬಡದರ ಶೀಪಾಯಿ ನೆಲಕ ಬಿಟ್ಟು.
ದುಃಖದಿಂದ ಅವರು ಅಲ್ಲಿಗ್ ಹೋಗಿ ಸಾಹೇಬರ ಹೇಳಿದರ ಕೂಗಿ.
ಕೇಳಿ ಸಾಹೇಬ ಯುದ್ಧ ಸಿಟ್ಟಿಗಿ ತಿರಿಗಿ ಹೋದ ಆವಾಗ ಕಲಾದಗಿ
ಕರ್ಶಿ ಕೃಷ್ಣನಾಯಕ ಗೌಡ ಕುಂದರಗಿ ಕರಶ್ಯಾನ ಸಂಧಾನಕ್ ಆಗಿ
ಹಟಾ ಮಾಡಬಾರದು ನಿಮ್ಮ ಹತಾರ ಕೊಡಿರಿ ಸಾಹೇಬನ್ ಇಶಾಕ || ೪ ||

ಹತಾರ ಕೊಡಲಿಕೆ ಹೆಂಗಸ್ ಆಗಿ ಬಳಿ ಇಟ್ಟಿಲ ಕೈಯಾಗ,
ಯಾವ ಬಂದೀರಿ ಜೀವ ಹೋದರೂ ಕೊಡುದಿಲ್ಲ ಸುಮ್ಮನ್ ಹೋಗರಿ ಈಗ,
ಅಂದ ಮಾತ ಎಲ್ಲ ಬಂದ ಹೇಳಿದಾನ ಆವಾಗ ಸಾಹೇಬನ.
ಶಿಟ್ಟಲಿ ಮುಂಗ್ಯೆ ಕಟ್ಟನೆ ಕಡಕೊಂಡ ಹುಕುಮು ಕೊಟ್ಟರ್ ಆಗ.
ಕುದರಿಯ ಮಂದಿ ಕೂಡಿ ಮುಟ್ಟಿಕೊ ಹಲಗಲಿ ಸ್ಥಳದ ಮೇಗ
ಒಳಗಿನ ಮಂದಿ ವೊತ್ತರಲೆ ಹೊಡೆದರ ಮುಂಗಾರಿ ಮಳಿ ಸುರದ್ ಹಂಗ.
ಹೊರಗಿನ ಮಂದಿ ಗುಂಡಹತ್ತಿ ಕೆರ ತಿರಗೆರ ಆನಾಗ,
ಕಾಗದ ಬರದ ಕಳವೆರ ಬೇಗನ ದಂಡ ಬರಲ್ ಎಂತ ಹಿಂಗಾ.
ದಂಡ ಬಂತ ನೋಡ ತಯಾರ್ ಆಗಿ ಜಲದ ಮಾಡಿ ಬಂತ ಹಲಗಲಿಗಿ,
ಅರ ತಾಸ ರಾತ್ರಿಯಾಗ ಹೋಗಿ ಊರಿಗಿ ಹಾಕಿದಾರ ಮುತ್ತಿಗಿ,

ಗುಂಡ ಹೊಡೆದಾರ ವಿಪರೀತ ಸೂರಿ ಆಗಿ ಅಂಜಿ ಓಡಾಕ್ ಹತ್ತಿತ ಮುಂದ್ ಆಗಿ ;
ಬೆನ್ನ ಹತ್ತಿ ನೋಡಿದಾರ ಇವರ್ ಆಗಿ ಬಿದ್ದಾವ ಹೆಣಗೋಳು ಸೂರ್ಸ್ ಆಗಿ,
ಮುತ್ತಿಗೆ ಹಾಕಿ ಅವರು ಕತ್ತಿಲಿ ಕಡದರ ಅಂಜಲಿಲ್ಲ ಯಾತ್ ಎತಕ || ೫ ||

•

ಬೆನ್ನ ಹತ್ತಿ ತಿರಿತಿರಿವಿ ಕಡದರೊ ಏನು ಉಳಿಯುದಾಂಗ ;
ನಡವಿ ಹಾಕಿಕೊಂಡ ಹೊಡದರ ಗುಂಡದ ರಜ ಇಲ್ಲದ್ ಹಾಂಗ ;
ಕವಾತ ಫೈರಾ ಸುತ್ತಗಟ್ಟಿ ತಂಬು ನುಡಿಸಾರ ಆವಾಗ ;
ತೋಪು ತುಬಾಕಿ ಕುರುಳಿ ಪಿಸ್ತೂಲ ಬಾಕ ನಡವಿನಾಗ ;
ಶಿಡಿಲಿನಹಂತ ಗುಂಡ ಹೊಡೆವುತ ಕತ್ತಿಲಿ ಕಡದರ ಒಳತಾಂಗ ;
ನಡಗಿತು ಬ್ಯಾಡಕಿ ಕೆನ್ ಧೂಳ ಹಾರಿದಾಂಗ ಕಡದಾಟವು ಹ್ಯಾಂಗ.
ಕೆಡಗಾಲ ಬಂದಿತ ನಡವಿ ಶಿಕ್ಕ್ಯಾರೊ ಬಿಡಿಸವರ್ ಯಾರ್ ಈಗ ?
ಚಟೇಕಾರರು ಚೌಕಿಮಾಡುತ ನಡದರ ಗುಡದಾಗ.
ಅಗಸಿಗೆ ಬಂದು ನಿಂತೀತು ಹೆಬಲಕ್ ಸಾಹೇಬ ಬಂದು ತಾವು ನಿಂತು
ಹೇಳತಾರ ಬುದ್ಧಿಯ ಮಾತು ಕೊಡತೆವೆ ಕವಲ ಈ ಹೊತ್ತು
ಹೋಗಬೇಡಿರಿ ವರ್ರಾ ನೀವು ಸತ್ತು
ಯೆಂಬು ಮಾತಿಗೆ ನಂಬಿಗೆ ಸಾಲದ ಹನಮಾ ಬಂದ ಮುಂದಕ || ೬ ||

ಜಡಗ ಹೇಳತಾನ ಹೊಡಿ ಇವರನಾ ಈಗ ಘಾತಕರೊ ಇವರಾ ;
ಇಸವಸ ಘಾತಾ ಮಾಡಿ ನೆಂಬಿಗೆಲೆ ಮಾಡತಾರು ಫಿತೂರಾ ;
ಮಾಸ ಮಾಡಿ ಬಲದೇಶ ತಗೋತರ ಮುಂದ ನಮಗ ಗೋರಾ :
ಅಂದ ಹೊಡೆದರೊ–ಒಂದು ಗುಂಡಿಗೆ ಆದ ಸಾಹೇಬ ಟಾರಾ.
ಕಾರ್ ಸಾಹೇಬ ಬೆಂಕಿಚೂರ ಆಗಿ ತಾನು ಲೂಟಿ ಮಾಡ್ ಅಂದ ಊರ.
ಹುರಪಿಲಿ ಹೊಡದರ ಮಳಿ ಆದ ಹಾಂಗ ಗುಂಡ ಸುರದವು ಬರಪೂರಾ.
ಹನಮಾ ಹೇಳತಾನ ಗುಂಡ ಹೊಡೆದ ಕೆರಕೆಡವುಸ್ ಅಷ್ಟಬಾರಾ.
ಮುನ್ನೂರ ಮಂದಿ ಎನ್ನ ಮೇಗೆ ಬಿಟ್ಯಾ ಆಗ ನೋಡರಿ ಜೋರಾ.
ಭೀಮನು ಇದಿರಿಗೆ ನಿಂತಾ ಐನೂರ ಮಂದಿಗೆ ಮಲತಾ
ಬಾಲನು ಮಾಡಿದ ಕಸರತ್ತಾ ಕುದರಿಯ ಕಡದನು ಹತ್ತಾ
ರಾಮುನ ಕಡತ ವಿಪರೀತಾ ಕಾವಲಿ ಹರಿತೊ ರಕ್ತಾ
ಸಾವಿರ ಆಳಿಗೆ ಒಬ್ಬ ಮಲತಾ ಕೂಗುತಾನೊ ಕಡಿಕಡೀರ್ ಎಂತಾ
ನಾಲ್ಕು ಮಂದಿ ಹೀಂಗ ಕಡದ ಸತ್ತರೊ ಭಂಟರ್ ಅನಸೆರ ಜನಕ || ೭ ||

ಯಾರು ಕೇಳಲಿಲ್ಲ ಆರು ಗುಂಡ ತಾಕಿ ಹನುಮಾ ಬಿದ್ದ ನೆಲಕ.
ಚೀರ್ಯಾಡುತ ಜನ ಘುತ್ತಗಟ್ಟಿತೊ ಅಂಜಿಕೊಂಡ ಜೀವಕ.
ಶೂರ ಒಬ್ಬ ಬಹಳ ಜೋರಮಾಡಿದನ ಹತಾರ ತಗೊಳುದಕ
ಏರಿಬರು ಕುದರಿ ಕಾಲ ಕಡದನೊ ಸ್ವಾರ ಬಿದ್ದ ನೆಲಕ.
ರಾಮಿ ಗುಂಡಿಲಿ ಜೋರ ಮಾಡಿ ಹೊಡೆದಳೊ ಮೂರ ಮಂದಿ ಶಿರಕ ;
ಆರು ಕುದರಿಯ ಕಡದ ಸಿಡಿದಳೊ ಬಾಲನ ಸೂರಾಯಕ.
ಯಾರ್‍ಯಾರು ಇಲ್ಲದ್ದಾದೀತು ಊರೆಲ್ಲಾ ಲೂಟಿ ಆಗಿ ಹೋತು,
ಮಂದಿ ಮನಿ ಹೊಕ್ಕ ಹುಡಕೀತು ದನಕರಾ ಲಯ ಆದೀತು,
ಸಣ್ಣ ಕೂಸುಗಳು ಹೋದವು ಸತ್ತು ಬೆಂಕಿ ಹಚ್ಯಾರ ಊರ ಸುಟ್ಟೀತು,
ನಷ್ಟ ಆತಿ ನೋಡರಿ ಈವತ್ತು ನಾ ಹೇಳತೇನ ಈ ಮಾತು,
ಇಷ್ಟೆಲ್ಲ ಅಳವಾಗಿ ಹೋದಿತೊ ಮುಟ್ಟಲಿಲ್ಲ ಯಾತೆತಕ || ೮ ||

ಕತ್ತಿ ಕುದರಿ ಮುತ್ತು ಮಾಣಿಕ ಯಾವದು ಬಿಡಲಿಲ್ಲಾ :
ಬೆಳ್ಳಿ ಭಂಗಾರಾ ಹರಳಿನುಂಗರಾ ಹೊನ್ನುಂಗರ ಗೋಲಾ,
ಸರಗಿ ಸರ್ದಾಳಿ ಬುಗುಡಿ ಬಾವಲಿ ಬಿಡಲಿಲ್ಲಾ ;
ಕಡಗ ಕಂಕಣಾ ನಡವಿನ ಡಾಬಾ ನಡುಕಟ್ಟು ರುಮಾಲಾ,
ಕುಬಸ ಶೀರಿ ಹಪ್ಪಳ ಸಂಡಿಗಿ ಕರ್ಚಿಗಿ ಕುಡಗೋಲಾ,
ಕೊಡಲಿ ಕೋರೆ ಕುಡಕಬ್ಬಿಣಾ ಮೊಸರು ಬೆಣ್ಣೆ ಹಾಲಾ,
ಉಪ್ಪು ಎಣ್ಣೆ ಅರಿಶಿನ ಜೀರಿಗಿ ಅಕ್ಕಿ ಸಕ್ಕರಿ ಬೆಲ್ಲಾ ;
ಗಂಗಳ ಚರಗಿ ಮಂಗಳ ಸೂತ್ರಾ ; ತಕೊಂಡ ಹೋದರ ಬಿಸುಕಲ್ಲಾ.
ಹಾಳಾಗಿ ಹೋದಿತೊ ಇಷ್ಟು ವರ್ಣಿಸಿ ಹೇಳಲು ಎಷ್ಟು,
ತಗೊಂಡರೊ ಶಿಕ್ಕಷ್ಟು ಸರ್ದಸಿಂತರೊ ಊರಿಗೆ ಕೊಳ್ಳಿಕೊಟ್ಟು,
ಬೂದಿಮಾಡೆರ ಹಲಗಲಿ ಸುಟ್ಟು ಹಲಗಲಿ ಗುರ್ತ ಯೆಳ್ಳಷ್ಟು
ಕಾಣಸ್ತ ಹೋದಿತೊ ಕೆಟ್ಟು ವರ್ಣಿಸಿ ಹೇಳಿದೆನು ಇಷ್ಟು,
ಕುರ್ತಕೋಟಿ ಕಲ್ಮೇಶನ ದಯದಿಂದ ಹೇಳುದ ಕೇಳುದಕ || ೯ ||

ಕಥೆಯನ್ನು ಆರಂಭಿಸಿರುವ ರೀತಿಯಲ್ಲಿ, ನುಡಿಗಳನ್ನು ಮುಗಿಸುವ, ಆರಂಭಿಸುವ, ಎತ್ತುಗಡೆ ನಿಲುಕಡೆಯ ಸೊಗಸಿನಲ್ಲಿ, ಸಂಗತಿಗಳನ್ನು ಒಂದಾದ ಮೇಲೊಂದು ಅಲೆಅಲೆಯಾಗಿ ಬರುವಂತೆ ಹೇಳುವ ದಿಟ್ಟತನದಲ್ಲಿ, ಮನುಷ್ಯರ ಸ್ವಭಾವವನ್ನು ವರ್ಣಿಸಿರುವ ಸಹಜತೆಯಲ್ಲಿ, ವರ್ಣನೆಯಲ್ಲಿ, ಮಾತಿನ ಔಚಿತ್ಯದಲ್ಲಿ ಈ ಕೃತಿ ಅತ್ಯುತ್ತಮವಾದ ಕವಿತೆಯೆಂದು ಹೇಳಬೇಕು.

೧೯

ಬೀಸುವ ಕಲ್ಲಿನ ಪದ, ಹಚ್ಚೆ ಹಚ್ಚುವ ಪದ, ಕೋಲಾಟದ ಪದದಲ್ಲಿ ಸ್ವಲ್ಪ ಮಾತಿನಲ್ಲಿ ವಿಷಯವನ್ನು ಮುಗಿಸುವುದು ಹೇಗೋ ಹಾಗೆ ಈ ಕತ್ತಿ ಹಿಡಿಯುವ ಜನರ ಕಥೆಯಂಥ ಕಥೆಯಲ್ಲೆಲ್ಲ ವರ್ಣನೆಯೂ ಕಥನವೂ ವಿವರವೂ ವಿಸ್ತಾರವೂ ಆಗುವುದು ಪದ್ಧತಿ. ಯಾರೋ ಒಬ್ಬ ಹೆಂಗಸು ತಾನು ಗರ್ಭಿಣಿಯಾಗಿರುವೆ ನೆಂದು ಬಯಕೆಯನ್ನು ನಟಿಸಿ ಗಂಡನು ಅಕ್ಕರೆಯಿಂದ ತಂದುಕೊಟ್ಟ ತಿಂಡಿಯ ಸಾಮಾನನ್ನೆಲ್ಲ ತಿಂದು ಅತ್ತೆಯ ಕೈಯಿಂದ ಉಪಚಾರಮಾಡಿಸಿಕೊಂಡು ಮೋಸ ಬಯಲಾಗಲು ದಿಕ್ಕುಗೆಟ್ಟು ಪರದೇಶಿಯಾದದ್ದು ಒಂದು ವಿಡಂಬನದ ಕಥೆಯ ವಿಷಯ. ಕಥೆಗಾರನು ಅದನ್ನು ಬೆಳೆಸುವ ರೀತಿ ಆಶ್ಚರ್ಯವನ್ನುಂಟುಮಾಡು ವಂತಿದೆ. ಅವನು ನಿಷ್ಕರುಣೆಯಿಂದ ಆ ಹೆಂಗಸಿನ ಆಟವನ್ನೆಲ್ಲ ವರ್ಣಿಸಿದಾನೆ. ಕೊನೆಗೆ ಅದೇ ನಿಷ್ಕರುಣೆಯಿಂದ ಅವಳನ್ನು ಸಿಗಿದು ಒಗೆದಿದಾನೆ. ಆದರೆ ಆ ಬರವಣಿಗೆಯ ಬಲ ಬಾಳನ್ನು ನೋಡುವುದರಿಂದ ಬಂದಿದೆ. ಕ್ಷಾಮವನ್ನು ವರ್ಣಿಸುವ ಈ ಪದದ ಶಕ್ತಿಯೂ ಹಾಗೆಯೇ: ಕವಿಯು ನಿಜವನ್ನು ನೋಡಿದ್ದ ರಿಂದ ಬಂದದ್ದು. ಕವಿ ಮಳೆರಾಜನನ್ನು ಕುರಿತು ಹೇಳುತ್ತಾನೆ:

ಬಣ್ಣದ ಗುಬ್ಬಿಯರು ಮಣ್ಣಾಗಿ ಹೋದರು
ಅನ್ಯಾಯದ ದಿನ ಬಂದು ಮಳೆರಾಜ ||

ಒಕ್ಕಲಗೇರ್‍ಯಾಗ ಮಳೆರಾಜ
ಮಕ್ಕಳ ಮಾರ್‍ಯಾರು ಮಳೆರಾಜ
ಮಕ್ಕಳ ಮಾರಿ ರೊಕ್ಕ ಹಿಡಕೊಂಡು
ಭತ್ತ ಎಂತ ತಿರುಗ್ಯಾರು ಮಳೆರಾಜ ||

ಸೂಲಗಿ ಹಿಟ್ಟಿನಾಗ ಮಳೆರಾಜ
ಸುಣ್ಣಾನ್ನು ಕೂಡಿಸ್ಯಾರು ಮಳೆರಾಜ
ಹಸ್ದು ಬಂದು ಕೇರಿ ಗಪಗಪಾನೆ ತಿಂದು
ಒದ್ದಾಡಿ ಸತ್ತಾರು ಮಳೆರಾಜ ||

ಗಿದ್ನ ಅಕ್ಕ್ಯಾಗ ಮಳೆರಾಜ
ಅಪುವನ್ನು ಕೂಡಿಸ್ಯಾರು ಮಳೆರಾಜ

ಸಣ್ಣ ಕೂಸೀಗೀ ಮನ್ನಿಸಿ ಉಣಿಸ್ಯಾರು ಅವು
ಕಣ್ಣನೆ ಮುಚ್ಚ್ಯಾವು ಮಳೆರಾಜ ||

ಗಂಡುಳ್ಳ ಬಾಲೇರು ಮಳೆರಾಜ
ಭಿಕ್ಷಾಕೆ ಹೊರಟಾರು ಮಳೆರಾಜ
ಗಂಡುಳ್ಳ ಬಾಲ್ಯೇರು ಭಿಕ್ಷಾಕೆ ಹೊರಟಾರು
ಅನ್ಯಾಯದ ದಿನ ಬಂದು ಮಳೆರಾಜ ||

ಇಷ್ಟೆಲ್ಲ ಆದಮೇಲೆ—

ಸ್ವಾತೀಯ ಮಳೆ ಬಂದು ಮಳೆರಾಜ
ಸುತ್ತ ದೇಶಕೆ ಆಗ್ಯಾದೆ ಮಳೆರಾಜ ||

ಹಳ್ಳಕೊಳ್ಳ ಹೆಣ ಹರದಾಡಿಹೋದಾವು
ಯಾವಾಗ ಬಂದ್ಯಪ್ಪ ಮಳೆರಾಜ ||

ಅದು ಒಂದು ಅತಿ. ಇದು ಒಂದು ಅತಿ. ಇವನ್ನು ಬರೆದವನು ಹಿಂದಣ ಧಾತು ಈಶ್ವರ ಸಂವತ್ಸರದ ಕ್ಷಾಮವನ್ನೂ ಆ ಮೇಲೆ ಒಂದು ಮಳೆಯನ್ನೂ ನೋಡಿದ್ದ ನೆಂದು ಕಾಣುತ್ತದೆ.

ಕುಣಿಗಲ ಕೆರೆಯ ವರ್ಣನೆಯ ಈ ಕೆಲವು ಮಾತು ಈ ಕೃತಿಗಳ ಕಾವ್ಯ ದೃಷ್ಟಿಗೆ ಒಳ್ಳೆಯ ನಿದರ್ಶನ.

ಮೂಡಲು ಕುಣಿಗಲ ಕೆರೆ ನೋಡೊಕ್ಕೊಂದ್ವೈಭೋಗ
ಮೂಡಿಬರ್‍ತಾನೇ ಚಂದ್ರಾಮ ||

ನಿಂಬೇಯ ಹಣ್ಣಿನಂತೆ ತುಂಬಿದ್ಕುಣಿಗಲು ಕೆರೆ
ಅಂದ ನೋಡಲು ಶಿವ ಬಂದ ಶಿವಮುಗ್ಗಿ
ಕಬ್ಬಕ್ಕಿ ಬಾಯ ಬಿಡುತಾವೆ ||

ಹಾಕೋದೊಂದಾರುಗೋಲು ನೂಕೋಕೊಂದೂರುಗೋಲು
ಬೊಬ್ಬೆಹೊಡೆದಾವೆ ಬಾಳೆಮೀನು ಕೆರೆಯಾಗೆ
ಗುಬ್ಬಿಸಾರಂಗ ನಗುತಾವೆ ||

ಕೆರೆ ತುಂಬಿದಾಗ ನೋಡುವುದಕ್ಕೆ ಶಿವ ಬರುವಷ್ಟು ಅಂದ. ತುಂಗಾ ನದಿಯ ಕಬ್ಬಕ್ಕಿ ಇದರ ಜಲವೈಭವವನ್ನು ಆಶಿಸುತ್ತದೆ. ಇದರ ವಿಸ್ತಾರವಾದ ಹರವಿನ

ಮೇಲೆ ತೆಪ್ಪದಲ್ಲಿ ಹೋಗುವುದು ಒಂದು ಸೊಗಸು. ಬಾಳೇಮೀನು ನೀರು ತುಂಬಿರುವುದರಿಂದ ವಿಜೃಂಭಿಸಿ ಆಡುತ್ತವೆ. ನೀರಗುಬ್ಬಿಯೂ ಸಾರಂಗವೂ ಕೆರೆಯಲ್ಲಿ ನಗುತ್ತವೆ.

೨೦

ಇದುವರೆಗೆ ಹೇಳಿರುವ ಪದಗಳಲ್ಲೆಲ್ಲಾ ತ್ರಿಪದಿಯ ಪದಗಳೇ ಹೆಚ್ಚು. ಜನತೆಯ ಸಾಹಿತ್ಯದಲ್ಲಿ ಛಂದಸ್ಸಿನ ಈ ರೂಪ ಬಹು ವಿಸ್ತಾರವಾದ ಭಾಗವನ್ನು ಆಕ್ರಮಿಸಿಕೊಂಡಿದೆ. ಈ ಸಾಹಿತ್ಯದ ಬಹುಭಾಗದ ಪದಗಳು ಕೋಲಾಟಕ್ಕಾಗಿ ಉಪಯೋಗಿಸಲ್ಪಟ್ಟಿರುವುದೂ ಮತ್ತು ತ್ರಿಪದಿ ಕೋಲಾಟದ ಗೀತಕ್ಕಾಗಿ ಹದವಾಗಿ ಒದಗುವುದೂ ಇದಕ್ಕೆ ಕಾರಣ. ಬೀಸುವ ಕಲ್ಲಿನ ಪದ, ಎಣ್ಣೆ ಹಚ್ಚುವ ಪದ ಎನ್ನುವುದೆಲ್ಲ ಕೋಲಾಟದ ಪದವೂ ಹೌದು. ಇವುಗಳ ಜೊತೆಗೆ ಕೋಲಾಟಕ್ಕೆಂದೇ ಬರೆದಿರುವ ಪದಗಳೂ ಅನೇಕವಾಗಿವೆ. ಕೋಲಾಟ ನಮ್ಮ ಜನರಿಗೆ ಬಹಳ ಪ್ರಿಯವಾದ ವಿನೋದವಾಗಿತ್ತೆಂದು ಕಾಣುತ್ತದೆ. ನವರಾತ್ರಿಯಲ್ಲಿ ಶಾಲೆಯ ಹುಡುಗರು, ದೀವಳಿಗೆಯಲ್ಲಿ ಹೆಣ್ಣುಮಕ್ಕಳು, ಇದೇ ಸಂದರ್ಭದಲ್ಲಿ ಊರ ಕೋಲಾಟದ ಜನ ಈ ಆಟವನ್ನಾಡುತ್ತ ಊರು ಸುತ್ತುವುದು ಪದ್ಧತಿ. ಬಂದು ಆಟವಾಡಿದವರಿಗೆ ಊರ ಮುಂದಾಳುಗಳು ಸತ್ಕಾರಮಾಡಿ ಸ್ವಲ್ಪ ಅಥವಾ ಹೆಚ್ಚು ಉಚಿತವನ್ನು ಕೊಟ್ಟು ಕಳುಹಿಸುವರು. ಇದನ್ನು ಮಕ್ಕಳು ತಾವು ಮಾಡುವ ಗೌರೀ ಪೂಜೆಗೆ, ಸರಸ್ವತೀ ಪೂಜೆಗೆ, ದೊಡ್ಡವರು ಯಾವುದಾದರೊಂದು ದೇವರ ಪೂಜೆಗೆ, ವಿನೋದಕೂಟಕ್ಕೆ ಉಪಯೋಗಿಸುತ್ತಿದ್ದರು. ಕೋಲಾಟವಾಡಿದ ಮೇಲೆ ಹಣಕಾಸು ಮಾತ್ರವಲ್ಲದೆ ಬಟ್ಟೆಬರೆಯೂ ಉಚಿತವಾಗಿ ಬರುತ್ತಿತ್ತು. ಅವನ್ನು ಕೋಲಾಟದ ಆಟಗಾರರು ತಮ್ಮ ಉಪಾಧ್ಯಾಯನಿಗೆ ಕೊಡುವುದನ್ನು ಕೊಟ್ಟು ಉಳಿದುವನ್ನು ತಾವು ಹಂಚಿಕೊಳ್ಳುತ್ತಿದ್ದರು. ಕೋಲಾಟದ ಪದಗಳಲ್ಲಿ ದೇವರ ಸ್ತೋತ್ರದ ಪದ್ಯಗಳು, ತತ್ವಗಳನ್ನೊಳಗೊಂಡ ಪದ್ಯಗಳು, ಸ್ಥಳದ ಇತಿಹಾಸವನ್ನೊಳಗೊಂಡ ಪದ್ಯಗಳು, ಆಯಾ ಹಬ್ಬ ಹುಣ್ಣಿಮೆ ಪ್ರಸ್ತಪ್ರಯೋಜನವನ್ನು ಕುರಿತ ಪದ್ಯಗಳು, ಧಣಿಯನ್ನು ಹೊಗಳಿ ಮೆಚ್ಚನ್ನು ಬೇಡುವ ಪದ್ಯಗಳು, ಹೀಗೆ ಅನೇಕ ಉದ್ದೇಶದ ಕೃತಿಗಳಿರುತ್ತವೆ.

ಒಂದು ಸಂಗತಿಯನ್ನು ಕುರಿತ ಪದವಿದು—

ಕೋಲು ಕೋಲೆನ್ನ ಕೋಲೇ ಶ್ರೀಗಂಧದ
ಕೋಲು ಕೋಲೆನ್ನ ಕೋಲೇ ||

ಮಡಕೇರಿ ಮಲ್ಲೀಗೌಡ್ರು ದಾರದವಳ್ಳಿ ಕೆಂಚೇಗೌಡ್ರು
ಬಣಕಲ್ಲು ಸುಬ್ಬೇಗೌಡ್ರು ಮೂರು ಜನ ಸೇರಿದರಂತೆ
ಕೋಲೂ ಕೋಲೆನ್ನ ||

ಅವರು ಮೂರೂ ಜನ ಸೇರಿದ ಸುದ್ದಿ ಕೇಳಿ
ಮೈಸೂರು ರಾಣಿಗೇ ಸಿಟ್ಟು ಬಂದಿತೋ
ಕೋಲೂ ಕೋಲೆನ್ನ ||

ಮೈಸೂರು ರಾಣಿಗೆ ಸಿಟ್ಟುಬಂದದ್ದು ಕೇಳಿ
ಒಡ್ಡರ ದಂಡೆದ್ದು ಓಡಿಬಂದಿತೋ ||

ಒಡ್ಡರ ದಂಡೆದ್ದು ಓಡಿಬಂದದ್ದು ಕೇಳಿ
ತುರುಕರ ದಂಡು ತುದಿಕಾಲಲ್ಲಿ ನಿಂತಿತೋ ||

ತುರುಕರ ದಂಡೆದ್ದು ತುದಿಕಾಲಲ್ನಿಂತದ್ದು ಕೇಳಿ
ಆರೇರ ದಂಡೆದ್ದು ಹಾರಿಬಂದಿತೋ ||

ಆರೇರ ದಂಡೆದ್ದು ಹಾರಿಬಂದದ್ದು ಕೇಳಿ
ಬೇಲೂರದಂಡು ಬೆನ್ನತ್ತಿ ಹೋಯಿತೋ ||

ಅಡಿಕೇಲಿ ಆರು ಸಾವ್ರ ಮಡಕೇಲಿ ಮೂರು ಸಾವ್ರ
ಕೊಡಿಗೇ ಹನ್ನೆರಡು ಸಾವ್ರ ಸರಿಮಾಡಿ ನಮ್ಮಯ್ಯ
ಇಂದಿನ ಮಾತೇ ನಿಜವುಂಟೇ ||

ಕಳ್ಳವುಳ್ಳೇ ಹುಂಜ ಯಾಕಂತ ಕೂಗಿತು
ಕಳ್ಳ ಸೂಳೇರಿಗೆ ಕಳ್ಳನಾಮ ಹಚ್ಚೋಕೆ ||

ಕಳ್ಳ ಸೂಳೇರಿಗೆ ಕಳ್ಳನಾಮ ಹಚ್ಚಿತ್ತುಂಜ
ಕಡಿಗತ್ತಿ ತಕ್ಕೊಂಡು ಕಡಿದಾರು ಹುಂಜನ ||

ಮುಕ್ಕನಾಡು ಶೀಮೇವ್ರು ಅವರು ಮೂರೂ ಜನ
ಬಾಯಲ್ಲಿ ಬಡಾಯಿ ಕೈಯಲ್ಲಿ ಲಡಾಯ.
ಬಗಲಲ್ಲಿ ದೊಣ್ಣೆ ಇಟ್ಟರಂತಯ್ಯೋ ||

ಬಗಲಲ್ಲಿ ದೊಣ್ಣೆ ಇಟ್ಟರೆಂಬುದು ಕೇಳಿ
ತಾಯಿಗಂಡರೆಂದು ಹೇಳ್ಯಾರಂತಯ್ಯೋ ||

ಈ ಪದ್ಯದಲ್ಲಿ ಬೇಲೂರ ದಂಡಿನ ವರೆಗೆ ಅರ್ಥ ಸ್ಪಷ್ಟವಾಗಿದೆ. ಆ ಮೇಲೆ ಸಂಗತಿ ಅಷ್ಟು ವಿಶದವಾಗಿಲ್ಲ. ಯಾವನೋ ಒಬ್ಬನು ಚಾಡಿ ಹೇಳಿ ಹಗೆಯನ್ನು ಎಚ್ಚರಿಸಿದನೆಂದು ಅವನನ್ನು ಕಡುಗತ್ತಿಯಿಂದ ಕಡಿದರೆಂದು ಅರ್ಥವಾಗುತ್ತದೆ. ಬಾಯಲ್ಲಿ ಬಡಾಯಿ ಕೈಯಲ್ಲಿ ಲಡಾಯಿ ಎನ್ನುವ ಮಾತು ಮೊದಲು ಪದ್ಯದಲ್ಲಿ ಇರಲಿಲ್ಲವೆಂದು ಕಾಣುತ್ತದೆ. ಹಾಡುತ್ತ ಹಾಡುತ್ತ ಕೋಲಾಟದವರಲ್ಲಿ ಬುದ್ಧಿವಂತನು ಸೇರಿಸಿದ ಮಾತಿರಬೇಕು ಇವು. ಇನ್ನೊಂದು ಪದ್ಯವೂ ಒಂದು ಕದನವನ್ನು ಕುರಿತದ್ದು.

ಈರಾಮೋಲಚ್ಚ್ಮಯ್ಯ ರಂಗ ಮುರಾರಿ
ಕೋಮಲಾಂಗಿ ಕೋಟೇಮೇಲೆ ಜಾಣೇ ವೈಯಾರಿ ||

ಈ ಮಾತುಗಳಿಗೂ ಮುಂದೆ ಬರುವ ಮಾತುಗಳಿಗೂ ಅಷ್ಟು ಸಂಬಂಧ ಕಾಣುವುದಿಲ್ಲ. ರಾಮಲಕ್ಷ್ಮಣರನ್ನೂ ರಂಗಮುರಾರಿಯನ್ನೂ ಕೋಟೆಯೊಳಗೆ ಇರುವ ಜಾಣೆ ಪ್ರಾಯಶಃ ಕೋಲಾಟದ ಅಧಿದೇವತೆಯನ್ನೂ ನೆನೆದು ಕೋಲಾಟವನ್ನು ಆರಂಭಿಸುವ ಪಲ್ಲವಿ ಮಾತ್ರ ಇದು ಎಂದು ಕಾಣುತ್ತದೆ.

ಜಾಣಾ ಜಾಣರಿಗೆಲ್ಲ ಜಾಣಾ ಕಾಣ್ರೋ ನಮ್ಮಯ್ಯ
ಜಾಜೀಯ ಹೂವ ಬೆಲೆಮಾಡಿ ||

ಜಾಜೀಯ ಹೂವ ಬೆಲೆಮಾಡಿ ನಮ್ಮಯ್ಯ
ಸೋದಾರತ್ತೆ ಮಗಳಿಗೆ ಮುಡಿಸ್ಯಾನೆ ||

ಇದು ಧಣಿಯನ್ನೂ ಅವನ ರಾಣಿಯನ್ನೂ ಹೊಗಳುವ ಮಾತು. ಆ ಮೇಲೆ ಕದನದ ವರ್ಣನೆ.

ದೊಡ್ಡಾವ ಮಳಲಲ್ಲಿ ಒಡ್ಯಾರೆ ಕಾಳಗ
ದೊಡ್ಡಾ ದೊಡ್ಡವ್ರ ತಲೆ ಬಿದ್ದು ನಮ್ಮಯ್ಯ
ದೊಡ್ಡವ್ರ ಮಾತು ಗೆಲಿಸಯ್ಯ ||

ಸಣ್ಣಾವ ಮಳಲಲ್ಲಿ ಹಣ್ಯಾರೆ ಕಾಳಗ
ಸಣ್ಣಾ ಸಣ್ಣವ್ರ ತಲೆಬಿದ್ದು ನಮ್ಮಯ್ಯ
ಸಣ್ಣವ್ರ ಮಾತು ಗೆಲಿಸಯ್ಯ ||

ಸಣ್ಣ ನಮ್ಮಯ್ಯ ಹುಲಿ ಬೇಟೆ ಹೋಗುವಾಗ
ಹತ್ತೆಂಟು ಹೆಣ್ಣೀ ಮನೆಯಲ್ಲಿ ||

ಇದು ಒಂದು ಸರಸದ ಪದ್ಯ—

ಎಲೆಯೋ ಎಲೆಯೋ ಯಲಿಯ ಬಳ್ಳಿಯಂದೆಲೆಯೊ
ಈ ಬಳ್ಳಿ ಮೆಟ್ಟೀ ಯಲೆಯ ಕುಯ್ಯೋಳ್ಯಾರೆ
ನಾ ಕಾಣೋ ಬಾವಾ ನಿನ ಸೋದಾರತ್ತೆ ಮಗಳು
ನೀ ಸೋದರತ್ತೆ ಮಗಳಾದ್ರೆ ಸೋತೆಲೆ ಕುಯ್ಯಿಣ್ಣೆ
ಸೋತೆಲೆ ಕುಯ್ಯೋಕೆ ನೀ ತಂದ್ಹೆಂಗುಸು ನಾ ಅಲ್ಲ ||

ಇದೇ ಸರಸಕ್ಕೆ ಆರಂಭ. ಇದಾದ ಮೇಲೆ ಈ ಗಂಡೂ ಹೆಣ್ಣೂ ಚಮತ್ಕಾರದ ಮಾತುಗಳಿಂದ ಚೆಂಡಾಡುತ್ತಾರೆ.

ಹಾ ಹೋ ಹೆಣ್ಣೆ ನೀ ದಿಂಡೆಕಾರ್ಹೆಣ್ಣೆ
ನನಗ್ಯಾಕೊ ದಿಂಡು ನಿನ ಬಾಳೀಗೆ ದಿಂಡು
ಹಾ ಹೋ ಹೆಣ್ಣೆ ನೀ ಸೊಕ್ಕೀನ ಹೆಣ್ಣೆ
ನನಗ್ಯಾಕೊ ಸೊಕ್ಕು ನಿನ್ನಡಕೀಗೆ ಸೊಕ್ಕು
ಹಾ ಹೋ ಹೆಣ್ಣೆ ನೀ ರೂಪೀನ್ಹೆಣ್ಣೆ
ನನಗ್ಯಾಕೊ ರೂಪು ನಿನ ಗೊಂಬೆಗೆ ರೂಪು
ಹಾ ಹೋ ಹೆಣ್ಣೆ ನೀ ಚದರಿನ್ಹೆಣ್ಣೆ
ನನಗ್ಯಾಕೊ ಚದರು ನಿನ ಸೂಳಿಗೆ ಚದರು
ಹಾ ಹೋ ಹೆಣ್ಣೆ ನೀ ಮದಕಿನ ಹೆಣ್ಣೆ
ನನಗ್ಯಾಕೊ ಮದಕು ನಿನ್ನ ಆನೆಗೆ ಮದಕು
ಹಾ ಹೋ ಹೆಣ್ಣೆ ನೀ ತೊಡಕೀನ್ಹೆಣ್ಣೆ
ನನಗ್ಯಾಕೊ ತೊಡಕು ನಿನ್ನಾಲಿಗೆ ತೊಡಕು
ಹಾ ಹೋ ಹೆಣ್ಣೆ ನೀ ಮಲಕೀನ್ಹೆಣ್ಣೆ
ನನಗ್ಯಾಕೊ ಮಲಕು ನಿನ್ನೊಡ್ಯಾಣ್ಕೆ ಮಲಕು
ಹಾ ಹೋ ಹೆಣ್ಣೆ ನೀ ಚಬಕೀನ ಹೆಣ್ಣೆ
ನನಗ್ಯಾಕೋ ಚಬಕು ನಿನ್ನ ಕುದರೀಗೆ ಚಬಕು
ಹಾ ಹೋ ಹೆಣ್ಣೆ ನೀ ಕೊಟ್ಟೀನ ಹೆಣ್ಣೆ
ನನಗ್ಯಾಕೊ ಕೊಟ್ಟು ನಿನ ಹಾಳೀಗೆ ಕೊಟ್ಟು ||

ಇದೇ ಚಮತ್ಕಾರ ಈ ಕೆಳಗಿನ ಪದಗಳಲ್ಲಿಯೂ ಕಾಣುತ್ತದೆ. ಇದು ಒಬ್ಬ ಚತುರೆಯೂ ಅವಳ ಜೊತೆಯ ಒಬ್ಬ ಹೆಂಗಸೂ ಹೇಳುವ ಮಾತಿನಂತೆ ಇದೆ. ಚತುರೆಯ ಮೊದಲ ಮಾತು ಅವಳ ನಡತೆಯ ವಿಷಯದಲ್ಲಿ ಸಂದೇಹವನ್ನುಂಟು ಮಾಡುವಂತಿರುತ್ತದೆ. ಎರಡನೆಯದು ಅದನ್ನು ನಿವಾರಿಸುತ್ತದೆ.

ಒಬ್ಬನನ್ನು ಕಟ್ಟಿದ್ದೆ ಒಬ್ಬನನ್ನು ಬಿಟ್ಟಿದ್ದೆ
ಒಬ್ಬನನ್ನು ಕರಕೊಂಡು ಒಳಗ್ಹೋದೆ ||

ಯಾರನ್ನು ಕಟ್ಟಿದ್ದೆ ಯಾರನ್ನು ಬಿಟ್ಟಿದ್ದೆ
ಯಾರನ್ನು ಕರಕೊಂಡು ಒಳಗ್ಹೋದೆ ||

ದನವನ್ನು ಕಟ್ಟಿದ್ದೆ ಕರುವನ್ನು ಬಿಟ್ಟಿದ್ದೆ
ಹಾಲನ್ನು ಕರಕೊಂಡು ಒಳಗ್ಹೋದೆ ||

ಒಬ್ಬನಿಗೆ ಕಾಲುಕೊಟ್ಟೆ ಒಬ್ಬನಿಗೆ ಕೈಕೊಟ್ಟೆ
ಒಬ್ಬನಿಗೆ ಸೀರೆಯನೇ ಕೊಟ್ಟೆ ||

ಯಾವೋನಿಗೆ ಕಾಲುಕೊಟ್ಟೆ ಯಾವೋನಿಗೆ ಕೈಕೊಟ್ಟೆ
ಯಾವೋನಿಗೆ ಸೀರೆಯನೇ ಕೊಟ್ಟೆ ||

ಕಂಚಿಗಾರಗೆ ಕಾಲುಕೊಟ್ಟೆ ಬಳೆಗಾರಗೆ ಕೈಕೊಟ್ಟೆ
ಅಗಸರವನಿಗೆ ಸೀರೆಯನೇ ಕೊಟ್ಟೆ ||

ಒಬ್ಬನನ್ನು ಹಾಕಿದ್ದೆ ಒಬ್ಬನನ್ನು ಹೊದ್ದಿದ್ದೆ
ಒಬ್ಬನ ಮೇಲೆ ಮಲಗಿದ್ದೆ ||

ಇವು ಕ್ರಮವಾಗಿ ಹಾಸಿಗೆ, ಜಮಖಾನೆ, ತಲೆದಿಂಬು. ಹಾಗೆಯೇ ಹಾಕಿದ್ದು ಒಬ್ಬನನ್ನು, ದೂಡಿದ್ದು ಒಬ್ಬನನ್ನು, ಒಳಗೆ ಹೋಗುತಾ ಕರಕೊಂಡು ಬಂದದ್ದು ಒಬ್ಬನನ್ನು: ಇವು ಬಾಗಿಲು, ತಾಳು, ಜ್ಯೋತಿ. ಹೀಗೆ ಈ ಹೆಂಗಸು ಸಿಕ್ಕಿ ಕೊಳ್ಳುವಂತೆ ಮಾತನಾಡಿ ತಾನು ಮಾಡಿದ್ದು ಯಾವುದೂ ತಪ್ಪಿಲ್ಲವೆಂದು ಆ ಮೇಲೆ ವಿವರಿಸಿ ಮರ್ಯಾದೆಯಾಗಿ ಪಾರಾಗುತ್ತಾಳೆ. ಶ್ಲೇಷೆಯೂ ಚಮತ್ಕಾರವೂ ಪಾಂಡಿತ್ಯದ ಕವಿತೆಯಲ್ಲಿ ಕಾಣುತ್ತಲೇ ಇರುವ ಕಾವ್ಯೋಪಕರಣಗಳು. ಬಹುಸಲ ಕಾಣುವುದರಿಂದ ಅವು ಅಲ್ಲಿ ಬೇಸರವನ್ನುಂಟುಮಾಡುತ್ತವೆ; ಕವಿತೆಯಲ್ಲಿ ನಿಜವಾಗಿ ಅವಕ್ಕೆ ಸ್ಥಾನವಿಲ್ಲವೋ ಎನ್ನುವಂತೆ ಜುಗುಪ್ಸೆಯನ್ನುಂಟು

ಮಾಡುತ್ತವೆ. ನಿಜವಾಗಿಯೂ ಅವು ಮನುಷ್ಯನ ಮನಸ್ಸಿನ ಒಂದು ಪ್ರವೃತ್ತಿಯ ಫಲಗಳು. ಆದಕಾರಣ ಕಾವ್ಯದಲ್ಲಿ ಅವಕ್ಕೆ ಎಡೆ ಉಂಟು. ಆದರೆ ಸಂಜಿಕೊಳ್ಳುವ ಪದಾರ್ಥದಂತೆ ಅವು ಮಿತವಾಗಿ ಬರಬೇಕು. ಜನತೆಯ ಸಾಹಿತ್ಯವು ಇಂಥ ಪದ್ಯಗಳಲ್ಲಿ ಈ ಉಪ್ಪಿನಕಾಯನ್ನು ಮಾಡಿಕೊಂಡಿದೆ.

೨೧

ಕೋಲಾಟದ ಪದಗಳಲ್ಲಿ ಹಲವು ಮೆಚ್ಚನ್ನು ಜೇಡುವ ಪದಗಳು. ಇದು ಒಂದು ಹೊಗಳಿಕೆಯ ಹಾಡು.

ಸುತ್ತುಗೋಲು ಸುಗುಣದ ಕೋಲು ಸುತ್ತೂ ಮದ್ದಾಳಿ ಕೋಲು
ನಾಗಾಬೆತ್ತದ ಕೋಲು ಮದಲಿಂಗಗೆ ||

ಜಾಣಾ ಜಾಣರಿಗೆಲ್ಲ ಜಾಣಾ ಕಾಣ್ರೋ ನಮ್ಮಯ್ಯ
ಜಾಜೀಯ ಹೂವಾ ಬೆಲಿಮಾಡೀ
ಜಾಜೀಯಾ ಹೂವಾ ಮತ್ತೆ ಬೆಲಿಮಾಡಿ
ಸೋದಾರತ್ತೆಯ ಮಗಳೀಗೆ ||

ಸೋದರತ್ತೀಯಾ ಮಗಳು ಮಹಾಲಕ್ಷ್ಮೀಯು
ಏಳಂಕಣಾದ ತುರುಬೀಗೆ
ಏಳಂಕಣಾದ ತುರುಬೀಗೆ ಮುಡಿಸ್ಯಾನೆ
ಸೋದರತ್ತೆಯ ಮಗಳೀಗೆ ||

ಬೀರೂರಿಗೆ ಹೋದಾಗ ಉದುರ್‍ಯಾವೆ ಮಲ್ಲೀಗೆ
ಕುದುರೀಗೆ ಹೂಗಳು ಕಾದಾವೆ
ಕುದುರೀಗೆ ಹೂಗಳು ಕಾದಾವೆ ನಮ್ಮಯ್ಯ
ಮಾಡೋವಲ್ಲಾವೆ ಜಗಳಾವ ||

ಮಂಚದ ಕಾಲಿಗೆ ಬೊಂಬೇನ ತೂಗಹಾಕಿ
ಚಿಂತೆಮಾಡ್ಯಾರೆ ಸೂಳೇರಿಗೆ
ಚಿಂತೇಮಾಡ್ಯಾರೆ ಸೂಳೇರಿಗೆ ನಮ್ಮಯ್ಯ
ಮಂಚಕ್ಕೆ ಮುಡದೆ ಬರಲೆಂದು ||

ಕಲ್ಲು ಕುಣಿದಾವು ಕಗ್ಗಲ್ಲು ಕುಣಿದಾವು
ಬಿಲ್ಲು ಕುಣಿದಾವು ಬಿಸಲಾಗೆ

ಬಿಲ್ಲು ಕುಣಿದಾವು ಬಿಸಲಾಗೆ ನಮ್ಮ
ಜಲ್ಲು ಕುಣಿದಾವು ಜಗಳಾಕೆ ||

ಜಲ್ಲು ಕುಣಿದಾವು ಜಗಳಾಕೆ ನಮ್ಮಯ್ಯ
ಕತ್ತಿ ಕುಣಿದಾವು ಕಲಿಯಾಕೆ
ಕತ್ತಿ ಕುಣಿದಾವು ನಮ್ಮಯ್ಯ ಕಲಿಯಾಕೆ
ಕತ್ತಿ ಕೊಟ್ಟಾರು ದೊರೆಗಾಳು ||

ಈ ಧಣಿ ಎಷ್ಟು ದೊಡ್ಡವನು, ಅವನ ರಾಣಿ ಎಷ್ಟು ಚೆಲುವೆ ಎಂದು ಹೇಳುವುದು ಈ ಪದ್ಯದ ಉದ್ದೇಶ. ಜಾಣರಿಗೆಲ್ಲ ಜಾಣನಾದ ಇವನು ಜಾಜಿಯು ಹೂವನ್ನು ತಂದು ಸೋದರತ್ತೆಯ ಮಗಳು ತನ್ನ ಮಡದಿಯ ಏಳಂಕಣದ ತುರುಬಿಗೆ ಮುಡಿಸಿದ್ದಾನೆ. ತುರುಬನ್ನು ಏಳಂಕಣದ್ದು ಎಂದು ಹೇಳುವುದರಲ್ಲಿಯೇ ಆ ಮಡದಿ ಎಂಥ ಚೆಲುವೆಯೆಂದು ಕವಿ ಸೂಚಿಸುತ್ತಾನೆ. ಮುಂದಿನ ಪದ್ಯಗಳಲ್ಲಿ ಈ ಮಹಾರಾಯನ ಸಂಗಕ್ಕಾಗಿ ವಾರಸ್ತ್ರೀಯರು ಹಂಬಲಿಸುತ್ತಿದ್ದರೆಂದು ಕವಿ ಹೇಳುತ್ತಾನೆಂದು ಕಾಣುತ್ತದೆ. ಒಂದು ಕಾಲದಲ್ಲಿ ವೇಶ್ಯೆಯರನ್ನು ಇರಿಸಿಕೊಳ್ಳುವುದು ಹಿರಿಮೆಯ ಲಾಂಛನವಾಗಿತ್ತು. ಈಗಲೂ ಈ ಭಾವನೆ ತೀರಾ ಅಳಿದಿಲ್ಲವೆಂದು ಹೇಳಬಹುದು. ಇದರ ಅವಶೇಷವೇ ದೇವರ ಉತ್ಸವದ ಮುಂದೆ ದಾಸೀಗಣ ನಡೆಯುವ ಪದ್ಧತಿ. ಆ ಮೇಲಣ ಪದ್ಯಗಳಲ್ಲಿ ಕವಿ ಈ ಧಣಿಗಾಗಿ ಕುಣಿಯುವುದು, ಕಾದುವುದನ್ನು ಕಲಿಯುವುದು, ಕಾಳಗದಲ್ಲಿ ಹೋರುವುದು, ಅವನ ಪರಿಜನರಿಗೆ ಬಹಳ ಇಷ್ಟವೆಂದು ಹೇಳುತ್ತಾನೆ. ನಮ್ಮ ಧಣಿಗಾಗಿ ಕಲ್ಲು ಕಗ್ಗಲ್ಲು ಬಿಸಿಲಿಗೆ ಲಕ್ಷ್ಯವಮಾಡದೆ ಕುಣಿದಾವು, ನಾವು ಕುಣಿಯುವುದೇನು ಹೆಚ್ಚು ಎಂದು ಆ ಜನರು ಹೇಳುತ್ತಾರೆ. ಮೆಚ್ಚನ್ನು ಪಡೆಯಲು ಹೇಳುವ ಇನ್ನೊಂದು ಪದ್ಯವು ಬಹು ಮುದ್ದಾಗಿದೆ.

ಹೂವೇ ಮಾತಾಡು ಮಲ್ಲಿಗೇ
ಕೇಳು ನನ್ನ ಮೊಗ್ಗೇ ಸಂಪಿಗೆ ಮಾತಾಡು ಮಲ್ಲಿಗೆ ||
ಆಯುಳ್ಳ ಅಂಗಳ ಚಾಯುಳ್ಳ ಚಾವಡಿ
ಗಂಧ ನೀರುಂಡ ನೆಲಗಟ್ಟು || ಹೂವೇ ||
ಗಂಧಾ ನೀರುಂಡ ನೆಲಗಟ್ಟಿನ ಭಾಮುಕ್ಕೆ
ಹೇಳಿ ಕಟಿಶಾರೆ ಅರಮನೆ || ಹೂವೇ ||

ಹುಬ್ಬೀನ ಭಾಮಕ್ಕೆ ಗುಬ್ಬಿಗೂಡನ್ಹಾಕಿ
ಹೆಬ್ಬುಲಿ ಕರಡೀ ಮಕಮಾಡಿ || ಹೂವೇ ||

ಅವರ ಕೂಟಾದ ಗೂಳಿ ಕೊಂಬೀನ ದನಿ ಕೇಳಿ
ಕೂಟಾಕ್ನಮ್ಮಯ್ಯನ ಬರಹೇಳಿ ಗಳಿಗೇಲಿ
ಕೂಟಾ ನಿಮ್ಹಿಂದೆ ಹಿರಿಯಾಲೀ ||

ಕೂಟಾಕ್ಕೆ ಬರಹೇಳಿ ಗಳಿಗೇಲಿ ನಮ್ಮಯ್ಯನ
ದಾಟೀದ ಭೂಮಿ ಬೆಳೆಯಾಲೀ ನಮ್ಮಯ್ನ
ಹೊನ್ನಿನ ಜನಿವಾರ್ಕೆ ಬೆಲಿಯುಂಟೆ ||

ಹೊನ್ನಿನ ಜನಿವಾರ್ಕೆ ಬೆಲೆಯುಂಟೆ ನಮ್ಮಯ್ನ
ಹುಬ್ಬು ತಿದ್ದ್ಯಾಳೆ ಶಿರಿದೇವಿ || ಹೂವೇ ಮಾತಾಡು ||

ಇನ್ನೊಂದು ಪದ್ಯ ಮೆಚ್ಚು ಕೈಗೆ ಸೇರುವುದನ್ನೇ ವರ್ಣಿಸುತ್ತದೆ

ಕೋಲನಾಡ್ತೇವೆ ಕೊನೆಯ ಗುಡ್ಡದ ಮೇಲೆ
ನವಿಲಿಂಗೆ ನಂಬೋ ಬೈಲಲ್ಲಿ
ನವಿಲಿಂಗೆ ನಂಬೋ ಬೈಲಲ್ಲಿ ನಮ್ಮಯ್ಯ
ತಾವು ಕೂತು ಕೋಲ ಹೊಡೆಸ್ಯಾರು ||

ಕಟ್ಟೀದ ಮುಂಡಾಸ ಕರಿಯವಗೆ ಕೊಟ್ಟ್ಯಾರೆ
ಯೋಚನೆ ಮಾಡೀ ನಗತಾರೆ
ಯೋಚನೆ ಮಾಡಿ ನಗತೀರಿ ನಮ್ಮಯ್ಯ
ಕೊಡಬೇಕು ನಿಮ್ಮಾ ಮಗನೀಗೆ ||

ಕೊಡಬೇಕು ನಿಮ್ಮ ಮಗನೀಗೆ ಕೊಟ್ಟ್ಯಾರೆ
ಊರು ಮಂದ್ಯೆಲ್ಲ ಹೊಗಳ್ಯಾರೆ
ಊರು ಮಂದ್ಯೆಲ್ಲ ಹೊಗಳಾರೆ ನಮ್ಮಯ್ಯ
ಕೇರಿ ಮುಂದ್ಯೆಲ್ಲ ಮೆರೆದಾರೆ
ಕೇರಿ ಮೇಲೆಲ್ಲಾ ಏನೆಂದು ಮೆರೆದಾರೆ
ದೊರೆಯ ನಮ್ಮಯ್ಯಾ ಬಿರುದೆಂಬೆ ||

ಅಟ್ಟ್ಯಾನೆ ಹತ್ತ್ಯಾರೆ ಪೆಟ್ಟ್ಯಾನೆ ಬಿಚ್ಚ್ಯಾರೆ
ಶ್ಯಾರೆಗೊಂದು ಮಾರು ಇಳಿಮಾರು

ಶ್ಯಾರೆಗೊಂದು ಮಾರೂ ಇಳಿಮ್ಯಾರು ನಮ್ಮಯ್ಯ
ಬಿಚ್ಚಿ ಒಗೆದಾರೇ ಮೈಮೇಲೆ ||

ಒಂದು ದುಡ್ಡಂಬೋದು ಬಂಡ್ಕ್ಯಲ್ಲ ಗಾಲ್ಕ್ಯಲ್ಲ
ಪಾವಾಣೆ ನಂಬೋದು ಹೊದಿಕ್ಯಲ್ಲ
ಪಾವಾಣ ನಂಬೋದು ಹೊದಿಕ್ಯಲ್ಲ ನಮ್ಮಯ್ಯ
ವಸ್ತ್ರ ಒಗೆದಾರೇ ನಮ್ಮಯ್ಯ ||

೨೨

ಪೂರ್ವದಲ್ಲಿ ನಾಡಗೌಡರು ತಮ್ಮ ಪರಿವಾರದ ಜನಕ್ಕೆಲ್ಲಾ ಈ ಕೋಲಾಟದ ಶಿಕ್ಷೆಯನ್ನು ಕೊಡುತ್ತಿದ್ದರೆಂದು ಕಾಣುತ್ತದೆ. ಯುದ್ಧದಲ್ಲಿ ಇವರೇ ಸೈನಿಕರು; ಊರಿನಲ್ಲಿ ಇವರೇ ಜೀತಗಾರರು; ಹಬ್ಬ ಹುಣ್ಣಿಮೆಯಲ್ಲಿ ಇವರೇ ಕೋಲಾಟದವರು. ಈ ಏರ್ಪಾಡಿನಲ್ಲಿ ಈಗ ಉಳಿದಿರುವುದು ಬಹು ಸ್ವಲ್ಪ ಭಾಗ. ಈಗ ನಾಡುನಾಡಿಗೆ ಬೇರೆ ಬೇರೆ ಧಣಿ ಇಲ್ಲ; ಅವನ ಸ್ಥಾನದಲ್ಲಿ ಒಬ್ಬನಿದ್ದರೂ ಅವನಿಗೆ ಧಣಿಯ ಪದವಿ ಇಲ್ಲ. ಮುಖವಿಲ್ಲದೆ ಬರೆದ ಒಂದು ಮೂಗಿನಂತೆ ಈ ಕೋಲಾಟದ ಪದ್ಧತಿಗೆ ಈಗ ಅರ್ಥವಿಲ್ಲದೆ ಹೋಗಿದೆ. ಅದರ ಏರ್ಪಾಡೆಲ್ಲ ಪೂರ್ಣವಾಗಿ ಇದ್ದ ಕಾಲದಲ್ಲಿ ಕೋಲಾಟ ಜನತೆಯ ವಿನೋದವನ್ನೂ ವ್ಯಾಯಾಮವನ್ನೂ ಒಕ್ಕಟ್ಟನ್ನೂ ಒಟ್ಟಿಗೆ ಸಾಧಿಸುತ್ತಿತ್ತು. ಈ ಪದಗಳಲ್ಲಿಯೇ ಈ ವಿಷಯ ಸ್ಪಷ್ಟವಾಗಿ ಕಾಣುತ್ತದೆ. ಜೀತದ ಈ ಕುಣಿತವಲ್ಲದೆ ನಾಡಿಗರ ಕುಣಿತ ಬೇರೆ ಇತ್ತು. ಅದಕ್ಕೆ ಜೀತದವರು ತಾಳ ತಮ್ಮಟೆ ಹಾಕುತ್ತಿದ್ದರು. ಇದೂ ಕೂಡ ಮಲೆನಾಡಿನಲ್ಲಿ ಈಗಲೂ ವಾಡಿಕೆಯಿರುವ ಕುಣಿತ. ಆದರೆ ಜನ ಇದನ್ನು ಒಂದೆರಡು ತಲೆಮಾರಿನಿಂದ ಬಿಡುತ್ತಿದ್ದಾರೆ. ಮಲೆನಾಡಿನ ಕೋಲಾಟದಲ್ಲಿ ಮುರುಕಾಗಿ ಮಾತ್ರ ದೊರೆಯುವ ಈ ಕುಣಿತ ಕೊಡಗಿನಲ್ಲಿ ಈಗಲೂ ನೊಕ್ಕಿಲ್ಲದೆ ಕಾಣುತ್ತದೆ. ಹಬ್ಬ ಹುಣ್ಣಿಮೆಯಲ್ಲಿ ಬುಡಕಟ್ಟಿನ ಜನರೆಲ್ಲ ಸೇರಿ ಕುಣಿಯುವುದು ಕೊಡಗರಲ್ಲಿ ಪದ್ಧತಿ. ಕೆಲವು ಕುಣಿತ ಪ್ರಬುದ್ಧರಾದವರಿಗೆ ಮಾತ್ರ; ಅದು ವೀರರ ಕುಣಿತ. ಮಡಕೇರಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಲನ ನೆರೆದಾಗ ಕೊಡಗಿನ ನಮ್ಮ ಬಂಧುಗಳು ಬೊಳಕಾಟ ಎಂಬ ಒಂದು ಆಟವನ್ನು ಆಡಿದರು. ಇದು ಒಂದು ಮರಕ್ಕೆ ದೀಪಗಳನ್ನು ಕಟ್ಟಿ ಅದರ ಸುತ್ತಲೂ ಮಾಡುವ ಕುಣಿತ. ಈ ಆಟದಲ್ಲಿ ಯೋಧರು ಜ್ಯೋತಿಯನ್ನು ಪ್ರದಕ್ಷಿಣವಾಗಿ

ಸುತ್ತಿ ವಂದಿಸುವರು. ಆ ಮೇಲೆ ಎರಡು ಪಂಗಡವಾಗಿ ಒಂದು ಆಟದ ಕಾಳಗ ವನ್ನು ನಡೆಯಿಸುವರು. ತಮಟೆ ತಾಳ ಓಲಗದ ವಾದ್ಯಕ್ಕೆ ಸರಿಯಾಗಿ ಹೆಜ್ಜೆ ಹಾಕುತ್ತ ಮುಂದುವರಿದು ಇವರು ಅತ್ತ, ಅವರು ಇತ್ತ ಗುಂಪಿನಲ್ಲಿ ಗುಂಪು ತೂರಿಹೋಗಿ ತಿರುಗಿ ಎದುರಾಗಿ ನಿಂತು ನಡೆಯಿಸುವ ಈ ನೃತ್ಯವು ಆವೇಶವನ್ನು ಹುಟ್ಟಿಸುತ್ತದೆ. ಬೋಳಕಾಟ ವರ್ಷದಲ್ಲಿ ಒಂದು ಸಲ ಬುಡಕಟ್ಟಿನ ಜನವೆಲ್ಲ ಸೇರಿ ನಡೆಸುತ್ತಿದ್ದ ವೀರ ನೃತ್ಯವೆಂದು ಇದರಿಂದ ಕಾಣುತ್ತವೆ. ಈ ಕುಣಿತದಲ್ಲಿ ಹಾಡು ಇಲ್ಲ. ಅಲ್ಲಲ್ಲಿ ನಮ್ಮ ತಂದೆ, ನಮ್ಮ ತಾಯಿ, ನಮ್ಮ ಕುಲದ ದೈವ ಎಂದು ಕೂಗುವ ಆವೇಶದ ಹೂಂಕಾರ ಮಾತ್ರ ಇರುತ್ತದೆ. ಅದರ ಹಿಂದೆ ತಮಟೆಯ ಆರ್ಭಟ. ಈ ಕುಣಿತದ ಸೊಗಸನ್ನು ಅರಿಯಬೇಕೆನ್ನುವವರು ಕೊಡಗಿಗೆ ಹೋಗಿ ಆಟವನ್ನೇ ನೋಡಬೇಕು. ಹೀಗೆಯೇ ಮೈದಾನದ ಪ್ರಾಂತಗಳಲ್ಲಿ ಕೂಡ ವೀರ ಮಕ್ಕಳ ಕುಣಿತ, ಪಟದ ಕುಣಿತ, ನಾಯಕರ ಕುಣಿತ ಎಂಬ ಬೇರೆ ಬೇರೆಯ ಹೆಸರಿನ ಕುಣಿತಗಳು ವಾಡಿಕೆಯಲ್ಲಿವೆ.

೨೩

ಈ ಎಲ್ಲ ಸಾಹಿತ್ಯದಲ್ಲಿ ದೊರೆಯುವ ವರ್ಣನೆಗಳ ಕಲೆಯನ್ನು ಕುರಿತು ಎರಡು ಮಾತನ್ನು ಹೇಳುವುದು ಆವಶ್ಯಕ. ಈ ಕವಿಗಳು ಒಂದು ಮಾತು ಎರಡು ಮಾತಿನಲ್ಲಿ ಒಂದು ಸ್ಥಳದ, ಒಂದು ಸಂದರ್ಭದ ಮುಖವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುವರು. ಇವರಿಗೆ ಕುಡಿಹುಬ್ಬು ಬೇವಿನೆಸಳು, ಕಣ್ಣು ಮಾವಿನ ಹೋಳು. ನಗುನಗುತ ಮಗಳು ಮನೆಯನ್ನು ಬೆಳಗುವುದು ಇವರಿಗೆ ಬರಿಯ ರೂಪಕವಲ್ಲ, ವಾಸ್ತವವಾದ ಸಂಗತಿ; ಕುಣಿಗಲ ಕೆರೆಯಲ್ಲಿ ಗುಬ್ಬಿ, ಸಾರಂಗ ನಗುವುದು, ಅದರ ವೈಭವವನ್ನು ನೋಡಿ ಶಿವಮೊಗ್ಗೆಯ ಕಬ್ಬಕ್ಕಿ ಬಾಯಿ ಬಿಡು ವುದು ಕಲ್ಪನೆಯಲ್ಲ; ನಿಜ. ಇವೆಲ್ಲ ಸಣ್ಣ ಚಿತ್ರಗಳು. ಕೃತಿಗೆ ಆವಶ್ಯಕವಾದಾಗ ವರ್ಣನೆ ವಿಸ್ತಾರವಾದರೂ ಚಿತ್ರದ ವಿವರ ಹೀಗೆಯೇ ಯಾವುದೋ ಮಾತಿ ನಿಂದ ಜೀವಂತವಾಗುತ್ತದೆ. ಸೂರೆಮಾಡಿದವರು ಬೀಸುವ ಕಲ್ಲನ್ನೂ ಬಿಡಲಿಲ್ಲ ಎಂದು ಈ ಕವಿಗಳು ಚಿತ್ರವನ್ನು ಪೂರ್ಣಮಾಡುತ್ತಾರೆ. ಇವರ ಮನೋಧರ್ಮ ವನ್ನು ಕೇವಲ ವರ್ಣನೆಗೆಂದೇ ಹೊರಟ ನಾಲ್ಕು ಪದ್ಯಗಳಿಂದ ನಿರೀಕ್ಷಿಸಬಹುದು.

ಇದು ಸೊಲ್ಲಾಪುರದ ಜಾತ್ರೆಯ ವರ್ಣನೆ—

ಸೊಲ್ಲಾಪುರದ ಒಳಗ ಸೆಲ್ಲ್ಯೆಲ್ಲ ಮಲ್ಲಿಗಿ
ಹಾಸುಮಂಚ್ಯೆಲ್ಲ ಹವಳವ ಸಿದರಾಮನ
ದಂಡುಕೋಲೆಲ್ಲ ದವನವ ||

ಇದು ಬೆಟ್ಟದ ಮಲ್ಲಿಕಾರ್ಜುನ ದೇವಾಲಯದ ಪೂಜೆಯ ವರ್ಣನೆ—

ಆಕಾಶದಡವ್ಯಾಗ ಧೂಪದ ಹೊಗೆಯೆದ್ದು
ಆಯ್ತು ಮಲ್ಲಯನ ಶಿವಪೂಜೆ ಆಗಾಗ
ಆಕಾಶದ ಗಂಟೆ ಗಳಲೆಂದು ||

ಇದು ಹಲಸಂಗಿಯ ಜಕ್ಕವ್ವ ದೇವರ ವರ್ಣನೆ—

ಮೂಗಿನಾಗ ಮೂಗುತಿ ನಕ್ಕರೆ ಕರಿಹಲ್ಲು
ಅಕ್ಕ ನೀನ್ಯಾರ ಮಗಳವ್ವ ಹಲಸಂಗಿ
ಗಚ್ಚೀನ ಗುಡಿಯ ಜಕ್ಕವ್ವ ||

ಈ ಮಾತುಗಳಲ್ಲಿ ಒಂದು ಸ್ಥಳ, ಒಂದು ಪೂಜಾ ಕ್ರಮ ಅಥವಾ ಒಂದು ವ್ಯಕ್ತಿ ಸ್ಪಷ್ಟವಾಗಿ ಎದುರಿಗೆ ಬರುವುದು. ಕವಿಗೆ ಆಯಾ ಸಂದರ್ಭದಲ್ಲಿ ಯಾವ ವಿಷಯದಿಂದ ಸ್ಥಳ, ಕಾರ್ಯ, ಅಥವಾ ವ್ಯಕ್ತಿಯ ಜ್ಞಾನ ಉಂಟಾಯಿತೋ ಆ ವಿಷಯಗಳನ್ನೇ ಅವನು ಹೇಳುತ್ತಾನೆ. ಆಯಾ ಸಂದರ್ಭವನ್ನು ಕುರಿತು ನಮಗೆ ತಿಳಿಯುವುದೂ ಅಷ್ಟೇ. ಕವಿ ಹೀಗೆ ಕೆಲವು ವಿಷಯಗಳನ್ನು ಗ್ರಹಿಸುವುದಕ್ಕೆ ಕಾರಣ ಅವನ ಮನೋಧರ್ಮದಲ್ಲಿ ಆ ಕೆಲವು ವಿಷಯಕ್ಕೆ ಮಾತ್ರ ಪ್ರಾಧಾನ್ಯ ಬರುವುದು. ಅವನ ಮನಸ್ಸಿನ ಪಟದ ಮೇಲೆ ಕೆಲವು ವಿವರ ಒತ್ತಿ ಚಿತ್ರವಾಗುತ್ತವೆ. ಕೆಲವು ಮೇಲೆ ಮೇಲೆ ಮುಟ್ಟಿ ಮರೆಯುತ್ತವೆ. ಅವನು ಸೊಲ್ಲಾಪುರವನ್ನೆಲ್ಲ ನೋಡಬಹುದು. ಮನೆಮಾಳಿಗೆ ಜನಜಾತ್ರೆ ಯಾವುದೂ ಅವನಿಗೆ ಮುಖ್ಯವಲ್ಲ. ಅವನಿಗೆ ಕಾಣುವುದು ಸೆಲ್ಲೆಯಲ್ಲೆಲ್ಲ ಮಲ್ಲಿಗೆ, ಹಾಸು ಮಂಚ ಎಲ್ಲ ಹವಳ, ದಂಡುಕೋಲೆಲ್ಲ ದವನ. ಹಾಗೆಯೇ ಮಲೆಯ ಮೇಲಿನ ಕಾಡಿನಲ್ಲಿ ಮಲ್ಲಿಕಾರ್ಜುನನ ಪೂಜೆ ಆದಾಗ ತುಂಬ ಧೂಪದ ಹೊಗೆ ಸಂತತವಾಗಿ ಆಕಾಶಕ್ಕೆ ಏಳುತ್ತಿರಲು ಮಧ್ಯೆ ಮಧ್ಯೆ ಗಂಟೆಯ ಶಬ್ದ. ಹಲಸಂಗಿಗೆ ಹೋದರೆ ಇಷ್ಟು ಮುಖ್ಯ: ಗುಡಿ ಗಚ್ಚಿನದು; ಒಳಗೆ ಒಬ್ಬಾಕೆ ಕುಳಿತಿದ್ದಾಳೆ;

ಮೂಗಿನಲ್ಲಿ ಮೂಗುತಿ, ಹಲ್ಲು ಕಪ್ಪು, ಮಾತನಾಡಿಸುವಷ್ಟು ನಿಜವಾಗಿ ಕುಳಿತಿದೆ ಮೂರ್ತಿ; ಅದು ಜಕ್ಕವ್ವ. ಅವನ ಗ್ರಹಿಕೆಗೆ ಬರುವುದು ರೂಪ, ರಸ, ಗಂಧ, ಶಬ್ದ ಇವು. ಒಟ್ಟು ಅನುಭವದಲ್ಲಿ ಇವು ಯಾವುವು ಮುಖ್ಯವೋ ಅವು ಮಾತ್ರ ನಿಲ್ಲುತ್ತವೆ, ಉಳಿದುವು ಮರೆಯಾಗುತ್ತವೆ. ಉಳಿದ ಅಂಶಗಳು ಇಲ್ಲವೆಂದಲ್ಲ. ಆದರೆ ಜಕ್ಕವ್ವನ ಮೂರ್ತಿಯಲ್ಲಿ ಮುಖವೆಲ್ಲ ಇರುವುದಾದರೂ, ಕಾಣುವುದು ಕರಿಹಲ್ಲು ಮೂಗು ಮೂಗುತಿ. ಮೂಗುತಿ ಇರುವ ಕಾರಣದಿಂದ ಮೂಗು, ಹೊಳೆಯುವ ಕಾರಣದಿಂದ ಮೂಗುತಿ, ಕಪ್ಪಾಗಿರುವ ಕಾರಣದಿಂದ ಹಲ್ಲು ಇವನ ಕರಣಗಳನ್ನು ವಿಶೇಷವಾಗಿ ಸೆಳೆಯುತ್ತವೆ. ಇದೇ ರೀತಿಯಲ್ಲಿ ಈ ಕವಿತೆಯ ವರ್ಣನೆ ಮುಖ್ಯವಾಗಿ ಇಂದ್ರಿಯಗಳ ಅನುಭವವನ್ನು ಬಿಡಿಯಾಗಿ ಚಿತ್ರಿಸತಕ್ಕದ್ದು. ಅಥವಾ ಇತರ ಅಂಶಗಳನ್ನು ಕಂಡರೂ ಕವಿ ಅದನ್ನು ಉದ್ದೇಶಪೂರ್ವಕವಾಗಿ ಹಿಂದಕ್ಕೆ ಇರಿಸುತ್ತಾನೆ.

ಧರಿಧೂಳ ಇರುವ ಸ್ಥಳವನ್ನು ಹೀಗೆ ವರ್ಣಿಸಿದೆ—

ಗುಡ್ಡದ ವಾರ್‍ಯಾಗ ಗುಲಗಂಜಿ ವನದ್ಯಾಗ
ಒಬ್ಬನೆ ಹ್ಯಾಂಗಿದ್ದೆ ಧರಿಧೂಳ ನಿನ ಮುಂದೆ
ಅಬ್ಬರಿಸಿ ಗಂಗೆ ಹರಿದಾಳ ||

ತಮ್ಮನು ಕುರಿ ಕಾಯುವುದನ್ನು ವರ್ಣಿಸಿದೆ—

ಎಳೆ ಹುಲ್ಲು ಅಡವ್ಯಾಗ ತಿಳಿನೀರು ಕೊಳದಾಗ
ಬಲವುಳ್ಳ ನಾಯ ಸಾಕ್ಯಾನು ನನ್ನ ತಮ್ಮ
ಒನಪೀಲೆ ಕುರಿಯ ಕಾಯ್ದಾನು ||

ಇದು ಧೀರನಾದ ಮಗನನ್ನು ವರ್ಣಿಸುವ ಮಾತು—

ರಾಮನಂಥಾ ಕಣ್ಣು ಭೀಮನಂತಾ ಹುಬ್ಬು
ಕಾಮಣನಕಿಂತ ನಡು ಸಣ್ಣ ನನ ಬಾಲ
ಹುಲಿಯೆ ನಿನನ್ಯಾರು ಕೆಣಕ್ಯಾರ ||

ಇದು ಬೆಳಗನ್ನು ವರ್ಣಿಸುವುದು—

ಬೆಳ್ಯಾನ ಬೆಳಗಾಗಿ ಬೆಳ್ಳಿ ಮೂಡಲವಾಗಿ
ಒಳ್ಳೆಳ್ಳೆ ಮೀನ ಗರಿ ತೆಗೆದು ಆಡ್ಯಾವ
ಗರತಿ ಗಂಗವ್ವನ ಉಡಿಯಾಗ ||

ಈ ವರ್ಣನೆಯಲ್ಲೆಲ್ಲ ಇದೇ ಪದ್ಧತಿಯ ಉತ್ಕೃಷ್ಟರೂಪವು ನಮಗೆ ಕಾಣುತ್ತದೆ. ಮುಧೋಳ ರಾಜ್ಯದ ಹಲಗಲಿಯ ಕೈದಿನ ಜಗಳದ ವರ್ಣನೆಯಲ್ಲಿ ಪದ್ಧತಿ ಸ್ವಲ್ಪ ಬೇರೆ ಎಂಬಂತೆ ಕಾಣುತ್ತದೆ. ಅದು ವಿವರವನ್ನು ತುಂಬಿ ಹೇಳಿ ಕೇಳುವವರ ಮನಸ್ಸಿನಲ್ಲಿ ಪರಿಣಾಮವನ್ನು ಉಂಟುಮಾಡತಕ್ಕದ್ದು. ಆದರೆ ಅಲ್ಲಿಯಾಗಲಿ ಕವಿ ಮುಖ್ಯವಾಗಿ ಮೂರು ಗೆರೆಯಿಂದ ಮುಖವನ್ನು ಚಿತ್ರಿಸುವನು. ಜಂಗಮನು ಹೇಗಿದ್ದಾನೆ—

ದೇವರು ಬಂದಾನ ನೋಡೀರೋ ನಮ್ಮ ಸ್ವಾಮಿ ಬಂದಾನಾ ನೋಡೀರೋ
ಅಂಗೈ ಜೋಗುಳ ಮುಂಗೈ ಚೆತ್ತ ತುದಿಬೆರಳೀಬತ್ತಿ ಹಚ್ಚ್ಯಾನ||

೨೪

ಈ ವರ್ಣನೆಯಲ್ಲಿ ಕಾಣುವ ಸಮಯೋಚಿತವಾದ ಮಿತವೂ ವಿಸ್ತಾರವೂ ಸನ್ನಿವೇಶದ ಚತುರ ರೂಪಣವೂ, ಉಚಿತ ಪದ ಪ್ರಯೋಗವೂ ಈ ಕವಿತೆಯ ಇತರ ಭಾಗದಲ್ಲೂ ಕಾಣುತ್ತವೆ. ತಾವರೇ ಗಿಡ ಹುಟ್ಟಿ ದೇವರಿಗೆ ನೆರಳಾತು ಎಂದು ತನ್ನನ್ನು ತಾವರೆಗೆ ಹೋಲಿಸಿಕೊಳ್ಳುವ ಹೆಣ್ಣುಮಗು, ಹುಟ್ಟಿದ ಮನೆಯನ್ನು ಬಿಟ್ಟು ಹೋಗುವ ವ್ಯಥೆಯೊಂದಿಗೆ ಆ ಬಿಟ್ಟು ಹೋಗುವುದರ ಉದ್ದೇಶ ಎಷ್ಟು ಶ್ರೇಷ್ಠವಾದದ್ದೆಂದೂ ಸೂಚಿಸುತ್ತಾಳೆ. ಶಾಲೆ ಏನೋ ಒಳ್ಳೇದು ಸೆರಗಿಲ್ಲೋ ಅಣ್ಣಯ್ಯ, ಗುಣ ಒಳ್ಳೇದು ಋಣ ಇಲ್ಲ, ಎಂದು ತನ್ನ ಸಂಸಾರದ ಸ್ಥಿತಿಯನ್ನು ಹೇಳುವ ಮಾತಿನಲ್ಲಿ, ಗಂಡನು ಗಂಡನೇನೋ ಹೌದು, ಆದರೆ ಸೆರಗಿಲ್ಲದ ಬಟ್ಟೆಯಂತೆ ಮರ್ಯಾದೆಯನ್ನು ಉಳಿಸುವಷ್ಟಕ್ಕೇನೋ ಆದನು, ಬದುಕು ಚೆನ್ನಾಗುವುದಕ್ಕೆ ಇನ್ನು ಸ್ವಲ್ಪ ಋಣ ಇರಬೇಕಾಗಿತ್ತು, ಎಂದು ಸೂಚಿಸುತ್ತಾಳೆ. ಮಮತೆಯಿಲ್ಲದ ಬದುಕು ಒಂದು ಮೊಳದ ಸೆರಗಿಲ್ಲದ ಹದಿನಾರು ಮೊಳದ ಉಡುಗೆಯಂತೆ ಕಾರ್ಪಣ್ಯದ್ದು. ಬಂಗಾರ ಮೋರೆ, ಹಚ್ಚಡದ ಪದರ, ಕರಿಯ ಹುಬ್ಬಿನ ಜಾಣ, ಒಂಬತ್ತು ತಿಂಗಳೂ ತುಂಬಿಕೊಂಡು, ನಾರಿಯರ ಕೈಯ ಉಗುರೆಣ್ಣೆ, ಎಂಬ ರೀತಿಯ ಮಾತಿನಲ್ಲಿ ಈ ಕವಿತೆ ಚೆಲುವನ್ನು ಸಾಧಿಸುತ್ತದೆ; ಅದನ್ನು ಚೆಲುವಾದ ವಸ್ತುಗಳ ನೆನಪಿನಿಂದ ಸೃಜಿಸುತ್ತದೆ. ಜಾಜೀಯ ಹೂವ ಬೆಲೆಮಾಡಿ, ನಗುಮುಖದ ಕೇದಗೆ, ಗಂಧದ ಮಡು, ಯಾಲಕ್ಕಿ ಗೊನೆ, ಕೊನೆಯ ಗುಡ್ಡದ ಮೇಲೆ ನವಿಲಿಂಗೆ ಸಂಬೋಬೈಲು, ಹೂವೇ ಮಾತಾಡು

ಮಲ್ಲಿಗೇ, ಕೇಳು ಸನ್ನ ಮೊಗ್ಗೇ ಸಂಪಿಗೇ, ಹಾಸು ಮಂಚ್ಯೆಲ್ಲ ಹವಳ ಎನ್ನುವ ಕವಿ ಚೆಲುವಿನೊಂದಿಗೆ ಸಂಬಂಧವನ್ನು ಬೆಳಸುವ ಆಸೆ ಉಳ್ಳವನು. ಅವನು ನಮಗೂ ಅದರೊಂದಿಗೆ ಸಂಬಂಧವನ್ನು ಮಾಡಿಕೊಡುತ್ತಾನೆ. ವಿರಸ ನೀರಸ ದಿಂದ ತುಂಬಿರುವ ಪ್ರಪಂಚದಲ್ಲಿ ರಸವೂ ಇದೆ ಎನ್ನುವುದನ್ನು ನಮಗೆ ತಿಳಿಸು ತ್ತಾನೆ. ಮಾತು ಇಲ್ಲಿ ತಳೆಯುವ ಮಿತವೂ ಚೆಲುವೂ ಪ್ರಪಂಚದಲ್ಲಿ ಕವಿಗೆ ಕಾಣುವ ಮಿತದ ಫಲ, ಚೆಲುವಿನ ಫಲ; ಅವನ ಮನಸ್ಸಿನಲ್ಲಿ ಮೂಡುವ ಮಿತದ ಮತ್ತು ಚೆಲುವಿನ ವ್ಯಂಜನ. ಮಿತವೂ ಚೆಲುವೂ ಆದರೂ ಈ ಮಾತು ಬಲವುಳ್ಳದ್ದೂ ಆಗಿದೆ. ಶೌರನ್ನು ಹೊಗಳುತ್ತ ಹೆಣ್ಣುಮಗು, ಸಾವಿರಕ್ಕೆ ಸತ್ಯರು, ನೂರಕ್ಕೆ ಧರ್ಮರು, ಆಗ ಬಿತ್ತಿ ಆಗ ಬೆಳೆದಾರು ನಮ್ಮವರು ಎಂದು ಹೇಳುವಲ್ಲಿ ಶೌರಿನ ಮಾಹಾತ್ಮ್ಯ ಐವತ್ತು ಮಾತಿನಿಂದ ವರ್ಣಿಸಿದಷ್ಟು ಸ್ಪಷ್ಟವಾಗುತ್ತದೆ. ತನ್ನ ಬಾಳಿನಲ್ಲಿ ಬೇಸರವನ್ನು ತೋರಿಸುವುದಕ್ಕೆ, ಯಾರೀಗೆ ಯಾರಿಲ್ಲ, ಈ ಮನಕೆ ಧೀರಿಲ್ಲ, ಅಯ್ರಾಣದಾಗ ಪರದೇಶಿ ಸತ್ತರೆ ಯಾರೀಗೆ ದುಃಖ ಹಡೆದವ್ವ ಎಂದು ಹೇಳುವಾಗ ನಿರಾಶೆ ಕೊನೆಯ ಹಂತವನ್ನು ಮುಟ್ಟುತ್ತದೆ. ಕೊಂಚ ಮಾತಿನಲ್ಲಿ ಹೆಚ್ಚು ಅರ್ಥವನ್ನು ಸೂಚಿಸುವುದು ಈ ಕವಿತೆಗೆ ಪ್ರಯತ್ನದಿಂದ ಬಂದದ್ದಲ್ಲ. ಮನದ ಭಾವವನ್ನು ತಿಳಿಸಬೇಕು; ತಿಳಿಸುವುದು ಇಷ್ಟರಿಗೆ; ಸೂಚಿಸಿದರೆ ಸಾಕು, ಅವರು ತಿಳಿಯುತ್ತಾರೆ; ಹೆಚ್ಚು ಹೇಳುವುದಕ್ಕೆ ಇವರಿಗೂ ಮನಸ್ಸಿರು ವುದಿಲ್ಲ. ಈ ಸನ್ನಿವೇಶದಲ್ಲಿ ಮಾತು ಕಡಮೆಯಾಗಿರುವುದೂ ಭಾವ ಹೆಚ್ಚಾಗಿ ಹೊಳೆಯುವುದೂ ಸಹಜವೇ ಆಗಿದೆ. ಇಷ್ಟೇ ಸಹಜವಾಗಿ ಈ ಕವಿತೆಯಲ್ಲಿ ಒಂದು ಸಂಕೇತ ಪದ್ಧತಿಯೂ ಕಾಣುತ್ತದೆ. ಗಂಡೂ ಹೆಣ್ಣೂ ಹೂವು, ಚಿನ್ನ, ಚಂದ್ರ, ಗಿಣಿ, ಹುಲಿ, ಹೀಗೆ ಆ ಸಂದರ್ಭಕ್ಕೆ ಅನುಸಾರವಾಗಿ ಮೆಚ್ಚಿ ಗೆಯ ಒಂದು ವಸ್ತುವಾಗುತ್ತದೆ. ಅರ್ಥವನ್ನು ಸಂಕೇತದ ರೀತಿಯಲ್ಲಿ ಹೇಳುವ ಒಂದು ಪದ್ಧತಿಯೇ ಇಲ್ಲಿ ಬೆಳೆದಿದೆ. ಸೀರ್ಯದ ನಾಯಕರ ಮನೆಯ ಇಬ್ಬರು ಹೆಣ್ಣುಮಕ್ಕಳು ಎರಡು ಮನೆಯನ್ನು ಹೊಕ್ಕು ಅವರಿಂದ ಅವು ಬೆಳೆದುವು ಎನ್ನುವುದನ್ನು ಕವಿ ಹೀಗೆ ಹೇಳುತ್ತಾನೆ:

ಸೀರೇದ ಊರ್ಮುಂದೆ ಸಿರಿಗಂಧ ಮರ ಹುಟ್ಟಿ
ನಿಡುಗಲ್ಗೆ ಬೇರು ಹರಿದಾವು ರತ್ನಗಿರಿಯ
ಪೇಟೇಗೆ ನೆರಳು ತಿರಿಗ್ಯಾವು ||

೨೫

ಜನಪದ ಸಾಹಿತ್ಯದಲ್ಲಿ ಕಾಣುವ ಒಂದು ಹಿರಿಯ ಗುಣವೆಂದರೆ ನೀರಸದಲ್ಲಿ ಅದು ಸರಸವನ್ನು ಕಾಣುವುದು, ಸೋವಿನ ಪಟದ ಮೇಲೆ ಅದು ನಗೆಯನ್ನು ಹಚ್ಚು ವುದು. ಜನತೆ ಕಾರ್ಪಣ್ಯದ ಬಾಳಿನಲ್ಲಿ ಸ್ವಲ್ಪ ಹರ್ಷವನ್ನು ಮಾಡಿಕೊಳ್ಳುತ್ತದೆ; ಸಾಮಾನ್ಯದ ಹದಿನಾರು ಮೊಳದ ಬದುಕಿನಲ್ಲಿ ಒಂದು ಮೊಳವನ್ನು ಸೊಗಸಾಗಿ ತೋರಿಸುತ್ತದೆ. ಹಳ್ಳಿಯ ಬಾಳಿನಲ್ಲಾದರೂ ನಗರದ ಬಾಳಿನಲ್ಲಾದರೂ ಹರ್ಷ ಮೂಡುವುದು ಈ ಸೆರಗಿನಿಂದ. ಇದು ಕೃತಿಯಲ್ಲಿ ಹಾಸವಾಗಿ ಹೊಳೆಯುತ್ತದೆ. ಜನಪದ ಸಾಹಿತ್ಯದ ಹಾಸ್ಯವನ್ನು ಕುರಿತು ಹಿಂದಣ ಉಪನ್ಯಾಸದಲ್ಲಿ ಎರಡು ಮಾತನ್ನು ಹೇಳಿದೆ. ಈಗ ಅದಕ್ಕೆ ಇನ್ನೆರಡು ಉದಾಹರಣೆಯನ್ನು ಕೊಡಬಹುದು. ಮಗಳನ್ನು ತನಗೆ ಕೊಟ್ಟು ಮದುವೆಮಾಡೆಂದು ಕೇಳುವುದಕ್ಕೆ ತಮ್ಮನು ಅಕ್ಕನ ಮನೆಗೆ ಬಂದಿದ್ದಾನೆ. ಅವನ ಆತುರವನ್ನು ಅವಳು ಹೀಗೆಂದು ವರ್ಣಿಸುತ್ತಾಳೆ.

ಸಣ್ಣ ಶಾವಿಗೆ ಒಲ್ಲ ಚಿನ್ನಿ ಸಕ್ಕರೆ ಒಲ್ಲ
ಹೆಣ್ಣಿಂಬ ಶಬುದ ಬಿಡಒಲ್ಲ ನನ್ನ ತಮ್ಮ
ಹೆಣ್ಣು ಕೊಡತೀನಿ ಉಣ ಏಳೋ ||

ಹೆಣ್ಣುಮಕ್ಕಳ ನಡಿಗೆಯನ್ನು ರಸಿಕನೊಬ್ಬನು ಹೀಗೆ ವರ್ಣಿಸುತ್ತಾನೆ.

ಗಿಡ್ಡರು ನಡದರ ಗಿಣಿ ಹಿಂಡು ನಡದಹಂಗ
ಉದ್ದನ ಬಾಲಿ ನನ ತಂಗಿ ನಡದರ
ರುದ್ದರನ ತೇರು ಎಳೆದ್ಹಂಗ ||

ಒಳ್ಳೆ ಹೆಂಡತಿಯನ್ನು ಮನೆಯಲ್ಲಿದ್ದು ನೋಡಿಕೊಳ್ಳಲಿಲ್ಲವೆಂದು ವೃದ್ಧೆಯೊಬ್ಬಳು ಓಲೆಕಾರನಿಗೆ ಹೇಳುತ್ತಾಳೆ.

ಓಲೆಕಾರ ನಿನಗೆ ಒಳ್ಳೆ ಹೆಂಡರು ಯಾಕೊ
ನೀ ಹೋದಿ ರಾಜ್ಯ ತಿರುಗೂತ ಆ ಬಾಲಿ
ಬಾಡ್ಯಾಳು ಬಾಳೆ ಸುಳಿಯಾಗಿ ||

ಸಂಸಾರದಲ್ಲಿರುವ ಗಂಡ ಹೆಂಡರು ಮಧ್ಯಾಹ್ನದಲ್ಲಿ ನಿದ್ದೆಹೋಗುವುದಕ್ಕೆ ಕಾರಣವನ್ನು ಹೇಳುತ್ತಾರೆ.

ಸರದುನ ಮಲಗಟಕೆ ಸರಗೀಯ ಕೊಂಡಿ ಒತ್ತಿ
ಕಾಲುಂಗುರೊತ್ತಿ ಬಳೆ ಒತ್ತಿ ರಾಯರ
ನತ್ತು ಒತ್ತಿ ನಿದ್ದೆ ಬಾರದ||

ಜಾಡಿ ಜಮಕಾನೊತ್ತಿ ಕಂಬಳಿಯ ಕರಿ ಒತ್ತಿ
ಉಂಗುರುಡುಗೂಡಿ ಕಳೆ ಒತ್ತಿ ಸತಿಯಳ
ಮುರುವೊತ್ತಿ ನಿದ್ದೆ ಬಾರದ||

ಪ್ರಪಂಚ ಜ್ಞಾನದಿಂದ ಬಂದ ಈ ಮಾತಿನ ಹಾಸ್ಯ ಇನ್ನೊಂದು ರೀತಿಯದು.

ಅರಸ ಒಳ್ಳೆವರಂತ ವಿರಸವಾಡಲಿಬೇಡ
ವರುಷದ ಮಾತು ಮನದಾಗ ಇಟಕೊಂಡು
ಪರಿಸೆಗ್ಹೋದಾಗ ತೆಗೆದಾರ||

ಇದು ಗಂಡಿನ ಸ್ವಭಾವ. ಹೆಂಗಸು ಇದನ್ನು ತಿಳಿದು ಎಚ್ಚರದಿಂದಿರಬೇಕು. ರಾಗಿಯನ್ನು ಜೋಳವನ್ನು ನೆರೆಯವರ ಮನೆಯಲ್ಲಿ ಬೀಸಿ ಮುಗಿಸಿದಾಗ ಕಲ್ಲು ಕೊಟ್ಟವಳನ್ನು ಹೊಗಳಿ ಅವಳಿಗೆ ಒಳ್ಳೆಯದನ್ನು ಬಯಸಿ ಹೇಳುವ ಹಾಡಿನಲ್ಲಿ ನಯವಾದ ಹಾಸ್ಯವಿದೆ.

ಆದ ಮುಕ್ಕಿಗೆ ನನ್ನ ಸೋದರನ ಹಾಡುವೆನು
ಸೋದರನ ತಂಗಿ ಹಡದಮ್ಮ ನಿನ್ನ ಹಾಡಿ
ಜಾಡೀಸಿ ರಥವ ನಿಲಿಸೇನ||

ಬೀಸುವ ಕಲ್ಲು ಈ ವೀರ ರಮಣಿ ನಡೆಸುವ ರಥ. ಬೀಸಿದ್ದೆಲ್ಲ ಆದ ಮೇಲೆ ನಿಲ್ಲಿಸುವುದಕ್ಕೆ ಇದು ಕಾರಣ.

ಆದಾವು ನಮ್ಮ ಜೋಳ ಉಳಿದಾವು ನಮ್ಮ ಹಾಡು
ಈಗ ಸಾಕವ್ವ ನಿನ ಕಲ್ಲು ಕೈಯಾನ
ಹಾಕಿದುಂಗುರ ಸಮದಾವು||

ಒಬ್ಬರು ಹೇಳಿದರೆ ನಿಜವಾಗಿಯೇ ತೋರುವ ಮಾತು ಮತ್ತೊಬ್ಬರು ಹೇಳಿದಾಗ ಹಾಸ್ಯವಾಗಿ ಕಾಣಬಹುದು. ತಾಯಿ ಬಂದು ಬಂದು ಹೆಣ್ಣನ್ನು ಕರೆದು ಕೊಂಡು ಹೋಗಲು ಯತ್ನಮಾಡಿದ್ದಾಳೆ. ಇವಳು ಹೋಗಲಿಲ್ಲ. ಆ ದಿನ ರಾಗಿ ಬೀಸುವಾಗ ಅವಳ ಗೆಳತಿ

ಹಚ್ಚಡದ ಪದರಾಗೆ ಅಚ್ಚಮಲ್ಲಿಗೆ ಹೂವು
ಬಿಟ್ಟು ನನ ಮೇಲೆ ಚೆಲುವಂಥ ಪುರುಷರನ
ಬಿಟ್ಹಂಗೆ ಬರಲಿ ಹಡೆದವ್ವ ||

ಎಂದು ಹೇಳುವಳು. ಬೀಸುವ ಕಲ್ಲಿನ ಹಾಡುಗಾರರು ತುಂಬ ನಗುವುದು ಒಬ್ಬರನ್ನು ಕುರಿತು ಒಬ್ಬರು ಮಾಡುವ ಈ ರೀತಿಯ ಪ್ರೇಮದ ಹಾಸ್ಯದಲ್ಲಿ ಎಂದು ನಾವು ಊಹಿಸಬಹುದು. ಈ ಹೆಣ್ಣು ಮಕ್ಕಳ ಬಾಳಿನಲ್ಲಿ ಹೊರಗಣ ಸಂಪತ್ತು ಅಷ್ಟಷ್ಟೇ. ಆದರೆ ಒಳಗಣ ಹರ್ಷದ ಬೆಳಕಿನಲ್ಲಿ ಹೊರಗಣ ಅಲ್ಪ ಸಂಪತ್ತೇ ಹೊರವಾಗಿ ಬೆಳೆಯುತ್ತದೆ. ಅವರ ಸಂತೋಷದ ಹೊನ್ನದಾರದಿಂದ ಅವರು ತಮ್ಮ ಜೀವನಕ್ಕೆ ಒಂದು ಸೆರಗನ್ನು ತಾವೇ ನೆಯ್ದುಕೊಳ್ಳುತ್ತಾರೆ.

೨೬

ಈ ಸಂದರ್ಭದಲ್ಲಿ ಈ ಪದಗಳಲ್ಲಿ ಕಾಣುವ ದೈವಭಕ್ತಿಯನ್ನು ಕುರಿತು ಒಂದು ಮಾತನ್ನು ಹೇಳುವುದು ಆವಶ್ಯಕ.

ಗುಲಗಂಜಿ ವನದ ಧರಿಧೂಳನೂ, ನಂದಿಯಾಲದಿಂದ ಬರುವ ದಾರಿಯಲ್ಲಿರುವ ನಂಜುಂಡನೂ, ನಂಜನಗೂಡಿನ ನಂಜುಂಡ ಚಾಮುಂಡಿಯ ಬೆಟ್ಟದ ಚಾಮುಂಡಿ ಇವರೂ ಈ ಕವಿತೆಯಲ್ಲಿ ಜೀವಕ್ಕೆ ಬಹು ಹತ್ತಿರವಾದ ವ್ಯಕ್ತಿಗಳು. ಇದು ಈ ಕವಿತೆಯಲ್ಲಿ ಕಾಣುವ ವಿಶೇಷ ಗುಣ. ದೇವರು ಬಹು ಹಿರಿಯನೆಂಬುದನ್ನು ಈ ಕವಿಗಳು ಬಲ್ಲರು. ಆದರೂ ಅವನು ತಮ್ಮವನೆಂಬುದು ಅವರಿಗೆ ಅನುಭವಕ್ಕೆ ಬಂದ ವಿಷಯ.

ಬೆಟ್ಟದ ಮೇಲುಗಡೆ ಇಷ್ಟರು ಯಾರುಂಟು
ಶ್ರೇಷ್ಠ ತಿಮ್ಮಪ್ಪ ನಮ್ಮಾವ ಆದರೆ
ಇಷ್ಟಾರ್ಥವಿತ್ತು ಕಾಯುವ ||

ಹೀಗೆಯೇ ನಂಜನಗೂಡಿನಲ್ಲಿ ನಂಜಪ್ಪ ನಮ್ಮವನಾಗಬೇಕು. ಜೊತೆಗೆ ಈ ಕವಿಗಳಿಗೆ ಪುಣ್ಯಸ್ಥಳಗಳ ಅರ್ಚಾವತಾರಗಳನ್ನು ಕುರಿತ ವಿಶೇಷದ ಅರಿವು ಬೇರೆ: ಬೇಲೂರ ಚೆನ್ನಿಗ, ಯದುಗಿರಿಯ ನಾರಾಯಣ, ನಾಗಮಂಗಲದ ನರಸಿಂಹ ಚೆಲುವರಂತೆ. ಇದನ್ನು ಒಬ್ಬ ಕವಿ ಹೇಳುತ್ತಾನೆ. ನಾನು ಶೃಂಗೇರಿಯಲ್ಲಿ ಕೇಳಿದ ಒಂದು ಪದ್ಯದಲ್ಲಿ ಈ ರೀತಿಯ ಕ್ಷೇತ್ರಪ್ರೇಮದೊಂದಿಗೆ ದೈವವನ್ನು ಕುರಿತ

ಸೂಕ್ಷ್ಮ ವಿಚಾರವು ಸೇರಿತ್ತು. ಅದನ್ನು ನಾನು ಅಲ್ಲಿ ಬರೆಯಿಸಿಕೊಳ್ಳಲಿಲ್ಲ. ಆದರೆ ಅದನ್ನು ಶ್ರೀಮಾನ್ ಗೊರೂರು ರಾಮಸ್ವಾಮಯ್ಯಂಗಾರ್ಯರವರು ಈಚೆಗೆ ನನಗೆ ಬರೆದು ಕೊಟ್ಟರು.

ಎಲ್ಲವನೊ ಶಿವನೆಲ್ಲವನೊ ಸ್ವಾಮೆಲ್ಲವನೋ ಗುರುವೆಲ್ಲವನೊ
ಅಲ್ಲ್ಯವನಿಲ್ಲ್ಯವನೆಲ್ಲ್ಯ ಅವನೊ ಸ್ವಾಮಿಲ್ಲ್ಯವನೋ ಗುರುವಿಲ್ಲ್ಯವನೊ ||

ಅನ್ನದಾನೀ ಶಿವನೆಲ್ಲವನೊ ಒಳ್ಳೆ ಉಗ್ರ ನರಸಿಂಹ ಎಲ್ಲವನೊ
ಅನ್ನದಾನೀ ಶಿವನೆಲ್ಲ್ಯವನೋ ಆದಿ ಚುಂಚನಗಿರಿಯಲ್ಲ್ಯವನೊ ||

ಅರೆ ಮೇಲೆ ಅಂದಾನಿ ಎಲ್ಲವನೊ ಒಳ್ಳೆ ಗಿರಿ ಮೇಲೆ ವಿಭೂತಿಯಲ್ಲವನೊ
ಕೋಡುಗಲ್ಲಿನ ಒಡೆಯ ಎಲ್ಲವನೊ ಒಳ್ಳೆ ನವಿಲುಗರಿಕಂತೆಯಲ್ಲವನೋ ||

ಖಂಡುಗ ವಿಭೂತಿ ಧರಿಸೋನು ಎಲ್ಲೊ ಮರುಗಮಲ್ಲಿಗೆ ಜಾಜಿಯಲ್ಲ್ಯವನೊ
ಎಲ್ಲವನೋ ಶಿವನೆಲ್ಲವನೊ ಸ್ವಾಮೆಲ್ಲವನೊ ಗುರುವೆಲ್ಲವನೊ ||

ಈ ಪದ್ಯದಲ್ಲಿ ಹರಿಹರರನ್ನು ಕುರಿತು ಭೇದದ ಭಾವನೆಯಿಲ್ಲ. ಸ್ಥಳದ ದೇವರು ಉಳಿದ ದೇವರಿಂದ ಬೇರೆಯೆಂಬ ಮಂಕುತನವಿಲ್ಲ. ದೇವರು ಸರ್ವವ್ಯಾಪಿ ಎಂಬ ತಿಳಿವಿದೆ. ಭಕ್ತನು ಅವನಿಗೆ ಸೇರಿದವನು ಎಂಬುದನ್ನು ತೋರಿಸುವ ವಿಭೂತಿ ಚಂದನ ಇವುಗಳನ್ನು ಕುರಿತ ಶ್ರದ್ಧೆಯಿದೆ. ಇದೇ ಸಂದರ್ಭದಲ್ಲಿ ಕೋಲಾಟ ದವರು ಮೋಹಿನಿಯ ಆಟ ಎಂದು ಒಂದು ನಾಟ್ಯವನ್ನು ಮಾಡಿದರು. ಎರಡು ಪಂಗಡವಾಗಿ ಕೋಲಾಟದವರು ನಿಂತಿರಲು ಒಬ್ಬನು ವಿಷ್ಣು ಎಂದು ಅವರ ಮಧ್ಯೆ ಸ್ವಲ್ಪಹೊತ್ತು ಓಡಿಯಾಡಿ ಆ ಮೇಲೆ ಒಂದು ಸೀರೆಯನ್ನು ಉಟ್ಟು ಕೊಂಡು ಕೊರವಂಜಿಯಾಗಿ ಕುಣಿಕುಣಿಯುತ್ತ ಓಡಿಯಾಡುವನು. ಅಲ್ಲಿಂದ ಅವನು ಗೌಡನ ಮನೆಗೆ ಬಂದ ಹಾಗೆ, ಹೆಗ್ಗಡಿತಿಗೆ ಶಕುನ ಹೇಳುವ ಹಾಗೆ, ಆ ವೇಳೆಯಲ್ಲಿ ಹೆಗ್ಗಡಿತಿಯ ತಮ್ಮ ಅವಳನ್ನು ಕಂಡ ಹಾಗೆ, ಮೋಹಿಸಿದ ಹಾಗೆ, ಆ ಮೇಲೆ ಅವಳನ್ನು ಹಿಡಿದುಕೊಳ್ಳುವ ಹಾಗೆ ನಾಟ್ಯ ಸಾಗುತ್ತದೆ. ಇದಾದ ಮೇಲೆ ಈ ಮೋಹಿನಿಯೂ ಆ ಮೋಹಿತನೂ ತಪ್ಪಿಸಿಕೊಳ್ಳುವ ಹಿಡಿಯುವ ಆಟವನ್ನು ಆಡುತ್ತಾರೆ. ಕೊನೆಗೆ ಅವನು ಅವಳನ್ನು ಹಿಡಿದುಕೊಳ್ಳುತ್ತಾನೆ. ಈ ನಾಟ್ಯವನ್ನು ನೋಡುತ್ತ ಜನರೆಲ್ಲ ತುಂಬ ನಕ್ಕರು. ಕೊರವಂಜಿಯ ವೇಷ ಹಾಕಿದವನ ಅಲುಕುಕುಲುಕು ಆ ರೀತಿಯದು. ನಾಟ್ಯವು ಸ್ತ್ರೀಯ ವಿಷಯದಲ್ಲಿ

ಜನರ ಕಲ್ಪನೆಯನ್ನು ತಿದ್ದುವುದಕ್ಕೆಂದು ಸೃಷ್ಟಿಯಾಯಿತೆಂದು ಕಾಣುತ್ತದೆ. ಈಗ ಅದು ಆ ಉದ್ದೇಶವನ್ನು ಸಾಧಿಸುತ್ತಿದೆಯೇ ಎನ್ನುವದನ್ನು ಹೇಳುವುದು ಕಷ್ಟ. ಆದರೆ ಎಲ್ಲ ಆಕಾರವೂ ದೇವರು ಧರಿಸಿದ್ದು ಎನ್ನುವ ಸಿತಾಂತ ವೇದಾಂತವು ಇದರಲ್ಲಿ ಅಡಕವಾಗಿದೆ. ಇಂಥ ಹಿರಿಯ ಭಾವನೆಗಳನ್ನು ಜನತೆಗೆ ಕಷ್ಟವೆಂದು ಈ ಕವಿತೆ ದೂರದಲ್ಲಿ ಇರಿಸಲಿಲ್ಲ; ಕೊನೆಯ ಮೆಟ್ಟಲಲ್ಲಿ ಯೋಗಿಯಾದವನು ಕಾಣುವ ಸತ್ಯವನ್ನು ಮೊದಲ ಮೆಟ್ಟಲಲ್ಲಿ ಆಡುತ್ತಿರುವ ಮಕ್ಕಳ ಮಧ್ಯೆ ಇಟ್ಟಿತು. ಇದರಿಂದ ಸತ್ಯ ಕೆಡುವುದಿಲ್ಲವೆಂದು ಈ ಕವಿಗಳು ತಿಳಿದಿದ್ದರು. ಅದರ ಸಂಪರ್ಕ ದಿಂದ ಮಕ್ಕಳಿಗಾಗಲಿ ತೊಂದರೆಯಾಗುವುದಿಲ್ಲವೆಂದೂ ಇವರು ನಂಬಿದ್ದರು. ಜನತೆಯ ಬೆಳವಣಿಗೆಗೆ ಇದಕ್ಕಿಂತ ಹಿರಿಯ ಸೂತ್ರವಿಲ್ಲ. ಮುಂದಕ್ಕಾದರೂ ಈ ಸೂತ್ರವನ್ನು ಹಿಡಿದೇ ಬಲ್ಲವರೆನ್ನುವವರು ಜನತೆಯನ್ನು ಮುಂದೊಯ್ಯಬೇಕು.

೨೭

ಈ ಕೃತಿಗಳನ್ನು ಯಾರು ಮಾಡಿದರು ಯಾವಾಗ ಮಾಡಿದರು ಎಂದು ನಿರ್ಧ ರಿಸುವುದು ಬಹು ವೇಳೆ ಸಾಧ್ಯವಲ್ಲ. ಉಳಿದೆಲ್ಲ ಸಾಹಿತ್ಯದಂತೆ ಈ ಸಾಹಿತ್ಯವೂ ಒಂದೊಂದು ಕಾಲದಲ್ಲಿ ಒಂದಷ್ಟು ಒಂದಿಷ್ಟು ಆಗಿರಬೇಕು. ಕೆಲವು ವೇಳೆ ಸಂಗತಿಯಿಂದ ಅದರ ಕಾಲವು ಸುಮಾರು ಸ್ಪಷ್ಟವಾಗುತ್ತದೆ. ಸೀರ್ಯದ ಕಥೆ, ಶ್ರೀರಂಗಪಟ್ಟಣದ ಕಥೆ, ಕೈದುಗಳನ್ನು ಸರ್ಕಾರ ತೆಗೆದುಕೊಂಡ ಕಥೆ, ಇವು ಇದಕ್ಕೆ ಉದಾಹರಣೆಗಳು. ಕೈದಿನ ಕಥೆಯಲ್ಲಿ ಬರೆದವನ ಪರಿಚಯವೂ ಸ್ವಲ್ಪ ದೊರೆಯುತ್ತದೆ. ಇದು ಲಾವಣಿಯ ಜಾತಿಯ ಪದ್ಯ. ಲಾವಣಿಗಳಲ್ಲಿ ಕಲ್ಕಿ, ತುರಾ ಎಂದು ಎರಡು ಜಾತಿ ಇವೆಯೆಂದು ತಿಳಿದುಬರುತ್ತದೆ. ಈ ಮಾತುಗಳ ಅರ್ಥವೇನೆಂದು ಮಿತ್ರರು ಈ ಮೊದಲೇ ವಿಮರ್ಶಿಸಿದ್ದಾರೆ. ಈ ಎರಡು ರೀತಿ ಯಲ್ಲಿ ಕಲ್ಕಿಯವರು ಪೂರ್ವದಿಂದ ಬಂದದ್ದನ್ನು ಹೇಳುವರೆಂದೂ, ತುರಾದವರು ಸಭೆಯ ಮುಂದೆಯೇ ಕವನಮಾಡಿ ಹಾಡುವರೆಂದೂ, ಸಂಪ್ರದಾಯ ಹೇಳುತ್ತದೆ. ಪದ್ಧತಿಯ ಹೆಸರು ಕಲಿತು ಹೇಳುವ ಲಾವಣಿ, ತ್ವರೆಯಲ್ಲಿ ರಚಿಸಿ ಹೇಳುವ ಲಾವಣಿ ಎಂಬ ಅರ್ಥವನ್ನು ಸೂಚಿಸಿದರೂ ಸೂಚಿಸಬಹುದು. ಒಂದು ಕಲಿಕೆ, ಒಂದು ತ್ವರ. ಕಲಿಕೆಯ ಲಾವಣಿಗಾದರೆ ಕಾಲ ಒಂದು ಕರ್ತೃ ಒಬ್ಬನೇ ಇರುವುದು ಸಾಧ್ಯ. ತ್ವರೆಯ ಲಾವಣಿ ಹಾಡುವ ದಿನದ್ದು, ಹಾಡುವ ಮನುಷ್ಯನದು. ಸಭೆಯ

ಮುಂದೆ ಕುಳಿತು ಪದವನ್ನು ಕಟ್ಟುವುದು ಹೇಗೆ ಸಾಧ್ಯವೆಂದು ನಮಗೆ ಸಂದೇಹ ಹುಟ್ಟುತ್ತದೆ. ಆದರೆ ಸಭೆಯ ಮುಂದೆ ಕಟ್ಟುವುದೆನ್ನುವುದರ ಅಭಿಪ್ರಾಯ ಮಾತನ್ನೆಲ್ಲಾ ಆಗ ಯೋಚಿಸಿ ಸೇರಿಸುತ್ತಾನೆಂದಲ್ಲ. ಲಾವಣಿಗಾರನಿಗೆ ಯಾವ ಸಂದರ್ಭವನ್ನು ವರ್ಣಿಸಬೇಕಾದರೂ ಆವಶ್ಯಕವಾದ ಮಾತೆಲ್ಲ ತಲೆಯ ತುಂಬ ತುಂಬಿಕೊಂಡಿರುತ್ತದೆ. ಅವನು ತಾನು ಚಿತ್ರವನ್ನು ಊಹಿಸಿಕೊಂಡು ನೋಡುತ್ತ ವರ್ಣಿಸುತ್ತ ಹೋಗುತ್ತಾನೆ. ಕಲಿಕೆಯಲ್ಲಿ ಒಂದು ರೀತಿಯ ಸೊಗಸು ಕಾಣುವಂತೆ, ತ್ವರೆಯಲ್ಲಿ ಇನ್ನೊಂದು ರೀತಿಯ ಸೊಗಸು ಕಾಣುತ್ತದೆ. ಬೀಸುವ ಕಲ್ಲಿನ ಮುಂದೆ ಕುಳಿತ ಹೆಣ್ಣುಮಕ್ಕಳೂ, ಕೋಲಾಟವಾಡುತ್ತಿರುವ ಆಟಗಾರರೂ, ಹಚ್ಚೆ ಹಚ್ಚುವ ಹೆಂಗಸರೂ, ಆಗಾಗ ತಮಗೆ ತೋರಿದಂತೆ ಮಾತುಗಳನ್ನು ಸೇರಿಸಿಕೊಳ್ಳುವುದು ಈಗಲೂ ನಡೆಯುತ್ತಿರುವ ಮಾತು. "ಕಟ್ಟೊತ್ರ ಕತೆಯ ಹೇಳುವ" ಶಕ್ತಿ ವಾಡಿಕೆಯಿಂದ ಇವರಿಗೆ ಬಂದುಬಿಡುತ್ತದೆ. ಹೀಗೆ ರಚಿಸಿದ ಪದ್ಯಗಳಿಗೆ ಕಾಲ ಕರ್ತೃಗಳನ್ನು ನಿರ್ಣಯಮಾಡಿ ಹೇಳುವುದು ಸಾಧ್ಯವೇ ಅಲ್ಲ. ಕೆಲವು ವೇಳೆ ಪದ್ಯದಲ್ಲಿ ಹೇಳಿರುವ ವಿಷಯದಿಂದ ಅದರ ಕಾಲವನ್ನು ಊಹಿಸಬಹುದು. ಕ್ಷಾಮವನ್ನೂ ಅತಿವೃಷ್ಟಿಯನ್ನೂ ವರ್ಣಿಸಿರುವ ಪದ್ಯ ಪ್ರಾಯಶಃ ಹಿಂದಿನ ಧಾತು, ಈಶ್ವರ, ಬಹುಧಾನ್ಯ ಸಂವತ್ಸರಗಳನ್ನು ಕುರಿತದ್ದು ಎಂದು ಹೇಳಿದೆ. ಸುಮಾರು ಕ್ಷಾಮ ಮುಗಿದ ಒಂದೆರಡು ವರ್ಷಗಳಲ್ಲೆ ಅದನ್ನು ಬರೆದಿರಬೇಕು. ಸರಕಾರದಲ್ಲಿ ಮಗನು ಸರಿಪಾಲು ತರುವನೆಂದು ಹೇಳಿದ ಪದ್ಯ ಸರಕಾರ ಬಟಾಯಿ ಶಿಸ್ತಿನಿಂದ ಭೂಮಿಯನ್ನು ಸಾಗುವಳಿ ಮಾಡಿಸುತ್ತಿದ್ದ ಕಾಲದ್ದು ಎಂದು ಹೇಳಬಹುದು. ಆದರೆ ಕವಿಯನ್ನೂ ಅವನ ಕಾಲವನ್ನೂ ಗುರುತಿಸುವ ಸಲಕರಣೆ ಈ ಕವಿತೆಯಲ್ಲಿ ತೀರ ಕಡಮೆ. ಈ ಸಾಹಿತ್ಯವಾಹಿನಿ ಜನವಾಹಿನಿಯ ಜೊತೆಗೆ ಬೆಳೆದುಕೊಂಡು ಬಂದಿದೆ. ಇದಕ್ಕೆ ಎಲ್ಲಮಟ್ಟದ ಜನರೂ ತಮ್ಮ ಸೇವೆಯನ್ನು ಮಾಡಿದ್ದಾರೆ.

೨೮

ಜನತೆಯ ಕವಿಗಳಿಂದ ಮಾತ್ರಕ್ಕೆ ಈ ಸಾಹಿತ್ಯದ ಕರ್ತೃಗಳು ಅವಿದ್ಯಾವಂತರೆಂದು ನಾವು ಭಾವಿಸಬಾರದು. ಕವಿಯಾದವನು ಪಂಡಿತನಾಗಿದ್ದು ಮುಖ್ಯವಾಗಿ ಪಂಡಿತ ಮಂಡಲಿಗಾಗಿ ಕೃತಿಯನ್ನು ರಚಿಸಿದರೂ ಜನತೆಯ ಜೀವನದ ಸರಳತನಕ್ಕೆ ಮನಸೋತು ಜನತೆಗಾಗಿ ಕವಿತೆಯನ್ನು ಬರೆಯುವುದೂ ಉಂಟು.

ಸಾಮಾನ್ಯ ಜನಕ್ಕಾಗಿ ಹೀಗೆ ಕವಿತೆ ಮಾಡುವುದು ಕನ್ನಡದ ಸಂಪ್ರದಾಯದಲ್ಲಿ ಹೊಸದೇನೂ ಅಲ್ಲ. ಇಂಥ ಕೆಲಸ ಈಗ ಸಾವಿರ ವರುಷದಿಂದ ನಡೆದುಬಂದಿದೆ. ಪಂಡಿತರಿಗೆ ಅವರಿಗೆ ಮೆಚ್ಚುವ ವೃತ್ತದಲ್ಲಿ ಕವಿತೆಯನ್ನು ಬರೆಯಲು ಬೇಕಾದಷ್ಟು ಸಾಮರ್ಥ್ಯವಿದ್ದ ರತ್ನಾಕರಕವಿಯು ಭರತೇಶವೈಭವವನ್ನು ಸಾಂಗತ್ಯದಲ್ಲಿ ಬರೆದನು. ಹೆಂಗಸರು ಇದನ್ನು ಹಾಡಲಿ ಎನ್ನುವುದು ಅದರ ಮುಖ್ಯ ಉದ್ದೇಶ. ಹೆಂಗಸರು ಮನೆಕೆಲಸವನ್ನು ಮಾಡುತ್ತ ಹಾಡಿಕೊಳ್ಳಲೆಂದು ಜಗನ್ನಾಥ ದಾಸರು ತತ್ವವನ್ನು ತ್ರಿಪದಿಯಲ್ಲಿ ಬರೆದಿಟ್ಟರು. ಪಂಡಿತನಾದ ಕವಿ ಇಂಥ ಬರವಣಿಗೆಯಲ್ಲಿ ಜನತೆಯ ರೀತಿಯನ್ನು ಅನುಕರಿಸಿರುವುದೂ ಉಂಟು. ಹೀಗೆ ಮಾಡುವುದರಲ್ಲಿ ಸ್ವಲ್ಪ ಅಪರೂಪಣ ಕಾಣಬಹುದು. ಆದರೆ ಮೊತ್ತದಲ್ಲಿ ಕವಿ ಜನತಾವತ್ಸಲನಾದುದರಿಂದ ಕಾವ್ಯ ಸೊಗಸಾಗುತ್ತದೆ. ಇದಕ್ಕೆ ಒಂದು ಉದಾ ಹರಣೆ ಬೆಳ್ಳಾವೆ ಸೋಮಪ್ಪನ ಜಾತ್ರೆಯ ಲಾವಣಿ. ಇದು 'ವಿದ್ಯಾರ್ಥಿ ವೈಭವ'ದಲ್ಲಿ ಮೊದಲು ಪ್ರಕಟವಾಯಿತಂತೆ. 'ಪ್ರಬುದ್ಧ ಕರ್ಣಾಟಕ'ವು ಅದನ್ನು ಉದ್ಧರಿಸಿ ಪ್ರಕಟಿಸಿತು. ಅದರ ಮೊದಲ ಎಂಟು ಪಂಕ್ತಿ ಹೀಗೆ ಅಚ್ಚಾಗಿದೆ:

ಮುಕ್ಕಣ್ಣನೆಲ್ಲರೂ ಕೊಂಡಾಡಿರೋ | ಸರ
ಣಿಕ್ಕಿ ಸೋಮೇಶನ್ನ ಕೊಂಡಾಡಿರೋ || ಪ ||

ಶಿಕ್ಕಣ್ಣ ಶಿಂಗಣ್ಣ ಶೀರಣ್ಣ
ಲಕ್ಕಣ್ಣ ಲಿಂಗಣ್ಣ ಕಾಮಣ್ಣ ಕಾಳಣ್ಣ || ಅನು ||

ಸ್ತ್ರೀಖಾರ ಯಿಗ್ಣೀಶ ಶರಣು | ಯುಲ್ಲ
ಲೋಕರಕ್ಷಕ ದ್ಯಾವ ಸರಣು ||

ಸ್ರೀಕಂಟ ಪುತ್ರನೆ ಸರಣು ನಮ್ಮ
ಯಾಕಥಂತನೆ ಸರಣು ಸರಣು || ೧ ||

ಇದು ಜಾತ್ರೆಯಲ್ಲಿ ತಿರುಗುವ ಏಕತಾರಿನವನ ಬಾಯಲ್ಲಿ ಬಂದ ಮಾತನ್ನು ಬಂದಹಾಗೆ ಬರೆದಿಟ್ಟಿರುವ ರೀತಿ. ಮುಕ್ಕಣ್ಣಾ, ಕೊಂಡ್ಹಾಡಿ, ಶಿಕ್ಕಣ್ಣಾ, ಸ್ತ್ರೀಖಾರ, ಯಾಕಥಂತ, ಎನ್ನುವುದನ್ನೇ ಮೇಲೆ ಅಪರೂಪಣ ಎಂದು ಹೇಳಿರುವುದು. ಈ ಅತಿಯನ್ನು ಬಿಟ್ಟು ಹಾಡಿಗೆ ಸಹಜವಾದ ರೀತಿಯಲ್ಲಿ ಬರೆದರೆ, ಈ ಪದ್ಯ ಚೆನ್ನಾಗಿ ಕಲಿತವರ ಕವಿತೆ ಎನ್ನುವುದು ಸ್ಪಷ್ಟವಾಗುತ್ತದೆ.

ಮುಕ್ಕಣ್ಣನೆಲ್ಲಾರು ಕೊಂಡಾಡಿರೋ ಶರ
ಣಿಕ್ಕಿ ಸೋಮೇಶನ್ನ ಕೊಂಡಾಡಿರೋ ||
ಶಿಕ್ಕಣ್ಣ ಶಿಂಗಣ್ಣ ಶೀರಣ್ಣ
ಲಕ್ಕಣ್ಣ ಲಿಂಗಣ್ಣ ಕಾಮಣ್ಣ ಕಾಳಣ್ಣ ||

ಶ್ರೀಕರ ವಿಘ್ನೇಶ ಶರಣು ಎಲ್ಲ
ಲೋಕರಕ್ಷಕ ದೇವ ಶರಣು
ಶ್ರೀಕಂಠ ಪುತ್ರನೆ ಶರಣು ನಮ್ಮ
ಏಕದಂತನೆ ಶರಣು ಶರಣು || ೧ ||

ಬೆಳ್ಳಾವಿ ಸೋಮಪ್ಪನ ಜಾತ್ರೆ ಆಗ
ಬೆಳ್ಳಾನೆ ಬೆಳುದಿಂಗ್ಳ ರಾತ್ರೆ ನಮ
ಗೆಲ್ಲಾರ್ಗು ಪಾನಕದ ಪಾತ್ರೆ ಸೋಮಪ್ಗೆ
ಮಲ್ಲೀಗೆ ಹೂವು ಬಿಲ್ಪತ್ರೆ ||

ವೀಬೂತಿ ಅರಿಸಿನ ಇಕ್ಕಿ ಒಳ್ಳೆ
ಸೋಬಾನವಾಡ್ತಾಳೆ ಲಕ್ಕೀ
ಊಬತ್ತಿ ದೀಪಾವನಿಕ್ಕಿ ಆರ್ತೀಗೆ
ತಾ ಬೆಳೀ ಕಣಿಗ್ಲೂವ ಸೆಕ್ಕೀ ||

ಒಂಬಾಳೆ ಕಳಸಾವ ನೋಡಿ ಅಕ್ಕಿ
ತೊಂಬಿಟ್ಟ ಕೀರ್ತಿಯ ನೀಡೀ ಕವಡೆ
ಸಾಂಬ್ರಾಣಿ ಇಕ್ಕೀ ಶರಣ್ಮಾಡಿ ದೇವ
ರ್ನಂಬಿ ಪ್ರಸಾದವ ಬೇಡೀ ||

ಎಂಡ್ರು ಮಕ್ಳೆಲ್ಲಾರು ಉಂಡು ಶಾನೆ
ಚೆಂಡ್ಹೂವು ಜವನ ಮುಡ್ಕೊಂಡು
ಉಂಡೆ ಅಡಿಕೆಲೆ ಆಕ್ಕೊಂಡು ಕುರಿ
ಹಿಂಡ್ನ ತೇರ್ಸುತ್ತ ಬಿಟ್ಕೊಂಡು ||

ಇದನ್ನು ಬರೆದವರು ಪಾಂಡಿತ್ಯದ ಕವಿತ್ವವನ್ನು ಬಲ್ಲವರು ಎಂದು ಹೇಳುವುದಕ್ಕೆ ಎರಡು ಮೂರು ಕಾರಣ. ಮೊದಲನೆಯದು ಕರ್ತೃತ್ವವನ್ನು ಮರೆಸುವುದಕ್ಕಾಗಿ ಕೊಂಡ್ಹಾಡು, ಸ್ತ್ರೀಖಾರ ಎಂಬಲ್ಲಿ ಮಾಡಿರುವ ಗ್ರಾಮಪದಪ್ರಯೋಗದ ಅತಿ; ಎರಡನೆಯದು ತಪ್ಪದೆ ಬಂದಿರುವ ಎರಡನೆಯ ಅಕ್ಷರದ ಪ್ರಾಸ; ಆಮೇಲೆ

ಕುರುಬನು ನಿರ್ದೇಶಿಸಿದ್ದರೆ ಲಕ್ಕವ್ವ ಎಂದು ಹೇಳುತ್ತಿದ್ದ ಹೆಂಗಸು ಇಲ್ಲಿ ಪ್ರಾಸಕ್ಕಾಗಿ ಲಕ್ಕೀ ಆಗಿರುವುದು; ಕೊನೆಗೆ ಅಕ್ಷರದ ಪ್ರಾಸದ ಸಲುವಾಗಿ ಊಬತ್ತಿಯ ಜೊತೆಗೆ ಲಕ್ಕಿ ಆರ್ತೀಗೆ ತಾ ಬಿಳಿ ಕಣಿಗ್ಲೊವನ್ನು ಸೆಕ್ಕಿರುವುದು. ನಿಜವಾದ ಜನತೆಯ ಕವಿತೆ ವಿಷಯವೂ ನಿಯಮವೂ ಸಹಜವಾಗಿ ಹೊಂದದ ವೇಳೆ ವಿಷಯವನ್ನಿಟ್ಟುಕೊಳ್ಳುತ್ತದೆ, ನಿಯಮವನ್ನು ಬಿಟ್ಟು ಒಂದು ಹೆಜ್ಜೆ ಆಚೆ ನಡೆಯುತ್ತದೆ. ಪಾಂಡಿತ್ಯದ ಕವಿತೆ ನಿಯಮವನ್ನು ಬಿಡಲಾರದು; ಅದರ ಸಲುವಾಗಿ ವಿಷಯವನ್ನು ಒಂದು ಹೆಜ್ಜೆ ಇತ್ತ ಎಳೆಯುತ್ತದೆ. ಆದರೆ ಕರ್ತೃವು ಪಂಡಿತನಾದ ಕಾರಣದಿಂದ ಮುಖವಿಟ್ಟಿರುವ ಈ ಕೆಲವು ವಿವರದಿಂದ ಈ ಕವಿತೆಯ ಬೆಲೆ ಕಡಮೆಯಾಗುವುದಿಲ್ಲ. ಇದು ಒಂದು ಕಡೆಗೆ ಜನತೆಯ ಸಾಹಿತ್ಯ, ಒಂದು ಕಡೆಗೆ ಪಂಡಿತ ಸಾಹಿತ್ಯ; ತತ್ಪ್ರದೃಷ್ಟಿಯಿಂದ ಇವೆರಡರ ಅಂತರ ಎಷ್ಟು ಕಡಮೆಯೆಂದು ತೋರಿಸುತ್ತದೆ. ಕುರಿ ಸಾಕುವ ತನ್ನ ಸೋದರನನ್ನು ಹೀಗೆ ಚಿತ್ರಿಸಬಲ್ಲ ಕವಿ ಜನತಾವತ್ಸಲನು. ಬೆಳದಿಂಗಳ ರಾತ್ರಿಯಲ್ಲಿ ದೇವರ ತೇರಿನ ಬಳಿ ಸೋಮೇಶ್ವರನು ಭಕ್ತರಿಗಾಗಿ ಸೋಮಪ್ಪನಾಗಿರಲು ಲಕ್ಕವ್ವ ಹಾಡುವ ಸೋಬಾನವನ್ನು ಕೇಳುತ್ತ, ದೇವರ ಸೇವೆಯ ಆರ್ತಿ ಕೀರ್ತಿಗಳನ್ನು ನೋಡುತ್ತ, ಹೆಂಡತಿ ಮಕ್ಕಳೊಡನೆ ಊಟಮಾಡಿ, ಚೆಂಡುಮಲ್ಲಿಗೆ ದವನವನ್ನು ಮುಡಿದುಕೊಂಡು, ವರ್ಷಕ್ಕೊಮ್ಮೆ ಮಾತ್ರ ಅಗಿಯಬಹುದಾದ ಉಂಡೆ ಅಡಕೆಯನ್ನು ಬಾಯಲ್ಲಿ ಹಾಕಿಕೊಂಡು ಎಲೆಯನ್ನು ಮೆಲ್ಲುತ್ತ, ತನ್ನಂತೆಯೇ ಇದೂ ಒಂದು ಜೀವ ಎಂಬ ಮರುಕದಿಂದ ಪ್ರೀತಿಯಿಂದ ಕುರಿಯನ್ನೂ ತನ್ನ ಜೊತೆಯಲ್ಲಿ ತೇರು ನುತ್ತ ಬಿಟ್ಟುಕೊಂಡು ಸಂತುಷ್ಟನಾಗಿರುವ ಈ ಕುರುಬನು ಧನ್ಯನು. ಸರಳ ಚೇತನನಾದ ಅವನ ಈ ಸ್ಥಿತಿಯನ್ನು ನೋಡಿ ಸಂತೋಷಪಟ್ಟು ಹೀಗೆ ವರ್ಣಿಸುವ ಮಟ್ಟಿಗೆ ಅವನ ಸ್ಥಿತಿಯನ್ನು ತನ್ನದಾಗಿ ಮಾಡಿಕೊಂಡ ಕವಿಯಾದರೂ ಪುಣ್ಯವಂತನೇ.

೨೯

ಬಲ್ಲವರು ಬರೆದ ಇಂಥ ಕೃತಿಯಿಂದ ಜನತೆಯ ಸಾಹಿತ್ಯ ಯೋಗ್ಯತೆಯಲ್ಲಿ ಬೆಳೆಯಿತೆನ್ನುವುದರಲ್ಲಿ ಸಂದೇಹವಿಲ್ಲ. ಆದರೆ ಹಾಗೆಯೇ ಜನದ ಮಧ್ಯೆ ಕೆಲಸ ಮಾಡಿ ಜನಕ್ಕಾಗಿ ಬರೆಯುವುದರಲ್ಲಿ ಈ ಕವಿಗಳಿಗೂ ಶಕ್ತಿ ಬೆಳೆಯಿತೆಂದು ಹೇಳ

ಬೇಕು. ಒಳ್ಳೆಯ ಕವಿತೆಯನ್ನು ಬರೆಯುವುದು ಸಂಸ್ಕೃತ ಪದಗಳಿಂದಲೂ ದೇಶ್ಯ ಪದಗಳ ಶುದ್ಧರೂಪದಿಂದಲೂ ಮಾತ್ರ ಸಾಧ್ಯ ಎಂಬ ಭಾವ ಯಾರಿಗಾದರೂ ಇದ್ದರೆ ಜನತೆಯಲ್ಲಿ ಬಳಕೆಯಾಗಿರುವ ಸಾಹಿತ್ಯವನ್ನು ನೋಡಿದಾಗ ಅದು ಮಾಯವಾಗಬೇಕು. ಇಂಥ ತಿಳಿವು ಬಂದಮೇಲೆ ಕವಿ ಮಾಡುವ ಕೃತಿಯಲ್ಲಿ ಜನದ ಮಾತು ಅವರ ಬಾಯಲ್ಲಿರುವಂತೆ ಬರುವುದು ನಿಶ್ಚಯ. ಮಾತಿನ ಸೊಗಸೆಲ್ಲ ನುಡಿಯುವುದರ ಸೊಗಸು. ಜನದ ನಾಲಗೆಯಲ್ಲಿ ಯಾವ ಮಾತು ಹೇಗೆ ನುಡಿಯುತ್ತದೆ ಎನ್ನುವುದನ್ನು ಕಿವಿಗೊಟ್ಟು ಕೇಳಿದವನು ಅದರ ಸೊಗಸಿಗೆ ಮರುಳಾಗುವನು. ಜನದ ಬಾಯಲ್ಲಿ ಎಂದೂ ಬರದೆ ಕವಿತೆಯಲ್ಲಿ ಮಾತ್ರ ಕಾಣುವ ಪದದ ಜೋಡಣೆ ಅವನಿಗೆ ಈ ಸಜೀವವಾದ ಮಾತಿನ ಸಂಪ್ರದಾಯದಂತೆ ರುಚಿಸುವುದಿಲ್ಲ. 'ಪ್ರೋದ್ಯತ್ತರಂಗೋಚ್ಚರದಮರನದೀ ಶೀಕರೋದಾರತಾರಾ' ಎಂಬ ಮಾತು ಪಂಡಿತರದು. 'ಅಬ್ಬರಿಸಿ ಗಂಗೆ ಹರಿದಾಳ' ಎನ್ನುವುದು ಜನದ್ದು. ಬಲ್ಲವರಿಗೆ ಎರಡೂ ಚೆನ್ನವೇ. ಆದರೆ ಅನೇಕ ವೇಳೆ ಪಂಡಿತನ ಅರ್ಥ ಆ ಮಾತಿನಲ್ಲಿ ಹರಡಿ ಮುಳ್ಳಿನ ಮೇಲೆ ಹರವಿದ ಒಲ್ಲಿಯಂತೆ ಆಗುತ್ತದೆ. ಅದು ಹರಿಯದೆ ಇರಬೇಕಾದರೆ ಅದನ್ನು ಉಪಾಯ ವಾಗಿ ಬಿಡಿಸಿ ಎಳೆದುಕೊಳ್ಳಬೇಕು. ಜನತೆಯ ಕವಿತೆಯ ಅರ್ಥ ಮಾತು ಒಪ್ಪದೆ ಮಣ್ಣಿನಲ್ಲಿ ಬಿದ್ದ ಚಿನ್ನದ ತುಣುಕಿನಂತೆ ಆಗಬಹುದು. ವಿದ್ಯೆಯನ್ನು ಪಡೆದ ಕವಿ ಜನತೆಯ ಬಾಳಿಗೆ ಸಮೀಪದಲ್ಲಿರುತ್ತ ಬರೆದ ಕವಿತೆ ಎರಡು ದೃಷ್ಟಿಯಿಂದಲೂ ಚೆನ್ನಾಗುವುದು. ಜನತೆಯ ಸಾಹಿತ್ಯದ ಪರಿಚಯದಿಂದ ಪಂಡಿತನ ಕವಿತೆ ಭಾಷೆಯ ಸಹಜವಾದ ದಾರಿಗಳನ್ನು ಸೇರುವುದಾದರೂ ಅದರ ಕಾವ್ಯಯೋಗ್ಯತೆ ಕಡಮೆಯಾಗುವುದೆಂದು ತಿಳಿಯಕೂಡದು. ಏಕೆಂದರೆ, ಜನತೆಯ ಈ ಕವಿತೆ ದೊಡ್ಡ ಮಾತನ್ನು ಹಾಕುವುದಿಲ್ಲ ಹೊರತು ಪಾಂಡಿತ್ಯದ ಕವಿತೆಯು ಇನ್ನು ಯಾವ ಒಳ್ಳೆಯದೆಂಬ ಗುಣವನ್ನಾಗಲಿ ಸಾಧಿಸದೆ ಇಲ್ಲ. ಇದರ ಮಾತಿನಲ್ಲಿ ಔಚಿತ್ಯವಿದೆ, ಧ್ವನಿ ಇದೆ. ಇದರ ಉಕ್ತಿಯಲ್ಲಿ ಕೊಂಕು ಇದೆ, ಕುಸುರಿ ಇದೆ. ಇದರಲ್ಲಿ ಬಾಳಿನಿಂದ ತೆಗೆದುಕೊಂಡ ಉಪಮಾನ ಉಪಮೇಯವಿದೆ; ನುಡಿಯ ಇತರ ಅಲಂಕಾರವಿದೆ. ಇದರ ವಾಕ್ಯ ಸಮಯಕ್ಕೆ ತಕ್ಕ ಹಾಗೆ ಅರ್ಥವನ್ನು ಅನುಸರಿಸಿ ಗರಗಸದಂತೆ ಬಳುಕುತ್ತ ತನ್ನ ಕಾರ್ಯವನ್ನು ಸಾಧಿಸುತ್ತದೆ. ಇದರಲ್ಲಿ

ಬಿಗುವಿಲ್ಲ ಎಂದು ನಮ್ಮಲ್ಲಿ ಕೆಲವರು ಹೇಳಬಹುದು. ಈ ಕವಿತೆ ಸುಲಭವಾಗಿ ಅರ್ಥವಾಗುತ್ತದೆ ಹೊರತಾಗಿ ಸಡಿಲವೇನೂ ಅಲ್ಲ. ವ್ಯರ್ಥವಾದ ಮಾತೇ ಇಲ್ಲದ ಕವಿತೆ ಬಿಗುವಿಲ್ಲದೆ ಸಡಿಲ ಹೇಗಾದೀತು ? ಇನ್ನೂ ಸಡಿಲವೆನ್ನುವುದಾದರೆ ಛಂದಸ್ಸಿನ ನಿಯಮವನ್ನು ನಡೆಸುವುದಕ್ಕಾಗಿ ಅಲ್ಲಲ್ಲಿ ಒಂದೊಂದು ಮಾತ ನ್ನಾದರೂ ಅನಾವಶ್ಯಕವಾಗಿ ತರಬೇಕಾಗುವ ಪಾಂಡಿತ್ಯದ ಕೃತಿ ಸಡಿಲವಾಗು ವುದು ಸಹಜ. ಎಡೆಬಿಡದೆ ಪದಗಳನ್ನು ಹೆಣೆದು ಅರ್ಥಕ್ಕಾಗಿ ಅವನ್ನು ಬಿಡಿಸು ವುದು ಆವಶ್ಯಕವಾಗುವಂತೆ ರಚಿಸುವುದು ಬಿಗಿಯಾದ ರಚನೆಯಲ್ಲ. ಅದು ಬರಿಯ ಬಿಗುಮಾನ. ಮಾತೆಲ್ಲ ಗಟ್ಟಿಯಾಗಿರುವುದೇ ಒಳ್ಳೆಯ ಕಟ್ಟಡ, ಬಿಗಿಯಾದ ಕಟ್ಟಡ. ಜನತೆಯ ಕವಿತೆ ಚೆನ್ನಾದಾಗ ಈ ಬಿಗುವಿಗೆ ನಿದರ್ಶನವೆಂದು ಹೇಳಬೇಕು. ಮಿತ ವಾದ ಮಾತಿನಿಂದ ಅರ್ಥವನ್ನು ಸೂಚಿಸುವುದರಲ್ಲಿ ಇಂಥ ಕೃತಿ ಕಾವ್ಯಕ್ಕೆ ಆದರ್ಶ ವಾಗುತ್ತದೆ. ಇದರ ತ್ರಿಪದಿ ಒಂದೊಂದೂ ರಸ ಒಸರುವ ಕಾವ್ಯದ ಜೀವತ್ತುಂಡು. ವಿಸ್ತಾರವಾದ ಕವಿತೆ ಒಂದು ವಿಷಯಕ್ಕೆ ಕಾಲು ಕಣ್ಣು ಮೂಗನ್ನು ಬಿಡಿಸಿ ತೋರಿಸಬಲ್ಲದು ; ಈ ಕೃತಿಯಲ್ಲಿ ಅಷ್ಟಕ್ಕೆ ಅವಕಾಶವಿಲ್ಲ. ಈ ಕಾರಣದಿಂದ ಜನತೆಯ ಸಾಹಿತ್ಯದ ಒಂದು ತುಂಡು ಒಂದು ಜೀವಕಣದಂತೆ ಸ್ಫುರಿಸುತ್ತದೆ. ಅದರ ಚಟುವಟಿಕೆ ಒಂದು ಇರುವೆಯ ಚಟುವಟಿಕೆ. ಇರುವೆಯುಲ್ಲಾದರೂ ಅವ ಯವಕ್ಕೆ ಅವಕಾಶವಿದೆ, ಇದಕ್ಕೆ ಒಟ್ಟು ದೇಹವೇ ಎಲ್ಲ ಕರಣವೂ ಇದಕ್ಕೆ ಮೈಯೆಲ್ಲಾ ಕಣ್ಣು.

## ೩೦

ಹತ್ತು ವರ್ಷದಿಂದೀಚೆಗೆ ಜನತೆಯ ಸಾಹಿತ್ಯ ಬಹುಮಟ್ಟಿಗೆ ಪ್ರಸಿದ್ಧ ವಾಗಿದೆ. ಇನ್ನೂ ಪ್ರಕಟವಾಗಬೇಕಾದದ್ದು ತುಂಬ ಇರಬೇಕು. ಇದುವರೆಗೆ ಪ್ರಕಟವಾಗಿರುವ ಕೃತಿಗಳನ್ನಾದರೂ ಒಟ್ಟಿಗೆ ಸೇರಿಸಿ ಒಂದು ಸಂಗ್ರಹವನ್ನು ಮಾಡುವುದು ಒಡನೆಯೇ ಆಗಬೇಕಾದ ಕೆಲಸ. ಇದರಿಂದ ಕನ್ನಡದ ನುಡಿ ಜನದ ಬಾಳುವೆಯಲ್ಲಿ ಎಂಥ ಕೆಲಸಮಾಡಿದೆ ಎನ್ನುವುದೂ ನಮ್ಮ ಜನತೆಯ ಸಂಸ್ಕೃತಿ ಎಷ್ಟು ಶ್ರೇಷ್ಠವಾದದ್ದೆನ್ನುವುದೂ ತಿಳಿಯುವುದು. ತನ್ನ ಶಕ್ತಿಯನ್ನು ಕುರಿತು ಕನ್ನಡವು ನಾಚಿಕೊಳ್ಳಬೇಕಾಗಿಲ್ಲ ; ನಮ್ಮ ಸಂಸ್ಕೃತಿ ಕಿರಿದಲ್ಲ. ಇದರ

ಜೊತೆಗೆ ಈ ಕೃತಿ ಇನ್ನು ಮೇಲೆ ಬರೆಯುವ ಕವಿಗಳಿಗೆ ದಾರಿಯನ್ನು ತೋರಿಸುವುದು. ಧಾರವಾಡದ ಮಿತ್ರರ 'ಗರತಿಯ ಹಾಡ'ನ್ನು ಕುರಿತು ಹೇಳಿರುವ ಮಾತು ಜನಪದ ಸಾಹಿತ್ಯದ ಉತ್ತಮ ಕೃತಿಗೆಲ್ಲ ಅನ್ವಯಿಸುತ್ತದೆ. ಈ ಸಾಹಿತ್ಯ ನಮ್ಮ ಜನದ ಏಸಯದ ಚಿತ್ರ, ನಮ್ಮ ನುಡಿಯ ಗೆಲವಿನ ಕಳ, ನಮ್ಮ ಹೊಸ ಕವಿತೆಯ ಪೈರಿಗೆ ರಸ.

PRINTED AT THE WESLEY PRESS AND PUBLISHING HOUSE, MYSORE CITY

# ತಾಯ್ನುಡಿಯ ತಮ್ಮುಡಿ

(೧೯೪೧ – ಹೈದರಾಬಾದಿನಲ್ಲಿ ಸೇರಿದ ಹನ್ನೊಂದನೆಯ ಪ್ರಾಚ್ಯ ಸಮ್ಮೇಳನದ ಕನ್ನಡ ವಿಭಾಗದ ಅಧ್ಯಕ್ಷಸ್ಥಾನದಿಂದ ಮಾಡಿದ ಭಾಷಣ.)

## ವಂದನೆ

ಮಹನೀಯರೆ,

ಪ್ರಾಚ್ಯ ಸಮ್ಮೇಳನದ ಈ ಹನ್ನೊಂದನೆಯ ಅಧಿವೇಶನದ ಕನ್ನಡ ವಿಭಾಗಕ್ಕೆ ನನ್ನನ್ನು ಅಧ್ಯಕ್ಷನನ್ನಾಗಿ ಕರೆತಂದು ಗೌರವಿಸಿರುವ ಮಿತ್ರರಿಗೆ ಕೃತಜ್ಞತೆಯನ್ನು ಪ್ರಕಟಿಸತಕ್ಕದ್ದು ನನ್ನ ಸದ್ಯದ ಮೊದಲ ಕರ್ತವ್ಯ. ಈ ಗೌರವಕ್ಕೆ ನನ್ನ ಆಯ್ಕೆಯಾದ ವಿಷಯ ಈಗ ಎರಡು ವರ್ಷದ ಹಿಂದೆಯೇ ನನಗೆ ಸೂಚಿತವಾಯಿತು. ಆದರೆ ವ್ಯವಹಾರವ್ಯಾಪೃತರ ಬಾಳ್ವೆ ಒಂದು ತೆರದ ಅಹನ್ಯಹನಿ ಜೀವಿತ: ಎರಡು ವರ್ಷಗಳಷ್ಟು ಕಾಲವನ್ನು ಅದು ಒಂದೇ ಸಲಕ್ಕೆ ಗ್ರಹಿಸಲಾರದು. ಈ ಕಾರಣದಿಂದ ಆ ಸುದ್ದಿ ನನ್ನನ್ನು ಮುಟ್ಟಿದಾಗ, ಈ ಸಮಾರಂಭ ಎಷ್ಟೋ ಮುಂದಿನದು, ಅದನ್ನು ಕುರಿತ ಯೋಚನೆ ಆಗ ಅನಾವಶ್ಯಕ ಎಂದುಕೊಂಡೆನು. ಎರಡು ವರ್ಷದ ಮೇಲೆ ನಾನು ಒಂದು ಕಾರ್ಯಕ್ರಮದಲ್ಲಿ ಭಾಗವಹಿಸುವುದು ಸಾಧ್ಯವೆ ಅಲ್ಲವೆ ಎಂದು ಆಗಲೆ ಹೇಳುವುದು ಆಗಲಾರದೆಂದೂ ನನಗೆ ತೋರಿತು. ಅದಕ್ಕೆ ತಕ್ಕಂತೆ ನನಗೆ ಈ ಸಭೆಗೆ ಬರಲು ಆಗದೆ ಹೋಗಿದೆ. ಇತರ ಕರ್ತವ್ಯದಿಂದ ಇದೇ ಕಾಲದಲ್ಲಿ ನಾನು ಬೆಂಗಳೂರಲ್ಲಿ ನಿಲ್ಲಬೇಕಾಗಿರುವುದರಿಂದ ತಮ್ಮ ಸಭೆಯಲ್ಲಿ ಕಾಣಿಸಿಕೊಳ್ಳುವುದು ಸಾಧ್ಯವಾಗಿಲ್ಲ. ಹೀಗೆ ಇಲ್ಲಿ ತಮ್ಮೊಡನೆ ಕೂಡುವುದು ಆಗದ ಭಾಗದಲ್ಲಿ ನಾನು ತುಂಬ ವಿಷಾದಗೊಂಡಿದೇನೆ; ಮತ್ತು ನಾನು ಬಾರದಿರುವುದನ್ನು ತಾವು ಮನ್ನಿಸುವಿರೆಂದು ನಂಬಿದೇನೆ. ಈ ಅಸಂದರ್ಭದ ಕಾರಣದಿಂದ ನಾನು ತಮ್ಮೆದುರು ಓದುವುದಕ್ಕಾಗದೆ ಬರೆದು ಮಾತ್ರ ಕಳುಹಿಸಿರುವ ಈ ಭಾಷಣವನ್ನು ಈ ಅಧಿವೇಶನಕ್ಕೆ ನಾನು ಸಲ್ಲಿಸುವ ಅಲ್ಪ ಕಾಣಿಕೆ ಎಂದು ಒಪ್ಪಿಕೊಳ್ಳಬೇಕೆಂದೂ ಕೋರುತ್ತೇನೆ.

ಈ ಸಭೆಯ ಅಧ್ಯಕ್ಷಸ್ಥಾನ ನನಗೆ ಬಹು ಹೆಚ್ಚಿನ ಗೌರವವದ್ದೆಂದು

ನಾನು ಬಲ್ಲೆನು. ಆ ಸ್ಥಾನಕ್ಕೆ ಆವಶ್ಯಕವಾದ ಗುಣ ನನ್ನಲ್ಲಿ ಎಷ್ಟಾದರೂ ಉಂಟೆ ಎಂಬ ಶಂಕೆ ಈ ಭಾವವನ್ನು ಮತ್ತಷ್ಟು ಹೆಚ್ಚಿಸಿದೆ. ಪ್ರಾಚ್ಯ ಸಮ್ಮೇಳನದ ಕನ್ನಡ ಶಾಖೆಯ ಅಧ್ಯಕ್ಷನು ಕನ್ನಡದ ಸಂಶೋಧನ ಕ್ಷೇತ್ರದಲ್ಲಿ ಗಣ್ಯವಾದ ಕೆಲಸವನ್ನು ಮಾಡಿರಬೇಕೆಂದು ನಿರೀಕ್ಷಿಸುವುದು ಸಹಜ ಮತ್ತು ನ್ಯಾಯ. ನಾನು ಅಂಥ ಕಾರ್ಯ ಏನನ್ನೂ ಮಾಡಿಲ್ಲ. ನಮ್ಮ ನಾಡನ್ನೂ ಅದರ ಸಂಸ್ಕೃತಿಯನ್ನೂ ಪ್ರೀತಿಸುವ ಯಾರೊಬ್ಬರಂತೆ ನಾನು ಕೂಡ ಎಲ್ಲೋ ಒಮ್ಮೊಮ್ಮೆ ನಮ್ಮ ಜನರ ಸಂಸ್ಕೃತಿ, ಸಾಹಿತ್ಯ, ಇತಿಹಾಸಗಳ ಹರಹಿನಲ್ಲಿ ವಿಹಾರ ಮಾಡಿದೇನೆ. ನಾನು, ವಿದ್ಯಾರ್ಥಿಯಾಗಿದ್ದಂದು, ಭಾಷಾಶಾಸ್ತ್ರದ ಅಭ್ಯಾಸಮಾಡುತ್ತ ಆ ಶಾಸ್ತ್ರದಲ್ಲಿ ಪ್ರಯೋಗಿಸುವ ಅನ್ವೇಷಣ ಪದ್ಧತಿಗಳಿಂದ ಸಂತೋಷ ಪಡೆದದ್ದುಂಟು. ಆದರೆ ನನ್ನ ಜೀವನಪಥ ಈ ಶಾಸ್ತ್ರಗಳ ಪಾಠಪ್ರವಚನದ ಪ್ರಶಾಂತ ಉದ್ದೇಶಗಳಲ್ಲಿ ನಡೆಯಲಿಲ್ಲ; ಇಷ್ಟು ಮೋಹಕವಲ್ಲದ ಬೇರೆಯ ಕಡೆಗೆ ಹೊರಳಿತು. ಒಂದು ಕಾಲದ ನನ್ನ ಜೊತೆಗಾರರು ಈ ಪ್ರಶಾಂತ ವಾತಾವರಣದಲ್ಲಿ ಕೆಲಸ ಮಾಡುತ್ತ ಹೆಸರುಗಳಿಸುತ್ತ ಬೆಳೆಯುವುದನ್ನು ಆ ಬೇರೆಯ ಕ್ಷೇತ್ರದಿಂದ ನಾನು ಆಗಾಗ ಕೌತುಕದಿಂದ ನೋಡುತ್ತಿದ್ದೆನು. ನನ್ನ ಅಲ್ಪಸ್ವಲ್ಪ ವಿರಾಮವನ್ನು ನಾನು ಇದ್ದಲ್ಲೆ ನನ್ನಿಂದಾದ ಸಾಹಿತ್ಯಕೃತಿಗಳ ನಿರ್ಮಾಣದಲ್ಲಿ ವಿನಿಯೋಗಮಾಡಿದೆನು. ಈ ಸ್ಥಾನವನ್ನು ಸ್ವೀಕರಿಸಿ ಸಂಕೋಚಪಡದೆ ಇರುವ ಬಗ್ಗೆ ನಾನು ಆವಶ್ಯಕವೆಂದೆಣಿಸುವ ಸಂಶೋಧನ ಕಾರ್ಯವನ್ನು ನಡಸುವ ಪುಣ್ಯ ನನ್ನ ಪಾಲಿಗೆ ಬೀಳಲಿಲ್ಲ. ಒಂದರ್ಥದಲ್ಲಿ ಇದರಿಂದ ನನಗೆ ಸುಖವೂ ಉಂಟು ಎಂದು ಹೇಳಬಹುದು. ಪಂಡಿತರಾದ ಅಧ್ಯಕ್ಷರಿಗೆ ಇಲ್ಲಿಗೆ ಬಂದಿರುವ ಲೇಖನಗಳ ವಿಷಯದಲ್ಲಿ ಯಾವ ಭಾವ ಇರುತ್ತಿತ್ತೋ ನಾನು ಹೇಳಲಾರೆ. ಆದರೆ ನನ್ನ ಮನಸ್ಸಿಗೆ ಸಂಶೋಧನದ ಎಲ್ಲ ಬಗೆಯ ಕಾರ್ಯದಿಂದಲೂ ತೃಪ್ತಿಯುಂಟಾಗುತ್ತದೆ; ಆನಂದ ಉಂಟಾಗುತ್ತದೆ.

## ಹಿರಿಯರ ಆರಾಧನ

ಭಾರತೀಯ ದೇಶಭಾಷೆ ಒಂದನ್ನು ಕುರಿತ ಇಂಥ ಸಭೆ ಈ ವರ್ಷ ಮಹಾಕವಿ ರವೀಂದ್ರನಾಥ ಠಾಕೂರರ ನಿಧನದಿಂದ ನಮ್ಮ ಎಲ್ಲ ಭಾಷೆ

ಗಳಿಗೆ ಉಂಟಾಗಿರುವ ಅಪಾರ ನಷ್ಟಕ್ಕಾಗಿ ದುಃಖಿಸಬೇಕಾಗಿದೆ. ಠಾಕೂರ ಕವಿವರರು ದೇಶಭಾಷೆಗಳ ರಕ್ಷಾಕವಚವಾಗಿದ್ದರು. ಮಾತೃಭಾಷೆಯಿಂದ ಪಡೆದ ವಿದ್ಯೆ ಫಲಿಸುವಂತೆ ಬೇರೆ ಭಾಷೆಯಿಂದ ಪಡೆದದ್ದು ಫಲಿಸ ಲಾರದು ಎಂದು ಅವರು ಬಹು ಹಿಂದೆ ತಮ್ಮ 'ಜೀವನ ಸ್ಮೃತಿ'ಯಲ್ಲಿ ಘಂಟಾಘೋಷವಾಗಿ ಸಾರಿದರು. "ನಮ್ಮ ಸುತ್ತ ಇಂಗ್ಲಿಷ್ ಇಂಗ್ಲಿಷ್ ಎಂಬ ಕೂಗು ಹಬ್ಬಿರುವಲ್ಲಿ, ನಮ್ಮ ಮೂರನೆಯ ಅಣ್ಣ ನಮ್ಮನ್ನು ವಂಗ ಭಾಷೆಯ ಪಾಠದಲ್ಲಿ ಅಸ್ಖಲಿತವಾಗಿ ಮುಂದುವರಿಸಿದರು. ಸ್ವರ್ಗದಲ್ಲಿರುವ ಆತನಿಗೆ ನಾನು ಇಲ್ಲಿಂದ ಕೃತಜ್ಞತೆಯಿಂದ ಪ್ರಣಾಮ ಮಾಡುತ್ತೇನೆ" ಎಂದರು. ಬಹುವರ್ಷದ ನಂತರ ಕವಿಪುಂಗವರು ಕಲ್ಕತ್ತೆಯ ಯೂನಿ ವರ್ಸಿಟಿ ಕಮಿಷನ್ ಎಂದರೆ, ವಿಶ್ವವಿದ್ಯಾನಿಲಯದ ಕಾರ್ಯಕಲಾಪ ವನ್ನು ಕುರಿತು ವಿಚಾರಮಾಡಲು ನಿಯಮಿತವಾದ ಮಂಡಲಿಯ ಮುಂದೆ, ಜನತೆಯ ಮಾತೃಭಾಷೆಗಳು ವಿಶ್ವವಿದ್ಯಾನಿಲಯಗಳಲ್ಲಿ ಎಲ್ಲ ಪ್ರವಚನದ ಭಾಷೆಗಳಾಗಬೇಕೆಂದು ಸಲಹೆ ನೀಡಿದರು. ಈಗ ಕೆಲವು ವರ್ಷಗಳ ಹಿಂದೆ, ಕಲ್ಕತ್ತೆಯ ವಿಶ್ವವಿದ್ಯಾನಿಲಯದ ಪದವೀಪ್ರದಾನೋತ್ಸವದ ಸಂದರ್ಭದಲ್ಲಿ ಭಾಷಣಮಾಡಲು ಆಹ್ವಾನಿತರಾಗಿ ಇವರು ತಮ್ಮ ಭಾಷಣ ವನ್ನು ಬಂಗಾಳಿಯಲ್ಲಿ ಮಾಡಿದ ವಿಷಯ ತಮಗೆ ನೆನವೇ ಇರಬೇಕು. ಆಡಳಿತದವರಿಂದ ಕ್ರಮವಾಗಿ ಏರ್ಪಟ್ಟ ವಿಶ್ವವಿದ್ಯಾನಿಲಯಗಳಲ್ಲಿ ಇಂಥ ಒಂದು ಸಂದರ್ಭದಲ್ಲಿ ಭಾಷಣಕಾರರು ದೇಶಭಾಷೆಯಲ್ಲಿ ವಿದ್ಯಾರ್ಥಿ ಗಳನ್ನು ನುಡಿಸಿದುದು ಇದೇ ಮೊದಲ ಸಲ; ಇದುವರೆಗೆ ಇದು ಒಂದೇ ಸಲ. ಉಳಿದ ವಿಷಯಗಳಲ್ಲಿ ಹೇಗೋ ಹಾಗೆ ಈ ವಿಷಯದಲ್ಲಿಯೂ ರವೀಂದ್ರರು ನಮ್ಮ ದೇಶದ ನಾಯಕರಿಗೆ ಹೊಸದಾರಿಯನ್ನು ತೋರಿ ದರು. ಉಳಿದವರು ಆಮೇಲೂ ಈ ದಾರಿಯಲ್ಲಿ ನಡೆದಿಲ್ಲ: ಈ ಮಾತು ನಿಜ. ಆದರೂ ದಾರಿತೋರಿದ ಗೌರವ ಇದರಿಂದ ಕಡಮೆ ಆಗಲಾರದು. ರವೀಂದ್ರನಾಥರು ಸಂಶೋಧನ ಕಾರ್ಯಕ್ಕೆ ವಿಶೇಷ ಅವಕಾಶವನ್ನು ಕೊಡಹೋಗಲಿಲ್ಲ. ಆದರೂ ಈ ಬಗ್ಗೆ ಅವರು ವಿನಿಯೋಗಿಸಿದ ಸ್ವಲ್ಪ ಕಾಲದಲ್ಲಿ ತಕ್ಕಷ್ಟು ಉತ್ತಮ ವಿಷಯಗಳನ್ನು ತಿಳಿದು ಸಾರಿದರು. ಸಂಶೋಧನ ಕಾರ್ಯದಲ್ಲೇ ತೊಡಗಿದ ಮಹಾಮಹೋಪಾಧ್ಯಾಯ

ಹರಪ್ರಸಾದ ಶಾಸ್ತ್ರಿಗಳಂಥ ವಿದ್ವದ್ವರೇಣ್ಯರು ಕವಿವರರ ಈ ಭಾಗದ ಪ್ರಾವೀಣ್ಯವನ್ನು ಉತ್ಸಾಹದಿಂದ ವರ್ಣಿಸಿದ್ದುಂಟು. ಠಾಕೂರರ ಹೆಸರಿಂದ ದೇಶಭಾಷೆಗಳಿಗೆ ನೆರೆದ ಅಗ್ಗಳಿಕೆ ಇನ್ನುಮುಂದೆ ಮಿಗಿಲುಮಿಗಿಲಾಗಿ ಫಲಕಾರಿಯಾಗುವುದೆಂದೂ ನಮ್ಮ ಜನರು ದೇಶಭಾಷೆಗಳನ್ನು ಜನಸಾಮಾನ್ಯಕ್ಕೆ ತಿಳಿವನ್ನು ಕೊಡುವುದಕ್ಕೆ ಮಾತ್ರ ಸಾಧನಗಳೆಂದು ಎಣಿಸುವುದನ್ನು ಬಿಟ್ಟು, ಅವು ಜನಾಂಗಜೀವನದ ಸರ್ವತೋಮುಖವಾದ ವಿಕಾಸಕ್ಕೆ ಆಧಾರವೆಂಬ ತತ್ತ್ವವನ್ನು ಹೆಚ್ಚುಹೆಚ್ಚಾಗಿ ಗ್ರಹಿಸುವರೆಂದೂ ನಾವು ಕೋರಬೇಕಾಗಿದೆ.

## ಕೃತಜ್ಞತಾ ಸಮರ್ಪಣ

ಕರ್ಣಾಟಕ ದೇಶದ ಆಡಳಿತಗಳಿಂದಲೂ ಅಧಿಕಾರಸ್ಥಾನಗಳಿಂದಲೂ ವಿದ್ವತ್ತಿನ ನಮ್ಮ ಶಾಖೆಗೆ ದೊರೆತಿರುವ ಬೆಂಬಲವನ್ನು ಕುರಿತು ನಾವು ಕೃತಜ್ಞತೆಯನ್ನು ಸೂಚಿಸಬೇಕು. ಮೈಸೂರು ವಿದ್ಯಾಪೀಠದ ಆಶ್ರಯದಲ್ಲಿ ಈಗ ರಚನೆಯಲ್ಲಿರುವ ಇಂಗ್ಲಿಷ್–ಕನ್ನಡ ನಿಘಂಟು ಈ ಭಾಗದಲ್ಲಿ ಬಹು ಮುಖ್ಯವಾದದ್ದಾಗಿದೆ. ಈ ನಿಘಂಟಿನ ಮುಖ್ಯಸಂಪಾದಕರು ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರು. ಈ ಮಹನೀಯರ ಅಸೀಮ ಕಷ್ಟಸಹಿಷ್ಣುತೆ, ವಿವರವನ್ನು ಕುರಿತ ಅಜೇಯ ಅವಧಾನ, ಸರ್ವವಿದಿತವಾಗಿವೆ. ಇಂಥ ನೇತೃತ್ವದಲ್ಲಿ ಈ ಕೆಲಸ ಈಗಾಗಲೆ ಅರ್ಧಕ್ಕೆ ಮೇಲೆ ಸಾಗಿದೆ. ಮೈಸೂರಿನ ಪ್ರಾಚ್ಯ ಕೋಶಾಗಾರವು ತನ್ನ ಎಂದಿನ ಕಾರ್ಯವನ್ನು ನಡಸುತ್ತ ಬಂದಿದೆ. ಜನತೆಯ ಸಂಸ್ಕೃತಿಗಾಗಿ ಮೈಸೂರು ವಿದ್ಯಾಪೀಠ ಶ್ರೀಮಂತ ಪುಟ್ಟಣ್ಣಚೆಟ್ಟಿ ಅವರ ನಿಧಿಯ ಸಹಾಯದಿಂದ ಬಹುವಿಷಯವನ್ನು ಕುರಿತ ಹಲವಾರು ಸಣ್ಣ ಪುಸ್ತಕಗಳನ್ನು ಪ್ರಕಟಿಸುತ್ತಿದೆ. ಮದರಾಸು ವಿದ್ಯಾಪೀಠದ ಸಂಶೋಧನ ಶಾಖೆಯಲ್ಲಿ ಶ್ರೀಯುತರಾದ ಮರಿಯಪ್ಪಭಟ್ಟ ಮತ್ತು ಶೇಷಅಯ್ಯಂಗಾರ್ ಇವರು ಅಮೂಲ್ಯವಾದ ಕಾರ್ಯವನ್ನು ಮಾಡುತ್ತಿದಾರೆ. ಮುಂಬಯಿ ಸರ್ಕಾರದವರು ಕೆಲವು ವರ್ಷಗಳ ಹಿಂದೆ ಕನ್ನಡದ ಪ್ರಾಚೀನ ಸಂಶೋಧನಕ್ಕಾಗಿ ಸ್ವಲ್ಪ ವೆಚ್ಚವನ್ನು ಕೈಗೊಂಡರು. ಅದು ಇನ್ನೂ

ನಡೆಯುತ್ತಿದೆ. ನಮ್ಮ ಈ ಸಭೆ ನಡೆಯುವುದಕ್ಕೆ ಆಶ್ರಯವನ್ನು ನೀಡಿರುವ ಉಸ್ಮಾನಿಯಾ ವಿದ್ಯಾಪೀಠದಲ್ಲಿ ಕನ್ನಡ ವಿದ್ವತ್ತಿನ ಉತ್ತೇಜನಕ್ಕಾಗಿ ಕೆಲವು ವೇತನಗಳಿವೆ ಎಂದು ತಿಳಿಯುತ್ತದೆ. ಇವೆಲ್ಲ ನಮಗೆ ಸಂತೋಷ ವನ್ನೂ ಧೈರ್ಯವನ್ನೂ ಕೊಡುವ ಅಂಶಗಳು. ಈಗ ದೊರೆಯುತ್ತಿರುವ ಉತ್ತೇಜನದ ಬಗ್ಗೆ ವಂದನೆಯನ್ನು ಅರ್ಪಿಸುವಲ್ಲಿ, ಈ ಶಾಖೆಯ ಕಾರ್ಯ ಗಳು ಚೆನ್ನಾಗಿ ಮುಂದರಿಯಬೇಕಾದರೆ ಇನ್ನಷ್ಟು ಪೋಷಣ ಬೇಕೆಂದು ಬೇಡುವುದು ಅನುಚಿತವಾಗಲಾರದು. ನಡೆಯಬೇಕಾದ ಕೆಲಸ ಬಹಳ ವಿದೆ; ಅದನ್ನು ಕೈಕೊಳ್ಳಲು ಸಾಕಾದಷ್ಟು ಜನವಿಲ್ಲ. ಈಗ ನಮ್ಮ ಪ್ರೌಢವಿದ್ಯಾಮಂದಿರಗಳಲ್ಲಿ ಪ್ರವಚನ ಮಾಡುವ ಅಭ್ಯಾಸಕರು ಸಂಶೋ ಧನೆಯ ಕೆಲಸಕ್ಕೆ ಕಾಲವನ್ನು ಕೊಡುವುದೇ ಕಷ್ಟವಾಗಿದೆ. ಕೊಡುವವರು ಅತ್ಯಲ್ಪ ಕಾಲವನ್ನು ಕೊಡಬಹುದಾಗಿದೆ. ಈ ಶಾಲೆಗಳಲ್ಲಿರುವ ಕಿರಿಯ ಅಧ್ಯಾಪಕರು ಪಡೆಯುವ ಸಂಬಳ ಜೀವನಕ್ಕೇ ಸಾಲದು. ಇನ್ನಿವರು ವಿದ್ವತ್ತಿನ ಉಪಕರಣಗಳಲ್ಲಿ ಏನನ್ನು ಸಂಪಾದಿಸುವುದು ಸಾಧ್ಯ? ಸಂಶೋಧನೆಯಲ್ಲಿ, ವಿಚಾರದಲ್ಲಿ, ತೊಡಗಿರುವ ಪ್ರೌಢರಿಗೆ ವೇತನ ವೀಯಲು ದತ್ತಿಗಳು ಆವಶ್ಯಕ. ಪಾಠಕ್ಕೆ ಮಾತ್ರವಲ್ಲದೆ ವಿದ್ಯಾರ್ಜನೆಗೂ ಅವಕಾಶ ದೊರೆಯುವಂತೆ ನಮ್ಮ ಶಾಲೆಗಳಲ್ಲಿ ಅಧ್ಯಾಪಕರ ಸಂಖ್ಯೆ ಹೆಚ್ಚ ಬೇಕು. ಶಾಲೆಯಲ್ಲಿ ಅಲ್ಲದೆ ಬೇರೆ ಎಡೆಯಲ್ಲಿ ಪಾಠ ಹೇಳಿಯೋ ಬೇರೆ ಎಂತೋ ದುಡಿದೋ ಅನ್ನವನ್ನು ಸಂಪಾದಿಸುವ ತೊಂದರೆಯಿಂದ ತಪ್ಪಿಸು ವಂತೆ ಕಿರಿಯ ಆಧ್ಯಾಪಕರಿಗೆ ಇನ್ನೂ ಸ್ವಲ್ಪ ಹೆಚ್ಚಿನ ಸಂಬಳ ದೊರೆಯ ಬೇಕು. ಇದೆಲ್ಲದರಿಂದ ಆಗುವ ವೆಚ್ಚ ಬಹಳವೇನೂ ಅಲ್ಲ. ಆದರೆ ಅಷ್ಟನ್ನು ಹೊತ್ತರೆ ಕೆಲವೇ ವರ್ಷದಲ್ಲಿ ಸ್ಪಷ್ಟವಾದ ಫಲ ಕೈಸೇರುವುದು. ಇದನ್ನು ಲಂಬಿಸಿ ಹೇಳ ಕಾರಣವಿಲ್ಲ. ನಾವು ಯಾರು ಯಾರು ಎಲ್ಲಿ ಎಲ್ಲಿ ಇದ್ದರೂ ಈ ವಿಷಯವನ್ನು ಅಧಿಕಾರ ಸ್ಥಾನಗಳಲ್ಲಿ ಯಾವ ರೀತಿ ಅರಿಕೆ ಮಾಡಬಹುದೊ ಆ ರೀತಿಯಲ್ಲಿ ಅರಿಕೆಮಾಡಿ ಪರಿಸ್ಥಿತಿಯನ್ನು ಉತ್ತಮ ಗೊಳಿಸುವುದು ಒಳಿತೆಂದು ಸೂಚಿಸಲು ನಾನು ಬಯಸುತ್ತೇನೆ.

## ದಕ್ಷಿಣ ಭಾಷೆಗಳ ಪ್ರಮೆ

ನಮ್ಮ ಭಾಷೆಗೂ ಇತರ ದಾಕ್ಷಿಣಾತ್ಯ ಭಾಷೆಗಳಿಗೂ ಸಂಬಂಧಿಸಿ ಆದಷ್ಟು ಬೇಗನೆ ನಡೆಯಬೇಕಾದ ಮುಖ್ಯ ಕಾರ್ಯ ಒಂದು ಎಂದರೆ, ನಮ್ಮ ಭಾಷೆಗಳನ್ನು ಕುರಿತ ಪ್ರಮೆ. ಸರ್ ಜಾರ್ಜ್ ಗ್ರಿಯರ್‌ಸನ್ ಅವರ ಭಾರತೀಯ ಭಾಷಾಪ್ರಮೆ ದಾಕ್ಷಿಣಾತ್ಯ ಭಾಷೆಗಳನ್ನು ಬಿಟ್ಟು ಉಳಿದ ಭಾಷೆಗಳನ್ನು ಒಳಗೊಂಡಿತು. ಆದರೂ ಸರ್ ಜಾರ್ಜರು ತಾವು ನಡಸಿದ ಪ್ರಮೆಯಲ್ಲಿ ದಕ್ಷಿಣದೇಶದ ಐದು ಭಾಷೆಗಳನ್ನು ಕುರಿತೂ ಕೆಲ ಮಾತನ್ನು ಸೇರಿಸಿದರು. ಅವರು ಇಷ್ಟು ಮಾತನ್ನು ಸೇರಿಸಿದ್ದಕ್ಕಾದರೂ ನಾವು ಅವರನ್ನು ವಂದಿಸಬೇಕಾಗಿದೆ. ಆದರೆ ಇಷ್ಟನ್ನು ಸೇರಿಸುವುದ ರಲ್ಲಿ ಅವರು ಭಾಷೆಗಳನ್ನು ಪರೀಕ್ಷಿಸುವುದು ಅವಶ್ಯಕವಾಗಲಿಲ್ಲ. ಅವರು ಕೈಗೊಂಡ ಪರೀಕ್ಷಾಕ್ಷೇತ್ರದಲ್ಲಿ ಈ ಭಾಷೆಗಳು ಪ್ರಾಸಂಗಿಕವಾಗಿ ಎಷ್ಟು ಮಟ್ಟಿಗೆ ಬಂದವೊ ಅಷ್ಟುಮಟ್ಟಿಗೆ ಅವರು ಅವನ್ನು ಗಮನಿಸಿದರು. ಹೀಗೆ ಮಾಡುವುದರಲ್ಲಿ ಭಾಷೆಗಳನ್ನು ಕುರಿತು ಕೆಲವು ನ್ಯೂನತೆ ಒದಗಿದವು. ಅವರು ಪರಿಶೀಲಿಸಿದ ತಮಿಳು ಪೂನಾ ನಗರದಲ್ಲಿ ದೊರೆತ ತಮಿಳು. ಅವರು ನೋಡಿದ ಕನ್ನಡ ಮುಖ್ಯವಾಗಿ ಬೆಳಗಾಂವಿಯ ಕನ್ನಡ; ಕೆಲ ಮಟ್ಟಿಗೆ ಬಿಜಾಪುರದ್ದು. ಈ ಭಾಷೆಗಳಿಂದ ಸಮಾನಾರ್ಥಪದಗಳನ್ನು ತೆಗೆಯುವಲ್ಲಿ ಆ ಭಾಷೆಗಳನ್ನರಿಯದ ಇವರಿಗೆ ಅಚ್ಚತಮಿಳಿನ ಅಚ್ಚ ಕನ್ನಡದ ಪದಗಳು ದೊರೆಯುವುದು ಕಷ್ಟವಾದುದರಲ್ಲಿ ಆಶ್ಚರ್ಯವೇನು? ಗ್ರಿಯರ್‌ಸನ್‌ರವರ ಪದಗಳ ಪಟ್ಟಿಯನ್ನು ತೀರ ಮೇಲಿಮೇಲೆ ನೋಡಿ ದರೂ ಸಾಕು, ಅಲ್ಲಿ ಕೊಟ್ಟಿರುವ ಕನ್ನಡ ಪದಗಳಲ್ಲಿ ಹಲವಕ್ಕೆ ಪ್ರತಿಯಾಗಿ ಬೇರೆ ಪದಗಳು ಇರಬೇಕಾಗಿತ್ತೆನ್ನುವುದು ಸ್ಪಷ್ಟವಾಗುತ್ತದೆ. ಇಂಗ್ಲಿಷಿನ ಮ್ಯಾನ್ (man) ಎನ್ನುವ ಪದಕ್ಕೆ ಈ ಪಟ್ಟಿಯಲ್ಲಿ ಒಂದು ಭಾಷೆಯ ಮಾತು ಆಳ್ ಎಂದೂ ಇನ್ನೊಂದು ಭಾಷೆಯದು ಮನುಷ್ಯ ಎಂದೂ ಇವೆ. ಎರಡು ಭಾಷೆಯಲ್ಲೂ ಆಳು ಎಂಬ ಮಾತು ವಾಡಿಕೆಯಲ್ಲಿದೆ. ಎರಡರಲ್ಲೂ ಆ ಮಾತಿಗೆ ಅದೇ ಅರ್ಥವಿದೆ. ಹೀಗಿದ್ದರೂ ಎರಡು ಭಾಷೆಗೆ ಎರಡು ಬೇರೆ ಮಾತನ್ನು ಕೊಡುವುದರಿಂದ ಅವುಗಳ ಸಾಮೀಪ್ಯದ ವಿಷಯದಲ್ಲಿ ಶಂಕೆ ಉದಿಸುತ್ತದೆ. ಈ ಬಗ್ಗೆ ನಾವು ಸರ್ ಜಾರ್ಜರನ್ನು ದೂರತಕ್ಕ

ದ್ದಲ್ಲ. ಅವರು ಕೈಕೊಂಡ ಕೆಲಸ ಮುಖ್ಯವಾಗಿ ಬೇರೆಯದಾಗಿತ್ತು. ದಾಕ್ಷಿಣಾತ್ಯ ಭಾಷೆಗಳನ್ನು ಅವರು ಇದಕ್ಕೂ ಹೆಚ್ಚಾಗಿ ಪರಿಶೀಲಿಸುವುದು ಅವರ ಕಾರ್ಯಕ್ಷೇತ್ರದಲ್ಲಿ ಸೇರಿರಲಿಲ್ಲ. ದಾಕ್ಷಿಣಾತ್ಯ ಭಾಷೆಗಳ ಪ್ರಮೆ ಒಂದನ್ನು ಆಡಳಿತಕಾರರು ಆಗಲೋ ಅದಾದ ಅತ್ಯಲ್ಪ ಕಾಲದಲ್ಲೋ ನಡಸಿಕೊಡಬೇಕಾಗಿತ್ತು. ಏಕೆ ಅವರು ಇದನ್ನು ಮಾಡಲಿಲ್ಲವೊ ನಮಗೆ ತಿಳಿಯದು. ಅದು ಹೇಗಾದರೂ, ಈಗಲಾದರೂ ಅದರ ಮಾತು ಕೇಳಿ ಬರುತ್ತಿಲ್ಲ. ಭಾಷಾಶಾಸ್ತ್ರದ ವಿದ್ವಾಂಸರು ಈ ಕೊರತೆಯನ್ನು ಬಹು ದುಃಖದಿಂದ ಅನುಭವಿಸಬೇಕಾಗಿದೆ. ಸರ್ ಜಾರ್ಜ್ ಗ್ರಿಯರ್‌ಸನ್‌ರ ಪ್ರಮೆಯಿಂದ ಹೊರಗೆ ನಿಂತ ಭಾರತೀಯ ದೇಶಭಾಷೆಗಳ ಪೂರಕಪ್ರಮೆ ಯೊಂದನ್ನು ಈ ಭಾಷೆಗಳಿಗೆ ಸಂಬಂಧಪಟ್ಟ ಸರಕಾರಗಳು ಸಹಮಂತ್ರ ದಿಂದ ಬೇಗನೆ ಕೈಕೊಂಡರೆ ಚೆನ್ನಾದೀತೆಂದು ನಾವು ಪ್ರಾರ್ಥಿಸಬೇಕಾ ಗಿದೆ. ನಮ್ಮ ಈ ಅಧಿವೇಶನಕ್ಕೆ ಆಶ್ರಯ ನೀಡಿರುವ ಘನತೆವೆತ್ತ ನೈಜಾಂ ಮಹಾಪ್ರಭುಗಳ ಆಡಳಿತವೂ ಈ ಕೊರತೆಯನ್ನು ತುಂಬುವ ಬಗ್ಗೆ ಮನಸ್ಸು ಮಾಡೀತೆಂದು ನಾವು ನಿರೀಕ್ಷಿಸಬಹುದು.

## ಇತರ ಸಾಧನ ಸಾಮಗ್ರಿ

ದಾಕ್ಷಿಣಾತ್ಯ ಭಾಷೆಗಳನ್ನು ಅಭ್ಯಾಸಮಾಡುವ ವಿದ್ಯಾರ್ಥಿ ಈ ರೀತಿಯ ಹಲವಾರು ಕೊರತೆಗಳಿಂದ ತಡವರಿಸಬೇಕಾಗಿದೆ. ಮೊದಲೆತ್ತಿ ಕೊಳ್ಳುತ ಅವನಿಗಿರುವ ಕಷ್ಟವೆಂದರೆ, ಇವನ್ನು ಕುರಿತ ಪ್ರೌಢಗ್ರಂಥಗಳು ಕೈಗೆ ಸಿಲುಕದೆ ಇರುವುದು. ಈ ಭಾಗದಲ್ಲಿ ಅವನು ಮೊದಲು ನೋಡ ಬೇಕಾದ ಗ್ರಂಥ ಕಾಲ್ಡ್‌ವೆಲ್ ಮಹನೀಯರ ದ್ರಾವಿಡ ಭಾಷೆಗಳ ತುಲಿತ ವ್ಯಾಕರಣ. ಎರಡನೆಯ ಪುಸ್ತಕವೆಂದರೆ ಗ್ರಿಯರ್‌ಸನ್‌ರವರ ಪ್ರಮೆಯ ವರದಿಯಲ್ಲಿ ಈ ಭಾಷೆಗಳನ್ನು ಕುರಿತ ನಾಲ್ಕು ಮಾತಿರುವ ಒಂದು ಸಂಪುಟ. ಇದಾದ ಮೇಲೆ ಪ್ರೌಢತರಗತಿಯ ವಿದ್ಯಾರ್ಥಿಗಳಿಗಾಗಿ ಮೈಸೂರು ವಿದ್ಯಾಪೀಠದಿಂದ ಪ್ರಕಟವಾಗಿರುವ ಕೈಪಿಡಿ ಒಂದು; ಮತ್ತು ಮಹಾಮಹೋಪಾಧ್ಯಾಯ ರಾವ್ ಬಹದ್ದೂರ್ ನರಸಿಂಹಾಚಾರ್ಯರು ಮೈಸೂರು ಮತ್ತು ಮದರಾಸಿನ ವಿದ್ಯಾಪೀಠಗಳಲ್ಲಿ ನಡಸಿದ ಪ್ರವಚನ

ಗ್ರಂಥ; ಡಾ॥ ರಾಮಕೃಷ್ಣಯ್ಯನವರಿಂದ ಒಂದು ಗ್ರಂಥ; ಡಾ॥ ನಾರಾಯಣರಾಯರಿಂದ ಇನ್ನೊಂದು. ಪ್ರಾಯಶಃ ಇಷ್ಟೆ ನಮಗೆ ಗ್ರಂಥ ರೂಪವಾಗಿ ದೊರೆಯುವ ಸಾಮಗ್ರಿ. ಪ್ರೌಢ ವಿದ್ಯಾಶಾಲೆಗಳಲ್ಲಿ ವಿದ್ಯಾರ್ಥಿ ಗಳಿಗೆ ಇತರ ಲೇಖನಗಳನ್ನು ಓದಿ ಎಂದು ಹೇಳುವುದುಂಟು. ಆದರೆ ಅಂಥ ಲೇಖನಗಳು ಆಯಾ ಶಾಲೆಯ ಪುಸ್ತಕ ಭಂಡಾರದಲ್ಲಿ ಕೂಡ ದೊರೆಯುವುವೆಂಬ ಧೈರ್ಯ ಇಲ್ಲ. ನನಗೆ ಈ ವಿಚಾರದಲ್ಲಿ ಒಂದು ಯೋಚನೆ ತೋರಿದೆ. ಇಂಥ ಎಲ್ಲ ಲೇಖನಗಳ ಪಟ್ಟಿ ಒಂದನ್ನು ಮಾಡಿ ಅದನ್ನು ಪ್ರಾಜ್ಞರಲ್ಲಿ ಸುತ್ತಾಡಿಸಿ ಸಾಧ್ಯವಾದಷ್ಟು ಸಮಗ್ರವಾಗಿ ಮಾಡಿ ಅಚ್ಚುಹಾಕಿದರೆ ನಮ್ಮ ಶಾಖೆಯ ಅಭ್ಯಾಸಕರಿಗೆಲ್ಲ ಬಹಳ ಸಹಾಯ ವಾದೀತು. ಇದರ ಮುಂದಿನ ಮಾತೂ ಒಂದುಂಟು; ಅದು ಸಾಧ್ಯ ಅಹುದೊ ಅಲ್ಲವೊ ನಾನು ಕಾಣೆ. ಇಂಥ ಲೇಖನಗಳನ್ನೆಲ್ಲ ಒಟ್ಟು ಗೂಡಿಸಿ ಒಂದು ಗ್ರಂಥಮಾಲೆಯಲ್ಲಿ ನಾಲ್ಕೊ ಆರೊ ಸಂಪುಟವಾಗಿ ಪ್ರಕಟ ಮಾಡಿ, ಎಲ್ಲ ಪ್ರೌಢಶಾಲೆಗಳಲ್ಲಿ, ಪ್ರಮುಖ ಪುಸ್ತಕ ಭಾಂಡಾರ ಗಳಲ್ಲಿ, ಇರಿಸಿದರೆ ಮತ್ತಷ್ಟು ಸೌಕರ್ಯವಾದೀತು. ಹೀಗೆ ಮಾಡಿದಾಗ್ಗೆ ನಮ್ಮ ಶಾಖೆಯಲ್ಲಿ ವಿದ್ಯಾರ್ಜನೆ ಎನ್ನುವುದು ಸುಸೂತ್ರವಾಗುತ್ತದೆ. ಆಯಾಸಪಡದೆಯೇ ಅಶನ ದೊರೆಯಬೇಕೆಂಬಂತೆ ಶ್ರಮವಿಲ್ಲದೆ ವಿದ್ವತ್ತನ್ನು ಗಳಿಸುವ ಒಂದು ಹವಣಿಕೆ ಅಲ್ಲ ಇದು. ಸದ್ಯದಲ್ಲಿ ಅಭ್ಯಾಸಿಯ ಕಾಲದ ಅನೇಕ ಅಂಶ ಈ ಗ್ರಂಥ ಎಲ್ಲಿದೆ, ಆ ಲೇಖನ ಎಲ್ಲಿದೆ, ಎಂದು ಹುಡುಕಾಡು ವುದರಲ್ಲಿ ವ್ಯಯವಾಗುತ್ತಿದೆ. ಅಭ್ಯಾಸಿ ಶ್ರಮ ತೆಗೆದುಕೊಳ್ಳಬಲ್ಲನೆ, ಉದ್ಯಮ ವಂತನೆ ಎಂದು ಪರೀಕ್ಷಿಸುವುದಕ್ಕೆ ಇದು ಸಾಧನ ಅಹುದು. ಇಷ್ಟನ್ನೂ ಮಾಡಿ ಅವನು ಒಂದು ಅನ್ವೇಷಣವನ್ನು ಮುಗಿಸಿದರೆ ಆ ಬಗ್ಗೆ ಅವನನ್ನು ಹೆಚ್ಚುಶ್ಲಾಘಿಸಬೇಕೆನ್ನುವುದೂ ನಿಜ. ಆದರೆ ವಿದ್ವತ್ತು ಇಷ್ಟರಿಂದ ಹಿರಿದಾಗುವುದಿಲ್ಲ. / ಬರೆಯುವ ಮಸಿ ದೂರವಾಗಿದ್ದು ಲೇಖನಿ ಸರಿಯಾಗಿ ಲ್ಲದೆ ಕಾವ್ಯವೊಂದನ್ನು ಬರೆದರೆ ಕೈತೊಟ್ಟ ಹೆಚ್ಚಿನ ಕಷ್ಟದಿಂದ ಕವಿತೆಗೆ ಸೊಗಸು ಏರುವುದಿಲ್ಲ. / ಅನ್ವೇಷಣ ಒಂದಕ್ಕಾಗಿ ಹತ್ತಾರು ಕಡೆಗೆ ಹೋಗ ಬೇಕಾದ ಮಾತ್ರಕ್ಕೆ ಅದರಿಂದ ಸಾಧಿಸಿದ ತತ್ತ್ವದ ಬೆಲೆ ಹೆಚ್ಚುವುದಿಲ್ಲ. ಪೂರ್ವಲೇಖನಗಳನ್ನೂ ಪೂರ್ವಗ್ರಂಥಗಳನ್ನೂ ಸುಲಭವಾಗಿ ಒದಗಿಸಿ

ಕೊಡುವ ಪುಸ್ತಕ ಭಾಂಡಾರಗಳಿಂದ ಈಗ ಹುಡುಕಾಟದಲ್ಲಿ ವ್ಯಯವಾಗುತ್ತಿರುವ ಸಾಮರ್ಥ್ಯ ಉಳಿತಾಯವಾಗುತ್ತದೆ. ಆದರಿಂದ ಅನ್ವೇಷಣ ಮತ್ತಷ್ಟು ಮುಂದುವರಿಯುವುದು ಸಾಧ್ಯ ಆಗುತ್ತದೆ.

## ಪ್ರಶಾಂತ ವಾತಾವರಣ

ಅನ್ವೇಷಣ ಪರಿಶೀಲನಗಳ ಕ್ಷೇತ್ರವನ್ನು ನಾನು ಈ ಮೊದಲು ಪ್ರಶಾಂತ ಉದ್ದೇಶಗಳಿಂದು ವರ್ಣಿಸಿದೇನೆ. ಈ ಉದ್ದೇಶಗಳನ್ನು ಪ್ರಶಾಂತವಾಗಿ ಇರಿಸುವ ಭಾರ ನಮ್ಮದು ಎಂಬುದನ್ನು ನಾವು ಮರೆಯಲಾಗದು. ಬಹುಮಟ್ಟಿಗೆ ನಾವು ಯಾರೂ ಈ ತತ್ತ್ವವನ್ನು ಮರೆಯುವುದಿಲ್ಲ, ನಿಜ. ಆದರೂ ಒಮ್ಮೊಮ್ಮೆ ಮರೆಯುವುದೂ ಉಂಟು. ಇದಕ್ಕೆ ಒಂದು ಉದಾಹರಣೆ ಬೇಕೆಂದರೆ ಈಗ ಕೆಲವು ತಿಂಗಳ ಹಿಂದೆ 'ಕರ್ನಾಟಕ – ಕರ್ಣಾಟಕ' ರೂಪಗಳ ಸಾಧುತ್ವವನ್ನು ಕುರಿತು ನಡೆದ ಚರ್ಚೆಯನ್ನು ನಿರ್ದೇಶಿಸಬಹುದು. ಈ ಚರ್ಚೆಯಲ್ಲಿ ನಮ್ಮ ಗೆಳೆಯರೂ ಹಿರಿಯರೂ ಕೆಲವು ವೇಳೆ ತೋರಿದ ಉದ್ರಿಕ್ತಭಾವ ಅದನ್ನು ಒಂದು ಯುದ್ಧದ ಮಟ್ಟಕ್ಕೆ ಒಯ್ದುಬಿಟ್ಟಿತು. ನಮ್ಮಲ್ಲಿ ಬಹುಮಂದಿಗೆ ಈ ಪ್ರಶ್ನೆ ಅಷ್ಟೇನು ಮುಖ್ಯವಾದದ್ದೆಂದು ತೋರಲಿಲ್ಲ. ಚರ್ಚೆಮಾಡುವುದೆ ಆದರೆ ಅದನ್ನು ಸಮಾಧಾನದಿಂದ ನಡಸುವುದು ಸಾಧ್ಯವೆಂದು ತೋರುತ್ತಿತ್ತು. ನನ್ನ ಮಾತನ್ನು ಹೇಳುವುದಾದರೆ ನಾನು ನಿಜವಾಗಿ ಒಂದೇ ವಾಕ್ಯದಲ್ಲಿ ಈ ಎರಡೂ ರೂಪಗಳನ್ನು ಪ್ರಯೋಗಿಸುವುದಕ್ಕೆ ಸಿದ್ಧನಾಗಿದೇನೆ. ನನಗೆ ಎರಡು ರೂಪವೂ ಅಂಗೀಕಾರಾರ್ಹ. ಎಂದರೆ ಈ ರೂಪಗಳ ಸಾಧುತ್ವವನ್ನು ಶಾಸ್ತ್ರದೃಷ್ಟಿಯಿಂದ ಚರ್ಚಿಸುವ ಭಾಗದಲ್ಲಿ ನನಗೆ ಆಸಕ್ತಿ ಇಲ್ಲವೆಂದಲ್ಲ. ಆ ಚರ್ಚೆಯನ್ನು ಯಥೇಚ್ಛವಾಗಿ ಮಾಡಬಹುದು; ಅಗತ್ಯವಾಗಿ ಮಾಡಬೇಕು. ಕರ್ಣಾಟಕ ಎಂಬ ಸಂಸ್ಕೃತ ರೂಪ ಹೇಗೆ ನಿಷ್ಪನ್ನವಾಯಿತು ಅಥವಾ ಸೃಷ್ಟಿಯಾಯಿತು? ಅದೇನು ಮೂಲ ಸಂಸ್ಕೃತದ ಒಂದು ಮಾತೆ ಅಥವಾ ಸಂಸ್ಕೃತದ ಜನ ಅದನ್ನು ಉಪಯೋಗಿಸುವುದಕ್ಕೆ ಮೊದಲು ಕನ್ನಡದಲ್ಲಿ ಇದ್ದ ಒಂದು ಮಾತಿನ ಸಂಸ್ಕೃತ ರೂಪವೆ? ಈ ಎರಡನೆಯ ಪಕ್ಷ ವಾಸ್ತವವಾದರೆ ಈ ಸಂಸ್ಕೃತ ರೂಪಕ್ಕೆ ಮೂಲವಾಗಿ

ಕನ್ನಡದಲ್ಲಿ ಇದ್ದ ಮಾತು ಯಾವುದು ? ಈ ಪ್ರಶ್ನೆಗಳನ್ನು ನಾವು ತೆಗೆದು ಕೊಳ್ಳಬೇಕು. ಇವಕ್ಕೆ ಉತ್ತರವನ್ನು ಸಾಧ್ಯವಾದಷ್ಟು ನಿಷ್ಕರ್ಷಿಸಿ ತಿಳಿಯಬೇಕು. ಶಾಸ್ತ್ರದ ದೃಷ್ಟಿಯಿಂದ ಮಾಡಿದರೆ ಇದು ನಿಜವಾಗಿ ನಮ್ಮ ಕೆಲಸ. ಹಾಗಲ್ಲದೆ ಈ ಪ್ರಶ್ನೆಗಳಿಗೆ ಕೊಡುವ ಉತ್ತರದಿಂದ ಕನ್ನಡದ ಅಥವಾ ಸಂಸ್ಕೃತದ ಹೆಗ್ಗಳಿಕೆಯನ್ನು ಸಾಧಿಸುವೆವೆಂದು ಹೊರಟರೆ ದಾರಿ ತಪ್ಪಿದಂತೆ ಆಗುವುದು ಖಂಡಿತ. ಮೊದಲಲ್ಲಿ ಇದ್ದ ಒಂದು ಕನ್ನಡದ ಮಾತಿಗೆ ಸಂಸ್ಕೃತ ಈ ಪ್ರತಿರೂಪವನ್ನು ಒದಗಿಸಿತು ಎಂದು ನಿರ್ಧರಿಸಿ ಈ ಶಬ್ದದಲ್ಲಿ 'ನ' ಇರಬೇಕು 'ಣ' ಕೂಡದು ಎಂದು ಸಿದ್ಧಾಂತ ಮಾಡಿದರೆ ಇದರಿಂದ ಸಂಸ್ಕೃತಕ್ಕೆ ಆದ ನಷ್ಟವೇನು ? ಕನ್ನಡಕ್ಕೆ ಆದ ಗಳಿಕೆ ಏನು ? ಅಥವಾ ಕನ್ನಡದ ಮೂಲಶಬ್ದದಲ್ಲಿ 'ನ' ಇದ್ದರೂ ಸಂಸ್ಕೃತ ಆರಂಭದಿಂದ ಇಂದಿನವರೆಗೂ 'ಣ' ಕಾರವನ್ನು ಉಪಯೋಗಿಸಿರುವುದರಿಂದ ಇನ್ನುಮೇಲೆ 'ಣ' ಕಾರವೇ ಇರಲಿ, 'ನ' ಅಕ್ಷರಕ್ಕೆ ಹಿಂದಿರುಗುವುದು ಬೇಡ, ಎಂದೇ ಹೇಳಿದರೆ ಕೆಟ್ಟ ದ್ದೇನು ? ಇದರಿಂದ ಕನ್ನಡದ ಪ್ರತಿಷ್ಠೆ ಕಡಮೆಯಾಯಿತೆ ? ಸಂಸ್ಕೃತ ದೇಶಭಾಷೆಗಳಿಂದ ತಿದ್ದುಪಾಟಾದದ್ದು ಉಂಟು ಎಂಬ ಮಾತನ್ನು ಭಾಷಾಶಾಸ್ತ್ರಪ್ರವೀಣರು ಈಗಾಗಲೆ ಗುರುತಿಸಿದ್ದಾರೆ: ದೇಶಭಾಷೆಗಳು ಸಂಸ್ಕೃತದ ಪ್ರಭಾವಕ್ಕೆ ಒಳಪಟ್ಟವೆಂಬ ಮಾತು ನಮಗೆಲ್ಲ ಗೋಚರ ವಾದದ್ದು. ಇಷ್ಟುಕಾಲ ಜೊತೆಯಾಗಿ ಬಾಳಿರುವ ಈ ಭಾಷೆಗಳ ಮಧ್ಯೆ ಪ್ರತಿಷ್ಠೆಯ ವಾದವನ್ನು ಹೂಡುವುದಕ್ಕೆ ಇದು ವೇಳೆಯಲ್ಲ. ಹಿಂದೆ ಎಂದಾದರೂ ನಮ್ಮ ಜನ ಇಷ್ಟಪಟ್ಟಿದ್ದರೆ ಅವರು ಸಂಸ್ಕೃತ ಭಾಷೆಯನ್ನು ಒಂದು ಹೊರಗಿನಭಾಷೆ ಎಂಬಂತೆ ಕಂಡು ನಮ್ಮ ಭಾಷೆಯನ್ನು ಗಾದಿ ಯಿಂದ ದೂಡತೊಡಗಿರುವ ಪ್ರತಿಸ್ಪರ್ಧಿ ಎಂದು ಅದನ್ನು ವಿರೋಧಿಸ ಬಹುದಾಗಿತ್ತು. ಈಗ ಅದು ಉಚಿತವಾಗುವುದಿಲ್ಲ. ಸಂಸ್ಕೃತ ಭಾಷೆ ಕೆಲವು ಕಾಲದ ಹಿಂದೆ ಭರತವರ್ಷದಲ್ಲೆಲ್ಲ ವಿದ್ವಾಂಸರ ಬಳಕೆಯ ಭಾಷೆ ಎಂಬ ಪ್ರತಿಷ್ಠೆಗೆ ಪಾತ್ರವಾಗಿತ್ತು. ಆ ಪದವಿಯನ್ನು ಅದು ಈಚೆಗೆ ಕಳೆದುಕೊಂಡಿದೆ. ಇದನ್ನು ಒಳ್ಳೆಯದೆನ್ನುವುದೋ ಅಲ್ಲವೆನ್ನುವುದೋ ಹೇಳುವಂತಿಲ್ಲ. ಸದ್ಯದಲ್ಲಿ, ಅದು ನಮ್ಮ ಎಲ್ಲ ಪ್ರಾಂತ್ಯಗಳ ಅತ್ಯುನ್ನತ

ಜೀವಿಗಳ ಭಾವಾನುಭವಗಳ ಉಲ್ಲೇಖನದ ಪ್ರಾಚೀನ ಭಂಡಾರವೆಂಬ ಕಾರಣದಿಂದ ಅಖಂಡ ಭರತವರ್ಷದ ಆಸ್ತಿಯಾಗಿ ಉಳಿದಿದೆ. ಈ ಸಂದರ್ಭದಲ್ಲಿ ನಾವು ಮತ್ತೊಂದು ಮುಖ್ಯ ವಿಷಯವನ್ನು ನೆನವಿನಲ್ಲಿಡ ಬೇಕು. ದೇಶಭಾಷೆಗಳನ್ನು ಆಡುತ್ತ ದೇಶದಷ್ಟಕ್ಕೂ ಹರಡಿದ ಜನವನ್ನು ಬಿಟ್ಟು ಸಂಸ್ಕೃತವನ್ನೇ ಬಳಸುತ್ತಿದ್ದ ಬೇರೆ ಜನ ಒಂದು ಇರಲಿಲ್ಲ. ನೂರಾರು ವರ್ಷಗಳಿಂದ ಸಂಸ್ಕೃತದಲ್ಲಿ ಹೆಸರುಗೊಂಡ ಜನವೆಲ್ಲ ಒಂದಲ್ಲ ದಿದ್ದರೆ ಇನ್ನೊಂದು ದೇಶಭಾಷೆಯನ್ನು ತಾಯಿನುಡಿಯಾಗಿ ಪಡೆದ ಜನ. ಇಂದಾದರೂ ಪರಿಸ್ಥಿತಿ ಹೀಗಿಯೇ ಇದೆ. ಸಂಸ್ಕೃತದ ರಕ್ಷಕರೆಂದು ಮೇಲೆದ್ದು ಅದನ್ನು ಕಾಯುವೆವೆನ್ನುವವರು ದೇಶಭಾಷೆಗಳು ಹೆತ್ತು ಹೊತ್ತ ಮಕ್ಕಳು. ಈ ಎಲ್ಲ ಕಾರಣದಿಂದ ಇಷ್ಟು ಮಾತು ಸಿದ್ಧವಾಗುತ್ತದೆ- ದೇಶಭಾಷಾ ಪ್ರೇಮಿಗಳು ಸಂಸ್ಕೃತವನ್ನು, ಸಂಸ್ಕೃತ ಪ್ರೇಮಿಗಳು ದೇಶ ಭಾಷೆಗಳನ್ನು ಹಗೆಯ ಕಾರಣವಿಲ್ಲ; ಅವಕ್ಕೆ ಹೆದರ ಕಾರಣವಿಲ್ಲ. ಹೊಸಕಾಲದ ಬಳಕೆಗಳಿಗೆ ಸಂಸ್ಕೃತದ ನೆರವನ್ನು ಪಡೆಯದೆ ಬಿಟ್ಟರೆ ದೇಶಭಾಷೆಗಳಿಗೆ ಅಪಾರ ನಷ್ಟ ಆದೀತು. ಹೊಸಕಾಲದ ಬಳಕೆಗಾಗಿ ಸಂಸ್ಕೃತದ ಸಹಾಯದಿಂದ ಶಬ್ದಭಂಡಾರವನ್ನು ಬಳಸಿಕೊಳ್ಳುವುದನ್ನು ಒಲ್ಲೆವೆಂದೇ ಹೇಳುವುದಾದರೂ ನಮ್ಮ ಭಾಷೆಗಳು ಸಂಸ್ಕೃತದಿಂದ ಈಗಾಗಲೆ ತಮ್ಮಲ್ಲಿಗೆ ಬಂದಿರುವ ಶಬ್ದಗಳನ್ನೂ ವ್ಯಾಹೃತಿಗಳನ್ನೂ ತೊರೆ ಯುವುದು ಅಸಾಧ್ಯ. ಸಂಸ್ಕೃತಕ್ಕೂ ದೇಶಭಾಷೆಗಳಿಗೂ ಪರಸ್ಪರ ಭೀತಿ ವೈಷಮ್ಯ ಬೇಡವೆನ್ನುವುದು ಮಾತ್ರವಲ್ಲ, ಅವು ಎಂದಿನಂತೆ ಸೌಹಾರ್ದ ದಿಂದ ಜೊತೆಯಾಗಿ ನಡೆಯುವುದೆ ಈಗ ಬೇಕಾಗಿರುವುದು. ಹೀಗೆ ಮಾಡಿಯೇ ನಾವು ಇರುವ ಸಂಸ್ಕೃತಿಯನ್ನು ಉಳಿಸಿಕೊಂಡು ಮತ್ತಷ್ಟನ್ನು ಗಳಿಸಲು ಸಾಧ್ಯವಾಗಬಹುದು.

## ಪಾಂಡಿತ್ಯದ ಅಸಕ್ತಿಯೋಗ

ಇಂಥ ಸಂದರ್ಭದಲ್ಲಿ ತೊಂದರೆ ಉದ್ಭವಿಸುವುದಕ್ಕೆ ಕಾರಣ ವೇನೆಂದರೆ, ಚರ್ಚೆಮಾಡುವ ಬುದ್ಧಿ ತಕ್ಕಷ್ಟು ಆಸಕ್ತವಾಗದೆ ಇರುವುದು. ನಾನು ಬಳಸುವ ಮಾತಿನಿಂದ ಇತರರ ಮನಸ್ಸಿನ ಮೇಲೆ ಯಾವ

ಪರಿಣಾಮ ಉಂಟಾದೀತು ಎಂದು ಯೋಚಿಸದೆ ಇರುವುದಾದರೆ, ನಾನು ಈ ಮನೋಧರ್ಮವನ್ನು ಪಕ್ಷಪಾತ ಬುದ್ಧಿ ಎಂದು ಹೇಳಿಯೇನು. ಆ ಪದವನ್ನು ಉಪಯೋಗಿಸುವುದಕ್ಕೆ ನಾನು ಇಷ್ಟಪಡುವುದಿಲ್ಲ. ಆದರೂ ಈ ಮಾತು ಉಳಿಯುತ್ತದೆ: ಯಾವುದೋ ಒಂದು ಅಭಿಪ್ರಾಯ ನಮಗೆ ಇಷ್ಟ; ಅದಕ್ಕೆ ಪ್ರತಿಯಾಗಿ ಅಭಿಪ್ರಾಯ ಬಂದೊಡನೆ ನಾವು ಬೇಸರ ಪಡುತ್ತೇವೆ. ಪ್ರಾಚೀನ ಸಂಪ್ರದಾಯದ ವಿದ್ವಾಂಸರಲ್ಲಿ ಒಂದು ನಿಶ್ಚಯವಾದ ನಂಬಿಕೆ: ಸಂಸ್ಕೃತ ದೇವಭಾಷೆ; ಅದು ಎಲ್ಲ ಭಾಷೆಗಳ ತಾಯಿ; ದೇಶ ಭಾಷೆಗಳು ಅದರ ಮಕ್ಕಳು ಅಥವಾ ಅನಾರ್ಯ ಭಾಷೆಗಳು. ಆಧುನಿಕ ಭಾಷಾ ಶಾಸ್ತ್ರ ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳ ಪದಗಳಿಗೂ ಸಂಸ್ಕೃತದ ಪದಗಳಿಗೂ ಸಂಬಂಧವಿದೆ ಎಂಬ ತಥ್ಯವನ್ನು ಸಿದ್ಧಾಂತ ಮಾಡಿದೊಡನೆ, ಈ ರೀತಿಯ ಪಾಂಡಿತ್ಯ ಸಂಸ್ಕೃತಕ್ಕೂ ಆ ಭಾಷೆಗಳಿಗೂ ಸಾಮಾನ್ಯ ಮೂಲವೊಂದು ಇದ್ದಿರಬಹುದೆಂಬ ಯೋಚನೆಯನ್ನು ಬಿಟ್ಟು ಸಂಸ್ಕೃತ ಮೂಲ ಭಾಷೆ, ಗ್ರೀಕ್ ಲ್ಯಾಟಿನ್ ಭಾಷೆಗಳು ಅದರಿಂದ ಹುಟ್ಟಿದವು ಎಂದು ಸಿದ್ಧಾಂತ ಮಾಡುತ್ತದೆ. ಸಂಸ್ಕೃತದ ಪರನಾಗಿ ಇಂಥ ಅತಿಯಾದ ಅಭಿಮಾನದಿಂದ ಕೆಲವರು ಮಾತನಾಡುವುದರಿಂದಲೇ ಇನ್ನು ಕೆಲವರು, ದ್ರಾವಿಡದೇಶ ಬೇರೆ ದೇಶ, ಅದು ಸಂಸ್ಕೃತದ ಎಲ್ಲ ಮುಸುರೆಯಿಂದಲೂ ತೊಳೆದುಕೊಂಡು ನಿರ್ಮಲವಾಗಬೇಕು, ಎಂದು ಈಗೀಗ ಕೇಳಿಬರುತ್ತಿರುವ ದ್ರಾವಿಡಾಭಿಮಾನದ ಪ್ರತಿಘೋಷವನ್ನು ಮೇಲೆ ಎತ್ತುವುದು. ಈ ಪ್ರತಿಘೋಷ ಮೇಲೆ ಏಳುವುದು ಒಂದುಂಟು ಆಗಲಿ, ಅದರ ಆಶಯವೇನು ಎನ್ನುವುದನ್ನು ತಿಳಿಯುವುದು ಸುಲಭವಲ್ಲ. ಉಳಿದ ದೃಷ್ಟಿಯಿಂದ ಇದು ಹೇಗಾದರೂ ಭಾಷೆಯ ದೃಷ್ಟಿಯಿಂದಂತೂ ಇಂಥ ಯೋಚನೆ ತೀರ ವಿಚಿತ್ರವಾದದ್ದು. ನಮ್ಮ ದೇಶದ ಸ್ಥಿತಿ ಈಗ ಇರುವಂತಲ್ಲದೆ ಬೇರೆ ವಿಧವಾಗಿ ಇದ್ದಿದ್ದಲ್ಲಿ ಇಂಥ ವಿಚಿತ್ರ ಸಲಹೆಗಳನ್ನು ಯಾವುದೋ ಅಸಮಾಧಾನದ ಕುರುಹು ಎಂದು ಹೇಳಿ ಕಡೆಗಣಿಸಬಹುದಾಗಿತ್ತು. ಈಗಲೋ, ನಾವು ಇರುವ ಸ್ಥಿತಿ ಎಂಥದೆಂದರೆ, ಇಂಥ ಯಾವ ಸಣ್ಣಮಾತೂ ಮುಂದೆ ಬರುವ ಮಹಾಸಂಗ್ರಾಮಗಳ ಸೂಚನೆಯಾಗುತ್ತಿದೆ. ಈ ಕಾರಣದಿಂದ ನಾನು ಭಾಷೆಗಳನ್ನು

ಕುರಿತು ಚರ್ಚೆಮಾಡುವ ಎಲ್ಲ ಮಿತ್ರರೂ ತಮ್ಮ ಚರ್ಚೆಗಳಲ್ಲಿ ಶಾಸ್ತ್ರೀಯ ಪರಿಶೀಲನದ ಅನಾಸಕ್ತ ಮನೋಧರ್ಮದಿಂದ ಪ್ರವರ್ತಿಸಬೇಕೆಂದು ಪ್ರಾರ್ಥನೆ ಮಾಡುತ್ತೇನೆ. ಭಾಷೆಗಳ ಪ್ರತಿಷ್ಠೆಗಳನ್ನು ಕುರಿಯಬಹುದಾದ ಅಭಿಪ್ರಾಯಗಳನ್ನೂ ಜನರ ಅಭಿಮಾನವನ್ನು ಕೆಣಕಬಹುದಾದ ಅಭಿಪ್ರಾಯಗಳನ್ನೂ ಸಾಧ್ಯವಾದಷ್ಟು ವರ್ಣಮುಕ್ತ ತಥ್ಯೋಕ್ತಿರೂಪದಲ್ಲಿ ಹೇಳಬೇಕೆಂದು ಸೂಚಿಸುತ್ತೇನೆ. ಇಂಥ ಉಕ್ತಿಯಲ್ಲೆಲ್ಲ ಇದು ಸ್ಪಷ್ಟವಾಗಬೇಕು: ನಾವು ಮಾಡುತ್ತಿರುವುದು ಶಾಸ್ತ್ರೀಯ ವಿಚಾರ; ಹೇಳುತ್ತಿರುವುದು ತಥ್ಯದ ಮಾತು; ಇದರಿಂದ ಒಂದು ಭಾಷೆ ಒಂದು ಜನ ಹೆಚ್ಚು ಎಂಬ ಅರ್ಥ, ಒಂದು ಭಾಷೆ ಒಂದು ಜನ ಕಡಮೆ ಎಂಬ ಅರ್ಥ ಹೊರಡತಕ್ಕದ್ದಲ್ಲ.

## ಕನ್ನಡ – ತಮಿಳುಗಳ ಸಂಬಂಧ

ಚರ್ಚೆ ಮಾಡುವಲ್ಲಿ ನಾವು ವಿಶೇಷ ಎಚ್ಚರಿಕೆಯಿಂದಿರಬೇಕಾದ ಒಂದು ಪ್ರಶ್ನೆಯನ್ನು ಶ್ರೀ. ರಾಜಸೇವಾಸಕ್ತ ಬಿ. ಮ್ಯ. ಶ್ರೀಕಂಠಯ್ಯನವರು ಈ ಪ್ರಾಚ್ಯ ಸಮ್ಮೇಳನದ ಕಳೆದ ಅಧಿವೇಶನದ ನಮ್ಮ ವಿಭಾಗದಲ್ಲಿ ಮುಂದೆ ತಂದರು. ಆ ಸಮ್ಮೇಳನದ ವರದಿ ಇನ್ನೂ ಪ್ರಕಟವಾಗಿಲ್ಲ. ಶ್ರೀಯುತರು ಪ್ರತಿಪಾದಿಸಿದ ಅಭಿಪ್ರಾಯ ಇದು: ಕನ್ನಡದ ಕೆಲವು ರೂಪಗಳು ತಮಿಳಿನ ಸಮಾನ ರೂಪಗಳಿಗಿಂತ ಹಿಂದಣ ಆಕಾರವನ್ನು ತೋರಿಸುತ್ತವೆ; ಇನ್ನು ಕೆಲವು ಸಂದರ್ಭಗಳಲ್ಲಿ ತಮಿಳು ರೂಪಗಳು ಕನ್ನಡದ ಸಮಾನರೂಪಗಳಿಗಿಂತ ಹಿಂದಿನವಾಗಿವೆ; ಕನ್ನಡ ತಮಿಳು ಎರಡಕ್ಕೂ ಮೂಲವಾಗಿ ಹಿಂದೆ ಒಂದು ರೂಪ ಇದ್ದಿರಬೇಕು; ಅದರಿಂದ ಈಗಿನ ನಮ್ಮ ಎರಡು ಭಾಷೆಗಳೂ ಬಂದಿವೆ. ಇದು ನಿಜ ಎಂದು ಕಾಣುತ್ತದೆ. ತಮಿಳು ಭಾಷೆಯ ಅಭ್ಯಾಸಕರು ಆ ಭಾಷೆಯ ಮತ್ತು ಕನ್ನಡ ತೆಲುಗು ಭಾಷೆಗಳ ಗ್ರಂಥಗಳನ್ನು ಆಪಾತತಃ ನೋಡಿ ತಮಿಳು ಭಾಷೆ ಈ ಎರಡು ಭಾಷೆಗಳಿಗಿಂತ ಬಹು ಕಡಮೆ ಸಂಸ್ಕೃತವನ್ನು ಬಳಸುತ್ತದೆಂದೂ ಅದರ ಶಬ್ದಕೋಶ ಇವುಗಳ ಶಬ್ದಕೋಶಗಳಿಗಿಂತ ಬಹು ಹೆಚ್ಚಾಗಿ ದೇಶ್ಯವೆಂದೂ ಗ್ರಹಿಸುವ ಸಂಭವ ಉಂಟು. ಈ ಮಾತು

ಒಟ್ಟಿನಲ್ಲಿ ನಿಜ ಇರಬಹುದು; ಆದರೂ ಮೇಲೆ ಮೇಲೆ ನೋಡಿದರೆ ಕಾಣುವಷ್ಟು ನಿಜ ಆದರಲ್ಲಿಲ್ಲ. ಸಂಸ್ಕೃತ ಪ್ರಬಲವಾಗಿದ್ದ ಪ್ರಾಂತಗಳಿಂದ ತೀರ ದೂರವಾಗಿದ್ದ ಕಾರಣದಿಂದ ತಮಿಳು ತನ್ನ ಭಾಷಾ ಮರ್ಯಾದೆಯನ್ನೂ ವ್ಯಾಕೃತಿಯನ್ನೂ ಸಂಸ್ಕೃತದ ಪ್ರಭಾವದಿಂದ ತಕ್ಕಷ್ಟು ರಕ್ಷಿಸಿಕೊಳ್ಳುವುದು ಸಾಧ್ಯವಾಯಿತು. ಭಾಷೆ ಹೀಗೆ ನಡೆದರೂ ಅದರ ಜನದ ಜೀವನ ಕನ್ನಡ ಮತ್ತು ತೆಲುಗಿನ ಜನದ ಜೀವನದಿಂದ ಯಥಾರ್ಥವಾಗಿ ಬೇರೆಯಾಯಿತು ಅಥವಾ ಸಂಸ್ಕೃತ ಭಾಷೆ ಆ ಜೀವನವನ್ನು ಕಡಮೆಯಾಗಿ ಸೋಕಿತು ಎಂದು ಹೇಳುವುದು ಸರಿಯಲ್ಲ. ತೆಲುಗೂ ಕನ್ನಡವೂ ಸಂಸ್ಕೃತದ ಮಾತನ್ನು 'ಜ್ಯೋತಿ' ಎಂಬ ಆದರ ಮೂಲ ರೂಪದಲ್ಲಿ ಬಳಸುವಲ್ಲಿ ತಮಿಳು ತನ್ನ ಅಕ್ಷರಮಾಲೆಯ ಮತ್ತು ಶಬ್ದೋಚ್ಚಾರದ ವೈಶಿಷ್ಟ್ಯದ ಫಲವಾಗಿ ಅದೇ ಮಾತನ್ನು 'ಶೋದಿ' ಎಂದು ಬಳಸುತ್ತದೆ. ಇದೇ ಕಾರಣದಿಂದ 'ತೇಜ', 'ತೇಶ' ಆಗುತ್ತದೆ; ಹೃಷೀಕೇಶ, ಶ್ರವಣ, ವಿರುಡೀಕೇಶನ್, ತಿರುವೋಣಂ ಆಗುತ್ತವೆ. ಇಂತಹ ರೂಪಾಂತರವನ್ನೂ ನೆನವಿನಲ್ಲಿ ಇಟ್ಟು ನೋಡಿದರೆ ತಮಿಳು ಸಾಮಾನ್ಯವಾಗಿ ಅದರ ವಿಷಯದಲ್ಲಿ ಹೇಳುವಮಟ್ಟಿಗೆ ಸಂಸ್ಕೃತದಿಂದ ಅಸಂಕರವಾಗಿ ಬೆಳೆದಿಲ್ಲ ಎನ್ನುವುದು ಕಾಣುವುದು. ಸಂಕರ ಎಂಬ ಮಾತು ಈ ಸ್ಥಳಕ್ಕೆ ತೀರ ಉಚಿತವಲ್ಲವೆಂದೂ ನನಗೆ ತೋರುತ್ತದೆ. ಈ ಸಂದರ್ಭದಲ್ಲಿ ಬಳಸದೆ ಬೆರೆಯದೆ ಇರುವುದು ಒಂದು ಗುಣವೆಂದು ಹೇಳಬಹುದೆ? ಒಂದು ಭಾಷೆಯ ಜನ ಇನ್ನೊಂದು ಭಾಷೆಯ ಜನದೊಂದಿಗೆ ಬಳಕೆ ಬೆಳಸಿ ಜೊತೆಯಾಗಿ ಬಾಳಿದರೆ, ಅವರೊಡನೆ ಸೇರಿ ಒಂದು ಸಂಸ್ಕೃತಿಯನ್ನು ನಿರ್ಮಿಸಿದರೆ ಅವರ ಇವರ ಭಾಷೆಗಳು ಪರಸ್ಪರ ಬೆರೆಯುವುದು ಬಳಸುವುದು ಸಾಂಕರ್ಯ ಆಗಲಾರದು. ತಮಿಳಿನ ಅತ್ಯುನ್ನತ ಸಾಹಿತ್ಯದಲ್ಲಿ ಕನ್ನಡ ತೆಲುಗು ಭಾಷೆಗಳ ಅತ್ಯುನ್ನತ ಸಾಹಿತ್ಯಗಳಲ್ಲಿರುವುದಕ್ಕಿಂತ ಕಡಮೆಯ ಪ್ರಮಾಣದ ಸಂಸ್ಕೃತ ಇರಬಹುದು. ಆದರೆ ಅದಕ್ಕೆ ಕಾರಣ ತಮಿಳು ಸಂಸ್ಕೃತವನ್ನು ಬಹಿಷ್ಕರಿಸಿದೆ ಎಂಬುದಲ್ಲ. ನಿಜವಾಗಿ ತಮಿಳು ಸಂಸ್ಕೃತ ಪದವನ್ನು ಉಪಯೋಗಿಸುವ ಸೌಕರ್ಯವನ್ನೂ ನಿಲ್ಲಿಸಿಕೊಂಡಿದೆ: ಅದಷ್ಟುಮಟ್ಟಿಗೆ ಮೆಳಸಾಗಿದೆ. ವೃತ್ತಪತ್ರಿಕೆಗಳಲ್ಲಿ, ಜನ

ಮನೋರಂಜಕ ನಾಟಕಗಳಲ್ಲಿ, ಈಗ ಕೆಲವು ದಶಮಾನಗಳಿಂದ ತಮಿಳು ತುಂಬ ಮುಂದುವರಿದಿರುವುದಕ್ಕೆ ಆ ಭಾಷೆಯ ಈ ಮೆಳಸು ಮುಖ್ಯ ಕಾರಣ. ಅದು ಸಂಸ್ಕೃತದಿಂದ ಮಾತ್ರವಲ್ಲ, ಬೇರೆ ಯಾವ ಭಾಷೆ ಯಿಂದಲಾದರೂ ಸರಿಯೆ ತನಗೆ ಆವಶ್ಯಕವೆಂದು ತೋರಿದ ಮಾತನ್ನು ಸೆಳೆದುಕೊಳ್ಳುವುದು; ಅದನ್ನು ಅರಗಿಸಿಕೊಂಡು ತನ್ನ ಒಂದು ಅಚ್ಚಿಗೆ ತಿರುಗಿಸಿಕೊಳ್ಳುವುದು.

## ಇಂಥ ಇನ್ನೊಂದು ವಿಷಯ

ಶಾಸ್ತ್ರದ ದೃಷ್ಟಿಯಿಂದಲ್ಲದೆ ಸೌಹಾರ್ದದ ದೃಷ್ಟಿಯಿಂದಲೂ ನಾವು ಇತ್ತೀಚೆಗೆ ನಡೆದ ಮತ್ತೊಂದು ಚರ್ಚೆಯಂಥ ಚರ್ಚೆಗಳನ್ನು ತಪ್ಪಿಸುವುದು ಆವಶ್ಯಕ. ತಮಿಳು ಸೀಮೆಯ ಸಂಗೀತಗಾರರು ತೆಲುಗು ಕೀರ್ತನೆಗಳನ್ನು ಹಾಡುವ ವಿಷಯದಲ್ಲಿ ಎಂಥ ಗೊಂದಲವೆದ್ದಿತು! ಕನ್ನಡವನ್ನು ಕುರಿತ ಈ ಸಭೆಯಲ್ಲಿ ಈ ಮಾತು ಪ್ರಸ್ತುತವೇ ಎಂದು ತೋರಬಹುದು. ಪ್ರಾಯಶಃ ಅದು ಪ್ರಸ್ತುತವೇ. ಏಕೆಂದರೆ ಈ ಗಾಯನಪದ್ಧತಿ ಕರ್ನಾಟಕ ಎಂಬ ಹೆಸರಿಂದ ಪ್ರಚಾರದಲ್ಲಿದೆ. ವಿನೋದವಾಗಿ ಹೇಳುವುದಾದರೆ ಕರ್ನಾಟಕ ಸಂಗೀತದ ತಮಿಳು ಗಾಯಕರು ತೆಲುಗು ಗೀತಗಳನ್ನು ಹಾಡಬಹುದೆ ಎಂದು ಗಲಭೆ ಆಯಿತೆನ್ನಬಹುದು. ತಮಿಳು ಗಾಯಕರು ಸಾಧ್ಯವಾದಷ್ಟು ಮಟ್ಟಿಗೆ ತಮಿಳು ಭಾಷೆಯ ಹಾಡುಗಳನ್ನು ಹಾಡಬೇಕೆನ್ನುವುದು ಈ ಚರ್ಚೆಯಲ್ಲಿಯ ಸಲಹೆ. ಹೀಗೆ ಹೊರಡುವುದಾದರೆ ಈ ಗಾಯನ ಸಂಪ್ರದಾಯವನ್ನು ಕರ್ನಾಟಕವೆನ್ನದೆ ಬೇರೊಂದು ಹೆಸರಿಂದ ಕರೆಯಬೇಕು ಎಂದೂ ಯಾರಾದರೂ ವಾದಿಸಬಹುದು. ಹೀಗೆ ಯಾರೂ ವಾದಿಸಲಿಲ್ಲ. ನಾನಾದರೂ ಇದು ನಿಜವಾಗಿ ಎತ್ತಬೇಕಾದ ವಾದವೆಂದು ಹೇಳುತ್ತಿಲ್ಲ. ನಾವೆಲ್ಲ ಬಲ್ಲೆವು; ತಮಿಳಿನಲ್ಲಿ ಸುಂದರವಾದ ತೇವಾರಗಳಿವೆ; ಕನ್ನಡದಲ್ಲಿ ಇಂಪಾದ ಹಾಡುಗಳಿವೆ. ಆಯಾ ಪ್ರಾಂತದ ಜನರಿಗೆ ಅವರವರ ಭಾಷೆಯ ಗೀತಗಳ ಪರಿಚಯವಿರುವುದೂ ಅವರವರ ಭಾಷೆಯಲ್ಲಿ ಹಾಡಿದರೆ ಅವರಿಗೆ ಸುಲಭವಾಗಿ ಅರ್ಥವಾಗುವುದೂ ಸಹಜ. ಕನ್ನಡಿಗರೂ ತಮಿಳರೂ ಕನ್ನಡದ ಅಥವಾ ತಮಿಳಿನ ಮಾತಿನ ಹಾಡನ್ನು ಕೇಳಿದಾಗ

ರಾಗವನ್ನು ಕೇಳುವುದರೊಂದಿಗೆ ಮಾತುಗಳ ಅರ್ಥವನ್ನೂ ಗ್ರಹಿಸಿ ಆ ಅರ್ಥದಿಂದ ಭಾವಪೋಷಣೆಯಾದಷ್ಟುಮಟ್ಟಿಗೆ ಹೆಚ್ಚಿನ ಸುಖವನ್ನು ಪಡೆಯುತ್ತಾರೆ. ಇದು ನಿಜವಾದರೂ ಇಷ್ಟೇ ನಿಜವಾದ ಇನ್ನೊಂದು ಮಾತು ಇದೆ. ನಮ್ಮ ಸಂಗೀತ ಬೆಳೆದಿರುವ ರೀತಿಯಲ್ಲಿ ತ್ಯಾಗರಾಜನು ತೆಲುಗು ಭಾಷೆಗೆ ಎಷ್ಟೊ ಅಷ್ಟೊ ನಿಜವಾಗಿ ತಮಿಳು ಭಾಷೆ ಕನ್ನಡ ಭಾಷೆಗೂ ಸೇರಿದಾನೆ. ಅವನ ಗೀತಗಳನ್ನು ಬಹುಕಾಲ ಅನೇಕ ಬಾರಿ ಸಭೆಗಳಲ್ಲಿ ಹಾಡಿಹಾಡಿ ಈಗ ನಮ್ಮ ಪ್ರಾಂತಗಳಲ್ಲಿ ಎಲ್ಲಿ ಅವನ್ನು ಹಾಡಿದರೂ ಅವನ ಮಾತಿನ ಒಟ್ಟು ಅರ್ಥ ಬಹುಭಾಗದ ಜನಕ್ಕೆ ತಿಳಿದೇ ಇರುತ್ತದೆ. ಅರ್ಥ ತಿಳಿಯದೆ ಇದ್ದಲ್ಲಿ ಕೂಡ ನಮ್ಮ ಜನರು ಅದರ ವಿಷಯ ಕಷ್ಟಹಚ್ಚಿಕೊಳ್ಳದೆ ಗೀತದಿಂದಲೇ ಸಾಕಾದ ಸಂತೋಷವನ್ನೂ ಸಂಸ್ಕಾರವನ್ನೂ ಪಡೆದಿದಾರೆ. ಕನ್ನಡದ ಜನಕ್ಕಾಗಿ ಈ ಗೀತೆಗಳಿಗೆ ಪ್ರತಿಯಾಗಿ ಕನ್ನಡದಲ್ಲಿ ಕೃತಿಗಳನ್ನು ರಚಿಸಬೇಕೆಂದೂ ತ್ಯಾಗರಾಜನ ಕೃತಿಗಳನ್ನು ಹಾಡದೆ ಬಿಡಬೇಕು ಅಥವಾ ಹಾಡುವುದನ್ನು ಕಡಮೆಮಾಡಬೇಕು ಎಂದೂ ಯಾರು ಹೇಳುವರು? ನಮ್ಮ ಜನ ತ್ಯಾಗರಾಜನನ್ನು ಒಪ್ಪಿಕೊಂಡಿದಾರೆ ಎಂಬ ಕಾರಣದಿಂದ ನಾವು ಆ ಕೃತಿಗಳು ಬಳಕೆಯಲ್ಲಿರುವ ಪ್ರಾಂತದಲ್ಲೆಲ್ಲ ಅವುಗಳ ಅರ್ಥವನ್ನು ತಿಳಿಸಿಕೊಡುವುದಕ್ಕೆ ಪ್ರಯತ್ನ ಮಾಡಬೇಕು. ತಮಿಳ ಜನ ಕನ್ನಡ ತೆಲುಗು ಮಲೆಯಾಳ ಭಾಷೆಗಳನ್ನು ತಿಳಿದುಕೊಳ್ಳುವುದೇ ಸರಿ. ಎಲ್ಲ ಜನರೂ ಒಂದೊಂದು ಭಾಷೆಯನ್ನೂ ಚೆನ್ನಾಗಿ ಕಲಿಯದೆ ಇದ್ದರೂ ಸಂಗೀತ ಕೇಳಿದ ಜನ ಕೇಳುವ ಗೀತದ ಮಾತುಗಳ ಅರ್ಥವನ್ನು ತಿಳಿದುಕೊಳ್ಳುವ ಮಟ್ಟಿಗೆ ಕಷ್ಟ ತೆಗೆದುಕೊಳ್ಳುವುದು ಒಳ್ಳೆಯದು. ಇದೇ ಮಾತು ಕನ್ನಡಿಗರು, ತೆಲುಗರು, ಮಲೆಯಾಳಿಗಳಿಗೂ ಅನ್ವಯಿಸುತ್ತದೆ. ಪರಸ್ಪರ ಪರಿಚಯ ಬೆಳೆಯುವ ಸಂದರ್ಭಗಳನ್ನು ಹೆಚ್ಚಿಸಿಕೊಳ್ಳುವುದೇ ನಮ್ಮ ಏಳಿಗೆಗೆ ಸಾಧನ; ಅವನ್ನು ಕಡಮೆ ಮಾಡುವುದು ಶ್ರೇಯಸ್ಸಲ್ಲ. ಇತಿಹಾಸದ ಫಲವಾಗಿ ನಮ್ಮ ಸ್ಥಿತಿಯಲ್ಲಿ ಒದಗಿರುವ ಯಾವ ಒಂದು ವಿವರವನ್ನೂ ನಾವು ಭರತವರ್ಷದ ಜನರ ಒಕ್ಕೂಟಕ್ಕೆ ಸಹಾಯವಾಗುವಂತೆ ತಿರುಗಿಸಿಕೊಳ್ಳಬೇಕು. ಇದು ನಮ್ಮ ಈಗಿನ ಕರ್ತವ್ಯ.

## ಭಾರತೀಯ ಸಾಹಿತ್ಯ ಪರಿಷತ್ತು

ಭರತವರ್ಷದ ಪ್ರಾಂತಗಳ ಪರಸ್ಪರ ಸೌಹಾರ್ದವನ್ನು ಬೆಳಸುವುದಕ್ಕೆ ನಮಗೆ ಪ್ರಾಯಶಃ ಅಖಿಲ ಭಾರತದ ಸಾಹಿತ್ಯ ಲಲಿತಕಲೆಗಳ ಪರಿಷತ್ತೊಂದು ಬೇಕಾದೀತೆಂದು ತೋರುತ್ತದೆ. ಈ ವಿಚಾರವನ್ನು ಇತ್ತೀಚೆಗೆ ಶ್ರೀ. ವಿಶ್ವೇಶ್ವರರಾವ್ ಎಂಬ ಆಂಧ್ರ ಮಹನೀಯರು ವಿಶೇಷವಾಗಿ ಜನರ ಗಮನಕ್ಕೆ ತಂದಿದಾರೆ. ಇದೇ ಸಲಹೆಯನ್ನು ಈ ಮೊದಲು ಇತರ ಕಲಾಪ್ರೇಮಿಗಳು ಮಾಡಿದ್ದುಂಟು. ನಮ್ಮ ಈ ಪ್ರಾಚ್ಯ ಸಮ್ಮೇಳನದ ತಿರುವಾಂಕೂರ ಅಧಿವೇಶನದಲ್ಲಿ ಅಖಿಲ ಭಾರತಕ್ಕೆ ಇಂಥ ಒಂದು ಸಂಸ್ಥೆ ಆವಶ್ಯಕ ಎಂದು ಒಂದು ನಿರ್ಣಯ ಆಯಿತು. ಭರತವರ್ಷದಲ್ಲಿ ಹಲವಾರು ಭಾಷೆಗಳಿರುತ್ತ ಅವುಗಳಲ್ಲಿ ಸಾಹಿತ್ಯ ನಿರ್ಮಾಣ ಬಹು ಚಟುವಟಿಕೆಯಿಂದ ನಡೆಯುತ್ತಿರುವಲ್ಲಿ ಒಟ್ಟು ದೇಶದ ಸಾಹಿತ್ಯ ಸೇವಕರನ್ನು, ಕಲೋಪಾಸಿಗಳನ್ನು ಒಂದುಕಡೆ ಕರೆತಂದು ಎಲ್ಲರಿಗೂ ಸಂಬಂಧಪಟ್ಟ ಕಾರ್ಯಗಳಲ್ಲಿ ಜೊತೆಗೂಡಿ ನಡಸುವುದು ತೀರಾ ಆವಶ್ಯಕ. ಸದ್ಯದಲ್ಲಿ ನಮ್ಮ ಪ್ರಾಂತಗಳ ಪರಸ್ಪರ ಪರಿಚಯ ಬಹು ಅಲ್ಪ ಅಥವಾ ಏನೂ ಇಲ್ಲ ಎಂದು ಹೇಳಬೇಕು. ಕನ್ನಡದೇಶದ ಸಾಮಾನ್ಯ ಲೇಖಕರಿಗೆ ಹಿಂದಿಯಲ್ಲಿ ಅಥವಾ ಬಂಗಾಳಿಯಲ್ಲಿ ಬರೆಯುತ್ತಿರುವವರಲ್ಲಿ ಎರಡೋ ಮೂರೋ ಹೆಸರು ತಿಳಿದಿದೆ; ಎಂದರೆ ಆ ಲೇಖಕರ ಕೃತಿ ತಿಳಿದಿದೆಯೆಂದು ಹೇಳುವಂತಿಲ್ಲ. ಹಿಂದೆ ಭರತವರ್ಷವೆಲ್ಲ ಎಷ್ಟರಮಟ್ಟಿಗೆ ಒಂದು ದೇಶವಾಗಿತ್ತೊ ಮುಂದೆ ಅದರ ಹಣೆಯಲ್ಲಿ ಏನು ಬರೆದಿದೆಯೋ ಈಗ ನಾವು ಹೇಳುವಂತಿಲ್ಲ. ಅದು ಹೇಗೆ ಇದ್ದರೂ ಈಗ ಇಂಡಿಯ ಎನ್ನುವ ಎಲ್ಲ ಪ್ರಾಂತಗಳ ಜನರೂ ಬಹುತೇಕವಾಗಿ ತಾವು ಒಂದು ದೇಶದ ಜನರೆಂದು ಭಾವಿಸುತ್ತಿರುವುದು ನಿಜ. ಹೀಗೆ ಭಾವಿಸುವ ಜನರಿಗೆ ಈ ಒಂದು ದೇಶದ ನಾನಾ ಭಾಗದಲ್ಲಿ ನಾನಾ ಭಾಷೆಗಳಿಂದ ನಡೆಯುತ್ತಿರುವ ಕಲೋಪಾಸನೆ ಸಾಹಿತ್ಯಸೇವೆ ತಿಳಿದಿರುವುದು ಒಳ್ಳೆಯದು. ಈ ಬಗ್ಗೆ ಅಖಿಲ ಭಾರತೀಯ ಪರಿಷತ್ತೊಂದು ಇರಬೇಕೆನ್ನುವುದು ನಿರ್ವಿವಾದವಾದ ಸಿದ್ಧಾಂತ ಎನ್ನಬಹುದು. ಪರಿಷತ್ತು ಒಂದು ಇರಬೇಕೆಂದು ಒಪ್ಪುವುದಾದರೂ ಅದು ಕೈಗೊಳ್ಳಬೇಕಾದ ಕಾರ್ಯದ ವಿವರವನ್ನು ಕುರಿತು

ಭಿನ್ನಾಭಿಪ್ರಾಯಗಳು ಇರುವುವೆಂದು ಕಾಣುತ್ತದೆ. ಅಖಿಲ ಭಾರತದ ಇಂಥ ಒಂದು ಪರಿಷತ್ತಿನಲ್ಲಿ ಸದಸ್ಯರ ಸಂಖ್ಯೆಗೆ ಒಂದು ಮಿತಿ ಇರಬೇಕೆ? ಆಯಾ ಪ್ರಾಂತದ ಕಲಾಪ್ರಾಮುಖ್ಯತೆಗೆ ಅನುಗುಣವಾಗಿ ಸದಸ್ಯಸಂಖ್ಯೆಯನ್ನು ಹಂಚಬೇಕೆ? ಆಯಾ ಸ್ಥಾನಗಳನ್ನು ಕಲೋಪಾಸಿ ಸಾಹಿತ್ಯಸೇವಕರ ಆಯಿಕೆಯಿಂದ ತುಂಬುವುದೇ, ಅಲ್ಲದಿದ್ದರೆ, ಬೇರೆ ಹೇಗೆ? ಸಂಸ್ಥೆ ಎಲ್ಲ ಭಾಷೆಗಳ ಹೊಸ ಹೊಸ ಕೃತಿಗಳನ್ನು ತರಿಸಿಕೊಂಡು ಅವುಗಳಲ್ಲಿ ಉತ್ತಮವಾದುವಕ್ಕೆ ಬಹುಮಾನ ತೋರಿಸಿ ರಸಿಕತೆ ಮತ್ತು ವಿಮರ್ಶನದ ಒಂದು ಮುಖ್ಯ ಪೀಠದಂತೆ ನಡೆಯುವುದೆ? ಅಥವಾ ಅದು ಇಂಥ ಕೆಲಸವನ್ನು ಮಾಡದೆ ತನ್ನ ಸದಸ್ಯರ ಸಭೆಯನ್ನು ಆಗಾಗ ಕೂಡಿಸುತ್ತಿದ್ದು ಜ್ಞಾನದ ಅಭಿವೃದ್ಧಿಗೂ ಪ್ರಸಾರಕ್ಕೂ ದುಡಿಯುವುದೆ? ಜ್ಞಾನದ ಅಭಿವೃದ್ಧಿ ಪ್ರಸಾರಗಳಿಗಾಗಿ ದುಡಿಯುವುದು ಸಂಸ್ಥೆಯ ಗುರಿಯಾದರೆ ಬೇರೆ ಬೇರೆ ಪ್ರಾಂತಗಳಿಗೆ ಸದಸ್ಯರ ಸಂಖ್ಯೆಯನ್ನು ಹಂಚುವುದು ಉಚಿತವಾದೀತೆ ಅಥವಾ ವಿದ್ವತ್ತಿನ ಆಯಾ ಶಾಖೆಯಲ್ಲಿ ಶ್ರೇಷ್ಠವಾದ ಕಾರ್ಯವನ್ನು ಈಗಾಗಲೆ ಮಾಡಿರುವ ಅಥವಾ ಮಾಡುವೆವೆಂದು ಆಶೆಯನ್ನು ಉಂಟುಮಾಡಿರುವ ವಿದ್ವಾಂಸರನ್ನು ಅವರು ಯಾವ ಪ್ರಾಂತ್ಯದಿಂದ ಬಂದಿರುವರೆಂದು ಗಣಿಸದೆ ಆರಿಸುವುದೆ? ಸಂಸ್ಥೆ ರಸಿಕತೆ – ವಿಮರ್ಶೆಯ ಒಂದು ಕೇಂದ್ರವಾಗಿರಬೇಕೆಂದರೆ ಕೆಲವು ಕಾಲ ಬಹುಮತಿಯ ಪ್ರದಾನವನ್ನು ತಡೆದಿರುವುದು ಒಳ್ಳೆಯದಲ್ಲವೆ? ಈಗಿರುವ ಸ್ಥಿತಿಯಲ್ಲಿ ಇಂಥ ಪ್ರದಾನದ ಏರ್ಪಾಡು ಪ್ರಾಂತ ಪ್ರಾಂತಗಳ ಮಧ್ಯೆ, ಹಾಗೆಯೇ ಒಂದು ಪ್ರಾಂತದಲ್ಲಿ ಲೇಖಕರ ಮಧ್ಯೆ, ಈರ್ಷೆ ಅಸೂಯೆಗಳನ್ನು ಗಳಿಸುವ ಭೀತಿ ಇಲ್ಲವೆ? ಇದೆಲ್ಲವೂ ಆಲೋಚನೆಗೆ ಅರ್ಹವಾದ ವಿವರ. ಈಗ ಬೆಂಗಳೂರಲ್ಲಿ ಕನ್ನಡದ ಒಂದು ಕೇಂದ್ರ ಪರಿಷತ್ತು ಇದೆ. ಬಂಗಾಳದಲ್ಲಿ ಇಂಥದೇ ಒಂದು ಪರಿಷತ್ತಿದೆ ಎಂದು ನಾನು ಕೇಳಿದೇನೆ. ಇತರ ಪ್ರಾಂತಗಳಲ್ಲಿ ಆಗಾಗ ಸಾಹಿತ್ಯ ಸಮ್ಮೇಳನಗಳು ನಡೆದಿರುವುದುಂಟು. ಅಲ್ಲಿಯೂ ವರ್ಷಕ್ಕೊಮ್ಮೆ ಕೂಡುವ ಸಭೆಗಳಲ್ಲದೆ ಅವಿರತವಾಗಿ ನಡೆಯುವ ಪರಿಷತ್ ಸಂಸ್ಥೆಗಳು ಇರುವುವೋ ಇಲ್ಲವೋ ತಿಳಿಯದು. ಅಖಿಲ ಭಾರತೀಯ ಕಲಾಪರಿಷತ್ತೊಂದು ಆರಂಭವಾಗುವ ಮೊದಲು ಪ್ರಾಯಶಃ ಒಂದೊಂದು

ಭಾಷಾಪ್ರಾಂತವೂ ತನ್ನ ಒಂದು ಕಲಾಪರಿಷತ್ತನ್ನು ಸ್ಥಾಪಿಸಿ ಅಲ್ಲಿ ಆಯಾ ಪ್ರಾಂತದ ಕಲಾ ಸೇವಕರು ಒಂದುಕೂಡಿದರೆ ಅನುಕೂಲವೆಂದು ತೋರುತ್ತದೆ. ಪ್ರಾಂತಗಳ ಪರಿಷತ್ತುಗಳು ಏರ್ಪಟ್ಟ ಮೇಲೆ ಅವುಗಳನ್ನು ಒಂದುಗೂಡಿಸುವ ಕೇಂದ್ರ ಸಂಸ್ಥೆಯೊಂದನ್ನು ನಿರ್ಮಿಸಬಹುದು. ಈ ಮಾತೆಲ್ಲ ವಿಚಾರ ಸೌಕರ್ಯಕ್ಕಾಗಿ ಹೇಳಿರತಕ್ಕದ್ದು. ಪ್ರಶ್ನೆ ತಕ್ಕಷ್ಟು ಮುಖ್ಯವಾದುದರಿಂದ ಅದಕ್ಕೆ ಈ ಸಭೆಯ ಸ್ವಲ್ಪ ಕಾಲವನ್ನು ಕೊಡುವುದು ಅನುಚಿತವಲ್ಲವೆಂದು ನನಗೆ ತೋರುತ್ತದೆ. ತಾವೆಲ್ಲ ಸಮ್ಮತಿಸಿದರೆ ಈ ವಿಷಯವನ್ನು ಇಲ್ಲಿ ಚರ್ಚೆಗೆ ತೆಗೆದುಕೊಳ್ಳಬಹುದೆಂದೂ ಆ ವೇಳೆ ತಮ್ಮಲ್ಲಿ ಇಷ್ಟವುಳ್ಳವರು ಈ ವಿವರಗಳನ್ನು ಕುರಿತು ತಮ್ಮ ಅಭಿಪ್ರಾಯಗಳನ್ನು ತಿಳಿಸಿ ಒಂದು ನಿರ್ಣಯಕ್ಕೆ ಬರಲು ಸಹಾಯಮಾಡಬಹುದೆಂದೂ ನಾನು ಸೂಚಿಸುತ್ತೇನೆ.

## ಕನ್ನಡವನ್ನು ಕುರಿತ ಟಿಪ್ಪಣಿಗಳು

ಇನ್ನು ನಾನು ಕನ್ನಡದ ಪದಗಳನ್ನು ಮತ್ತು ರೂಪಗಳನ್ನು ಕುರಿತು ಆಗಾಗ ಗುರುತುಮಾಡಿಕೊಂಡ ಕೆಲವು ಟಿಪ್ಪಣಿಗಳನ್ನು ತಮ್ಮಲ್ಲಿ ನಿವೇದಿಸುತ್ತೇನೆ. ನನಗೆ ದೊರೆತ ಅವಕಾಶವನ್ನು ಸರಿಯಾಗಿ ಉಪಯೋಗಿಸಿಕೊಂಡಿದ್ದರೆ ಇವು ಟಿಪ್ಪಣಿಗಳಾಗಿ ನಿಲ್ಲಬೇಕಾಗಿರಲಿಲ್ಲ. ಆದರೆ ವಿಚಾರವನ್ನು ಮುಂದರಿಸಿ ಯಾವುದಾದರೂ ಒಂದು ನಿರ್ಧಾರಕ್ಕೆ ಬರಲು ನನಗೆ ಅನುಕೂಲ ಆಗದಿದ್ದುದರಿಂದ ಆಗಿರುವಷ್ಟನ್ನು ತಮ್ಮ ಮುಂದಿರಿಸಿ ಅವಕಾಶವಿದ್ದಲ್ಲಿ ಈ ವಿಷಯಗಳನ್ನು ಚರ್ಚಿಸಬಹುದೆಂದು ಪ್ರಾರ್ಥಿಸುತ್ತೇನೆ.

## ಬಾಯಮಾತು ಮುಖ್ಯ. ಬರಹದ್ದಲ್ಲ

ಈ ಸಂದರ್ಭದಲ್ಲಿ ನಾನು ಮೊಟ್ಟಮೊದಲು ಹೇಳುವ ಮಾತೆಂದರೆ ಯಾವ ಭಾಷೆಯ ಶಾಸ್ತ್ರವನ್ನು ಅಭ್ಯಾಸ ಮಾಡುವುದಾದರೂ ಆ ಅಭ್ಯಾಸ ಸಮೀಚೀನವಾಗಬೇಕಾದರೆ ನಾವು ಆ ಭಾಷೆಯ ಶಬ್ದಗಳು ಜನರ ಬಾಯಲ್ಲಿ ಹೇಗೆ ನುಡಿಯುತ್ತವೆ ಎಂದು ನೋಡಬೇಕೆನ್ನುವುದು. ಈ ಮಾತು ಕನ್ನಡಕ್ಕೆ ಹೇಗೆ ಅನ್ವಯಿಸುತ್ತದೆ ಎಂದು ನೋಡಬಹುದು.

ನಮ್ಮ ಪುಸ್ತಕಗಳಲ್ಲಿ 'ಚೆಲ್ಲು' ಎಂದು ಬರೆಯುವ ಮಾತನ್ನು ತೆಗೆದು ಕೊಳ್ಳೋಣ. ಜನದ ಬಾಯಲ್ಲಿ ಈ ಮಾತು ಹೇಗಿದೆ ಎಂದು ನೋಡು ವುದಾದರೆ ಪದ 'ಚೆಲ್ಲು' ಎನ್ನುವುದಕ್ಕಿಂತ ಹೆಚ್ಚಾಗಿ 'ಶೆಲ್ಲು' ಎನ್ನು ವಂತೆ ಇರುವುದು ತಿಳಿಯುವುದು. ಬರಹದ 'ಚ' ಉಚ್ಚಾರಣೆಯಲ್ಲಿ 'ಶ' ಎಂದು ಹೀಗೆ ಕೇಳುವುದು ತಮಿಳು ಸೀಮೆಯ ನೆರೆಯ ನಾಡಲ್ಲಿ ಅಲ್ಲ. ತಮಿಳಿನ ಬದಿಯಲ್ಲಿ ಇಂಥ ಒಂದು ಲಕ್ಷಣ ಕಂಡರೆ ಅದು ತಮಿಳಿನ ಪ್ರಭಾವದ ಫಲವೆಂದು ಊಹಿಸಲು ಕಾರಣವಿರಬಹುದು. ಈ ಮಾತಿನ ಈ ಉಚ್ಚಾರಣೆಯನ್ನು ನಾನು ಕೇಳಿರುವುದು ತುಮಕೂರಿನ ಬಳಿಯ ಹಳ್ಳಿಗಳಲ್ಲಿ. ಪ್ರಾಯಶಃ ತಮಿಳಿನಲ್ಲಿ ಹೇಗೋ ಹಾಗೆಯೇ ಕನ್ನಡದಲ್ಲಿಯೂ 'ಚ' ಎಂದು ಬರೆಯುವ ಶಬ್ದವನ್ನು 'ಶ' ಎಂದು ಉಚ್ಚಾರ ಮಾಡುತ್ತೇವೆ ಎಂದು ಹೇಳಬಹುದು. ಅಥವಾ ಬಾಯಲ್ಲಿ 'ಶ' ಎಂದು ಹೇಳುವ ಶಬ್ದವನ್ನು ಗುರುತಿಸುವುದಕ್ಕೆ 'ಚ' ಎಂಬ ಅಕ್ಷರ ವನ್ನು ಉಪಯೋಗಿಸುತ್ತೇವೆ. ಈ 'ಶ' ಶಬ್ದವಾದರೂ ಸ್ಪಷ್ಟವಾಗಿ ಸಂಸ್ಕೃತದ 'ಶ' ಅಲ್ಲ. 'ಚ' ಶಬ್ದಕ್ಕೂ 'ಶ' ಶಬ್ದಕ್ಕೂ ಮಧ್ಯದ ಒಂದು ಶಬ್ದ. ಶಬ್ದದ ಮಾತೇ ಅಲ್ಲದೆ ವ್ಯಾಕರಣ ದೃಷ್ಟಿಯಿಂದಲೂ ಹಲಕೆಲವು ಸಂದರ್ಭಗಳಲ್ಲಿ ಜನದ ಬಾಯಲ್ಲಿರುವ ಶಬ್ದರೂಪಗಳು ಸಾಹಿತ್ಯದಲ್ಲಿ ಕಾಣುವ ರೂಪಕ್ಕಿಂತ ಹೆಚ್ಚು ಸರಿಯಾಗಿರುವುವು. ಈ ವಿಷಯವನ್ನು ಮುಂದೆ ಇನ್ನು ಸ್ವಲ್ಪ ವಿವರವಾಗಿ ಚರ್ಚಿಸುತ್ತೇನೆ. ಈಗ ಇಷ್ಟು ಮಾತ್ರ ಪ್ರಕೃತ: ಕನ್ನಡದ ಶಬ್ದಗಳ ಪರಿಶೀಲನೆಗೆ ಮೊದಲನೆಯ ಹೆಜ್ಜೆಯಾಗಿ ಕನ್ನಡದ ಜನ ಅದನ್ನು ಬೇರೆ ಬೇರೆ ಪ್ರಾಂತಗಳಲ್ಲಿ ಆಡುವ ರೀತಿಯನ್ನು ಅವಧಾನದಿಂದ ನೋಡಿ ಒಂದು ಪ್ರಮೆಯನ್ನು ಮಾಡುವುದು ಆವಶ್ಯಕ. ಈ ಸಂದರ್ಭದಲ್ಲಿ ಜನದ ಉಚ್ಚಾರ ಇರುವುದಿರುವಂತೆ ತಿಳಿಯುವುದಕ್ಕೆ ಜನರ ಮಾತನ್ನು ಗ್ರಾಮಾಫೋನ್ ತಟ್ಟೆಗಳಲ್ಲಿ ಹಿಡಿದಿ ಡುವುದು ಆವಶ್ಯಕವಾಗಬಹುದು. ಇಂಥ ಒಂದು ಪ್ರಮೆ ಮುಗಿದಾಗ್ಗೆ ದ್ರಾವಿಡದೇಶದ ಭಾಷೆಗಳ ಪರಸ್ಪರ ಭೇದಗಳನ್ನು ಕುರಿತು ನಾವು ಈಗ ಹೇಳುತ್ತಿರುವ ಬಹುಮಾತನ್ನು ತಿದ್ದುವುದೂ ವಿಶದಪಡಿಸುವುದೂ ಆವಶ್ಯ ಕವಾಗುತ್ತದೆಯೆಂದು ನನ್ನ ತಿಳಿವಳಿಕೆ.

## ಇದಕ್ಕಾಗಿ ಒಂದು ಪ್ರಮೆ

ಉಪಭಾಷೆಗಳ ಇಂಥ ಒಂದು ಪ್ರಮೆಯನ್ನು ಮೈಸೂರು ವಿಶ್ವವಿದ್ಯಾನಿಲಯ ಕೆಲವು ವರ್ಷಗಳ ಹಿಂದೆ ಆರಂಭಿಸಿದಂತೆ ಕಾಣುತ್ತದೆ. ಅದು ಎಷ್ಟುದೂರ ಮುಂದುವರಿದಿದೆಯೋ ನನಗೆ ತಿಳಿಯದು. ವಿಶ್ವವಿದ್ಯಾನಿಲಯ ಈ ಕೆಲಸವನ್ನು ಮುಂದುವರಿಸಿ ಅದರಿಂದ ದೊರೆಯುವ ಸಾಮಗ್ರಿಯನ್ನು ಪುಸ್ತಕರೂಪದಲ್ಲಿ ಬೇಗನೆ ಒದಗಿಸಿಕೊಡುವುದೆಂದು ಆಶಿಸಬೇಕಾಗಿದೆ. ಇಂಥ ಪ್ರಮೆ ದ್ರಾವಿಡ ಭಾಷೆಗಳ ಎಲ್ಲ ಉಪಭಾಷೆಗಳನ್ನೂ ಒಳಗೊಳ್ಳಬೇಕಾಗುತ್ತದೆ. ಕೊರಮ ಕೊರಚ ಭಾಷೆಗಳು ಈ ಆವರಣದಲ್ಲಿ ಬರುತ್ತವೆ. ಅವನ್ನು ಇದುವರೆಗೆ ಯಾರೂ ಪರಿಶೀಲಿಸಿಲ್ಲ. ಅದು ಮುಗಿದಾಗ್ಗೆ ನಾವು ಗ್ರಿಯರ್‌ಸನ್‌ರವರು ರಚಿಸಿರುವ ಈ ಭಾಷೆಗಳ ವಂಶವೃಕ್ಷ ಎಷ್ಟುಮಟ್ಟಿಗಾದರೂ ಮಾರ್ಪಡಬೇಕೇ ಎಂದೂ ನೋಡಬಹುದು. ಕೆಲವು ವರ್ಷಗಳ ಹಿಂದೆ ನಾನು ಮೈಸೂರು ದೇಶದ ಜನಗಣತಿಯ ಕೆಲಸದಲ್ಲಿ ತೊಡಗಿದ್ದಾಗ ಗ್ರಿಯರ್‌ಸನ್‌ರ ಪದಗಳ ಪಟ್ಟಿಗೆ ಕೊರಮ, ಕೊರಚ, ತುಳು ಮತ್ತು ಕೊಡಗು ಮಾತುಗಳನ್ನು ಹಾಕಿ ಅವರು ಇಟ್ಟುಕೊಂಡ ಸಾಹಿತ್ಯ ಈ ಭಾಷೆಗಳಲ್ಲಿ ಹೇಗಿರುತ್ತದೆಯೆಂದು ತೋರಿಸುವ ವಾಕ್ಯವೃಂದಗಳನ್ನು ಬರೆಯಿಸಿದೆನು. ಈ ಪಟ್ಟಿಗಳೂ ಈ ವಾಕ್ಯಗಳೂ ಈ ಭಾಷೆಗಳನ್ನು ಬಲ್ಲ ಇನ್ನೂ ಒಬ್ಬರಿಬ್ಬರ ಎದುರಲ್ಲಿ ಪರೀಕ್ಷೆ ಆದಮೇಲೆ ಪ್ರಕಟನೆಗೆ ಯೋಗ್ಯವಾದಾವು. ಇವುಗಳನ್ನು ಈ ರೀತಿ ಪರಿಷ್ಕರಿಸಿ ಇಷ್ಟರಲ್ಲೇ ಅಚ್ಚುಮಾಡಿಸಬೇಕೆಂದಿದ್ದೇನೆ. ಆಗ್ಗೆ ಅವು ಭಾಷಾಶಾಸ್ತ್ರದ ಅಭ್ಯಾಸಿಗಳಿಗೆ ಪ್ರಯೋಜನಕ್ಕೆ ಬಂದಾವೆಂದು ನಂಬಿದೇನೆ.

## ನುಡಿಯ ಮೂಲಕ್ಕೆ ಉದಾಹರಣೆಗಳು

'ಶ' ಶಬ್ದದಂತೆ ವಾಡಿಕೆಯಲ್ಲಿರುತ್ತ 'ಚ' ಎಂದು ಬರಹದಲ್ಲಿ ಕಾಣುವ ಮೇಲೆ ಉದಾಹೃತವಾದ ಶಬ್ದ ನಮ್ಮ ಭಾಷೆಗಳಲ್ಲಿ ಇರುವ ಇಂಥ ಹಲವು ಶಬ್ದಗಳಲ್ಲಿ ಒಂದು. 'ಶ' ಸಂಸ್ಕೃತ ವರ್ಣಮಾಲೆಯ ಒಂದು ಅಕ್ಷರ. ಚೆಲ್ಲು ಅಥವಾ ಶೆಲ್ಲು ಎನ್ನುವ ಪದ ಶುದ್ಧ ಕನ್ನಡವಾದುದರಿಂದ ಅದನ್ನು ಬರೆಯುವಲ್ಲಿ ನಮ್ಮ ಪೂರ್ವಿಕರು ದ್ರಾವಿಡ

ವರ್ಣವನ್ನು ಇಟ್ಟುಕೊಂಡು ಚೆಲ್ಲು ಎಂದು ಬರೆದರು. ಬೇರೆ ಒಂದೆರಡು ಸಂದರ್ಭದಲ್ಲಿ ಯತ್ನಿಸಿದಂತೆ ಅವರು ಈ ಶಬ್ದವನ್ನು ನಿಷ್ಕರ್ಷೆಯಿಂದ ರೂಪಿಸುವುದಕ್ಕೆ ಯತ್ನಿಸಿದ್ದರೆ ಱಟಿ, ಕುಳ ಇರುವಂತೆ ಚ ಶ, ಶ ಶ ಎಂದು ಅಕ್ಷರಗಳಿದ್ದಿರಬಹುದಾಗಿತ್ತು. ತಮಿಳರು ಈಗ ರಾಮ ಎಂಬ ಮಾತನ್ನು ಒಂದು ಕ್ರಿಯೆಯ ಕರ್ತೃವಾಗಿ ಉಪಯೋಗಿಸುವಾಗ 'ಮ'ಕಾರದ ಆಚೆ ಒಂದು ಅರ್ಧ ಅನುನಾಸಿಕ ಸ್ವರವನ್ನು ಅಲ್ಪವಾಗಿ ನುಡಿಯುತ್ತಾರೆ. ಕನ್ನಡಿಗರೂ ಇದನ್ನು ಮಾಡುವರು; ಆದರೆ ತಮಿಳರಷ್ಟು ಅಲ್ಲ. ಕನ್ನಡಿಗರೂ ಕೂಡ ಹಿಂದೆ ಈಗಿಗಿಂತ ಹೆಚ್ಚಾಗಿ ಈ ಅಸ್ಪಷ್ಟ ಅರ್ಧ ಅನುನಾಸಿಕವನ್ನು ನುಡಿಯುತ್ತಿದ್ದರೆಂದು ಕಾಣುತ್ತದೆ. ಈ ಅಸ್ಪಷ್ಟ ಅನುನಾಸಿಕ ಶಬ್ದವು ಬರವಣಿಗೆಯಲ್ಲಿ 'ನ್' ಎಂದು ಗುರುತಿಸಲ್ಪಟ್ಟಿತು. ವಿಭಕ್ತಿ ಪ್ರತ್ಯಯಗಳು ಸೇರಿದಾಗ ಅಸ್ಪಷ್ಟವಾಗಿದ್ದ 'ನ್' ಹೋಗಿ ಸ್ಪಷ್ಟವಾದ ಒಂದು 'ನ' 'ನಿ' ಶಬ್ದ ಕಂಡುಬಂದಿತು. ಅಸ್ಪಷ್ಟವಾದ ಅರ್ಧಾನುನಾಸಿಕವನ್ನು ಕೆಲವು ಕಾಲದ ಮೇಲೆ ಅನುಸ್ವಾರದಿಂದ ಸೂಚಿಸುವುದು ವಾಡಿಕೆಗೆ ಬಂದಿತು. ಅನುಸ್ವಾರ ನ್, ಮ್ ಎಂಬ ಎರಡು ಅರ್ಧಾಕ್ಷರಗಳಿಗೂ ಸಮವಾಯಿತು. ಆಮೇಲಿನ ಕಾಲದಲ್ಲಿ ಬರವಣಿಗೆಯನ್ನು ಓದುವವರು 'ರಾಮಂ' ಎಂಬ ಮಾತಿನಲ್ಲಿಯ ಅನುಸ್ವಾರವನ್ನು, ನಕಾರವಲ್ಲ, ಮಕಾರ ಎಂಬಂತೆ ಓದಿದರು. ಇದಾದಮೇಲೆ ಪ್ರಥಮಾ ವಿಭಕ್ತಿಯಲ್ಲಿ ರಾಮಂ ಇರುವಾಗ ತೃತೀಯಾ ವಿಭಕ್ತಿ 'ರಾಮಮಿಂದ' ಎಂದಾಗದೆ 'ರಾಮನಿಂದ' ಏಕಾಯಿತು ಎಂದು ಪ್ರಶ್ನೆ ಹುಟ್ಟಿತು. ಈ ವಿಷಯವನ್ನು ನಮ್ಮ ವ್ಯಾಕರಣಗಳಲ್ಲಿ ಚರ್ಚಿಸಬೇಕಾಗಿದೆ. ನಾವು ಚರ್ಚಿಸಬೇಕಾದದ್ದು ಬರೆದಿರುವ ಅನುಸ್ವಾರವನ್ನು ಅಲ್ಲ, ಬಾಯಲ್ಲಿ ಬಂದ ಅಸ್ಪಷ್ಟ ಅರ್ಧ ಅನುನಾಸಿಕವನ್ನು ಎನ್ನುವುದು ನಮಗೆ ನೆನಪಿನಲ್ಲಿದ್ದರೆ ಸಮಸ್ಯೆ ಸುಲಭವಾಗಿಯೇ ಹರಿಯುವುದು; ಇಂಥ ಚರ್ಚೆ ಅನವಶ್ಯಕವಾಗುವುದು. ಬರೆದಿರುವ ಅನುಸ್ವಾರ ಉಚ್ಚಾರಣೆಯ ಅಸ್ಪಷ್ಟ ಅರ್ಧಅನುನಾಸಿಕ ಎನ್ನುವುದಲ್ಲದೆ ಈ ಸಂದರ್ಭದಲ್ಲಿ ನಾವು ಇನ್ನೊಂದು ವಿಷಯವನ್ನು ನೆನಪಿನಲ್ಲಿ ಇಟ್ಟುಕೊಳ್ಳಬೇಕು. ಅನುಸ್ವಾರವನ್ನು ಬರಿಯದೆ ಅರ್ಧ ಅನುನಾಸಿಕವನ್ನು ಬರೆದಿದ್ದರೂ ನಾವು ಚರ್ಚಿಸಬೇಕಾಗಿ

ದ್ದದ್ದು ಬರೆದ ಅರ್ಧ ಅನುನಾಸಿಕವನ್ನಲ್ಲ; ಬಾಯಲ್ಲಿ ಬಳಸುವ ಅಸ್ಪಷ್ಟ ಅರ್ಧಅನುನಾಸಿಕವನ್ನು. ಅದನ್ನು ಹಿಡಿದು ಚರ್ಚೆಮಾಡಿದರೆ ವ್ಯಾಕರಣ ಸುಲಭವಾಗುತ್ತದೆ; ಸಾರ್ಥಕವಾಗುತ್ತದೆ. ಬರಹದ ಅಕ್ಷರವಲ್ಲ, ಬಾಯ ಉಚ್ಚಾರಣೆ ಮುಖ್ಯ. ಇದನ್ನು ಸ್ಪಷ್ಟಪಡಿಸುವುದಕ್ಕೆ ಇನ್ನೊಂದು ಉದಾಹರಣೆ ಕೊಡಬಹುದು. ಕನ್ನಡದಲ್ಲಿ 'ಹಾವು' ಎಂದೂ ತಮಿಳಿನಲ್ಲಿ 'ಪಾಂಬು' ಎಂದೂ ಬರೆಯುವ ಮಾತನ್ನು ತೆಗೆದುಕೊಳ್ಳೋಣ. ತಮಿಳ ಮಾತಿನ ಬರಹರೂಪದಲ್ಲಿ ಮಧ್ಯೆ ಒಂದು ಅರ್ಧ ಮಕಾರ ಇದೆ. ಕನ್ನಡದ ಬರಹದ ಮಾತಿನಲ್ಲಿ ಅದು ಕಾಣುವುದಿಲ್ಲ. ಆದರೂ ಜನರು ಹಾವು ಎಂದು ಹೇಳುವಲ್ಲಿ ಒಂದು ಅಸ್ಪಷ್ಟ ಅನುನಾಸಿಕ ಶಬ್ದ ಕೇಳಿಬರುತ್ತದೆ. ತಮಿಳಿನಲ್ಲಿ ಇರುವ ಮಕಾರ ಕನ್ನಡದಲ್ಲಿ ಅಳಿಸಿಹೋಗುವುದೆಂದು ಭಾಷಾ ಭ್ಯಾಸಿಗಳು ಹೇಳುವುದುಂಟು. ಮಕಾರ ಅಳಿಸಿರುವುದು ನಿಜ; ಆದರೆ ಅದು ಅಳಿಸಿರುವುದು ಬರಹದಲ್ಲಿ ಮಾತ್ರ, ಭಾಷೆಯಲ್ಲಿ ಅಲ್ಲ. ವರ್ಣ ಮಾಲೆಯ ಒಂದು ಅಕ್ಷರ ಹತ್ತಿರ ಹತ್ತಿರದ ಸ್ವರೂಪದ ಹಲವು ಶಬ್ದಗಳಿಗೆ ಒಂದು ಸಾಮಾನ್ಯ ಸಂಕೇತವಾಗುತ್ತದೆ. ತಮಿಳಿನಲ್ಲಿ 'ಂಬು' ಆಗುವ, ತೆಲುಗಿನಲ್ಲಿ 'ಮು' ಆಗುವ, ಮೂಲದ ಅರ್ಧ ಅನುನಾಸಿಕ ಈಗಲೂ ಕನ್ನಡದಲ್ಲಿಯೂ ಜೀವಂತವಾಗಿದೆ.

## ಈ ಸಂದರ್ಭದ ಇನ್ನೊಂದು ಮಾತು

ಇದೇ ಪದವನ್ನು ತೆಗೆದುಕೊಂಡು ನಾವು ಇನ್ನೊಂದು ವಿಷಯ ವನ್ನು ಗ್ರಹಿಸಬಹುದು. ತಮಿಳಿನ ಬರಹದಲ್ಲಿ ಕೊನೆಗೆ ಕಾಣುವ 'ಉ' ಸ್ವರವು ಬಾಯಲ್ಲಿ ನಿಜವಾಗಿ ಒಂದು ಉ ಆಗಿ ಉಚ್ಚಾರವಾಗುವುದಿಲ್ಲ. ಅದು ಉಚ್ಚಾರವಾಗುವುದು ಒಂದು ಅರ್ಧ ಸ್ವರವಾಗಿ. ಉಚ್ಚಾರಣೆ ಯನ್ನೆ ಗುರುತಿಸಬೇಕೆಂದು ಅಪೇಕ್ಷಿಸಿದರೆ ನಾವು ಪ್ರಾಯಶಃ ಬ್ ಅರ್ಧಾಕ್ಷರದ ಮೇಲೆ 'ಉ' ಸ್ವರವನ್ನು ಏರಿಸದೆ ಒಂದು ಅರ್ಧ ಉಕಾರ ವನ್ನು ಸೇರಿಸಬೇಕಾದೀತು. ಕುಮಾರಿಲಭಟ್ಟನು ತಮಿಳಿನ ಶೋರು, ಪಾಂಪು, ವಯಿರು ಎಂಬ ಮಾತುಗಳನ್ನು ಶೋರ್, ಪಾಂಪ್, ವೈರ್ ಎಂದು ಅಂತ್ಯದ 'ಉ' ಸ್ವರವನ್ನು ಅಳಿಸಿ ಬರೆದನೆಂದೂ ಇದಕ್ಕೆ ಕಾರಣ

ಅವನಿಗೆ ತಮಿಳಿನಲ್ಲಿ ಸಾಕಾದಷ್ಟು ಪರಿಚಯ ಇಲ್ಲದ್ದು ಇರಬೇಕೆಂದೂ ಭಾಷಾಪಂಡಿತರು ಹೇಳುವುದುಂಟು. ಬರವಣಿಗೆಯ ಸ್ವರಗಳನ್ನೂ ವ್ಯಂಜನಗಳನ್ನೂ ತೆಗೆದುಕೊಳ್ಳದೆ ಬಾಯಸ್ವರಗಳನ್ನೂ ವ್ಯಂಜನಗಳನ್ನೂ ತೆಗೆದುಕೊಂಡರೆ ಇಂಥ ಮಾತನ್ನು ನಾವು ಹೇಳಲಾರೆವು. ಕುಮಾರಿಲ ಭಟ್ಟನು ಕೊಟ್ಟ ಪದರೂಪ ಈಗ ನಾವು ಸರಿಯಾದದ್ದೆಂದು ಹೇಳುವ ಪದರೂಪಕ್ಕಿಂತ ಕಡಮೆ ಸರಿಯಲ್ಲ; ಇಷ್ಟೇ ಸರಿ. ಒಂದು ಅಸ್ಪಷ್ಟವಾದ ಅರ್ಧ 'ಉ'ಕಾರವನ್ನು ಅವನು ಬಿಟ್ಟನು; ನಾವು ಪೂರ್ತಿಮಾಡಿ ಇಟ್ಟು ತೋರಿಸುತ್ತೇವೆ. ಪ್ರಾಯಶಃ ಪದದ ಮೂಲರೂಪವನ್ನು ಈ ಪೂರ್ಣವಾದ ಉಕಾರಕ್ಕಿಂತ ಆ ಬಿಟ್ಟುಹೋದ ಅರ್ಧ ಉಕಾರದ ರೂಪವೇ ಹೆಚ್ಚು ನಿಜವಾಗಿ ತೋರಿಸುತ್ತದೆನ್ನಬಹುದು. ಇಂಥ ಉದಾಹರಣೆ ಹಲವನ್ನು ಕೊಡಬಹುದು. ನಾನು ನಿವೇದಿಸುವುದು ಇಷ್ಟೆ: ಒಂದು ಶಬ್ದ ಹೀಗೆ ಇದ್ದದ್ದು ಹೀಗಾಯಿತು ಎಂದು ಹೇಳುವಾಗ ನಾವು ಗಮನಿಸಬೇಕಾದದ್ದು ಬರಹದ ಅಕ್ಷರಗಳನ್ನಲ್ಲ, ಬಾಯ ಉಚ್ಚಾರಣೆಯನ್ನು. ಈ ಉಚ್ಚಾರಣೆಯ ಮಾತಿನಲ್ಲಿ ಅನೇಕ ಸ್ವರಗಳು ವ್ಯಂಜನಗಳು ನಾವು ಬರಹದಲ್ಲಿ ತೋರಿಸುವ ಎರಡು ಸ್ವರಗಳಿಗೆ ಎರಡು ವ್ಯಂಜನಗಳಿಗೆ ಮಧ್ಯದ ಸ್ವರಗಳೂ ವ್ಯಂಜನಗಳೂ ಆಗಿ ಇವೆ. ಹಿಂದೂ ಇಂಥ ಸ್ವರಗಳೂ ವ್ಯಂಜನಗಳೂ ಇದ್ದಿರಬೇಕು. ಈ ಸ್ವರಗಳು ವ್ಯಂಜನಗಳು ಲೇಖನದ ಸೌಕರ್ಯಕ್ಕಾಗಿ ವರ್ಣಮಾಲೆಯ ಪರಿಮಿತ ಸಂಕೇತಗಳಲ್ಲಿ ಬರೆಯಲ್ಪಟ್ಟಿವೆ. ನಿಜದಲ್ಲಿ ಅವುಗಳನ್ನು ತೋರಿಸುವುದಕ್ಕೆ ಬೇರೆ ಅಕ್ಷರಗಳನ್ನು ಉಪಯೋಗಿಸಿದ್ದರೂ ತಪ್ಪಾಗುತ್ತಿರಲಿಲ್ಲ.

## ಆಡುವ ಭಾಷೆ ಕಲಿಸುವ ಇನ್ನೊಂದು ತತ್ವ

ಬರಹದ ಭಾಷೆಯನ್ನು ಒಂದು ಕಡೆಗಿಟ್ಟುಕೊಂಡು ಆಡುವ ಭಾಷೆಯನ್ನು ಪರಿಶೀಲಿಸುವ ಪದ್ಧತಿ ಭಾಷೆಯ ಜಾಯಮಾನವನ್ನು ಕುರಿತರೆ ವ್ಯಾಕರಣದ ಕೆಲವು ಭಾವನೆಗಳೂ ಮಾರ್ಪಟ್ಟಾವೋ ಎಂದು ನನಗೆ ತೋರುತ್ತದೆ. ಸಂಸ್ಕೃತದ ಕೃತವಾನ್, ದ್ರಷ್ಟಾಸಿ, ಕರ್ತಾಸ್ಮಿ, ಎಂಬ ವ್ಯಾಕರಣ ರೂಪಗಳು ದ್ರಾವಿಡ ಭಾಷೆಗಳ ಸಂಪ್ರದಾಯದ ಪ್ರಭಾವದಿಂದ

ಬಂದಿವೆ ಎಂದು ಕೆಲವರ ಅಭಿಪ್ರಾಯ. ಈ ರೂಪಗಳು ಸಂಸ್ಕೃತ ವ್ಯಾಕರಣ ಸೂತ್ರಗಳಿಂದ ಸಿದ್ಧಿಸುವುದಿಲ್ಲವಂತೆ. ಕೃತವಾನ್ ಎಂಬುದು ತಮಿಳಿನ ಶೈದವನ್, ಕನ್ನಡದ ಗೈದವನ್ ಎಂಬಂತೆ ಇದೆ. ಸಂಸ್ಕೃತದ ಲೇಖಕನು ದ್ರಾವಿಡ ಭಾಷೆಗಳನ್ನು ಅರಿತವನಾಗಿದ್ದು ಶೈದವನ್, ಗೈದವನ್ ಎಂಬ ಅಚ್ಚಿನಲ್ಲಿ ಕೃತವಾನ್ ಎಂದು ಮಾಡಿರಬೇಕೆಂದು ಶಾಸ್ತ್ರಜ್ಞರು ಊಹಿಸಿದ್ದಾರೆ. ನನಗೆ ಸಂಸ್ಕೃತ ವ್ಯಾಕರಣ ತಿಳಿಯದು. ಆದರೂ ಈ ಪ್ರಶ್ನೆ ಎದುರಿಗೆ ಬರುತ್ತದೆ: ಕೃತ ಎಂಬುದು ಮಾಡಲ್ಪಟ್ಟ ಕೆಲಸ ಎಂಬ ಅರ್ಥದಲ್ಲಿ ಉಪಯೋಗವಾಗುತ್ತದೆಯಷ್ಟೆ; ಜ್ಞಾನವಾನ್ ಧನವಾನ್ ಎನ್ನುವಂತೆ ಕೃತವಾನ್ ಎಂದು ಪದ ಆಗಲಾರದೆ? ನಿಜವಾಗಿ ಕೃತವಾನ್ ಎಂಬಲ್ಲಿ ಕೃತಕಾರ್ಯವಾನ್ ಎಂಬುದು ಅರ್ಥ. ಗೈದವನ್ ಎನ್ನುವಲ್ಲಿ ಗೈದ ಕೆಲಸದವನು ಎಂದು ಅರ್ಥವಲ್ಲ. ಯಾವನು ಗೈದನೋ ಅವನು ಎಂಬುದು ಅರ್ಥ. ಕೃತವಾನ್ ಎನ್ನುವುದು ಸಿದ್ಧಿಸುವುದಕ್ಕೆ ಪ್ರಾಯಶಃ ಭಾಷೆಯ ಒಂದು ಸಾಮಾನ್ಯ ಪದ್ಧತಿ ಕಾರಣ ಹೊರತಾಗಿ, ಗೈದವನ್ ಎಂಬ ದ್ರಾವಿಡ ರೂಪ ಕಾರಣ ಅಲ್ಲವೆಂದು ಸೂಚಿಸಬೇಕಾಗುತ್ತದೆ. ದ್ರಷ್ಟಾಸಿ, ಕರ್ತಾಸ್ಮಿ ಎಂಬ ರೂಪಗಳೂ ಹೀಗೆಯೇ ಉಕ್ತಿಭಂಗಿಯಿಂದ ಸಹಜವಾಗಿ ಬರುತ್ತವೆ. ಈ ಕೆಲಸವನ್ನು ಮಾಡು ಎಂದು ಒಡೆಯನು ಹೇಳಿದರೆ ಸೇವಕನು ಮಾಡಿದೆ ಅಥವಾ ಆಯಿತು ಎಂದು ಹೇಳುವುದು ಬಹು ಸಾಮಾನ್ಯ; ಅವನ ಅರ್ಥ ಮಾಡುವೆನು, ಆಗುವುದು ಎಂದು. ಭರವಸೆ ಕೊಡುವುದಕ್ಕಾಗಿ ಅವನು ಭೂತರೂಪವನ್ನು ಬಳಸುತ್ತಾನೆ. ಇದು ವ್ಯಾಕರಣಕ್ಕಿಂತ ಹೆಚ್ಚಾಗಿ ಮನುಷ್ಯನ ಸ್ವಭಾವವನ್ನು ಅವಲಂಬಿಸಿದ ವಿಷಯ. ಕನ್ನಡದಂತೆ ಅಥವಾ ಇತರ ಭಾಷೆಗಳಂತೆ ಸಂಸ್ಕೃತ ಈ ರೂಪವನ್ನು ಸಹಜವಾಗಿ ಬಳಸಿರಬಹುದು, ಅದನ್ನು ದ್ರಾವಿಡ ಭಾಷೆಗಳಿಂದ ತೆಗೆದುಕೊಳ್ಳಬೇಕಾದ ಆವಶ್ಯಕತೆ ಇಲ್ಲವೆನ್ನಬೇಕಾಗುತ್ತದೆ.

## ಕನ್ನಡದಲ್ಲಿ ಮೂರು ಮೆಟ್ಟಲೆ?

ಕನ್ನಡ ಹಳೆಗನ್ನಡ, ನಡುಗನ್ನಡ, ಹೊಸಕನ್ನಡ ಎಂಬ ಮೂರು ಅವಸ್ಥೆಗಳನ್ನು ಕಂಡಿದೆ ಎಂದು ಈಗ ನಮ್ಮಲ್ಲಿ ಅಭಿಪ್ರಾಯ ವಾಡಿಕೆ

ಯಾಗಿದೆ. ಈ ಮೂರು ಮೆಟ್ಟಲನ್ನು ಒಪ್ಪಬೇಕೆ ಎನ್ನುವುದು ಪುನಃ ವಿಮರ್ಶೆ ಆಗಬೇಕೆಂದು ನಾನು ಬಿನ್ನವಿಸಲಪೇಕ್ಷಿಸುತ್ತೇನೆ. ಒಂದು ಕಾಲದಲ್ಲಿ ನಮ್ಮ ಭಾಷೆಯಲ್ಲಿ ಬಂದಾನ್ ಸಂದಾನ್ ಎಂಬಂಥ ಕೆಲವು ರೂಪಗಳು ಇದ್ದವೆನ್ನುವುದು ನಿರ್ವಿವಾದ ವಿಷಯ. ಅಂಥ ಮಾತು ಬಹಳವಿದ್ದು ಕನ್ನಡ ಒಂದು ಕಾಲದಲ್ಲಿ ಹಳೆಯದು ಎಂದು ಹೇಳುವ ಒಂದು ಅವಸ್ಥೆಯನ್ನು ಪಡೆದಿದ್ದದ್ದು ನಿಜವಾದರೆ ಆ ಸ್ಥಿತಿಯ ಬರವಣಿಗೆ ತಕ್ಕಷ್ಟು ಉಳಿದಿಲ್ಲ. ಈ ಕೆಲವೇ ಆದ ಬಹು ಹಳೆಯ ರೂಪಗಳು ದೊರೆಯುವ ಸಾಹಿತ್ಯ, ಇವು ಹೊರತಾಗಿ ಉಳಿದಂತೆ, ಅದರೀಚಿನ ಹಳೆಗನ್ನಡ ರೂಪಗಳನ್ನೇ ತೋರಿಸುತ್ತದೆ. ಎಂದರೆ ಬಂದಾನ್ ಸಂದಾನ್ ಮುಂತಾದ ರೂಪಗಳು ದೊರೆಯುವ ಬಹು ಕೊಂಚ ಸಾಹಿತ್ಯ ವನ್ನು ಒತ್ತಟ್ಟಿಗಿಟ್ಟರೆ ನಮಗೆ ಉಳಿಯುವ ಸಾಹಿತ್ಯ, ಪಂಪನ ಕಾಲದಿಂದ, ಅದಕ್ಕೂ ಹಿಂದಿನ ಕಾಲದಿಂದ, ಇಂದಿನವರೆಗೂ ತೀರ ಸ್ವಲ್ಪ ವ್ಯತ್ಯಾಸ ದಿಂದ ಒಂದೇ ರೀತಿಯಾಗಿ ಉಳಿದಿದೆ. ಹತ್ತು ಹನ್ನೊಂದನೆಯ ಶತಮಾನದ ಬರಹದ ಕೆಲವು ರೂಪಗಳು ಈಗ ವಾಡಿಕೆಯಲ್ಲಿಲ್ಲ. ಆಗಣ ಲೇಖಕರು ಎಚ್ಚರದಿಂದ ನಿರ್ದೇಶಿಸುತ್ತಿದ್ದ ಱ ೞ ಕುಳ ಭೇದಗಳು ಈಗ ಅಳಿಸಿವೆ. ಇದು ಹೊರತು ನಮಗೆ ಪಂಪನ ಕನ್ನಡ ಇಂದಿನ ಕನ್ನಡ ದಿಂದ ಬೇರೆಯದೆಂದು ಹೇಳುವಂತಿಲ್ಲ. ಒಂದು ಹೋಲಿಕೆಯಿಂದ ಈ ಮಾತನ್ನು ಸ್ಪಷ್ಟಪಡಿಸುವುದಾದರೆ ಹೀಗೆನ್ನಬಹುದು. ಪಂಪನ ಕನ್ನಡಕ್ಕೂ ನಮ್ಮ ಕನ್ನಡಕ್ಕೂ ಇರುವ ಭೇದ ಷೇಕ್ಸ್‌ಪಿಯರ್‌ನ ಇಂಗ್ಲೀಷಿಗೂ ಇಂದಿನ ಇಂಗ್ಲೀಷಿಗೂ ಇರುವ ಭೇದಕ್ಕಿಂತ ಹೆಚ್ಚಿನದಲ್ಲ. ಷೇಕ್ಸ್ ಪಿಯರ ಇಂಗ್ಲೀಷನ್ನು ಹಳೆಯ ಇಂಗ್ಲೀಷ್ ಎಂದಾಗಲಿ ನಡುಗಾಲದ ಇಂಗ್ಲೀಷ್ ಎಂದಾಗಲಿ ಹೇಳಿ ಅದು ಇಂದಿನ ಇಂಗ್ಲೀಷಿನಿಂದ ಬೇರೆ ಎಂದು ಯಾರೂ ಸೂಚಿಸುವುದಿಲ್ಲ. ಆದ್ದರಿಂದ ಪಂಪನ ಕನ್ನಡವನ್ನು ಕೂಡ ಹಳಗನ್ನಡ ಎನ್ನುವುದು ಅನಾವಶ್ಯಕವೆಂದೇ ತೋರಬಹುದು. ಬರಹದ ಭಾಷೆ ಆಡುವ ಭಾಷೆಯಿಂದ ಬೇರೆಯಾದ ಕೆಲವು ರೂಪಗಳನ್ನು ಬಳಸುವುದು ಎಂದೂ ಉಂಟು. ಕನ್ನಡದ ಸಂಧಿ ಪದ್ಧತಿ ಈಗಲೂ ಬಾಯಲ್ಲಿ ವಾಡಿಕೆಯಿಲ್ಲದ ಅನೇಕ ಪ್ರಕ್ರಿಯೆಗಳನ್ನು ಬರವಣಿಗೆಯಲ್ಲಿ

ಬಳಸುತ್ತದೆ. ಒಂದೊಂದು ಭಾಷೆಗೆ ಒಂದೊಂದು ಮರ್ಯಾದೆ. ಇದು ಕನ್ನಡದ ಮರ್ಯಾದೆ. ಈ ತತ್ವವನ್ನು ಮರೆತು, ಪದಗಳ ರೂಪದಲ್ಲಿ, ಅಕ್ಷರದಲ್ಲಿ ಕಾಣುವ ಕೆಲವು ವ್ಯತ್ಯಾಸದ ಸಲುವಾಗಿ ಭಾಷೆಯಲ್ಲಿ ಮೂರು ಅವಸ್ಥೆಗಳನ್ನು ಪ್ರತಿಷ್ಠೆ ಮಾಡುವುದು ಸರಿಯಾಗಲಾರದೆಂದು ನನ್ನ ಬಿನ್ನಹ. ಕನ್ನಡಕ್ಕೆ ಮೂರು ಅವಸ್ಥೆಯನ್ನು ಕಲ್ಪಿಸಹೋದದ್ದಕ್ಕೆ ಕಾರಣ, ಯಾವುದೋ ಒಂದು ರೀತಿಯಲ್ಲಿ ಇಂಗ್ಲೀಷಿನಲ್ಲಿ ಕಾಣುವ ಅವಸ್ಥಾತ್ರಯ ಇಲ್ಲಿಯೂ ಕಂಡೀತೋ ಎಂಬ ನಿರೀಕ್ಷೆ ಇರಬಹುದೆ? ಈ ಭಾವನೆ ಮೊದಲಾದದ್ದು ಇಂಥ ಒಂದು ಸಾಮ್ಯದ ಅಭಿಲಾಷೆಯಿಂದ ಎಂದೇ ತೋರುತ್ತದೆ. ಅದನ್ನು ಈಗ ಹಿಡಿದಿರುವುದೂ ಇದೇ ಭಾವನೆಯಿಂದ ಇರಬಹುದು. ಇಂಗ್ಲೀಷಿನಲ್ಲಿ ಆರಂಭದ, ಮಧ್ಯದ ಮತ್ತು ಹೊಸ ರೂಪಗಳಿಗೆ ಎಂಥ ವ್ಯತ್ಯಾಸವಿದೆ ಎಂಬದನ್ನು ನೋಡಿದರೆ ಪಂಪನ ಕನ್ನಡದಿಂದ ಇಂದಿನ ಕನ್ನಡಕ್ಕೆ ಆಗಿರುವ ವ್ಯತ್ಯಾಸ ಹತ್ತರಲ್ಲಿ ಒಂದರಷ್ಟಿಲ್ಲ ಎನ್ನುವುದು ಕಾಣುವುದು. ಬಹಳವಾದರೆ, ವಾಡಿಕೆಯಂತೆ ನಾವು ಹಿಂದಿನ ಲೇಖನದ ಕನ್ನಡವನ್ನು ಹಳಗನ್ನಡವೆಂದೂ ಸುಮಾರು ಕುಮಾರವ್ಯಾಸನ ಕಾಲದ ಮತ್ತು ಈಚಿನ ಕಾಲದ ಕನ್ನಡವನ್ನು ಹೊಸ ಕನ್ನಡವೆಂದೂ ಹೇಳಬಹುದು. ಆಗಲೂ ನಮಗೆ ಬಸವಣ್ಣನವರ ಕನ್ನಡ ಹಳೆಯ ಎಲ್ಲೆಯಲ್ಲಿ ಉಳಿಯುತ್ತದೆ. ನಿಜದಲ್ಲಿ, ಅದರಲ್ಲಿ ಹಳೆಯ ಲಕ್ಷಣ ಏನೂ ಕಾಣುವುದಿಲ್ಲ. ಕನ್ನಡದ ಹಳತನ ಹೊಸತನ ಪದ್ಯದ ಸಂಪ್ರದಾಯಗಳಿಗೆ ಮಾತ್ರ ಅನ್ವಯಿಸಿದಂತಾಗುತ್ತದೆ.

## ನುಡಿಯ ಸಂಪತ್ತು

ಹಳೆಯದು ಹೊಸದು ಎಂಬ ಅನಾವಶ್ಯಕವಾದ ಭೇದ ಬೇಡವೆಂದು ನಾನು ಹೇಳುವುದಕ್ಕೆ ವ್ಯವಹಾರದ ದೃಷ್ಟಿಯ ಒಂದು ಕಾರಣ ಇದೆ. ಒಂದು ರೂಪವೋ ಒಂದು ವೃತ್ತಿಯೋ ಹಳೆಯದೆಂದರೆ ಅದನ್ನು ಬಿಡೋಣ ಎಂದು ಹೇಳುವವರುಂಟು. ನಾನು ಸೂಚಿಸಿರುವಂತೆ ನಾವು ಹಳೆಯದೆಂದು ಹೇಳುವ ಪದಗಳೂ ವೃತ್ತಿಗಳೂ ನಿಜವಾಗಿಯೂ ಹಳೆಯವಲ್ಲ; ಬರವಣಿಗೆಯಲ್ಲಿ ಬಳಕೆಯಲ್ಲಿ ಇದ್ದಿರುವ ವಿಶೇಷರೂಪ ವೃತ್ತಿಗಳು.

ಆದಕಾರಣ ಅವನ್ನು ಬಿಡುವುದು ಅಯುಕ್ತವಾಗುತ್ತದೆ. ಎಲ್ಲರಿಗೂ ತಿಳಿಯುವ, ಇನ್ನೂ ಬಳಕೆಯಲ್ಲಿರುವ, ಮಾತು ರೀತಿಗಳನ್ನು ಬಿಟ್ಟರೆ ಭಾಷೆಯ ವಾಕ್‌ಶಕ್ತಿ ಕಡಮೆಯಾಗುತ್ತದೆ. ಹೀಗೆ ಆಗುವ ನಷ್ಟಕ್ಕೆ ಪ್ರತಿಯಾಗಿ ಲಾಭವೇನೂ ಕಾಣುವುದಿಲ್ಲ. ಆಡುವ ಮಾತಿನಲ್ಲಿ ವಾಡಿಕೆಯಲ್ಲಿಲ್ಲದ ಸುಲಭವಾದ ಕೆಲವು ರೂಪವೃತ್ತಿಗಳಿಂದ ಕನ್ನಡದ ಪದ್ಯಗಳಲ್ಲಿ ಮಾತುಗಳು ಅಂದಚೆಂದದಿಂದ ಸೇರಿ ನಡೆಯುತ್ತವೆ. ಇವುಗಳನ್ನು ಬಿಟ್ಟರೆ ರಚನೆ ಕರ್ಕಶವಾಗುವುದು. ಹೀಗೆ ಮಾಡಲು ಯಾವ ಕಾರಣವೂ ಇಲ್ಲ. ನಿಜವಾಗಿ ಈಗ ನಾವು ಮಾಡಬೇಕಾಗಿರುವುದು ಬೇರೆಯ ರೀತಿಯ ಪ್ರಯತ್ನ. ಅದು ಮುಖ್ಯವಾಗಿ ಕನ್ನಡದ ಶಬ್ದಕೋಶದಲ್ಲಿ. ಹಿಂದೆ ಪ್ರಯೋಗದಲ್ಲಿದ್ದ ಅನೇಕ ಮಾತುಗಳು ಈಗ ವ್ಯವಹಾರದಿಂದ ಕಳಚಿಹೋಗಿವೆ. ಇಂಥ ಮಾತುಗಳು ಎಲ್ಲೋ ಒಂದೊಂದು ಕಡೆ ಜನರಲ್ಲಿ ಈಗಲೂ ಬಳಕೆಯಲ್ಲಿವೆ; ವಿಶೇಷವಾಗಿ ಪುಸ್ತಕಗಳಲ್ಲಿ ಸಿಕ್ಕುತ್ತವೆ. ಇಂಥ ಮಾತುಗಳನ್ನು ನಾವು ದಿನದ ಭಾಷೆಗೆ ಮತ್ತೆ ತರಬೇಕು. ಬಾನ್ ಬೈಗು ಎಂಬ ಮಾತುಗಳು ಇದಕ್ಕೆ ಉದಾಹರಣೆ. ಇಂಥ ಮಾತುಗಳು ನೂರಾರಿವೆ. ಇವನ್ನು ಉಪಯೋಗಕ್ಕೆ ತರುವುದರಿಂದ ದಿನದ ಮಾತಿನಲ್ಲಿ ಅಂದ ಹೆಚ್ಚುತ್ತದೆ. ಮಳೆಯಾದ ಮೇಲೆ ಕೆರೆಗೆ ಹರಿದುಬಂದು ಸೇರುವ ನೀರನ್ನು ಬರ್ಾವು, ಬರವು ಎಂದು ಹೇಳುವುದನ್ನು ನಾನು ಕೇಳಿದ್ದೇನೆ; ಒಡವು ಎಂದರೆ ಕೆರೆಯ ಕಟ್ಟೆಯಲ್ಲಿ ಮಧ್ಯೆ ಸ್ವಲ್ಪ ಕೊಚ್ಚಿಹೋದರೆ ಬೀಳುವ ಅಂತರ. ದುಡುಕು ಎಂದರೆ ಚೆನ್ನಾಗಿ ನಿಲ್ಲದ ಕಲ್ಲಿನ ಮೇಲೆ ಅಡಿ ಇಟ್ಟಾಗ ಅದು ಹೇಗೋ ಹಾಗೆ ತಟ್ಟನೆ ಬಗ್ಗುವುದು ಎಂಬ ಅರ್ಥ. ಈ ಅರ್ಥಗಳಲ್ಲಿ ನಾವು ಈಗ ಯಾವ ಮಾತುಗಳನ್ನು ಉಪಯೋಗಿಸುತ್ತಿದೇವೆ ಎಂದು ಯೋಚಿಸಿದರೆ ಈ ಮಾತುಗಳನ್ನು ಬಳಕೆಗೆ ತರುವುದು ಎಷ್ಟು ಆವಶ್ಯಕವೆಂದು ಸ್ಪಷ್ಟವಾಗುತ್ತದೆ. ನಮ್ಮ ದುರದೃಷ್ಟಕ್ಕೆ ಇಂಥ ಸಂದರ್ಭದಲ್ಲಿ ವಿದ್ಯಾವಂತರ ಬಾಯಿಗೆ ಇಂಗ್ಲೀಷ್ ಮಾತುಗಳು ಸುಲಭವಾಗಿ ಬಂದುಬಿಡುತ್ತವೆ; ಕನ್ನಡದ ಮಾತು ಒಂದನ್ನು ಬಳಸಬೇಕೆಂಬ ಆವಶ್ಯಕತೆ ನಮಗೆ ಕಾಣುವುದಿಲ್ಲ; ಆಸೆಯಂತೂ ಅದಕ್ಕೆ ಮೊದಲೇ ಇಲ್ಲ. ಭಾಷೆ ಉಳಿಯುವುದಕ್ಕೆ ಈ ರೀತಿಯ ಮಾತುಗಳನ್ನು ಹೆಚ್ಚು

ಹೆಚ್ಚಾಗಿ ಬಳಸುವುದು ಒಂದು ಮುಖ್ಯವಾದ ಹೆಜ್ಜೆ. ಮಾತು ಹೋಗಿರುವಂತೆ ಅನೇಕ ಸಂದರ್ಭಗಳಲ್ಲಿ ಮಾತು ಇದ್ದು ಅರ್ಥ ಒಂದು ಹೋಗಿರುವುದು ಉಂಟು. 'ಎಣೆ' ಎಂದರೆ ಒಂದಕ್ಕೊಂದು ಸಮ ಎಂಬ ಅರ್ಥ ನಮ್ಮಲ್ಲಿ ಈಗ ಇದೆ. ಇದೇ ಮಾತು ಒಂದು ಕಾಲದಲ್ಲಿ ಒಂದಕ್ಕೊಂದು ಸಮನಾದ ಎರಡು ಪದಾರ್ಥ ಎಂಬ ಅರ್ಥದಲ್ಲಿ ವಾಡಿಕೆಯಲ್ಲಿತ್ತು. ಎಂದರೆ ಒಂದು ಜೊತೆ ಪಂಚೆ ಎನ್ನುವಂತೆ ಒಂದು ಎಣೆ ಪಂಚೆ ಎಂದು ಆಗ ಹೇಳಬಹುದಾಗಿತ್ತು. ಇಂಥ ಅರ್ಥಗಳನ್ನು ಮತ್ತೆ ಬಳಕೆಗೆ ತರುವುದು ಭಾಷೆಯ ಪದಕೋಶಕ್ಕೆ ಮತ್ತಷ್ಟು ಮಾತನ್ನು ಸೇರಿಸುವುದು.

## ನುಡಿಯ ಬೇರುಗಳು

ನಮ್ಮ ಭಾಷೆಯಲ್ಲಿ ಮಾಡಬೇಕಾಗಿರುವ ಬಹುಮುಖ್ಯವಾದ ಒಂದು ಕಾರ್ಯ ನಮ್ಮ ನುಡಿಯ ಬೇರುಗಳನ್ನು ಬಿಡಿಸಿ ನೋಡುವುದು. ನಾವು ಸಾಮಾನ್ಯವಾಗಿ ಒಂದು ಎಂದು ತಿಳಿದಿರುವ ಹಲವು ಮಾತು ನಿಜದಲ್ಲಿ ಎರಡು ಮಾತುಗಳ ಒಂದು ಮುದ್ದೆ ಎಂದು ಈ ಮೊದಲೇ ಭಾಷಾಶಾಸ್ತ್ರದಲ್ಲಿ ಉಕ್ತವಾಗಿದೆ. ಇದಕ್ಕೆ ಬಹು ಸಾಮಾನ್ಯವಾದ ಉದಾಹರಣೆ ಎಣ್ಣೆ–ಎಳ್ ನೆಯ್. ಇದರಂತೆ ಹತ್ತಿರ, ಇರುಳ್ ಎಂಬ ಮಾತುಗಳೂ ಸೇರುವೆಯ ಮಾತುಗಳು. ಇರ್ ಎಂದರೆ ರಾತ್ರಿ. ಅದನ್ನು ನಾವು ಇಬ್ಬನಿ ಎಂಬ ಮಾತಿನಲ್ಲೂ ಕಾಣುತ್ತೇವೆ. ಇರುಳ್ ಇರ್ + ಉಳ್ ಹೇಗೋ ಹಾಗೆಯೇ ಮರುಳ್, ಕರುಳ್ ಎಂಬ ಮಾತುಗಳೂ ಬೇರೆಯ ಪದಗಳೊಂದಿಗೆ 'ಉಳ್' ಪದ ಸೇರಿ ಆಗಿರುವುದು ಸ್ಪಷ್ಟವಾಗಿದೆ. ತಿರುಳ್, ಕರುಳ್, ಹುರುಳ್ ಎಂಬ ಮಾತುಗಳೂ ಇಂಥವೇ ಇರಬೇಕು. ಅ, ಇ, ಉ, ಎ ಎಂಬ ತುಣುಕುಗಳಿಗೆ ಒಂದೊಂದು ವಿಶಿಷ್ಟ ಅರ್ಥವಿತ್ತೆನ್ನುವುದು ಅವನ್, ಇವನ್, ಉವನ್, ಎವನ್ ಎಂಬ ಮಾತುಗಳಿಂದ ಕಾಣುತ್ತದೆ. ಹಾಗೆಯೇ ಅನ್, ಅಳ್ ಎಂಬ ಪದಗಳಿಂದ ಕಾಣುವಂತೆ 'ನ್' ಎನ್ನುವುದು ಪುಲ್ಲಿಂಗ ಸೂಚಕವಾದ ತುಣುಕಾಗಿಯೂ 'ಳ್' ಸ್ತ್ರೀಲಿಂಗ ಸೂಚಕವಾದ ತುಣುಕಾಗಿಯೂ ಉಪಯೋಗಿಸಲ್ಪಟ್ಟಿರಬೇಕು. ಅನ್, ಅಳ್ – ನೋಡಿ. ಆಣ್ ಎಂದರೆ ಗಂಡು, ಆಲು ಎಂದರೆ

ಹೆಂಡತಿ ಎಂಬ ಅರ್ಥಗಳನ್ನೂ ನೋಡಿ. ಇದರಂತೆ ತನ್ ಎಂಬ ತುಣುಕಿನ ಮೂಲ ಅರ್ಥವೂ ಅದರಿಂದ ತಾನ್, ತನ್ನ – ಮಾತುಗಳು ಬಂದಿರುವುದೂ ಈ ತುಣಕು ತಂದೆ, ತಂಗೆ, ತಮ್ಮ, ತಮ್ಮಡಿ ಎಂಬ ಮಾತುಗಳಲ್ಲಿ ಅಡಗಿರುವುದೂ ಪರಿಶೀಲನೆಗೆ ಅರ್ಹವಾದ ವಿಷಯ. ತು, ದು, ಇಂಥದೇ ಒಂದು ತುಣುಕು. ಒಳಿತು, ಕರಿದು ಎಂಬೆಡೆಗಳಲ್ಲಿ ಇ ಉಚ್ಚಾರಣೆಯ ಸೌಕರ್ಯಕ್ಕಾಗಿ ಆಗಮಿಸಿದ ಸ್ವರ. ದ್ರಾವಿಡಭಾಷೆಯ ಒಂದು ವ್ಯಂಜನ ಸರಳವೂ ಪರುಷವೂ ಆಗಬಹುದಾದ ಕಾರಣದಿಂದ ಒಂದು ಮಾತನ್ನು ಸ್ವಲ್ಪ ಭಿನ್ನವಾದ ಎರಡು ಕಾರ್ಯಕ್ಕೆ ಉಪಯೋಗಿಸುವುದು ವಾಡಿಕೆಯಾದಂತೆ ಕಾಣುತ್ತದೆ. ಇದನ್ನು ನಮ್ಮ ಶಬ್ದಕೋಶದಲ್ಲಿ ಹಲವು ಕಡೆ ಕಾಣಬಹುದು. ಬೆಳಕು ನಾಮಪದ, ಬೆಳಗು ಕ್ರಿಯೆ ಮತ್ತು ಅದರಿಂದ ಬರುವ ನಾಮಪದ; ಕುರಿ, ಗುರಿ; ಕೋಟೆ, ಗೋಡೆ; ಇವೂ ಇದಕ್ಕೆ ಉದಾಹರಣೆಗಳು. ಕೋಟೆಯ ಗೋಡೆ, ಬಚ್ಚಿಡು ಎಂಬವು ನಿಜದಲ್ಲಿ ಗೇಟ್‌ಬಾಗಿಲು ಎಂಬಂತೆ ಒಂದೇ ಅರ್ಥದ ಎರಡು ಮಾತುಗಳ ಸೇರುನುಡಿಗಳು. ನಮ್ಮ ಮಾನ್ಯಮಿತ್ರರಾದ ಶ್ರೀ. ಶಂಕರರಾವಜೋಶಿ ಅವರು ಇಂಥ ಮಾತುಗಳನ್ನು ಕುರಿತ ಒಂದು ಲೇಖನವನ್ನು ಈ ಸಭೆಯ ಮುಂದೆ ಇದೇ ನಿವೇದಿಸುವವರಾಗಿದಾರೆ.

## ಮಾತು ಬಾಳಿನ ಚಿತ್ರ

ಇದೇ ಸಂದರ್ಭದಲ್ಲಿ ನಾವು ಪರಿಶೀಲಿಸಬೇಕಾದ ವಿಷಯ ಇನ್ನೊಂದಿದೆ. ಅದು ನಮ್ಮ ಜನರ ಭಾವನೆಗಳು ನಮ್ಮ ನುಡಿಯಲ್ಲಿ ಪ್ರಕಟವಾಗಿರುವ ರೀತಿ. ನಾವು ಈಗ ಪೂಜಿಸುವ ಪರತತ್ತ್ವವನ್ನು ದೇವರು ಎಂಬ ಸಂಸ್ಕೃತ ಪದದಿಂದ ನಿರ್ದೇಶಿಸುತ್ತೇವೆ. ದೇವ ಎಂಬ ಮಾತಿನ ಪರ್ಯಾಯವಾದ ದೆವ್ವ ಎನ್ನುವುದು ಒಂದು ದುಷ್ಟ ಸತ್ವವನ್ನು ಕುರಿತಿರುವುದು ಗಮನಾರ್ಹವಾದ ಮಾತು. ದೇವರು ನೋಡಿಕೊಳ್ಳುತ್ತಾನೆ ಎಂದು ಹೇಳುವಲ್ಲಿ ಮಾತಿನರೂಪ ಬಹುವಚನ, ಪ್ರಯೋಗ ಏಕವಚನ. ತಮಿಳಿನಲ್ಲಿ ದೇವರು ಎಂಬ ಅರ್ಥಕ್ಕೆ ದೇಶ್ಯಪದ ಇದೆಯಂತೆ. ಇದನ್ನು ತಮಿಳಿನ ಒಂದು ಹೆಮ್ಮೆಯೆಂದು ಜನ ಹೇಳುವುದನ್ನು ನಾನು ಕೇಳಿದೇನೆ.

ಕನ್ನಡಕ್ಕೆ ಈ ಹೆಮ್ಮೆಯನ್ನು ಯಾರೂ ಆರೋಪಿಸಿಲ್ಲ. ದೇವ ಎಂಬ ಮಾತು ಬರುವ ಮುನ್ನ ಕನ್ನಡದ ಜನ ಆ ಅರ್ಥಕ್ಕೆ ಯಾವ ಮಾತನ್ನು ಬಳಸುತ್ತಿದ್ದರು ಎನ್ನುವುದು ವಿಚಾರಾರ್ಹವಾದ ವಿಷಯ. 'ಪೆರ್ಮ' ಎಂಬುದು ಆ ಮಾತು ಇರಬಹುದೆ ? ಎಲ್ಲಮ್ಮ, ಎಲ್ಲಪ್ಪ ಎಂಬ ಹೆಸರುಗಳು ನಮ್ಮ ಜನರು ದೇವರನ್ನು ಸರ್ವನು ಎಂದು ಗ್ರಹಿಸಿದ್ದನ್ನು ತೋರಿಸುತ್ತವೆ. 'ಕಲ್ಲ' ಎಂಬ ಹೆಸರು ಅವನು ಸ್ಥಾಣು ಎಂದೂ ಅಚಲನೆಂದೂ, ದೃಢನೆಂದೂ; ಗುಂಡ ಎನ್ನುವುದು ಅವನು ಪರಿಪೂರ್ಣ ಎಂದೂ ಗ್ರಹಿಸಿದ್ದನ್ನು ತೋರಿಸುತ್ತವೆ. ಹಲಸಂಗಿ, ಉಚ್ಚಂಗಿ ಎಂಬ ಮಾತುಗಳು ಭಗವಂತನ ಅನುಗ್ರಹದ ವಿಸ್ತಾರವನ್ನು, ಅವನು ಸ್ವಪ್ರಕಾಶನಾಗಿರುವುದನ್ನು ಗ್ರಹಿಸಿದ ವಿಷಯವನ್ನು ತೋರಿಸುತ್ತವೆ. ದ್ರಾವಿಡ ಜನರು ಸ್ವರ್ಗ, ನರಕ ಎಂಬ ಅರ್ಥಕ್ಕೆ ಪದಗಳನ್ನು ಬಳಸಲಿಲ್ಲವೆಂತಲೂ ಅವರಿಗೆ ಸಾಮಾನ್ಯವಾಗಿ ನರಕದ ಪರಿಚಯವಿರಲಿಲ್ಲವೆಂತಲೂ ಶಾಸ್ತ್ರಜ್ಞರು ಹೇಳಿದಾರೆ. ಹಿಂದಿನ ಕಾಲಕ್ಕೆ ನರಕವನ್ನು ಕಂಡಿದ್ದರೂ ಕಾಣದಿದ್ದರೂ ಈಚೆಗೆ ನಮಗೆ ಅದರ ಪರಿಚಯ ಸಾಕಾದಷ್ಟು ಆಗಿದೆ. ನಾನು ೧೯೨೭ನೆಯ ಇಸವಿಯಲ್ಲಿ ಮದರಾಸಿನಲ್ಲಿ ಕೊಟ್ಟ ಕೆಲವು ಉಪನ್ಯಾಸಗಳಲ್ಲಿ ನಮ್ಮ ಸೀಮೆಯ ಸ್ಥಳಗಳ ಹೆಸರುಗಳನ್ನು ಕುರಿತು ನಾಲ್ಕು ಮಾತನ್ನು ಹೇಳಿದೆನು. ನಮ್ಮ ಮಾನ್ಯಮಿತ್ರರಾದ ಶ್ರೀ. ಅಗರದ ನರಸಿಂಹಯ್ಯನವರು ನಮ್ಮ ಈ ಸಮ್ಮೇಳನ ತಿರುವಾಂಕೂರಿನಲ್ಲಿ ಸೇರಿದಾಗ ಈ ವಿಷಯ ಕುರಿತು ಒಂದು ಲೇಖನವನ್ನು ಓದಿದರಂತೆ. ಹಾವೇರಿಯಲ್ಲಿರುವ ನಮ್ಮ ಮಾನ್ಯಮಿತ್ರರಾದ ಬೆಂಗೇರಿಯವರು ಕರ್ನಾಟಕದ ಊರ ಹೆಸರುಗಳನ್ನು ಕುರಿತು ಅನ್ವೇಷಣ ಮಾಡುತ್ತಿರುವುದಾಗಿ ನಾನು ಕೇಳಿದೆನು. ಇತರ ಸ್ನೇಹಿತರೂ ಈ ವಿಷಯದಲ್ಲಿ ಸಾಮಗ್ರಿಯನ್ನು ಶೇಖರಿಸಿರಬಹುದು. ಇದೆಲ್ಲ ಬೇಗನೆ ಪ್ರಕಟವಾಗಿ ಈ ವಿಚಾರ ಮುಂದುವರಿಯಲೆಂದು ನಾವು ಪ್ರಾರ್ಥಿಸಬೇಕಾಗಿದೆ.

## ತಿದ್ದಿದ ವ್ಯಾಕರಣ

ಇದೇ ಹೊತ್ತಿನಲ್ಲಿ ನಾವು ಮಾಡಬೇಕಾಗಿರುವ ಇನ್ನೊಂದು ಕೆಲಸ, ನಮ್ಮ ಭಾಷೆಯ ವ್ಯಾಕರಣವನ್ನು ಪರಿಷ್ಕರಿಸಿಕೊಳ್ಳುವುದು. ಕುರಿಗಳು

ಬಂದವು, ಕುರಿಗಳನ್ನು ತಂದರು ಎಂದು ಯಾವ ಕನ್ನಡಿಗನೂ ಆಡುವು ದಿಲ್ಲ. ಕುರಿಗಳು ಎನ್ನುವಷ್ಟೇ ಸ್ಪಷ್ಟವಾಗಿ ಕುರಿ ಎನ್ನುವುದು ಬಹುವಚನ. ಕೆಲವು ವಾಡಿಕೆಯ ರೂಪಗಳನ್ನು ನಾವು ಗ್ರಾಮ್ಯವೆಂದು ಎಣಿಸುತ್ತೇವೆ. 'ನೀನು ಬಂದಿ' ಎನ್ನುವಲ್ಲಿ ಬಂದಿ ಎನ್ನುವುದು ಹೀಗೆ ಗ್ರಾಮ್ಯವೆಂದು ನಮ್ಮ ತಿಳಿವಳಿಕೆ. ಸರಿಯಾಗಿ ನೋಡಿದರೆ ಬಂದೆ ಎನ್ನುವುದು ಎಷ್ಟು ಸ್ವಚ್ಛವೋ ಬಂದಿ ಎನ್ನುವುದೂ ಅಷ್ಟೇ ಸ್ವಚ್ಛ. ಹಾಗೂ ನೋಡಿದರೆ, ಬಂದೆ ಎನ್ನುವುದಕ್ಕಿಂತ ಬಂದಿ ಹೆಚ್ಚು ಸ್ವಚ್ಛವೇ ಇರಬಹುದು. ನಾನು ಇಲ್ಲಿ ವ್ಯಾಕರಣಕ್ಕೆ ವಿರೋಧವಾಗಿ ಏನನ್ನೂ ಹೇಳುತ್ತಿಲ್ಲ. ಸರಿಯಾದ ಉಕ್ತಿಗೆ ಸಾಧಕವಾಗುವ ನಿಯಮಗಳು ಉಕ್ತಿಯಷ್ಟೇ ಅಮಾನುಷ, ಅಪೌರುಷೇಯ; ಆದರೆ ಆ ನಿಯಮಗಳನ್ನು ಬರೆದಿಟ್ಟಿರುವ ಗ್ರಂಥಗಳು ಅಮಾನುಷವಲ್ಲ, ಅಪೌರುಷೇಯವಲ್ಲ. ಅವುಗಳಲ್ಲಿ ಗ್ರಹಿಕೆ ತಥ್ಯದಿಂದ ಬೇರೆಯಾಗಿರುವುದು ಅಸಾಧ್ಯವೇನೂ ಅಲ್ಲ. ಕೇಶಿರಾಜನು ತನಗೆ ತಿಳಿದ ಕನ್ನಡವನ್ನು ತೆಗೆದುಕೊಂಡು ತನ್ನ ಓದು ತನ್ನ ಪರಿಶೀಲನೆ ತನ್ನ ದರ್ಶನಕ್ಕೆ ಸರಿಯೆಂದು ತೋರಿದ ಸೂತ್ರಗಳನ್ನು ನಿರ್ಮಿಸಿದನು. ಎಷ್ಟು ಹೇಳಿದರೂ ಇಂಥ ಸೂತ್ರಗಳು ಉಕ್ತಿಯಿಂದ ಬಂದವು ಹೊರತು ಬೇರೆಯಲ್ಲ. ಬೇರೆ ಅಲ್ಲದೆ ಇದ್ದದ್ದು ವೈಯಾಕರಣಿಯ ಯೋಗ್ಯತೆಗೆ ಕುಂದು ತರುವುದೆಂದು ನಾವು ಭಾವಿಸಬಾರದು. ಯಾವ ವೈಯಾಕರಣಿಯೂ ತನ್ನ ಬುದ್ಧಿ ತನ್ನ ಅನುಭವಕ್ಕೆ ಹೊಳೆದದ್ದನ್ನು ಹೇಳಬಹುದಲ್ಲದೆ ಮತ್ತೇನನ್ನು ಹೇಳ ಬೇಕು? ಆದರೆ ತಿಳಿವಳಿಕೆಯ ಸಾಮಗ್ರಿ ಹೆಚ್ಚಿದಂತೆ ನಾವು ಹಿಂದಣ ಸೂತ್ರಗಳನ್ನು ಪರೀಕ್ಷಿಸಿ ನೋಡಿ ಅವಶ್ಯಕಂಡಲ್ಲಿ ಪುನರ್ವಿಮರ್ಶೆ ಮಾಡ ಬೇಕು. ಅಂಗೈ ಎಂಬ ಮಾತನ್ನು ಪೂರ್ವಿಕರು ಅಡಿ+ ಕೈ = ಅಂಗೈ ಎಂದು ಸಮಾಸ ಬಿಡಿಸಿದ್ದುಂಟು. ಈಚೆಗೆ ಬಲ್ಲವರು ಇದನ್ನು ಅಗಂ + ಕೈ ಎಂದು ಬಿಡಿಸಿದ್ದಾರೆ. ಅಂಗೈ ಎನ್ನುವಲ್ಲಿ ಮೊದಲ ಅರ್ಧ 'ಅಗಂ' ಕೂಡ ಆಗಬೇಕಾಗಿದ್ದಿಲ್ಲ. ಅದು ಬರಿಯ 'ಅಂ' ಎಂದೇ ಇರಬಹುದು. 'ಅಂದ' ಎಂಬ ಮಾತಿನಲ್ಲಿ ಕಾಣುವ ಅನ್ ವಿಶಾಲ, ಸುಂದರ ಎಂಬ ಅರ್ಥವನ್ನು ಕೊಡುವ ತುಣುಕು. ನಮ್ಮ ಮಾನ್ಯ ಮಿತ್ರರಾದ ಶ್ರೀ. ಕಡಬ ರಾಘವಾಚಾರ್ಯರು ವ್ಯಾಕರಣ ಸೂತ್ರಗಳ ಪರಿಷ್ಕರಣವನ್ನು ಕುರಿತು

ಒಂದು ಲೇಖನವನ್ನು ತಮ್ಮಲ್ಲಿ ನಿವೇದಿಸುವವರಾಗಿದ್ದಾರೆ. ಭಾಷಾಭಿಮಾನಿಗಳೆಲ್ಲ ಈ ವಿಚಾರದ ಚರ್ಚೆಯನ್ನು ಸ್ವಾಗತಿಸುವರೆಂದು ನಾನು ನಂಬಿದೇನೆ.

## ಮುಂಬರಿವಿನ ಸೂತ್ರ

ಇಂಥ ಮಾತಿನಲ್ಲಿ ಎತ್ತಲೋ ಹೊಸದಾರಿಗೆ ಹೋಗುವುದಕ್ಕಿಂತ ಸಂಪ್ರದಾಯವನ್ನು ಹಿಡಿದು ನಡೆಯುವುದು ಕ್ಷೇಮವೆನ್ನುವ ಮನೋಧರ್ಮದವರು ಅನೇಕರಿದೇವೆ. ನಿಜವಾಗಿ ನಾನೂ ಇದೇ ಮನೋಧರ್ಮದವನು. ಯಾವುದಾದರೊಂದು ಹೊಸ ಮಾತನ್ನು ತಂದು ಅದನ್ನು ಬೇಗನೆ ಸಿದ್ಧಾಂತ ಮಾಡುವೆವೆನ್ನುವಾಗ ನನ್ನ ಮನಸ್ಸು ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ. ಆದರೆ ಇತರ ವಿಷಯಗಳಲ್ಲಿ ಹೇಗೆಯೋ ಹಾಗೆಯೇ ಭಾಷಾ ಶಾಸ್ತ್ರದಲ್ಲಿಯೂ ಕೂಡ ಕ್ಷೇಮತಪ್ಪದ ಬೆಳವಣಿಗೆಯ ಸೂತ್ರ ಇದೇ: ವಿಚಾರ ತೊಡರಿಲ್ಲದೆ ಇರಬೇಕು; ಸಿದ್ಧಾಂತವನ್ನು ಎಚ್ಚರಿಕೆಯಿಂದ ಮಾಡಬೇಕು. ವಿಚಾರದ ಪದ್ಧತಿ ಪರದೇಶದವರು ಮೊದಲಿಟ್ಟದ್ದು ಎಂಬ ಕಾರಣದಿಂದ ಅದರ ವಿಷಯದಲ್ಲಿ ಅಪನಂಬಿಕೆ ಪಡುವುದೂ ನಮಗೆ ಬೇಡ. ಕೆಲವು ಕಾಲದವರೆಗೆ ನಮ್ಮ ಸೀಮೆಯ ಹೊಸ ವಿದ್ಯಾವಂತರಲ್ಲಿ ಪಡುವಲ ದೇಶದಿಂದ ಬಂದದ್ದೇ ಸರಿಯೆಂದು ಹೇಳುವ ಮನೋವೃತ್ತಿ ಕಂಡುಬಂದಿತು. ಈ ರೀತಿಯ ಬುದ್ಧಿಗೆ ಮಕಾಲೆ ಮಹನೀಯನು ತಳಹದಿ ಹಾಕಿದನು; ನಮ್ಮವರು ಅದರ ಮೇಲೆ ಕಟ್ಟಡವನ್ನು ಎಬ್ಬಿಸಿದರು. ಈಗ ಈ ಜನದ ಬುದ್ಧಿ ಇನ್ನೊಂದು ಕಡೆಗೆ ಉಯ್ಯಾಲೆ ಹೋದಂತೆ ತೋರುತ್ತಿದೆ. ಸರಿಯಾಗಿ ನೋಡಿದರೆ ಪ್ರಾಚ್ಯದೇಶಗಳ ವಿಚಾರ ಪದ್ಧತಿ ಎಂದೂ ಪಾಶ್ಚಾತ್ಯ ದೇಶಗಳ ವಿಚಾರ ಪದ್ಧತಿ ಎಂದೂ ಪರಸ್ಪರ ವಿರುದ್ಧವಾದ ಎರಡು ವಿಚಾರ ಪದ್ಧತಿಗಳಿವೆಯೇನು? ಪ್ರಾಚ್ಯ ಪದ್ಧತಿಯ ವಿದ್ವತ್ತನ್ನು ಪ್ರಶಂಸೆ ಮಾಡುವವರು ಪಾಶ್ಚಾತ್ಯ ಪದ್ಧತಿಯ ವಿದ್ವತ್ತಿಗಿಂತ ಅದು ಆಳವಾದದ್ದು ಸಮಗ್ರವಾದದ್ದು ಎಂಬಂತೆ ಮಾತನಾಡುತ್ತಾರೆ. ನಮ್ಮ ಜನರ ಹಿಂದಣ ಕಾಲದ ವಿದ್ವತ್ತಿನ ರೀತಿಯಲ್ಲಿ ಈ ಆಳ ಈ ಸಮಗ್ರತೆಯ ಒಂದು ಭಾವ ಇರುವುದೂ ನಿಜ. ಯಾವುದಾದರೊಂದು ವಿಷಯವನ್ನು ಎತ್ತಿಕೊಂಡು ಮಾತನಾಡುವಾಗ ಪಂಡಿತ

ನಾದವನು ಅದಕ್ಕೆ ಸಂಬಂಧಪಟ್ಟ ಸೂತ್ರವನ್ನೂ ವೃತ್ತಿಯನ್ನೂ ಕೋಶದಲ್ಲಿರುವ ಅರ್ಥವನ್ನೂ ಒಂದಾದಮೇಲೆ ಒಂದನ್ನು ಕಂಠಪಾಠವಾಗಿ ಹೇಳಿದರೆ ಪಾಂಡಿತ್ಯ ಸಮಗ್ರವೆಂದು ಕಾಣುವುದು ಸಹಜವಾಗಿದೆ. ಆದರೆ ಆಯಾ ಮಾತುಗಳನ್ನು ಹಾಗೆ ಕಂಠಪಾಠವಾಗಿ ಹೇಳುವುದಕ್ಕೆ ಆಗದ ಒಬ್ಬ ಮನುಷ್ಯನೂ ಅಷ್ಟೆ ಪಂಡಿತನಾಗಿರುವುದು ಸಾಧ್ಯ. ಇದನ್ನು ನಾವು ತಿಳಿಯಬೇಕು. ಖಚಿತವಾದ ಪಾಂಡಿತ್ಯಕ್ಕೆ ಒಂದು ರೀತಿಯ ಕಂಠಪಾಠ, ಜ್ಞಾಪಕಶಕ್ತಿ ಒಂದು ಕಾಲದಲ್ಲಿ ತೀರ ಆವಶ್ಯಕವಾಗಿದ್ದವು. ಈಗ ಕೋಶಗಳು ವೃತ್ತಿವ್ಯಾಖ್ಯೆಗಳು ಸುಲಭವಾಗಿ ಅಚ್ಚಾಗಬಹುದು; ಅವುಗಳ ಪ್ರತಿಗಳನ್ನು ಅಷ್ಟೇನೂ ಹಣವಂತರಲ್ಲದವರೂ ಸಂಪಾದಿಸಿ ಇಟ್ಟುಕೊಳ್ಳಬಹುದು. ಹೀಗಿರುವಲ್ಲಿ ಬಾಯಿಪಾಠ ಪೂರ್ವದಲ್ಲಿ ಎಷ್ಟು ಆವಶ್ಯಕವಾಗಿತ್ತೋ ಅಷ್ಟು ಆವಶ್ಯಕವಾಗುವುದಿಲ್ಲ. ಬಾಯಿಪಾಠ ಬೇಡವೆಂದರೆ ವಿಷಯ ತಿಳಿದಿರುವುದು ಬೇಡ ಎಂದು ಹೇಳುತ್ತಿದೇನೆಂದು ಯಾರೂ ಭಾವಿಸಬಾರದು. ಬೇಡದಿರುವುದು ಬಾಯಿಪಾಠ ಮಾತ್ರ. ಅದೂ ಹಿಂದಿನ ಬಾಯಿಪಾಠದ ಪ್ರಮಾಣದಲ್ಲಿ ಬೇಕಿಲ್ಲ ಎಂದು ನನ್ನ ಅರ್ಥ. ಪಾಶ್ಚಾತ್ಯ ಪದ್ಧತಿಯ ಪಾಂಡಿತ್ಯ ಕೂಡ ವಿಷಯ ಜ್ಞಾನ ಇಲ್ಲದೆ ಪಾಂಡಿತ್ಯ ಎನಿಸಿಕೊಳ್ಳುವುದಿಲ್ಲ. ಪಾಶ್ಚಾತ್ಯ ರೀತಿಯ ಪಾಂಡಿತ್ಯದಲ್ಲಿ ಹೊಸಕಾಲದ ವಿದ್ಯಾವಂತರಿಗೇ ಕೆಲವು ದೋಷಗಳು ಕಾಣುತ್ತಿವೆ. ಪಾಶ್ಚಾತ್ಯ ಪಂಡಿತರು ನಾವು ಪಾವನವೆಂದು ಗಣಿಸುವ ಗ್ರಂಥವನ್ನು ಚರ್ಚಿಸುವುದರಲ್ಲಿ ಅದರ ಮರ್ಯಾದೆಗೆ ಕಡಮೆಯಾದ ಒಂದು ಧ್ವನಿಯಿಂದ ಮಾತನಾಡುತ್ತಾರೆ. ಅಥವಾ ಅನೇಕರು ಈ ಮೊದಲು ಹಾಗೆ ಆಡಿದ್ದುಉಂಟು. ರಾಮ, ಸೀತೆ ಇವರನ್ನು ಗ್ರೀಕ್ ಕಾವ್ಯಗಳ ನಾಯಕನಾಯಕಿಯರನ್ನು ಚರ್ಚಿಸುವಂತೆ ಕ್ರೈಸ್ತಮತದ ಉನ್ನತಿಯ ಕೋಡಿನಿಂದ ಇಂಥವರು ಪರಿಶೀಸಿದುದುಂಟು; ಭಾರತೀಯರು ಮತಗ್ರಂಥಗಳೆನ್ನುವ ಕೃತಿಗಳನ್ನು ಅವುಗಳ ರೀತಿಯ ಗ್ರೀಕ್ ಗ್ರಂಥಗಳೊಂದಿಗೆ ಹೋಲಿಸಿ ಚೆನ್ನಾಗಿ ಬಲ್ಲ ಗ್ರೀಕ್ ಗ್ರಂಥದ ರಸ ಅರ್ಥನುರ್ಥ ತಿಳಿದ ಸಂಸ್ಕೃತ ಕಾವ್ಯದ ರಸಕ್ಕಿಂತ ಹೆಚ್ಚು ಎಂಬಂತೆ ಪಕ್ಷಪಾತ ಬುದ್ಧಿಯಿಂದ ವಿಮರ್ಶಿಸಿದ್ದೂ ಉಂಟು. ಆದರೆ, ಈ ದೋಷ ಪದ್ಧತಿಯದಲ್ಲ; ನಿಲುವಿನದು.

ವಿಚಾರ ಮತ್ತು ಅದನ್ನು ಸಮೀಚೀನವಾಗಿ ಮಾಡುವ ನಿಯಮಗಳು ಸ್ಥಳಸ್ಥಳಕ್ಕೆ ದಿಕ್ಕುದಿಕ್ಕಿಗೆ ಬೇರೆಯಾಗಲಾರವು. ಹಿಂದೆ ಪಾಶ್ಚಾತ್ಯರನ್ನು ಅನುಕರಿಸಿ ನಮ್ಮ ಸಂಸ್ಕೃತಿಯನ್ನು ನಕ್ಕ ನಾವು ಈಗ ಆ ನಿಲುವಿನ ಎದುರು ಮೂಲೆಗೆ ನುಗ್ಗಿ ಪಾಶ್ಚಾತ್ಯವೆನ್ನುವುದೇ ಅಸಾಧು ಎನ್ನುವ ತಪ್ಪನ್ನು ಮಾಡಬಾರದು. ಪಾಶ್ಚಾತ್ಯ ವಿದ್ವಾಂಸನೊಬ್ಬನ ಅಭಿಪ್ರಾಯವನ್ನು ನಾವು ನಿರಾಕರಿಸುವುದಾದರೆ ಅದಕ್ಕೆ ಕಾರಣವನ್ನು ಕಾಣೋಣ. ಅದನ್ನು ತಿಳಿಯೋಣ. ಆ ಕಾರಣ ಅವನ ನಿಲುವಿನಲ್ಲಿದ್ದರೆ ವಿಚಾರದ ಪದ್ಧತಿ ಪಾಶ್ಚಾತ್ಯವೆಂಬ ಕಾರಣದಿಂದ ಅದು ನಮಗೆ ಬೇಡ ಎನ್ನದೆ ಇರೋಣ. ಪಾಶ್ಚಾತ್ಯ ಪದ್ಧತಿಯಿಂದ ಅನ್ವೇಷಣ ಮಾಡುತ್ತಿರುವ ನಮ್ಮ ದೇಶದ ಪಂಡಿತರಲ್ಲಿಯೂ ಅವರ ಪದ್ಧತಿ ಪಾಶ್ಚಾತ್ಯವೆಂಬ ಕಾರಣದಿಂದ ಅಪನಂಬಿಕೆ ತೋರದೆ ಇರೋಣ.

## ಭಾಷೋಪಾಸಕನ ದರ್ಶನ

ನಾನು ಗುರುತಿಸಿಕೊಂಡಿರುವ ಮಾತು ಇನ್ನೂ ನಾಲ್ಕಾರು ಉಳಿದಿವೆ. ಆದರೂ ಅವನ್ನೆಲ್ಲ ಈಗಲೇ ಹೇಳಿ ತಮ್ಮನ್ನು ಬೇಸರ ಪಡಿಸಲು ನನಗೆ ಇಷ್ಟವಿಲ್ಲ. ಈಗಾಗಲೆ ನಾನು ಬಹುವೇಳೆಯನ್ನು ತೆಗೆದುಕೊಂಡಾಯಿತು. ಇನ್ನಷ್ಟನ್ನು ತೆಗೆದುಕೊಳ್ಳುವುದಕ್ಕೆ ಸಂಕೋಚಪಡುತ್ತೇನೆ. ಆದರೂ ಈ ಸಂದರ್ಭದಲ್ಲಿ ಭಾಷೆಯ ಅಭ್ಯಾಸವನ್ನು ಕುರಿತ ನನ್ನ ನಂಬಿಕೆಯನ್ನು ತಮ್ಮ ಸನ್ನಿಧಿಯಲ್ಲಿ ಸ್ಪಷ್ಟವಾಗಿ ಬಿನ್ನವಿಸಲು ಅಪೇಕ್ಷಿಸುತ್ತೇನೆ. ಭಾಷೆಯ ಪರಿಶೀಲನ ವೈಯಾಕರಣಿಗೆ, ಪ್ರಾಕ್ತನ ವಿಮರ್ಶಕನಿಗೆ, ಮಾತ್ರ ತಕ್ಕುದಾದ ವಿಲಕ್ಷಣ ವಿದ್ಯೆಯಲ್ಲ. ಭಾಷೆಯನ್ನು ಸರಿಯಾಗಿ ಪ್ರಯೋಗಿಸಬೇಕೆಂಬ ಆಶೆಯುಳ್ಳ ಯಾವನೂ ಈ ವಿದ್ಯೆಯನ್ನು ಪುರಸ್ಕರಿಸದೆ ಗತಿಯಿಲ್ಲ. ಒಂದು ಕೋವಿಯನ್ನು ಹಿಡಿದು ಬಳಸಲು ಕಲಿಯುವವನಿಗೆ ಅದನ್ನು ಬಿಚ್ಚಿ ಹತ್ತುತುಂಡಾಗಿ ಇಟ್ಟು ಮತ್ತೆ ಜೋಡಿಸುವುದನ್ನು ಹೇಳಿ ಕೊಡುತ್ತಾರೆ; ಅದನ್ನು ನಿರ್ಮಲವಾಗಿ ಇಟ್ಟುಕೊಳ್ಳುವುದನ್ನು ಕಲಿಸುತ್ತಾರೆ. ಕೋವಿಯಿಂದ ಗುರಿಯನ್ನು ಹೊಡೆಯುವ ಚಾತುರ್ಯದಂತೆಯೇ ಕುರಿತ ಅರ್ಥವನ್ನು ಮಾತಿನಿಂದ ಮುಟ್ಟುವ

ಚಾತುರ್ಯ ಒಂದು ಇದೆ. ಕೋವಿಯ ವಿವರ ತಿಳಿಯದೆ ಆ ಗುರಿ ಹೇಗೆ ಕೈಸೇರುವುದಿಲ್ಲವೋ ಹಾಗೆಯೇ ಮಾತಿನ ವಿವರವನ್ನು ಅರಿಯದೆ ಅದರಿಂದ ಅರ್ಥವನ್ನು ಮುಟ್ಟುವುದು ಕಷ್ಟ. ಒಂದು ಪದ ಹೇಗೆ ಆಗಿದೆ? ಅದರ ಅರ್ಥ ಒಂದು ಕಾಲದಲ್ಲಿ ಹೇಗಿತ್ತು, ಆಮೇಲೆ ಹೇಗೆ ಆಯಿತು, ಇಂದು ಹೇಗಿದೆ? ಚೆನ್ನಾಗಿ ಬರೆಯುವೆವೆನ್ನುವವರಿಗೆ ಈ ಎಲ್ಲ ಅರಿವೂ ಆವಶ್ಯಕ. ಕೋವಿಯಿಂದ ಗುರಿಯ ಕಣ್ಣನ್ನು ಹೊಡೆದಾಗ ಕೋವಿಕಾರನಿಗೆ ಆಗುವ ಆನಂದ, ಭಾಷೆಯನ್ನು ಬಳಸುವ ಲೇಖಕನಿಗೆ ಒಂದು ಮಾತನ್ನು ಸರಿಯಾದ ಸ್ಥಳದಲ್ಲಿ ಸರಿಯಾದ ಅರ್ಥದಲ್ಲಿ ಬಳಸಿದ ವೇಳೆ, ಓದುವವನಿಗೆ ತನ್ನ ಮನಸ್ಸಿನ ಅರ್ಥವನ್ನು ಮುಟ್ಟಿಸಿದ ವೇಳೆ ಆಗುತ್ತದೆ. ಈ ಆನಂದ ಗಳಿಸಲರ್ಹವಾದದ್ದು. ಇಷ್ಟೇ ಅಲ್ಲದೆ ಈ ಶಾಸ್ತ್ರದ ಅಭ್ಯಾಸದಲ್ಲಿ ಮತ್ತೊಂದು ಸುಖ ಇದೆ. ಮಾತುಗಳ ಪರಿಶೀಲನದಿಂದ ಮನುಷ್ಯನ ಭಾವನೆ ಹರಿಯುವ ರೀತಿ ಸ್ಪಷ್ಟವಾಗುತ್ತದೆ. ಅದು ಸ್ಪಷ್ಟವಾದಾಗ ಭಾಷೋಪಾಸಕನಿಗೆ ಎಲ್ಲ ತತ್ತ್ವಗಳ ಮೂಲದ ಒಂದು ಅನಿರ್ವಚನೀಯ ಸತ್ಯದ ದರ್ಶನ ಲಭಿಸುತ್ತದೆ. ಕಾಳಿದಾಸನು ಹೇಳಿರುವಂತೆ ಯಾವ ಹೊಳೆಯಲ್ಲೇ ಆಗಲಿ ಅದರ ಗುರಿಯವರೆಗೂ ಹರಿದರೆ ನಾವು ಮುಟ್ಟುವುದು ಸಮುದ್ರ. ಹಾಗೆಯೇ ಇಲ್ಲಿ ಹೇಳಬಹುದು: ಯಾವುದೇ ಶಾಸ್ತ್ರವನ್ನು ತಳಮುಟ್ಟ ಅಭ್ಯಾಸಮಾಡಿರಿ, ನೀವು ಎಲ್ಲ ಶಾಸ್ತ್ರಗಳ ಗುರಿಯಾದ ಜ್ಞೇಯವನ್ನೆ ಮುಟ್ಟುವಿರಿ. ಆಂಗ್ಲ ಕವಿ ಬ್ರೌನಿಂಗ್ ಒಬ್ಬ ವೈಯಾಕರಣಿಯನ್ನು ವರ್ಣಿಸಿದಾನೆ. ರೋಗರುಜಿನವನ್ನು ಲೆಕ್ಕಿಸದೆ ಆಯುಸ್ಸು ಕಳೆಯಿತೆಂದು ಚಿಂತಿಸದೆ ಈ ವೈಯಾಕರಣಿ ಹೋಟಿ ಎನ್ನುವುದರ ನಿಷ್ಪತ್ತಿ, ಓನ್ ಪ್ರತ್ಯಯದ ಸ್ವರೂಪ ಎಂದು ಕಣ್ಣುಮುಚ್ಚುವವರೆಗೂ ಸಿದ್ಧಾಂತ ಮಾಡುತ್ತಲೆ ಇದ್ದನಂತೆ. ಆ ವೈಯಾಕರಣಿಯ ವ್ಯವಸಾಯ ವ್ಯರ್ಥವಲ್ಲವೆಂದು ಬ್ರೌನಿಂಗ್ ಅವನ ಶಿಷ್ಯರ ಬಾಯಿಂದ ಹೇಳಿಸಿದಾನೆ. ನಾನೂ ಆ ಶಿಷ್ಯವರ್ಗದಲ್ಲಿ ಸೇರಿದವನು. ಶಬ್ದಶಾಸ್ತ್ರವನ್ನು ಬುಡಮುಟ್ಟ ಉಪಾಸಿಸುವ ಗುರು ಪುಣ್ಯಶಾಲಿ. ಅವನು ಕುಳ್ಳಿರಲು ಉನ್ನತ ಪೀಠವನ್ನು ಹಾಕಬೇಕು. ತನ್ನ ಹಸುಳೆಯ ಕಿರಿಯ ಬಾಯಲ್ಲಿ ಏಳು ಲೋಕಗಳನ್ನು ಕಾಣುವ ತಾಯಂತೆ ಪದಗಳನ್ನು ಪರಿಶೀಲಿಸುವ ಭಾಷೋಪಾಸಕನು ನುಡಿಯ

ಬೇರುಗಳಲ್ಲಿ ತುಣುಕುಗಳಲ್ಲಿ ನಾವು ಮಾತು ಎಂದು ಕರೆಯುವ ತತ್ತ್ವದ ಅದ್ಭುತ ರಹಸ್ಯವನ್ನು ಸಂದರ್ಶಿಸುತ್ತಾನೆ. ಭೌತಶಾಸ್ತ್ರಜ್ಞನು ಅಣುವನ್ನು ಪರೀಕ್ಷಿಸಿ ಅದು ಒಂದು ಸೌರವ್ಯೂಹವೆಂದು ಕಾಣುತ್ತಾನಂತೆ. ಕವಿ ರೇಣುವಿನಲ್ಲಿ ವಿಶ್ವವನ್ನು ಕಾಣುತ್ತಾನೆ; ಪುಷ್ಪದಲ್ಲಿ ಬ್ರಹ್ಮದ ಹಾಸವನ್ನು ತಿಳಿಯುತ್ತಾನೆ. ಹಾಗೆಯೇ ಡುಕೃಞ್ ಕರಣೆಯ ಉಪಾಸನೆಯಿಂದ ವೈಯಾಕರಣಿ ಬ್ರಹ್ಮವನ್ನು ಮುಟ್ಟುತ್ತಾನೆ. ಅಸಾಧುವಾದ ಎಲ್ಲ ಸಂಕೋಲೆಗೂ ಅಡ್ಡಿಮಾಡುವಂತೆ ನಾನು ಅಸಾಧು ವ್ಯಾಕರಣ ಸೂತ್ರಗಳಿಗೂ ಅಡ್ಡಿಯನ್ನು ಒಡ್ಡುತ್ತೇನೆ. ಇದು ಹೊರತು ಭಾಷೆಯ ತತ್ತ್ವಗಳನ್ನು, ಉಕ್ತಿಯ ನಿಯಮಗಳನ್ನು, ಅರಿಯುವುದಕ್ಕೂ ವಿವರಿಸುವುದಕ್ಕೂ ಕೈಹಾಕುವ ಶಾಸ್ತ್ರೋಪಾಸಕನಿಗೆ ಎಲ್ಲ ಹೊತ್ತಿನಲ್ಲೂ ನಾನು ಕೈಮುಗಿಯುವವನು; ಶುಶ್ರೂಷೆ ಮಾಡುವವನು.

## ಮುಗಿವ ಮಾತು

ಮಹನೀಯರೆ, ಇನ್ನು ತಾವು ಈ ಸಭೆಯ ಕಾರ್ಯಕಲಾಪವನ್ನು ಆರಂಭಿಸಬೇಕೆಂದು ಬೇಡುತ್ತೇನೆ. ಚರ್ಚೆಯಲ್ಲಿ ಭಾಗವಹಿಸುವುದೂ ಸಭೆಯ ಮುಕ್ತಾಯದಲ್ಲಿ ಯಾವ ಮಾತನ್ನಾದರೂ ಆಡುವುದೂ ನನಗೆ ಸಾಧ್ಯವಿಲ್ಲದ್ದರಿಂದ ಈಗಲೆ ಇನ್ನೊಂದು ಮಾತನ್ನು ಹೇಳಿ ಮುಗಿಸುತ್ತೇನೆ. ನಮ್ಮ ಈ ಅಧಿವೇಶನಕ್ಕೆ ಇಷ್ಟೊಂದು ಲೇಖನಗಳು ಬಂದಿರುವುದು ನನಗೆ ಹೆಮ್ಮೆ ಮತ್ತು ಸಂತೋಷದ ವಿಷಯ. ನಮ್ಮ ಭಾಷೆಯ ದುಡಿಮೆಗಾರರಿಗೆ ದುಡಿತಕ್ಕೆ ತಕ್ಕ ಕಂಬಳವಿಲ್ಲ. ಹೀಗಿದ್ದರೂ ಇಷ್ಟು ಜನ ಇಷ್ಟು ವಿವಿಧ ವಿಷಯಗಳನ್ನು ಕುರಿತು ದುಡಿಯುತ್ತಿರುವುದು ತಮ್ಮ ಭಾಷಾಭಿಮಾನವನ್ನೂ ಸೇವಾಶ್ರದ್ಧೆಯನ್ನೂ ವ್ಯಕ್ತಗೊಳಿಸುತ್ತದೆ. ಇಂಥ ಕೆಲಸಕ್ಕೆ ಮನುಷ್ಯರನ್ನು ಹೂಡುವ ವರೇಣ್ಯ ಸವಿತೃ ನಮ್ಮ ಬಾಳುಗಳನ್ನು ಸಿದ್ಧಿಯ ಸಂತೋಷದಿಂದ ತುಂಬಲಿ! ತೇಜಸ್ವಿನಾವಧೀತಮಸ್ತು, ಮಾವಿದ್ವಿಷಾವಹೈ.

## ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಒಂದು ಕತೆ)
ತಾಳೀಕೋಟೆ (ಒಂದು ಪ್ರಕರಣ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಒಂದು ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ಣಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ ೩ (ಲೇಖನಗಳು)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ
ಕರ್ಣಾಟಕದ ಜನಪದ ಸಾಹಿತ್ಯ
ಕಾಕನಕೋಟೆ
ಆದಿಕವಿ ವಾಲ್ಮೀಕಿ
ವಿಮರ್ಶೆ ೪ (ಲೇಖನಗಳು)
ಸಣ್ಣ ಕತೆಗಳು ೬
ಗೌಡರ ಮಲ್ಲಿ
ರಾಮನವಮಿ
ಮೂಕನ ಮಕ್ಕಳು

(ಇಂಗ್ಲೀಷಿನಲ್ಲಿ)

Popular Culture in Karnataka
Short Stories 4 Vols.
The Poetry of Valmiki
Subbanna

ಈ ಪುಸ್ತಕಗಳು ದೊರೆಯುವ ಸ್ಥಳಗಳು:—

ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ.
43–44, ಗವೀಪುರದ ವಿಸ್ತರಣ, ಬಸವನಗುಡಿ ಟಪಾಲು
ಸಾಹಿತ್ಯ ಭಂಡಾರ, ಹುಬ್ಬಳ್ಳಿ.

# ಮುನ್ನುಡಿ

ಈ ಪುಸ್ತಕ ನನ್ನ ಹಲವು ಭಾಷಣ ಲೇಖನಗಳ ಒಂದು ಸಂಕಲನ.

"ಕನ್ನಡದ ಮುಂಬರಿವು" ರಾಜಸೇವಾಸಕ್ತ ಬೆಳ್ಳೂರ ಮೈಲಾರ ಶ್ರೀಕಂಠಯ್ಯನವರ ಗೌರವಾರ್ಥವಾಗಿ ಸಂಪಾದಿಸಿದ "ಸಂಭಾವನೆ" ಗ್ರಂಥಕ್ಕಾಗಿ ಬರೆದ ಲೇಖನ. "ನಮ್ಮ ಹೊಸ ಸಾಹಿತ್ಯದ ಅಶ್ವಿನೀ ದೇವತೆಗಳು" ಮೈಸೂರು ಮಹಾರಾಜ ಕಾಲೇಜಿನ ಬೆಳ್ಳಿಯ ಹಬ್ಬದ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕಕ್ಕಾಗಿ ಬರೆದ ಲೇಖನ. "ಸಾಹಿತ್ಯದ ಗುರಿ" ೧೯೪೦ ರ ಸಾಹಿತ್ಯ ಸಮ್ಮೇಲನದ ಲೇಖಕ ಗೋಷ್ಠಿಯಲ್ಲಿ ಮಾಡಿದ ಅಧ್ಯಕ್ಷ ಭಾಷಣ. "ಜೀವನವನ್ನು ಕುರಿತ ಸಾಹಿತ್ಯ" ೧೯೪೬ ರ ಸಾಹಿತ್ಯ ಸಮ್ಮೇಲನದ ಕಾಲದಲ್ಲಿ ಮದರಾಸಿನ ಆಕಾಶವಾಣಿಯಲ್ಲಿ ಏರ್ಪಾಡಾಗಿದ್ದ ಒಂದು ಸಮುಚ್ಚಯದಲ್ಲಿ ಮಾಡಿದ ಹ್ರಸ್ವ ಆಲಾಪ. ಉಳಿದವು ನಾನು ಸಂಪಾದಿಸುತ್ತಿರುವ "ಜೀವನ" ಮಾಸ ಪತ್ರಿಕೆಯಲ್ಲಿ ಆಗಾಗ ಪ್ರಕಟವಾದ ಲೇಖನಗಳು.

ಒಂದೊಂದು ಸಂದರ್ಭದ ಪ್ರಸಕ್ತ ಸಂಗತಿಯನ್ನು ಕುರಿತವು ಎಂಬ ಕಾರಣದಿಂದ ಇವನ್ನು ನಾನು "ಪ್ರಸಂಗ" ಎಂದು ಕರೆದಿದ್ದೇನೆ. "ಕಾಸೆರಿ" ಎಂಬುದು ಫ್ರೆಂಚ್ ಭಾಷೆಯಲ್ಲಿ ಪ್ರಸಿದ್ಧವಾಗಿರುವ ಒಂದು ಲೇಖನ ಜಾತಿ. ಅದನ್ನು ಇಂಗ್ಲೀಷಿನಲ್ಲಿ "ಡಿಸ್ಕೋರ್ಸ್" ಅಥವಾ "ಟಾಕ್" ಎಂದು ಕರೆಯುತ್ತಾರೆಂದು ಕಾಣುತ್ತದೆ. ಇದನ್ನು ನಾವು ಆಲಾಪ ಎಂಬ ಶಬ್ದದಿಂದ ನಿರ್ದೇಶಿಸಬಹುದು. ಈ ಭಾಷಣ ಲೇಖನಗಳು ಸುಮಾರು ಈ ಜಾತಿಯವಾಗುತ್ತವೆ. ಆದರೆ "ಆಲಾಪ" ಎಂಬಲ್ಲಿ ಒಂದು ಸಂದರ್ಭದ ಪ್ರಸಕ್ತ ವಿಚಾರ ಎಂಬ ಧ್ವನಿ ಬರುವುದಿಲ್ಲ. ಆದ್ದರಿಂದ ಇಲ್ಲಿ "ಪ್ರಸಂಗ" ಎಂಬ ಹೆಸರು ಹೆಚ್ಚು ಉಚಿತವೆಂದು ಕಂಡಿದೆ.

ಈ ಪ್ರಸಂಗ ಕೆಲವದರಲ್ಲಿ ಒಂದು ಚರ್ಚೆಯ ಸರಣಿ ಕಾಣಬರುತ್ತದೆ. ಸಾಹಿತ್ಯದ ಕೃತಿಗಳು ಸದ್ಯದಕಾಲದ ಸಮಸ್ಯೆಗಳನ್ನು ಹರಿಸಬೇಕೆಂದು ಬಯಸುವ ನಮ್ಮ ಮಿತ್ರರು ಕೆಲವರು ತಮ್ಮ ಅಭಿಪ್ರಾಯ

ವನ್ನು ವ್ಯಕ್ತಪಡಿಸುವಲ್ಲಿ ಪ್ರಕಟಿಸಿದ ಕೆಲವು ಭಾವನೆಗಳನ್ನು ತಿದ್ದುವುದಕ್ಕೆ ಈ ಚರ್ಚೆಗಳನ್ನು ಮಾಡಬೇಕಾಯಿತು. ವಾದದ ಧ್ವನಿ ಇದ್ದರೂ ಲೇಖನಗಳಲ್ಲಿ ವ್ಯಕ್ತಿಗಳನ್ನು ಕುರಿತು ಟೀಕಿಸುವ ಉದ್ದೇಶ ಇಲ್ಲ. ಸಾಹಿತ್ಯದಲ್ಲಿ ಕೆಲವು ವೇಳೆ ಚರ್ಚೆ ಅವಶ್ಯಕವಾಗಿರುತ್ತದೆ. ಆದರೆ ಎಲ್ಲ ವೇಳೆಯೂ ಆ ಚರ್ಚೆ ಮರ್ಯಾದೆಯನ್ನು ಮರೆಯದೆ ನಡೆಯಬೇಕು, ಮತ್ತು ನಡೆಯುವುದು ಸಾಧ್ಯ. ನಾನು ಈ ನಿಯಮವನ್ನು ಪಾಲಿಸಿದೇನೆ ಎಂದು ನಾನು ನಂಬಿದೇನೆ. ಎಲ್ಲರೂ ಅದನ್ನು ಪಾಲಿಸಲೆನ್ನುವುದು ಸಾಹಿತ್ಯಪ್ರೇಮಿಗಳ ಹಾರೈಕೆಯಾಗಿರಬೇಕು.

ಈ ಭಾಷಣ ಲೇಖನಗಳಲ್ಲಿ ನಾನು ಪ್ರಕಟಿಸಿರುವ ಅಭಿಪ್ರಾಯಗಳನ್ನು ಪಾಠಕರು ತಾಳ್ಮೆಯಿಂದ ಕಾಣಬೇಕೆಂದು ನನ್ನ ಪ್ರಾರ್ಥನೆ. ಯಾವುದೇ ಒಂದು ಸಂಗತಿಯ ಬೇರೆ ಬೇರೆ ಮುಖದ ಅಭಿಪ್ರಾಯವನ್ನು ಅರಿತುಕೊಳ್ಳಬೇಕಾದರೆ ಸಹನೆ ತೀರ ಅವಶ್ಯಕ. ಹೀಗೆಂದುದರಿಂದ ಸಹನೆಗೆ ಅಸಾಧ್ಯವಾದ ಯಾವುದಾದರೂ ಮಾತನ್ನು ಗ್ರಂಥದಲ್ಲಿ ಹೇಳಿದೆ ಎಂದು ನಾನು ಒಪ್ಪಿಕೊಂಡಿದೇನೆಂದು ಯಾರೂ ಗ್ರಹಿಸಬಾರದು. ಸಾಹಿತ್ಯವನ್ನು ಅರಿಯಬಯಸುವವರು ವಿನಯಕ್ಕೆ ಹೀಗೆ ಅಪಾರ್ಥ ಮಾಡುವುದಾದರೆ ನಡೆಯಹೊರಟವರು ಮೊದಲ ಹೆಜ್ಜೆಯಲ್ಲಿ ಮುಗ್ಗುರಿಸಿದಂತಾದೀತು.

ಗವೀಪುರದ ವಿಸ್ತರಣ
ಬೆಂಗಳೂರು, ವ್ಯಯ ಸಂವತ್ಸರ
ದೀಪಾವಳಿ (23–10–46)

**ಮಾಸ್ತಿ ವೆಂಕಟೇಶ ಅಯ್ಯಂಗಾರ್.**

# ವಿಷಯಸೂಚಿ

# ಪ್ರಸಂಗ

## ಕನ್ನಡದ ಮುಂಬರಿವು

ಕನ್ನಡದ ಇಂದಿನ ಸಾಹಿತ್ಯ ನೂರು ವರ್ಷದ ಬೆಳಸು. ಶ್ರೀಮನ್ ಮಹಾರಾಜ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು ಕಳೆದ ಶತಮಾನದ ನಾಲ್ಕನೆಯ ದಶಕದಲ್ಲಿ ಮೈಸೂರು ದೇಶದ ಹೊಸ ವಿದ್ಯಾಭ್ಯಾಸವನ್ನು ಆರಂಭಮಾಡಿದರು. ಅದಾದ ಇಪ್ಪತ್ತೈದು ವರ್ಷದಮೇಲೆ ಭಾರತ ವರ್ಷದ ಸರಕಾರ ಅಲ್ಲಿಯೂ ಆಗ ಮೈಸೂರಿನ ಆಡಳಿತ ನಡೆಸುತ್ತಿದ್ದ ಆಂಗ್ಲ ಅಧಿಕಾರಿಗಳು ಇಲ್ಲಿಯೂ ವಿದ್ಯಾಭ್ಯಾಸದ ಒಂದು ಹೊಸ ಕ್ರಮವನ್ನು ಮೊದಲಿಟ್ಟರು. ರಾಜ್ಯ ನಮ್ಮ ಒಡೆಯರ ಕೈಗೆ ಬಂದ ಮೇಲೆ ವಿದ್ಯೆಗೆ ವ್ಯವಸ್ಥೆ ಮಾತ್ರ ಅಲ್ಲದೆ ಅದರ ಫಲವಾದ ಸಾಹಿತ್ಯಕ್ಕೂ ಉತ್ತೇಜನ ದೊರೆಯಲು ಮೊದಲಾಯಿತು. ಶ್ರೀಮನ್ಮಹಾರಾಜ ಶ್ರೀ ಚಾಮರಾಜ ಒಡೆಯರ ಆಶ್ರಯದಲ್ಲಿ ಹೊಸ ನಾಟಕ, ಪದ್ಯ, ಗದ್ಯ ಸೃಷ್ಟಿಯಾದುವು. ಕರ್ಣಾಟಕ ಭಾಷೋಜ್ಜೀವಿನೀ ಸಭೆ ಪಂಡಿತ ಮಂಡಳಿಗೆ ಇಂಬಾಗಿ ಏರ್ಪಟ್ಟಿತು. ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ ಆರಂಭವಾಯಿತು. ಜನದ ಜೀವನದಲ್ಲಿ ಹೊಸ ಸಾಹಿತ್ಯ ತರಬೇಕಾದ ಮಾರ್ಪಾಡು ಒಂದುಂಟು ಎಂಬ ತತ್ತ್ವ ಲೇಖಕರಾಗಬಹುದಾದ ಜನರ ಮನಸ್ಸಿನಲ್ಲಿ ರೂಪಗೊಂಡಿತು. ಪ್ರಾಚೀನ ಗ್ರಂಥಗಳನ್ನು ಹೊರಗೆ ತರುವುದಕ್ಕಾಗಿಯೂ ನವೀನ ಗ್ರಂಥಗಳ ನಿರ್ಮಾಣವನ್ನು ಪ್ರೋತ್ಸಾಹಿಸುವುದಕ್ಕಾಗಿಯೂ ಮೈಸೂರಿನ ವಿದ್ಯಾಭ್ಯಾಸದ ಇಲಾಖೆ ಕಾರ್ಯಕ್ರಮವನ್ನು ಕೈಗೊಂಡಿತು. ಹೀಗೆ ೧೯೦೦ನೆಯ ಇಸವಿಯ ವೇಳೆಗೆ ಹೊಸ ಸಾಹಿತ್ಯಕ್ಕೆ ಒಂದು ವೇದಿಕೆ ಸಿದ್ಧವಾಯಿತು.

ಸಾಹಿತ್ಯದ ವೇದಿಕೆ ಸಿದ್ಧವಾದರೂ ಅದನ್ನು ಸಿದ್ಧಪಡಿಸಿದವರು ಅದನ್ನು ತುಂಬಲು ಯಾವ ಸಾಹಿತ್ಯ ಬರುವುದೆಂಬುದನ್ನು ಅರಿತಿದ್ದಿರಲಾರರು. ಕನ್ನಡದ ಜನಕ್ಕೆ ಆಂಗ್ಲ ಸಾಹಿತ್ಯ ಭೌತಶಾಸ್ತ್ರಗಳ ಪರಿಚಯ ಮಾಡಿಕೊಟ್ಟ ಮಹನೀಯರು ತಮ್ಮ ಪ್ರಯತ್ನದ ಫಲವಾಗಿ ಕನ್ನಡದಲ್ಲಿ

ಇಂಗ್ಲೀಷ್ ಸಾಹಿತ್ಯದಂಥ ಸಾಹಿತ್ಯ ಬರುವುದೆಂದು ನಿರೀಕ್ಷಿಸಿದರು. ಆ ವಿದ್ಯಾಭ್ಯಾಸವನ್ನು ಪಡೆದ ಕನ್ನಡಿಗರು ಹಳೆಯ ಸಾಹಿತ್ಯದ ವಿಷಯದಲ್ಲಿ ಪಾಶ್ಚಾತ್ಯರ ಅಸಂತುಷ್ಟಿಯನ್ನು ಅನುಭವಿಸಿದರೂ ತಮ್ಮ ಭಾಷೆಯಲ್ಲಿ ಕೆಲಸಮಾಡಬೇಕು ಎಂದು ಯೋಚಿಸಿದ್ದು ಅಷ್ಟಾಗಿ ಕಾಣಲಿಲ್ಲ. ಹೊಸ ವಿದ್ಯಾಭ್ಯಾಸ ಕ್ರಮದಿಂದ ಪಾಂಡಿತ್ಯವನ್ನು ಪಡೆದಿದ್ದ ಸಾಂಪ್ರದಾಯಿಕ ವಿದ್ವಾಂಸರು ಹಿಂದಿನ ಸಾಹಿತ್ಯದ ಅನುಕರಣೆಯಲ್ಲಿ ಹೊರತು ಬೇರೆ ಹೇಗೂ ತಮ್ಮ ಶಕ್ತಿಯನ್ನು ವಿನಿಯೋಗಿಸಲಾರದೆ ಇದ್ದರು. ಒಬ್ಬ ಮಹನೀಯರು ಬಂಗಾಳಿ ಭಾಷೆಯ ಕಥೆ ಹಲವಾರನ್ನು ಕನ್ನಡಕ್ಕೆ ಭಾಷಾಂತರಮಾಡಿ ಓದುವ ಜನರಲ್ಲಿ ಒಂದು ಹೊಸ ರುಚಿಯನ್ನು ಬೆಳೆಸುತ್ತಿದ್ದರು; ಮತ್ತೆ ಕೆಲವರು ಮರಾಠಿಯಿಂದ ಕೆಲವು ಕೃತಿಗಳನ್ನು ಕನ್ನಡಿಸಿ ಹೊಸ ರೀತಿಯ ಓದುಗರಿಗೆ ಸ್ವಲ್ಪ ಗ್ರಾಸವನ್ನು ಒದಗಿಸುತ್ತಿದ್ದರು. ಆದರೆ ಯಾರೂ ತಾವು ಭಾಷಾಂತರಮಾಡುತ್ತಿದ್ದಂತಹ ಕೃತಿಗಳನ್ನು ಕನ್ನಡದಲ್ಲಿ ಕನ್ನಡಿಗರ ಜೀವನವನ್ನು ಚಿತ್ರಿಸಿ ರಚಿಸಬಹುದೆಂದು ಧೈರ್ಯಮಾಡಿದಂತೆ ತೋರುವುದಿಲ್ಲ. ಕನ್ನಡದ ಲೇಖಣಿ ಆಂಗ್ಲ ಸಾಹಿತ್ಯದ, ವಂಗ ಸಾಹಿತ್ಯದ, ಮಹಾರಾಷ್ಟ್ರ ಸಾಹಿತ್ಯದ, ಸಾಹಿತ್ಯ ಪಂಕ್ತಿಯನ್ನು ತಿದ್ದಿತು ಹೊರತಾಗಿ ಆ ಪಂಕ್ತಿಯಂತೆ ತನ್ನದೊಂದು ಪಂಕ್ತಿಯನ್ನು ಬರೆಯುವುದರಲ್ಲಿ ಆಗ ಇನ್ನೂ ತೊಡಗಲಿಲ್ಲ.

ಕೃತಿಯಲ್ಲಿ ತೊಡಗದಿದ್ದರೂ ಈ ತರ್ಜುಮೆಯ ಅಥವಾ ಪ್ರತಿಕೃತಿಯ ಸಾಹಿತ್ಯ ಕನ್ನಡದ ಜನಕ್ಕೆ ಹೊಸದೊಂದು ಉಸಿರನ್ನು ಒಂದೊಂದು ಸಂದರ್ಭದಲ್ಲಿ ತಂದಿತು. ಹೊಸಗನ್ನಡದ ಗದ್ಯ ಶೈಲಿಯ ಮೂಲಪುರುಷರಾದ ಶ್ರೀ ಚನ್ನಪಟ್ಟಣದ ವಾಸುದೇವಯ್ಯನವರು ಬರೆದ ಆರ್ಯಕೀರ್ತಿ ಗ್ರಂಥವು ಕನ್ನಡದ ಜನಕ್ಕೆ ಸ್ವಾತಂತ್ರ್ಯದ ಒಂದು ನಿಟ್ಟನ್ನು ತೋರಿಸಿಕೊಟ್ಟಿತು. ದೇಶಭಕ್ತಿ, ದೇಶಭಾಷಾ ಭಕ್ತಿ, ಸ್ವಜನಪ್ರೇಮ, ಭಾರತೀಯ ಇತಿಹಾಸವನ್ನು ಕುರಿತು ಅಭಿಮಾನ, ತಲೆಯೆತ್ತಿ ನಡೆಯುವ ಆತ್ಮ ವಿಶ್ವಾಸ: ಇವು ಆಪ್ಯಾಯಮಾನವಾದ ಭಾವನೆಗಳೆಂದು ಕನ್ನಡದ ಜನ ಆಗ ಮನಗಂಡರು. ಸ್ವಾತಂತ್ರ್ಯದ ಭಾವನೆ ಹೀಗೆ ಒಂದು ಜನತೆಯ ಚೇತನವನ್ನು ಮುಟ್ಟುವುದೇ ತಡ,

ಮುಟ್ಟಿದೊಡನೆ ಅಂಥ ಜನತೆಯಲ್ಲಿ ಇನ್ನೂ ಉಸಿರಿದ್ದರೆ ಅದರ ಬಾಳಿನ ಎಲ್ಲಾ ಭಾಗವನ್ನೂ ಆವರಿಸುವುದು. ಇದಕ್ಕೆ ತಕ್ಕಂತೆ ಹೊಸ ಶತಮಾನದ ಮೊದಲ ಹತ್ತು ವರ್ಷದಲ್ಲಿ ರಾಜಪುರುಷ ಲಾರ್ಡ್ ಕರ್ಜನರ ವಿಚಾರ ವಿಹೀನವಾದ ಕೆಲವು ನುಡಿನಡೆಗಳಿಂದ ಭಾರತವರ್ಷದಲ್ಲೇ ಸ್ವಾತಂತ್ರ್ಯದ ಅಪೇಕ್ಷೆ ಕೋಲಾಹಲದಿಂದ ಮೇಲೆದ್ದಿತು. ೧೯೧೦ನೆಯ ವರ್ಷದ ವೇಳೆಗೆ ಭಾರತ ಜನಾಂಗ ಇತಿಹಾಸದಲ್ಲಿ ಒಂದು ಹೊಸ ಪಥದಲ್ಲಿ ಕಾಲಿಟ್ಟಿತು. ರಾಜಕೀಯ ಆಂದೋಲನದೊಂದಿಗೆ ಜನಜೀವನದ ಇತರ ಭಾಗಗಳಲ್ಲಿ ಇದೇ ಸ್ವಾತಂತ್ರ್ಯಾಭಿಲಾಷೆಯ ಪ್ರಭಾವ ತಲೆದೋರಿತು.

ಹೊಸ ಶತಮಾನದ ಮೊದಲ ದಶಕದಲ್ಲಿ ಕಾಲೇಜುಗಳಲ್ಲಿ ಓದುತ್ತಿದ್ದ ಯುವಕರು ಹಲವರು ಸ್ವತಂತ್ರ ಸಾಹಿತ್ಯವನ್ನು ನಿರ್ಮಿಸುವ ಈ ಕೆಲಸದಲ್ಲಿ ತೊಡಗಿದರೆನ್ನುವುದು ಈಗ ನಮಗೆ ಕಾಣುತ್ತದೆ. ಹೊಸ ಸಾಹಿತ್ಯವನ್ನು ನಿರ್ಮಿಸೋಣ, ಅದಕ್ಕೆ ನಾವು ಮೂಲಪುರುಷರಾಗೋಣ, ಎಂದು ಹತ್ತು ಕಡೆಯ ಹತ್ತು ಜನ ಒಬ್ಬರೊಂದಿಗೊಬ್ಬರು ಮಾತನಾಡಿ ಒಂದು ಕಾರ್ಯಕ್ರಮವನ್ನು ಇವರು ಕೈಗೊಂಡರೆಂದು ನಾವು ಹೇಳಲಾಗು ವುದಿಲ್ಲ. ಪ್ರಕೃತಿಯ ಪ್ರೇರಣೆಗಳಂತೆ, ಇತಿಹಾಸದ ಪ್ರೇರಣೆಗಳಂತೆ, ಸಾಹಿತ್ಯದ ಪ್ರೇರಣೆಗಳೂ ಒಂದು ಕಾಲದಲ್ಲಿ, ಒಂದು ಸ್ಥಿತಿಯಲ್ಲಿ, ಬಾಳುತ್ತಿರುವ ಹಲವು ಜೀವನಗಳನ್ನು ಒಂದು ದಿಕ್ಕಿಗೆ ಸೆಳೆಯುತ್ತವೆ. ಆ ದಿಕ್ಕಿನಲ್ಲಿ ನಡೆದು ಮುಂದುವರಿದ ಮೇಲೆ ಆ ಪ್ರೇರಿತ ಜೀವಗಳು ತಮ್ಮ ಸಹೋದ್ಯೋಗಿಗಳನ್ನು ಕಂಡುಕೊಳ್ಳುತ್ತವೆ. ಆರಂಭದ ಆ ವರ್ಷ ಗಳಲ್ಲಿ ಹೊಸ ತರದ ಕೃತಿಯ ರಚನೆಯಲ್ಲಿ ತೊಡಗಿದವರ ಹೆಸರನ್ನೆಲ್ಲ ಇಲ್ಲಿ ಹೇಳುವುದು ಸಾಧ್ಯವಲ್ಲ. ಹಾಗೆ ಹೇಳುವುದು ಅನವಶ್ಯಕವೂ ಹೌದು. ಕರ್ಣಾಟಕ ಗ್ರಂಥಮಾಲೆಯಲ್ಲಿ, ಸುವಾಸಿನಿ, ಕೃಷ್ಣಸೂಕ್ತಿ, ಮಧುರವಾಣಿಗಳಲ್ಲಿ, ಇಂಥ ಇತರ ಪತ್ರಿಕೆಗಳಲ್ಲಿ ಹೊಸ ತರಹದ ಲೇಖನಗಳು ಕಂಡುಬಂದವು. ಬಹು ಕಾಲ ಕನ್ನಡಕ್ಕಾಗಿ ದುಡಿದು ದಿವಂಗತರಾದ ಶ್ರೀ ಎಂ. ಎಸ್. ಪುಟ್ಟಣ್ಣನವರು, ನಾರಾಯಣರಾಯರು, ಪಂಜೆ ಮಂಗೇಶರಾಯರು, ಶಾಂತಕವಿಗಳು; ಆ ಕಾಲದಲ್ಲಿ ಬರೆಯಲು ತೊಡಗಿ ದೇವರ ಕೃಪೆಯಿಂದ ಇನ್ನೂ ಕನ್ನಡದ ಸೇವೆಯಲ್ಲಿ ನಿರತ

ರಾಗಿರುವ ಬೆಳ್ಳೂರ ಮೈಲಾರ ಶ್ರೀಕಂಠಯ್ಯನವರು, ಶ್ರೀ ಬೆನಗಲ್ ರಾಮರಾಯರು, ಆಲೂರ ವೆಂಕಟರಾಯರು; ಇಂಥ ಇತರ ನಮ್ಮ ಹಿರಿಯರು ನಾಲ್ವತ್ತು ವರುಷದ ಸಾಹಿತ್ಯ ಸೇವೆಯ ಕುರುಹಾಗಿ ನಮ್ಮ ಹೊಸ ಸಾಹಿತ್ಯದ ಮುಖ್ಯ ಜ್ಯೋತಿಗಳಾಗಿ ದಾರಿ ತೋರುತ್ತ ಇದಾರೆ.

ಕೃತಿ ಸ್ವತಂತ್ರವಾದದ್ದು ಎಂದರೆ ಏನು? ಕೃತಿಯಲ್ಲಿ ಹೇಳಿರುವ ವಿಷಯ, ಅದನ್ನು ಹೇಳಿರುವ ಸಾಹಿತ್ಯ ಪದ್ಧತಿ, ಅಥವಾ ಆ ಹೇಳಿರುವ ರೀತಿ, ಇದು ಯಾವುದೇ ಆಗಲಿ ಸಂಪ್ರದಾಯದಿಂದ ಕುಂಠಿತವಾಗದೆ ಆತ್ಮವಿಶ್ವಾಸದಿಂದ ನಡೆದರೆ ಕೃತಿ ಸ್ವತಂತ್ರವಾಗುತ್ತದೆ. ಮೊದಲಿಂದ ಕಂಡ ದಾರಿಯನ್ನು ಬಿಟ್ಟು ಹೋಗುವುದಕ್ಕೆ ಪ್ರವೃತ್ತಿಯೇ ಇಲ್ಲದೆ ಅಥವಾ ಅಂಥ ಪ್ರವೃತ್ತಿ ಇದ್ದರೂ ಏನು ಮಾಡಿದರೆ ಏನಾಗುವುದೋ ಎಂಬ ಭಯದಿಂದ ಪಕ್ಕಕ್ಕೆ ಅಡಿಯಿಡಲಾರದೆ ನಡೆಯುವ ಮಂದಿ ಇಂಥ ಕೆಲಸವನ್ನು ಮಾಡಲಾರರು. ಇವರ ಶಕ್ತಿ ಕಡಿಮೆಯೆಂದಲ್ಲ; ಇವರ ಸಾಹಿತ್ಯ ಪ್ರೇರಣೆ ಕಿರಿಯದೆಂದಲ್ಲ; ಇವರ ಭಾಷಾಪ್ರೇಮ ಅಲ್ಪವೆಂದಲ್ಲ. ಈ ಎಲ್ಲದರಲ್ಲೂ ಇವರು ಸ್ವತಂತ್ರ ಕೃತಿಯ ನಿರ್ಮಾಪಕನಿಗಿಂತ ಮೇಲೆಯೇ ಇರಬಹುದು. ಅವನು ಪಡೆದ ಒಂದು ಪ್ರಚೋದನವನ್ನು ಇವರು ಪಡೆಯದೆ ನಿಲ್ಲುತ್ತಾರೆ ಅಷ್ಟೆ. ಆ ಪ್ರಚೋದನ ಸ್ವಲ್ಪ ಹೊರಗಿಂದ ಬರುತ್ತದೆ; ಬಹುಮಟ್ಟಿಗೆ ಒಳಗಿಂದ ಪುಷ್ಟವಾಗುತ್ತದೆ. ಹೀಗೆ ಮಾಡಿ ನೋಡೋಣ ಹೇಗಿರುತ್ತದೆ ಎಂದು ಅವನು ನೋಡುತ್ತಾನೆ. ಇದು ಪ್ರಯೋಗದ ಪದ್ಧತಿ. ಪ್ರಯೋಗವೆಲ್ಲ ಫಲಿಸುವುದಿಲ್ಲ. ನಾಡಿನ ಭಾಗ್ಯದಿಂದ, ಅವನ ಅದೃಷ್ಟದಿಂದ, ಕೆಲವು ಕೃತಿ ಚೆನ್ನವಾದರೆ ಅದು ಸಾಹಿತ್ಯ ಎಂಬ ಗೌರವವನ್ನು ಪಡೆಯುತ್ತದೆ. ಇದಾದೊಡನೆ ಅದು ಎಷ್ಟು ಅಲ್ಪ ರೀತಿಯಲ್ಲೇ ಆದರೂ ಸಾರಸ್ವತ ಸಾಮ್ರಾಜ್ಯವನ್ನು ವಿಸ್ತಾರಮಾಡುತ್ತದೆ. ನುಡಿಯ ಕಾವ್ಯ ಭಂಡಾರದಲ್ಲಿ ಒಂದು ವಸ್ತುವಾಗಿ ಸೇರುತ್ತದೆ; ಜನತೆಯ ಸಂಸ್ಕೃತಿಗೆ ರೂಪಗೊಟ್ಟ ಒಂದು ಮೂರ್ತಿಯಾಗುತ್ತದೆ.

ಭರತವರ್ಷದ ಹೊಸ ಯುಗದ ಮೊದಲಲ್ಲಿ ಕನ್ನಡದ ಹೃದಯ ಹೊಸದಾಗಿ ಏನನ್ನು ಬೇಡುತ್ತಿತ್ತು ಎಂದು ತಿಳಿಯಬೇಕಾದರೆ ನಾವು

ಆಗಣ ಇಂಥ ಕೃತಿಗಳನ್ನು ಎತ್ತಿ ನೋಡಬೇಕು. ಶ್ರೀಮಾನ್ ಶ್ರೀಕಂಠಯ್ಯನವರ ಇಂಗ್ಲೀಷ್ ಗೀತೆಗಳ ರೀತಿ, ಪದ್ಧತಿ, ಸರ್ವತ್ರ ಹೊಸವಾಗಿದ್ದಂತೆ "ಭರತಮಾತೆಯೆ ಭರತಮಾತೆಯೆ ಎಂದು ನೀ ತಲೆಯೆತ್ತುವೆ" ಎನ್ನುವ ಮನೋಭಾವ ಹೊಸ ಕಾಲದದು. ಅಂದಿನಿಂದ ಇಂದಿಗೆ ನಮ್ಮ ಸಾಹಿತ್ಯ ಅದೇ ದಾರಿಯಲ್ಲಿ ಮುಂದುವರಿದು ಬಂದಿದೆ. ವರ್ಷವರ್ಷಕ್ಕೆ ಹೊಸತಾಗಿ ಬಂದ ಸಂದರ್ಭಗಳ ಮಾತನ್ನೂ ಅದು ವ್ಯಕ್ತಪಡಿಸಲು ಯತ್ನಿಸಿದೆ. ಆದರೂ ಅದರ ಮುಖ್ಯ ಲಕ್ಷಣ ಬೇರೆ ಯಾಗಿಲ್ಲ. ಜನದ ಭಾವನೆಗೆ ಸಾಹಿತ್ಯ ರೂಪು ಕೊಡಬೇಕು. ಅಂದು ಕೊಡಲು ಮೊದಲು ಮಾಡಿ ಇಂದೂ ಆದು ನಮ್ಮ ಜನರ ಭಾವನೆಗೆ ರೂಪನ್ನು ಕೊಡುತ್ತಿದೆ.

ಒಟ್ಟು ಒಂದು ಕಾಲದ ಬರವಣಿಗೆಯನ್ನು ಕುರಿತು ಇಂಥ ಮಾತನ್ನು ಹೇಳುವುದು ಸಾಧ್ಯವೇ ಎಂದು ಯಾರಾದರೂ ಕೇಳಬಹುದು. ಯಾವ ಒಂದು ಕಾಲದ ಸಾಹಿತ್ಯವೂ ಹರಿವಿನಲ್ಲಿ ಒಂದು ಹೊಳೆಯನ್ನು ಹೋಲುತ್ತದೆ. ಶಯ್ಯೆಯ ಮಧ್ಯದಲ್ಲಿ ಹಾಯುತ್ತ ಹೊಳೆಯ ಹೆಚ್ಚು ಭಾಗವಾಗಿ ಒಂದು ಜಲರಾಶಿ ಒಂದು ವೇಗದಲ್ಲಿ ನಡೆಯುತ್ತದೆ. ಇತ್ತ ಅತ್ತ ಹೊಳೆಯ ಸ್ವಲ್ಪ ಭಾಗ ಬೇರೆಯ ಧಾಟಿಯಿಂದ ಹೋಗುತ್ತಿರುತ್ತದೆ. ವೇಗವನ್ನು ತಡೆಯುತ್ತ, ಕೆಲವು ವೇಳೆ ಸುಳಿಯಾಗುತ್ತ ಹಿಂದಕ್ಕೆ ತಿರುಗುತ್ತ ಇನ್ನಷ್ಟು ನೀರು ಇರುತ್ತದೆ. ಶಯ್ಯೆಯನ್ನೆ ಬಿಟ್ಟು ಬಯಲ ಮೇಲೆ ಹರಿಯುವ ನೀರೂ ಸ್ವಲ್ಪ ಇರಬಹುದು. ಸಾಹಿತ್ಯದ ಲಕ್ಷಣ ಹೀಗೆ, ಹಾಗೆ, ಎಂದು ಹೇಳುವಲ್ಲಿ ಬಹು ಜನರ ಮನಸ್ಸನ್ನು ಪ್ರತಿ ಬಿಂಬಿಸುವ ಬಹು ಭಾಗದ ಸಾಹಿತ್ಯ ನಮ್ಮ ದೃಷ್ಟಿಯಲ್ಲಿರುತ್ತದೆ. ಹಿಂದಿನ ದಾರಿಯೇ ದಾರಿ ಎನ್ನುವ ಹಲಕೆಲವು ಲೇಖಕರೂ ತೀರ ಹೊಸ ದಾರಿಗೆ ನುಗ್ಗುವ ಕೆಲ ಜನರೂ ಸಾಹಿತ್ಯ ರಾಷ್ಟ್ರದಲ್ಲಿ ಇರ ಬಹುದು. ಒಟ್ಟು ಸಾಹಿತ್ಯದ ಮಾತನ್ನು ಆಡುವಾಗ ಹೆಚ್ಚು ಸಂಖ್ಯೆಯ ಭಾವನೆಯನ್ನು ಗಮನಿಸುವುದಾಗುತ್ತದೆ. ನಮ್ಮ ಹೊಸ ಸಾಹಿತ್ಯ ವನ್ನು ಕುರಿತು ಈ ಮೊದಲು ಹೇಳಿದ ಮಾತನ್ನು ಈ ದೃಷ್ಟಿಯಿಂದ ಗ್ರಹಿಸಬೇಕು.

ಹೊಸ ಸಾಹಿತ್ಯ ಎಲ್ಲವೂ ದಾರಿ ತಪ್ಪಿದೆ ಎಂದು ಭಯಪಡುವ ಹಿರಿಯರಿದ್ದಾರೆ. ಹೊಸ ಬರಹದಲ್ಲಿ ಯಾವ ನಿಯಮ ಇರಬಹುದು ಎಂದು ನಿದಾನಿಸಿ ನೋಡದೆ ಇವರು ಅದರಲ್ಲಿ ನಿಯಮವಿಲ್ಲವೆಂದೇ ತಿಳಿಯುತ್ತಾರೆ. ನಿಯಮ ಇಲ್ಲವೆಂದು ತೋರಿಸುವುದಕ್ಕೆ ಇಂಥ ಹಿರಿಯರು ಹೊಸ ದೃಷ್ಟಿಯಿಂದ ನೋಡಿದರೂ ನಿಯಮ ತಪ್ಪಿದೆ ಎನ್ನ ಬೇಕಾದ ಕೃತಿಗಳನ್ನು ಎತ್ತಿಕೊಳ್ಳುತ್ತಾರೆ. ತಪ್ಪು ಎಂದಿದ್ದರೂ ತಪ್ಪೆ; ಹಳೆಯದಾದ ಮಾತ್ರಕ್ಕೆ ಎಲ್ಲವೂ ಒಳ್ಳೆಯದಾಗುವುದಿಲ್ಲ. ಹೊಸದಾದ ಮಾತ್ರಕ್ಕೆ ಎಲ್ಲವೂ ಒಳ್ಳೆಯದಾಗಲಾರದು. ಇಂದಿನ ಬಹಣೆ ತಪ್ಪಿದ ಪದ್ಯದಿಂದ ಹೊಸ ಸಾಹಿತ್ಯ ಎಲ್ಲ ಕೆಟ್ಟುಹೋಗಲಾರದು. ಹಿಂದೆ ವೃತ್ತ ಬರೆದವರು ಎಷ್ಟು ತಪ್ಪುಗಳನ್ನು ಬರೆದರೋ! ಅಷ್ಟರಿಂದ ವೃತ್ತದ ನಿಯಮಕ್ಕೆ ಅಭಾವ ಒದಗಲಿಲ್ಲ. ಇನ್ನು ಹೊಸ ಸಾಹಿತ್ಯದ ಕೆಲವು ಭಾಗದ ಜೀವನವರ್ಣನೆ ಅತಿಗೆ ಹೋಗುತ್ತದೆ ಎನ್ನುವವರು ಹಿಂದಿನ ಕಾಲದ ಸಾಹಿತ್ಯದ ಕೆಲವು ಭಾಗವನ್ನು ಮನಸ್ಸಿಗೆ ತಂದುಕೊಂಡರೆ ಸಮಾಧಾನವಾಗಬಹುದು. ಈಗಿನ ಸಿನೀಮಾ ಮಟ್ಟದ ಅತಿಶೃಂಗಾರ, ಆಯಾ ಕಾಲಕ್ಕೆ ತಕ್ಕಂತೆ ರಾವಣನ ಅಂತಃಪುರದ ವರ್ಣನೆಯಲ್ಲಿಯೂ ರಾಧಾಕೃಷ್ಣರ ಪ್ರೇಮದ ವರ್ಣನೆಯಲ್ಲಿಯೂ, ವತ್ಸರಾಜನ ಅಂತಃಪುರದ ಜೀವನದ ವರ್ಣನೆಯಲ್ಲಿಯೂ ತಕ್ಕಷ್ಟು ಕಾಣುತ್ತದೆ. ಎಲ್ಲ ಕಾಲದಲ್ಲೂ ಚಟ್ನಿ, ಉಪ್ಪಿನಕಾಯಿ ಉಂಟು; ಹಳಸಿದ ಅಡಿಗೆ ಉಂಟು. ಎಲ್ಲ ಕಾಲದಲ್ಲೂ ಇಂಥ ಶೃಂಗಾರ ಕೃತಿ ಉಂಟು. ಯಾವ ಕಾಲದಲ್ಲೂ ಸಾಹಿತ್ಯದ ಯೋಗ್ಯತೆಯನ್ನು ಅಳೆಯಬೇಕಾದರೆ ಆಗಿನ ಕೃತಿಗಳಲ್ಲಿ ಮಹಾ ಜನಕ್ಕೆ ಒಪ್ಪಿದ, ಮಹಾ ಜನದ ಅಭಿಪ್ರಾಯವನ್ನು ವ್ಯಕ್ತಪಡಿಸಿದ ಸಾಹಿತ್ಯವನ್ನು ಗಣಿಸಬೇಕು. ಇನ್ನು ಮಹಾಜನ ಯಾರು ಎಂದು ನಾನು ವಿವರಿಸುತ್ತ ಚರ್ಚೆಯನ್ನು ಬೆಳೆಸುವುದಿಲ್ಲ. ಓದುವವರಿಗೆ ನನ್ನ ಅರ್ಥ ತಕ್ಕಮಟ್ಟಿಗೆ ತಿಳಿದರೂ ಈ ಸಂದರ್ಭಕ್ಕೆ ಅದು ಸಾಕು.

ಇನ್ನೂ ನಮ್ಮ ಸಾಹಿತ್ಯ ಮುಂದುವರಿಯಬೇಕು. ಮುಂದುವರಿಯುತ್ತಿದೆ. ಮುಖ್ಯವಾಗಿ ಅದರಲ್ಲಿ ಸ್ವಾತಂತ್ರ್ಯಾಭಿಲಾಷೆ ಭದ್ರವಾಗಿ ನೆಲಸಬೇಕು. ಹಿಂದಣ ಮಂದಿ ಹಿಂದಿನದೇ ಚಂದ ಎಂದಂತೆ ಇಂದಿನವರು

ಹೊರಗಿನದೇ ಚೆಂದ ಎನ್ನುವ ಸಂಭವವಿದೆ. ಹೊಸ ವಿದ್ಯಾಭ್ಯಾಸದ ಪರಿಣಾಮವಾಗಿ ನಮ್ಮಲ್ಲಿ, ಹೊರಗಿನ ಜನರ ಮೆಚ್ಚಿಗೆಯೇ ಯೋಗ್ಯತೆಯ ಒರೆಗಲ್ಲು ಎನ್ನುವಂತೆ ನಾವು ನಡೆಯುತ್ತೇವೆ. ಒಂದು ಕಾಲಕ್ಕೆ ಇದು ಅವಶ್ಯವಾಗಿ ಇದ್ದಿರಬಹುದು. ಆ ಅವಸ್ಥೆ ಈಗ ನಮಗೆ ಬೇಕಿಲ್ಲ. ಹತ್ತಾರು ವಿಶ್ವವಿದ್ಯಾನಿಲಯಗಳಾಗಿ, ಸಾವಿರಾರು ಪ್ರತಿಭಾವಂತರು ಆಧುನಿಕ ಪ್ರಪಂಚದ ತಿಳಿವನ್ನು ಗ್ರಹಿಸಿ, ನೂರಾರು ಹಿರಿಯರಾದರೂ ಪರದೇಶದ ಯಾವ ಜ್ಞಾನಿಗಿಂತ ಕಡಿಮೆಯಿಲ್ಲ ಎಂಬ ಸ್ಥಿತಿಯನ್ನು ಮುಟ್ಟಿರುವಾಗ, ಭರತವರ್ಷ ತನ್ನ ಧ್ಯೇಯಗಳಿಗೆ, ಕಾರ್ಯಗಳಿಗೆ, ಪರರ ಪ್ರಶಂಸೆಯನ್ನು ಬೇಡುವುದು ಸರಿಯಲ್ಲ. ದಾಸ್ಯದ ಹೇಯ ಭಾವ ರಾಜಕೀಯವಲ್ಲ, ಆಂತರಿಕವಾದುದು; ಬುದ್ಧಿ ಮನಸ್ಸುಗಳನ್ನು ಸಂಕೋಲೆಯಲ್ಲಿ ಹಾಕಿರತಕ್ಕದ್ದು. ಭಾರತೀಯರು ಕೆಲವು ಕಾಲದ ಹಿಂದೆ ವಾರಣಾಸಿಯನ್ನು ಕ್ಯಾಮ್‌ನದಿ ಥೇಮ್ಸ್ ನದಿಗಳ ದಡಕ್ಕೆ ತೆಗೆದುಕೊಂಡು ಹೋಗಿ ಇಟ್ಟರು; ಈಗ ಅದನ್ನು ಗಂಗಾನದಿಯ ದಡಕ್ಕೆ ಮತ್ತೆ ತರಬೇಕು. ಭರತವರ್ಷ ಎಷ್ಟೋ ಕಾಲದಿಂದ ಬಯಸಿರುವ ತತ್ವಗಳನ್ನು ಸಾಧಿಸುವುದಕ್ಕೆ ಯತ್ನಮಾಡಬೇಕು.

ಈ ಮೂಲಸೂತ್ರವನ್ನು ಅನುಸರಿಸಿದ ಸಾಹಿತ್ಯ ಈಗಿನ ಕಾಲದ ಜೀವನವನ್ನು ವಿಸ್ತಾರವಾಗಿ ವಿವರವಿವರವಾಗಿ ಒಳಗೊಂಡು ಬೆಳೆಯುತ್ತದೆ. ಇಂದಿನ ಸಾಹಿತ್ಯ ಇಂದಿನ ಬಾಳುವೆಯಂತೆ ಸಾರ್ವಜನಿಕ ಆಗಬೇಕು. ಜೀವನದಷ್ಟು ವಿಸ್ತಾರವಾಗುವುದಲ್ಲದೆ ಜೀವನವನ್ನೇ ವಿಸ್ತಾರಗೊಳಿಸುವ ಒಂದು ಧ್ಯೇಯದಿಂದ ಅದು ಆವಿಷ್ಟವಾಗಬೇಕು. ಕನ್ನಡದ ಸಾಹಿತ್ಯ ಈ ಪದವಿಯನ್ನು ಏರಬೇಕಾದರೆ ಕನ್ನಡದ ಜನತೆ ಇನ್ನೂ ಚೆನ್ನಾಗಿ ಎಚ್ಚರಗೊಳ್ಳಬೇಕು. ಜನತೆ ಎಚ್ಚರಗೊಳ್ಳದೆ ಅರೆ ನಿದ್ರೆಯಲ್ಲಿಯೇ ಇರುತ್ತ ಅದರ ಕಣ್ಣಾದ ಲೇಖಕನು ಮಾತ್ರ ಹೆಚ್ಚು ಹೆಚ್ಚು ವಿಕಾಸವಾಗ ಬೇಕೆನ್ನುವುದು ಆಗದ ಮಾತು. ಈಗ ಕನ್ನಡದಲ್ಲಿ ಬರೆಯುವವರು ವಿಶೇಷ ವಾಗಿ ಹೊಸ ದಿನದ ತರುಣರು. ಹಿರಿಯರಾದವರು ಈಗಲೂ, ನಮಗೆ ಕನ್ನಡದಲ್ಲಿ ಮಾತನಾಡುವುದಕ್ಕೆ ಬರುವುದಿಲ್ಲ, ಬರೆಯುವುಕ್ಕೆ ಬರುವುದಿಲ್ಲ, ಎನ್ನುವವರಿದಾರೆ; ಕನ್ನಡದ ಗ್ರಂಥಗಳನ್ನು ಈಗಲೂ ಓದದೇ ಇದಾರೆ.

ಅಲ್ಲಿ ಇಲ್ಲಿ ಓದಿದರೆ ಲೇಖಕನನ್ನು ಕಂಡಾಗ ಪರವೆಯಿಲ್ಲ ಒಳ್ಳೆಯ ಕೆಲಸ ಮಾಡುತ್ತಿದ್ದೀರಿ ಎಂದು ಅನ್ಯರಂತೆ ಅರೆ ಮೆಚ್ಚಿಗೆಯ ಮಾತನ್ನು ಆಡುವವರಿದ್ದಾರೆ. ಕನ್ನಡ ತಮ್ಮದು, ತಮ್ಮ ಆರಾಧ್ಯ ದೈವ ಎನ್ನುವುದನ್ನು ಇವರು ಕಂಡಿಲ್ಲ. ಎಷ್ಟು ಬೇಗನೆ ಇಂಥ ಎಲ್ಲಾ ಹಿರಿಯರೂ ದೇಶಭಾಷೆಯ ಕಡೆಗೆ ಒಲೆಯುವರೊ ಅಷ್ಟು ಬೇಗನೆ ಕನ್ನಡ ನಮ್ಮ ಜೀವನದಲ್ಲಿ ಅದಕ್ಕೆ ತಕ್ಕದಾದ ಸ್ಥಾನವನ್ನು ಪಡೆಯುತ್ತದೆ.

ದೇಶಭಾಷೆ ಈ ಸ್ಥಾನವನ್ನು ಪಡೆದಾಗ್ಗೆ ದೇಶದ ಜನ ತಮ್ಮ ಜೀವನದ ಎಲ್ಲಾ ವ್ಯಾಪಾರಕ್ಕೂ ಸಹಜವಾಗಿ ಅದನ್ನೇ ಉಪಯೋಗಿಸುತ್ತಾರೆ. ಇಂಗ್ಲೆಂಡಿನಲ್ಲಿ ಇಂಗ್ಲಿಷ್ ಭಾಷೆಯನ್ನು ಇಂಗ್ಲಿಷ್ ಜನರು ಎಲ್ಲೆಲ್ಲಿ ಬಳಸುತ್ತಾರೋ ಅಲ್ಲೆಲ್ಲ ಕನ್ನಡ ನಾಡಿನಲ್ಲಿ ಜನರು ಕನ್ನಡ ಭಾಷೆಯನ್ನು ಬಳಸಬೇಕು. ದಿನದ ವ್ಯವಹಾರವಷ್ಟು ಮಾತ್ರವಲ್ಲ ; ಪರಸ್ಪರ ಬರೆಯುವ ಪತ್ರಗಳಲ್ಲಿ ಮಾತ್ರವಲ್ಲ ; ಕನ್ನಡದ ಜನ ಎಷ್ಟು ಇಂಗ್ಲೀಷ್ ಬಲ್ಲವರಾದರೂ ಹೊತ್ತು ಹೋಗುವುದಕ್ಕೆ ಕನ್ನಡದ ಪುಸ್ತಕವನ್ನು ಎತ್ತಿಕೊಳ್ಳುವ ದಿನ ಬರಬೇಕು. ಪುಣ್ಯವಂತರು ಸೇರುವ ವಿನೋದ ಮಂದಿರಗಳಲ್ಲಿ ಓದುವ ಕೋಣೆಯ ಮೇಜಿನ ಮೇಲೆ ಗೊಂಬೆಯ ಪತ್ರಿಕೆ ಕನ್ನಡದ್ದಾಗಿರಬೇಕು ; ಅಂಥಾ ಪತ್ರಿಕೆಯನ್ನು ನೋಡಿದ ಮೇಲೆ "ಇಲ್ಲಸ್ಟ್ರೇಟೆಡ್ ಲಂಡನ್ ನ್ಯೂಸ್" ಚಿತ್ರ ಪತ್ರಿಕೆಯನ್ನು ನೋಡುವ ಚಪಲ ಉಳಿಯಬಾರದು, ನೋಡುವ ಅವಶ್ಯಕತೆ ಇರಬಾರದು. ಗ್ರಂಥ ಭಂಡಾರಗಳಲ್ಲಿ ಕನ್ನಡದ ಪುಸ್ತಕಗಳಿಗಾಗಿ ಇಂಗ್ಲೀಷ್ ಪುಸ್ತಕಗಳಿಗೆ ಒದಗಿಸುವುದಕ್ಕಿಂತ ಹೆಚ್ಚಿನ ಹಣವನ್ನು ಒದಗಿಸುವ ಮನಸ್ಸು ಬರಬೇಕು ; ಹಾಗೆ ಒದಗಿಸಿದ ಹಣ ಕನ್ನಡದಲ್ಲಿ ಪ್ರಕಟವಾಗುತ್ತಿರುವ ಒಳ್ಳೆಯ ಪುಸ್ತಕಗಳನ್ನು ಕೊಳ್ಳುವುದಕ್ಕೆ ಸಾಲದೆ ಹೋಗಬೇಕು. ಇದು ನಾವು ಬಯಸುವ ಏಳ್ಗೆಯ ಕಾಲದ ಒಂದೆರಡು ಲಕ್ಷಣ. ಆ ಏಳ್ಗೆಯನ್ನು ಕನ್ನಡದ ಜನ ಊಹಿಸಲಿ ; ಅದನ್ನು ಸಾಧಿಸಲು ಯತ್ನಮಾಡಲಿ.

ಈ ಯತ್ನದಲ್ಲಿ ಕನ್ನಡ ಮನೆಮಾತಾದವರು ಮಾತ್ರ ಭಾಗಿಗಳಾದಾರೆಂದು ಯಾರೂ ಭಾವಿಸಬಾರದು. / ಕನ್ನಡ ಎನ್ನುವುದು ಒಂದು ನಾಡ ಹೆಸರು, ಬರಿಯ ಒಂದು ನುಡಿಯ ಹೆಸರಲ್ಲ. ಕನ್ನಡಿಗನೆಂದರೆ ಕನ್ನಡ

ನಾಡಿನ ಪ್ರಜೆ. ಕನ್ನಡಿಗನ ಮನೆಮಾತು ತಮಿಳಿರಬಹುದು, ಕನ್ನಡ ಇರಬಹುದು, ತೆಲುಗು ಇರಬಹುದು, ಉರ್ದು ಇರಬಹುದು, ಕೊಂಕಣಿ ಇರಬಹುದು, ಮರಾಠಿ, ಕೊಡಗು, ತುಳು ಇರಬಹುದು. ಇದು ಈಗಾಗಲೆ ನಮ್ಮ ಇತಿಹಾಸದಲ್ಲಿ ಸ್ಪಷ್ಟವಾಗಿದೆ. ಅಚ್ಚ ಕನ್ನಡಿಗ ಅಚ್ಚವಲ್ಲದ ಕನ್ನಡಿಗ ಎಂಬಂಥ ಮಾತೂ, ನಾವು ತಮಿಳರು, ನಾವು ಕೊಂಕಣಿಗಳು, ಎಂಬಂಥ ಮಾತೂ, ಒಮ್ಮೊಮ್ಮೆ ಒತ್ತಟ್ಟು ಕೇಳುವುದಾದರೂ ಕಾರ್ಯ ರಂಗದಲ್ಲಿ ಇಂಥ ಜನರೆಲ್ಲ ಭೇದ ಬುದ್ಧಿಯಿಲ್ಲದೆ ದುಡಿದಿದ್ದಾರೆ, ದುಡಿಯುತ್ತಿದ್ದಾರೆ. ಈ ಲೇಖನ ಸೇರಿರುವ ಈ ಗ್ರಂಥದಿಂದ ಕಾಣುವಂತೆ ಕನ್ನಡದ ಸೇವಕರಲ್ಲಿ ಎಲ್ಲ ಕುಲ ಎಲ್ಲ ಗೋತ್ರವೂ ಸೇರಿವೆ. ಕನ್ನಡ ದೇಶಕ್ಕೆ ಮುಸಲ್ಮಾನರು ಬೇರೆಯಲ್ಲ; ಕ್ರೈಸ್ತರು ದೂರವಲ್ಲ. ಈ ತಾಯ ಮಡಲಲ್ಲಿ ನಾವೆಲ್ಲ ಒಂದೇ ತರದ ಮಕ್ಕಳು. ಎಲ್ಲರೂ ಈ ತಾಯ ಬಸಿರಿನ ಮಕ್ಕಳು; ನಮ್ಮಲ್ಲಿ ಯಾರೂ ಮಲ ಮಕ್ಕಳಿಲ್ಲ.

ಲೋಕದ ಚರಿತ್ರೆಯಲ್ಲಿ ಭೇದಬುದ್ಧಿಯಿಂದ ಎಂದೂ ಕೇಡೇ ಆಗಿದೆ; ಎಲ್ಲಾ ಕೇಡಿಗೂ ಭೇದಬುದ್ಧಿಯೇ ಕಾರಣವೆಂದು ಹೇಳಬಹುದು. ಈ ಬುದ್ಧಿಯನ್ನು ತಿದ್ದಿ ಮಾನವ ಮಾರ್ಗವೇ ಒಂದು ಮನೆತನ, ಜೀವರಾಶಿಯೆಲ್ಲ ಒಂದು ಮನೆತನ, ಸೃಷ್ಟಿಯೆಲ್ಲ ಒಂದು ಮನೆ ಎಂಬುದನ್ನು ಕಲಿಸುವುದೇ ಭರತವರ್ಷ ಕೈಗೊಂಡಿರುವ ವ್ರತ. ವೇದಗಳ ಅನಾದಿ ಕಾಲದಿಂದ ಇಂದಿನವರೆಗೆ ಏನಾದರೂ ಒಂದು ಮಾತು ಸ್ಪಷ್ಟ ವಾಗಿರುವುದಾದರೆ ಭರತವರ್ಷದ ಧ್ಯೇಯ ಇದೇ ಎನ್ನುವುದು ಹಾಗೆ ಸ್ಪಷ್ಟವಾಗಿದೆ. ಆ ಧ್ಯೇಯವನ್ನು ಸಾಧಿಸುವುದರಲ್ಲಿ ಕನ್ನಡನಾಡು ಎಂದಿನಿಂದಲೂ ನೆರವಾಗಿ ದುಡಿದಿದೆ. ಮುಂದಕ್ಕಾದರೂ ಅದಕ್ಕೆ ಇದೇ ಕರ್ತವ್ಯ. ನಮ್ಮ ನಾಡು ಲೋಕದ ಎಲ್ಲಾ ಸಂಸ್ಕೃತಿಯ ಸಂಗ್ರಹಸ್ಥಾನ ಆಗಬೇಕು. ಕನ್ನಡನಾಡಿನ ಹಿಂದೂ ಮಕ್ಕಳಿಗೆ, ಕ್ರೈಸ್ತ ಮಕ್ಕಳಿಗೆ, ಮುಸ್ಲಿಂ ಮಕ್ಕಳಿಗೆ, ಬೌದ್ಧ, ಜೈನ ಇನ್ನೆಲ್ಲ ಮತದ ಮಕ್ಕಳಿಗೆ, ಆಯಾ ಮಹನೀಯ ಗುರುವರ್ಯರ ಉಪದೇಶ ಕನ್ನಡದಲ್ಲಿ ದೊರೆಯಬೇಕು. ಯಾವ ಕನ್ನಡಿಗನೂ ತಾನು ಹುಟ್ಟಿದ ಧರ್ಮ ಒಂದನ್ನರಿತು ತೃಪ್ತನಾಗ ಬಾರದು. ಎಲ್ಲ ಮತಗಳೂ ವಿಶ್ವದ ಒಂದು ಧರ್ಮದ ಬೇರೆ ಬೇರೆಯ ಶಾಖೆ

ಗಳಿಂದು ಅವನು ಮನಗಾಣಬೇಕು; ಅದರಂತೆ ಬಾಳಬೇಕು; ಭರತ ವರ್ಷದ ಸಾವಿರಾರು ಕಾಲದ ತಪಸ್ಸಿನ ಸಿದ್ಧಿಯನ್ನು ತನ್ನ ಬಾಳಲ್ಲಿ ತೋರ ಬೇಕು.

ಈ ಧ್ಯೇಯ ಅತಿಯೆಂದು ನಾವು ಹೆದರುವುದು ಬೇಡ. ಸಾವಿರ ವರ್ಷದ ಹಿಂದೆ ಪಂಪನನ್ನು ಪಡೆದ ನಾಡು, ಅದಾದ ಶತಮಾನ ಶತಮಾನ ಅಂತರಗಳಲ್ಲಿ ಬಸವನನ್ನು, ಕುಮಾರವ್ಯಾಸನನ್ನು, ಚಿಕ್ಕ ದೇವರಾಜನನ್ನು ಪಡೆದ ನಾಡು, ಎಷ್ಟೋ ಶತಮಾನದ ಹಿಂದೆ "ಯಂ ಶೈವಾಃ ಸಮುಪಾಸತೇ...." ಎಂಬ ಶ್ಲೋಕದಲ್ಲಿ ಸರ್ವ ಮತ ಸಮನ್ವಯವನ್ನು ಮಾಡಿದ ನಾಡು, ಸದ್ಯದ ಕಾಲದಲ್ಲಿ ಎಂತೋ ಕುಗ್ಗಿದಂತೆ ಕಂಡ ಮಾತ್ರಕ್ಕೆ ಜನದ ಬಾಳ್ವೆಯಲ್ಲಿ ಅಂದಿನ ಹಿರಿಮೆ ಇಲ್ಲದೆ ಹೋಯಿತೆಂದು ತಿಳಿಯುವುದು ತಪ್ಪು. ನಮ್ಮ ಮನೆತನ ದೊಡ್ಡದು ಎನ್ನುವ ಹೆಮ್ಮೆ ಒಂದು ಸಂದರ್ಭದಲ್ಲಿ ದುರಭಿಮಾನವಾಗಿ ಪರಿಣಮಿಸ ಬಹುದು ನಿಜ. ಮತ್ತೊಂದು ಸಂದರ್ಭದಲ್ಲಿ ಅದು ಧ್ಯೇಯವನ್ನು ಕೊಡಬಹುದು, ತಪ್ಪಿಗೆ ನಡೆಯದಂತೆ ರಕ್ಷಿಸಬಹುದು. ಅಭಿಮಾನ ಸಾರ್ಥಕವಾಗುವುದು ಹೀಗೆ. ಇದಕ್ಕಾಗಿ ಕನ್ನಡದ ಜನ ಅಭಿಮಾನದ ವ್ರತವನ್ನು ಹಿಡಿಯಬೇಕು. ನಾಲ್ವತ್ತು ವರ್ಷದ ಹಿಂದೆ ನಮ್ಮ ಜನದ ಜೀವನವನ್ನು ಚಿತ್ರಿಸುವ ಸಾಹಿತ್ಯ ಎಷ್ಟಿತ್ತು? ಇಪ್ಪತ್ತು ವರ್ಷದ ಹಿಂದೆ ಎಷ್ಟಿತ್ತು? ನಲವತ್ತು ವರ್ಷದ ಹಿಂದೆ ಅದು ಇರಲೇ ಇಲ್ಲ; ಅಯ್ಯೋ, ಇಲ್ಲವಲ್ಲ ಎನ್ನುವ ಜನರೂ ಇರಲಿಲ್ಲ. ಇಪ್ಪತ್ತು ವರ್ಷದ ಹಿಂದೆ ಅದು ಎಲ್ಲೋ ಸ್ವಲ್ಪ ತಲೆದೋರಿತ್ತು; "ಅಯ್ಯೋ ನಮ್ಮಲ್ಲಿ ಸಾಕಾದಷ್ಟು ಸಾಹಿತ್ಯ ನಿರ್ಮಾಣವಾಗುತ್ತಿಲ್ಲ" ಎಂದು ಜನ ಚಿಂತಿಸತೊಡಗಿದರು. ಈಗ ಯೋಗ್ಯತೆಯಿಂದ ಲೋಕದ ಇತರ ಸಾಹಿತ್ಯಗಳ ಉತ್ತಮ ಕೃತಿ ಗಳೊಂದಿಗೆ ನಿಲ್ಲಲು ತಕ್ಕ ಕೃತಿ ನಮ್ಮಲ್ಲಿ ಆಗಿವೆ. ಜೀವನದ ನಡೆಗೆ ಹೊಣೆಯಾದ ಕಲ್ಯಾಣಕಾರಕಸತ್ವ ಕಾಲ ಸ್ಥಳಗಳ ಪಕ್ಷಪಾತವನ್ನು ಕಾಣದ ಸತ್ವ. ಎಲ್ಲಿ ಎಂದು ಯಾರು ಬೇಡಿ ಕೈನೀಡಿದರೆ ಅಲ್ಲಿ ಅಂದು ಅವರ ಬೊಗಸೆಯನ್ನು ಅದು ಶಿವ ತತ್ವದಿಂದ ತುಂಬುತ್ತದೆ. ನಮ್ಮ ಜನತೆಯ ಶ್ರೇಯಸ್ಸು ಯಾವುದೆಂದು ತಿಳಿದು ನಾಡ ಪ್ರಮುಖರೆಲ್ಲ

ಅದನ್ನು ಸಾಧಿಸಲು ಬಯಸಿದರೆ ಅದು ಸಿದ್ಧಿಯಾಗುವುದಕ್ಕೆ ಬಹು ಕಾಲವೇನೂ ಆಗುವುದಿಲ್ಲ. ಏಕಮುಖವಾದ ಪ್ರಯತ್ನ ಒಂದೇ ಈಗ ಅವಶ್ಯಕವಾಗಿರುವುದು; ಅದರ ಬಗ್ಗೆ ನಾವೆಲ್ಲ ಮನಸ್ಸು ಮಾಡಬೇಕು.

ಈ ಏಕಮುಖತೆ ಬೇಗನೆ ಬರಲಿ. ನಾಡು ನುಡಿಗಳು ಇನ್ನೂ ಹೆಚ್ಚಿನ ಶುಭವನ್ನು ಇಷ್ಟರಲ್ಲೇ ಕಾಣಲಿ.

ಸೆಪ್ಟೆಂಬರ್ ೧೯೪೧<br>
" ಸಂಭಾವನೆ " ಗ್ರಂಥದಿಂದ

# ನಮ್ಮ ಹೊಸ ಸಾಹಿತ್ಯದ ಅಶ್ವಿನೀದೇವತೆಗಳು

## ೧

ಕನ್ನಡದ ಹೊಸ ಸಾಹಿತ್ಯ ಕುಡಿ ಒಡೆಯಲು ಮೊದಲಾದದ್ದು ಈ ಶತಮಾನದ ಮೊದಲ ಹತ್ತು ವರ್ಷದಲ್ಲಿ ಎಂದು ಹೇಳಬಹುದು. ಕನ್ನಡದಲ್ಲಿ ಅದುವರೆಗೆ ಬಂದ ಬರವಣಿಗೆ ಪ್ರಾಯಶಃ ನೂರಕ್ಕೆ ನೂರು ಪಾಲು ಪರಭಾಷೆಗಳಿಂದ ಭಾಷಾಂತರಿಸಿದ್ದು. ಬರಿಯ ಭಾಷಾಂತರವೇ ಏಕೆ, ಸ್ವತಂತ್ರ ಕೃತಿ ಏಕಾಗಬಾರದು, ಎಂದು ಕನ್ನಡದ ಲೇಖಕರು ಈಗ ಸುಮಾರು ನಲವತ್ತು ವರ್ಷದ ಹಿಂದೆ ಧೈರ್ಯಮಾಡಿದರು. ಶಾಲೆಯಲ್ಲಿ ಕಾಲೇಜಿನಲ್ಲಿ ಓದುತ್ತಿದ್ದ ತರುಣರ ಮನಸ್ಸಿನಲ್ಲಿ ಈ ಧೈರ್ಯ ಹಿಂಡುಗಟ್ಟಿ ಶತಮಾನದ ಎರಡನೆಯ ದಶಕದ ವೇಳೆಗೆ ಇಲ್ಲೊಂದು ಅಲ್ಲೊಂದು ಸ್ವತಂತ್ರ ಕೃತಿ ತಲೆದೋರಿತು. ಹೊಸಕಾಲದ ಪ್ರಭಾವಕ್ಕೆ ಕೊನರುವ ಮನೋಧರ್ಮ ಇದ್ದ ಕೆಲವರು ಹಿರಿಯರೂ ಇಂತಹ ಕೆಲಸವನ್ನು ಮಾಡಿದ್ದುಂಟು. ಬರೆಯುವವರು ಕೊಂಚ ಜನವೇ ಆದರೂ ಇಂತಹ ಬರವಣಿಗೆ ಬೇಕು ಎನ್ನುವವರ ಸಂಖ್ಯೆ ಸಾಕಾದಷ್ಟು ದೊಡ್ಡದಾಗಿತ್ತು. ಕೃಷ್ಣಸೂಕ್ತಿ, ಮಧುರವಾಣಿ, ಸಚಿತ್ರಭಾರತದಂತಹ ಪತ್ರಿಕೆಗಳು ಸ್ವತಂತ್ರವಾದ ಹೊಸ ಬರವಣಿಗೆಯನ್ನೇ ಸ್ವಾಗತಿಸಿ ನಿಂತವು. ಕನ್ನಡ ಲೋಕ ಹೊಸ ಸಾಹಿತ್ಯದ ಬರವನ್ನು ಇದಿರುಗೊಂಡು, ಸಿದ್ಧವಾಯಿತು.

ಹೊಸ ಒಂದು ಧರ್ಮದಲ್ಲಿ ಹೇಗೋ ಹಾಗೆ ಹೊಸ ಒಂದು ಸಾಹಿತ್ಯದಲ್ಲಿ ಪ್ರವರ್ತಕರು ಕೆಲವರು, ಪ್ರಚೋದಕರು ಕೆಲವರು, ವಿರೋಧಿಗಳು ಕೆಲವರು, ಪ್ರಚಾರಕರು ಕೆಲವರು. ಆಂಗ್ಲಸಾಹಿತ್ಯದ ಒಂದು ಹೊಸ ಯುಗದಲ್ಲಿ ವರ್ಡ್ಸ್‌ವರ್ತ್ ಕವಿ ತನ್ನ ಜೊತೆಯ ಕೋಲರಿಡ್ಜ್ ಕವಿಯೊಂದಿಗೆ ಹೊಸ ಒಂದು ಸಾಹಿತ್ಯವನ್ನು ನಿರ್ಮಿಸಿದಂತೆ ಹೊಸ ಒಂದು ರುಚಿಯನ್ನೂ ನಿರ್ಮಿಸಬೇಕಾಯಿತು. (ಬಾಳು ಸುಖವಾಗಿರಲು ಯೋಗ, ಕ್ಷೇಮ, ಎರಡೂ ಬೇಕು. ಹೊಸತಾಗಿ ಬರುವುದು ಯೋಗ; ಇರುವ ಒಳ್ಳಿತು ಕಳೆಯದೆ ಇರುವುದು ಕ್ಷೇಮ.) ಹೊಸ

ಸಾಹಿತ್ಯವನ್ನು ಮಾಡುವವರ ದೃಷ್ಟಿ ಯೋಗದ ಕಡೆಗಿರುತ್ತದೆ. ಹಳೆಯದರ ರುಚಿಗೆ ಒಗ್ಗಿರುವ ನಾಲಗೆ ಹೊಸದನ್ನು ಕುರಿತು ಸ್ವಲ್ಪ ಶಂಕೆ ತೋರುವುದು ಸಹಜ. ಆ ನಾಲಗೆಯನ್ನು ಒಲಿಸಿ ರಮಿಸಿ ಈ ಯೋಗದಿಂದ ನಿನ್ನ ಕ್ಷೇಮಕ್ಕೆ ಭಯವಿಲ್ಲ ಎಂದು ನಂಬಿಕೆ ಹುಟ್ಟಿಸಿ ಹೊಸದೂ ಉಪಾದೇಯ ಎಂದು ಸಿದ್ಧಾಂತಮಾಡುವುದು ಆಗ್ಯೆ ತುಂಬ ಆವಶ್ಯಕ; ಎಷ್ಟು ಆವಶ್ಯಕವೋ ಅಷ್ಟೇ ಕಷ್ಟ. ಬೇರೆ ಸಾಹಿತ್ಯದ ಉತ್ತಮ ಕೃತಿಗಳನ್ನು ನೋಡಿದವರಿಗೆ ಕೂಡ ಅಂತಹ ಸಾಹಿತ್ಯವನ್ನು ನಿರ್ಮಿಸುವವರು ನಮ್ಮಲ್ಲಿ ಹುಟ್ಟಲಾರರು ಎಂದೇ ನಂಬಿಕೆ. ಒಂದು ಕೃತಿಯನ್ನು ಒಬ್ಬನು ಬರೆದರೆ ಅದು ಭಾಷಾಂತರವಲ್ಲದಿದ್ದರೂ ಯಾವುದೋ ಕೃತಿಯ ಅನುಕರಣ ಆಗಿರಬೇಕು ಎಂದು ರೂಢಮೂಲವಾದ ಒಂದು ಭಾವನೆ. ಇಷ್ಟೇ ಅಲ್ಲ. ಯಾವುದರ ಭಾಷಾಂತರವೂ ಅಲ್ಲ, ಯಾವುದನ್ನು ಅನುಕರಿಸಿದ್ದೂ ಅಲ್ಲ, ಎಂದಾದರೆ ಇನ್ನು ಇದು ಒಳ್ಳೆಯದು ಎಂದು ಹೇಳುವುದು ಹೇಗೆ ಎಂದು ಗಾಢವಾದ ಸಂದೇಹ. ಇಂತಹ ಸಂದರ್ಭದಲ್ಲಿ ಹೊಸ ಸಾಹಿತ್ಯದ ನೆಲೆಯೇನು, ಗುರಿಯೇನು, ಅದರ ಸೂತ್ರವೇನು, ಗಮನವೇನು, ಎಂಬ ವಿಷಯವನ್ನೇ ಹೇಳುತ್ತಿರಬೇಕಾಗುತ್ತದೆ. ಸಾವಿರದ ಒಂಬೈನೂರ ಇಪ್ಪತ್ತರ ವೇಳೆಗೆ ಕನ್ನಡದಲ್ಲಿ ಈ ಕೆಲಸ ತೀರಾ ಆವಶ್ಯಕವಾಗಿ ಬಿಟ್ಟಿತ್ತು.

ಆ ಸಮಯದಲ್ಲಿ ಮೈಸೂರು ಪ್ರಾಂತದಲ್ಲಿ ಈ ಕೆಲಸವನ್ನು ಇಬ್ಬರು ಮಹನೀಯರು ಕೈಗೊಂಡರು; ಇದಕ್ಕಾಗಿ ಒಂದು ತ್ರೈಮಾಸಿಕವನ್ನು ಆರಂಭಿಸಿದರು. ಆ ಮಹನೀಯರು ಶ್ರೀ ತಳಕಿನ ವೆಂಕಣ್ಣಯ್ಯನವರು, ಶ್ರೀ ಅಂಬಳೆ ಕೃಷ್ಣಶಾಸ್ತ್ರಿಗಳು; ಆ ತ್ರೈಮಾಸಿಕ 'ಪ್ರಬುದ್ಧ ಕರ್ಣಾಟಕ'.

೨

ಹೊಸ ಸಾಹಿತ್ಯದ ಮುಂಬರಿವಿಗೆ 'ಪ್ರಬುದ್ಧ ಕರ್ಣಾಟಕ' ಯಾವ ಯಾವ ವಿವರದಲ್ಲಿ ಯಾವ ಯಾವ ರೀತಿಯಲ್ಲಿ ನೆರವಾಯಿತು ಎನ್ನುವುದನ್ನು ಸೂಕ್ಷ್ಮವಾಗಿ ಸೂಚಿಸಬಹುದು. ಮೊದಲಾಗಿ ಪತ್ರಿಕೆ, ಹೊಸ ಗನ್ನಡದ ಗದ್ಯ ಹೊಸಕಾಲದ ವಿಷಯಗಳನ್ನು ನಿರೂಪಿಸುವುದರಲ್ಲಿ ಯಾವ ಆಕಾರದಲ್ಲಿರಬೇಕು ಎನ್ನುವುದನ್ನು ನಿರ್ಧರಪಡಿಸುವುದಕ್ಕೆ ನೆರವಾಯಿತು.

ಪ್ರಾಂತಗಳ ಕನ್ನಡಗಳನ್ನು ಹತ್ತಿರಹತ್ತಿರ ತಂದು ಒಂದು ಕನ್ನಡ ಮಾಡಬೇಕೆಂಬ ಬಯಕೆ ಅತ್ತ ಪಂಜೆ ಮಂಗೇಶರಾವ್, ಬೆನಗಲ್ ರಾಮರಾವ್, ಶ್ರೀ ಕಡೆಕಾರ್ ರಾಜಗೋಪಾಲಕೃಷ್ಣರಾಯರಲ್ಲಿ; ಇತ್ತ ರೊದ್ದ ಶ್ರೀನಿವಾಸರಾವ್, ಆಲೂರ್ ವೆಂಕಟರಾವ್, ಮುದವೀಡು ಕೃಷ್ಣರಾವ್ ಇವರಲ್ಲಿ; ಆ ಮೊದಲು ಮೂಡಿತ್ತು. ಅದರ ಫಲವಾಗಿ ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಸ್ಥಾಪಿತವಾಗಿತ್ತು. ಕನ್ನಡದ ಪ್ರಾಂತೀಯ ಪತ್ರಿಕೆಗಳಲ್ಲಿ ತಕ್ಕಷ್ಟು ಒಳ್ಳೆಯ ಕನ್ನಡ ರೂಪುಗೊಳ್ಳುತ್ತಿತ್ತು. ಆ ಎಲ್ಲ ಪ್ರಯತ್ನ ಸ್ಫುಟವಾಗಿ ಆಕಾರ ಪಡೆಯಿತೆಂಬಂತೆ ಪ್ರಬುದ್ಧ ಕರ್ಣಾಟಕ ಕನ್ನಡ ಶೈಲಿಯ ಒಂದು ಮಟ್ಟವನ್ನು ವಾಡಿಕೆಗೆ ತಂದಿತು. ಹಾಗೆಯೇ ಈ ಪತ್ರಿಕೆ ಕನ್ನಡದ ಹೊಸ ಲೇಖಕನು ಯಾವ ಯಾವ ತೆರದ ಕೆಲಸವನ್ನು ಮಾಡಬಹುದು ಎಂಬುದನ್ನು ಉದಾಹರಿಸುವಂತೆ ಹಲವು ತರದ ವಿಷಯಗಳನ್ನು ಒಳಗೊಂಡಿತು; ಪ್ರೌಢ ವಿದ್ಯೆಯನ್ನು ಪಡೆದ ಕನ್ನಡ ತರುಣರು ಕನ್ನಡದ ಜನಕ್ಕಾಗಿ ಸ್ವತಂತ್ರ ಲೇಖನಗಳನ್ನು ಬರೆಯಬೇಕು ಎಂಬ ಒಂದು ಸಂಪ್ರದಾಯವನ್ನು ನಿರ್ಮಿಸಿತು. ಬೆಂಗಳೂರಿನ ಕಾಲೇಜಿನ ತರುಣರು ತಾಯ್ನುಡಿಯ ಸೇವೆಯಲ್ಲಿ ಸಹಕರಿಸುವಂತೆ ಅಭ್ಯಾಸ ಕೊಟ್ಟು ಅವರು ಹೋದ ಕಡೆಗೆ ಕನ್ನಡ ಸೇವಾದೀಕ್ಷೆ ಅವರನ್ನು ಹಿಂಬಾಲಿಸುವಂತೆ ಮಾಡಿತು. ಮುಖ್ಯವಾಗಿ ವಿದ್ಯಾರ್ಥಿಗಳ ಲೇಖನಕ್ಕೆ ಆಶ್ರಯಕೊಡಬೇಕೆಂದು ಹೊರಟ ಪತ್ರಿಕೆ ಬಹು ಶೀಘ್ರದಲ್ಲಿ ಈ ಗುರಿಯನ್ನು ದಾಟಿ ಕನ್ನಡದಲ್ಲಿ ಬರೆಯುವ ಮನಸ್ಸುಳ್ಳ ಹಿರಿಯರನ್ನೂ ತನ್ನ ಸಹಾಯಕ್ಕೆ ಕರೆದುಕೊಂಡಿತು. ತನಗೆ ಒಳಿತೆಂದು ಕಂಡ ಸಾಹಿತ್ಯವನ್ನು ಪ್ರಕಟಿಸಿ ಅದೂ ಅದರಂಥ ಸಾಹಿತ್ಯವೂ ಒಳಿತೆಂದು ದನಿಯೆತ್ತಿ ಸಾರಿತು. ಬರೆದವರಿಗೆ ತೃಪ್ತಿಯನ್ನು, ಧೈರ್ಯವನ್ನು ನೀಡಿತು. ಮಿಗಿಲಾಗಿ ಕನ್ನಡದ ಹೊಸ ವಿಮರ್ಶನದ ಪದ್ಧತಿಯನ್ನು ಸ್ಥಾಪನೆಮಾಡಿತು.

ಈ ಕಡೆಯ ಮಾತು ಬಹು ಮುಖ್ಯ. ಆದುದರಿಂದ ಇದನ್ನು ಸ್ವಲ್ಪ ವಿವರಿಸುವುದು ಆವಶ್ಯಕ. ವಿಮರ್ಶೆಯೆಂದರೆ ಗ್ರಂಥದಲ್ಲಿರುವ ತಪ್ಪುಗಳನ್ನು ತೋರಿಸುವುದು ಎಂದು ಒಂದು ಕಾಲದ ಕಲ್ಪನೆ. ಗ್ರಂಥದಲ್ಲಿ ತಪ್ಪಿಲ್ಲದಿದ್ದರೆ ಅದನ್ನು ವಿಮರ್ಶಿಸುವುದು ಸಾಧ್ಯವೇ ಇಲ್ಲ ಎನ್ನುವಷ್ಟು

ದೂರ ಈ ಕಲ್ಪನೆ ಬೆಳೆದಿತ್ತೆನ್ನಬಹುದು. ಒಂದು ಕೃತಿಯ ಗುಣವನ್ನು ಪ್ರಕಟಿಸುವುದೂ ಅದರ ಭಾವಗಳನ್ನು ವಿಶದಪಡಿಸುವುದೂ ಅವನ್ನು ಕುರಿತು ವಿಮರ್ಶಕನ ಅಭಿಪ್ರಾಯವನ್ನು ತಿಳಿಸುವುದೂ ಈ ಎಲ್ಲ ಕೆಲಸದಿಂದ ಜನರ ಮನಸ್ಸನ್ನು ರುಚಿಯನ್ನು ತಿದ್ದುವುದೂ ವಿಮರ್ಶೆಯ ಕಾರ್ಯಗಳೇ. ಇದು ಹೊಸ ಮಾತಲ್ಲ. ಮಲ್ಲಿನಾಥನ ವ್ಯಾಖ್ಯಾನವನ್ನು ನೋಡಿದರೆ ಹಿಂದಿನ ಜನಕ್ಕೆ ಇದು ತಿಳಿದಿತ್ತೆನ್ನುವುದು ಸ್ಪಷ್ಟವಾಗುತ್ತದೆ. ಆದರೆ ಉದ್ಗ್ರಂಥದ ಗುಣವನ್ನು ಟೀಕೆಟಿಪ್ಪಣಿಯಲ್ಲಿ ಮುಗಿಸುತ್ತಿದ್ದ ಆ ಪದ್ಧತಿ ಉತ್ತಲ್ಲದ ಕೃತಿಗಳಲ್ಲಿ ತಪ್ಪಷ್ಟನ್ನು ತೋರಿಸುವುದರಲ್ಲಿ ಪರ್ಯವಸಾನ ವಾಯಿತು. ಒಪ್ಪಿದ ಗ್ರಂಥವನ್ನು ಕುರಿತು ಒಂದು ಪ್ರಶಂಸೆ, ಒಪ್ಪದ ಗ್ರಂಥದ ಕುಂದನ್ನು ವಿವರಿಸುವುದರಲ್ಲಿ ಸಕಾರಣವಾದ ತರ್ಕವನ್ನು, ವಿಸ್ತಾರ ವಾದ ಪರಿಶೀಲನ, ಇದು ನಮ್ಮಲ್ಲಿ ವಾಡಿಕೆಯಿರಲಿಲ್ಲ. ಹೊಸ ಸಾಹಿತ್ಯ ವನ್ನು ಕಲಿತಂತೆ ಹೊಸ ವಿಮರ್ಶೆಯನ್ನೂ ನಾವು ಇಂಗ್ಲೀಷಿನಿಂದ ಕಲಿಯ ಬೇಕಾದದಿತ್ತು. ಅದು ಪ್ರಬುದ್ಧ ಕರ್ನಾಟಕದ ಮೂಲಕ ನಡೆಯಿತು.

ಹೊಸ ವಿಮರ್ಶೆ ಎಷ್ಟು ಮುಖವಾಗಿ ಕೆಲಸಮಾಡಬೇಕಾಗಿದೆ ಎನ್ನುವುದನ್ನು ತೋರಿಸಿಕೊಟ್ಟ ಈ ನಮ್ಮ ಮಿತ್ರರ ಒಂದು ಕೆಲಸ ಮುದ್ದಣನನ್ನು ಕುರಿತ ಪ್ರಶಸ್ತಿ ಗ್ರಂಥ. ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘ ಕವಿಯ ಜಯಂತಿಯನ್ನು ನಡೆಸಿ ಸಾಹಿತ್ಯ ಲೋಕದಲ್ಲಿ ಅವನಿಗೆ ನ್ಯಾಯವಾಗಿ ಸಲ್ಲಬೇಕಾದ ಸ್ಥಾನವನ್ನು ಗಳಿಸಿಕೊಟ್ಟಿತು. ಪ್ರಶಸ್ತಿ ಗ್ರಂಥದ ಲೇಖನಗಳು ಕವಿಯ ವಿಷಯವನ್ನು ತಿಳಿಸಿದ್ದಲ್ಲದೆ ಇಂತಹ ಒಂದು ಲೇಖನ ಮಾಲೆಗೆ ಸಾಕಾದಷ್ಟು ಲೇಖನಗಳನ್ನು ಕೊಡಬಲ್ಲ ಲೇಖಕ ಮಂದಿ ಕನ್ನಡದಲ್ಲಿ ಇದಾರೆ ಎನ್ನುವುದನ್ನೂ ತೋರಿಸಿತು. ಅವರ ಹೆಸರುಗಳನ್ನು ಒಂದು ಕಡೆ ಕೂಡಿಸಿ ಕನ್ನಡದ ಹಾರ್ದಿಕ ಏಕೀಕರಣಕ್ಕೆ ದಾರಿ ತೋರಿಸಿತು.

ಪ್ರಬುದ್ಧ ಕರ್ನಾಟಕ ಇದನ್ನು ಮಾಡಿತು, ಅದನ್ನು ಮಾಡಿತು ಎಂದು ಇದುವರೆಗೆ ಹೇಳಿದೇನೆ. ಪತ್ರಿಕೆ ಒಂದು ಮಾಡಿತು ಎಂದರೆ ಅದರ ಕರ್ತರು ಮಾಡಿದರು ಎನ್ನುವುದು ಸ್ಪಷ್ಟವಾಗಿಯೇ ಇದೆ. ಆದರೆ ಪ್ರಬುದ್ಧ ಕರ್ನಾಟಕದ ವಿಷಯದಲ್ಲಿ ಈ ಉಕ್ತಿಯನ್ನು ಉಪಯೋಗಿಸು

ವುದಕ್ಕೆ ಒಂದು ವಿಶೇಷ ಕಾರಣವುಂಟು. ಇದರ ಕರ್ತರು ಒಬ್ಬರಲ್ಲ. ಇಬ್ಬರು ಅಥವಾ ಹತ್ತು ಜನ ಕಲೆತು ಒಂದೊಂದು ವಿಷಯವನ್ನು ಚರ್ಚಿಸಿ ನಿರ್ಧಾರಕ್ಕೆ ಬಂದು ಕೆಲಸ ನಡೆಸಿದರು ಎನ್ನುವುದೂ ಇಲ್ಲಿ ಅನ್ವಯಿಸುವುದಿಲ್ಲ. ವ್ಯಕ್ತವಾಗಿ ಕೆಲಸ ಮಾಡಿದವರು ಆರಂಭದಲ್ಲಂತೂ ಒಬ್ಬರು: ಶ್ರೀ ಅಂಬಳೆ ಕೃಷ್ಣಶಾಸ್ತ್ರಿಗಳು. ಆ ಮೇಲೂ ಒಬ್ಬರು: ಶ್ರೀ ತಳಕಿನ ವೆಂಕಣ್ಣಯ್ಯನವರು. ಇವರಲ್ಲಿ ಯಾವ ಒಬ್ಬರು ಕೆಲಸ ನಡೆಸಿದಾಗಲೂ ಮತ್ತೊಬ್ಬರ ಮನಸ್ಸು ಸದಾ ಜೊತೆ ಬೆರೆತು ಕಾರ್ಯದ ರೂಪನ್ನು ನಿರ್ಧರಿಸುತ್ತಿತ್ತು. ಸ್ಪಷ್ಟವಾಗಿ ಕರ್ತೃತ್ವದಲ್ಲಿ ಇವರು ನಿಂತಿರುವಲ್ಲಿ ಹೊರಗಿಂದ ಸಲಹೆ ಕೊಡುತ್ತ ಸೂಚನೆಮಾಡುತ್ತ ನಾಲ್ಕೈದು ಜನ ಮಿತ್ರರು ಜೊತೆಗಿದ್ದರು. ಈ ಕಾರಣದಿಂದ ಯಾವುದೇ ಒಂದು ಸೂಚನೆ ಯಾರಿಂದ ಆಯಿತು ಎಂದರೆ ಇಂತಹವರಿಂದ ಎಂದು ಪೃಥಕ್ಕರಿಸಿ ಹೇಳುವಂತಿರಲಿಲ್ಲ. ಅವಿಭಕ್ತಕುಟುಂಬದ ವ್ಯವಹಾರದ ರೀತಿ ಈ ಪತ್ರಿಕೆಯ ಕೆಲಸ ಹಲವು ಮನಗಳ ಮಿಲನದಿಂದ ರೂಪುಗೊಂಡು ವೆಂಕಣ್ಣಯ್ಯನವರ ವ್ಯಕ್ತಿತ್ವದಲ್ಲಿ ಶಾಸ್ತ್ರಿಗಳವರ ಕರ್ತೃತ್ವದಲ್ಲಿ ಸ್ಪಷ್ಟವಾದ ಆಕಾರಕ್ಕೆ ಬಂದಿತು. ಈ ಕಾರಣದಿಂದ ಇವರು ಅವರು ಮಾಡಿದರು, ಎನ್ನುವುದಕ್ಕಿಂತ ಪತ್ರಿಕೆ ಮಾಡಿತು ಎನ್ನುವುದು ಎಲ್ಲ ಪತ್ರಿಕೆಗಳ ವಿಷಯದಲ್ಲಿ ಎಷ್ಟು ಮಾತ್ರವೋ ಅದಕ್ಕಿಂತ ಹೆಚ್ಚಾಗಿ ಈ ಪತ್ರಿಕೆಯ ವಿಷಯದಲ್ಲಿ ಹೆಚ್ಚು ಸಾರ್ಥಕ, ಹೆಚ್ಚು ಉಚಿತ.

ವೆಂಕಣ್ಣಯ್ಯ ಕೃಷ್ಣಶಾಸ್ತ್ರಿಗಳ ಈ ಸಹಯೋಗವ್ಯವಸಾಯವನ್ನು ಎಷ್ಟು ಹೊಗಳಿದರೂ ಸಾಲದೆಂದು ನನ್ನ ತಿಳುವಳಿಕೆ. ಸ್ವಭಾವದಿಂದ ಈ ಇಬ್ಬರು ಒಂದು ತೆರನಲ್ಲ. ಒಬ್ಬರು ಮೌನದಿಂದ, ಒಬ್ಬರು ಮಾತಿನಿಂದ ಮನಸ್ಸನ್ನು ವ್ಯಕ್ತಪಡಿಸುವರು. ಒಬ್ಬರು ಸೌಮ್ಯದ ಮೂರ್ತಿ, ಮತ್ತೊಬ್ಬರು ಸಹಜವಾದ ರಸಭಾವಗಳಿಗೆ ಜೀವನದಲ್ಲಿ ಎಡೆಕೊಡುವವರು. ಒಬ್ಬರು ಸುಲಭವಾಗಿ ಹಗುರವಾಗಿ ಕೆಲಸ ನಡೆಸುವವರು. ಒಬ್ಬರು ಹಗಲಿರುಳೆನ್ನದೆ ಹೊತ್ತು ಗೊತ್ತಿಲ್ಲದೆ ಮೈಮುರಿದು ದುಡಿಯುವವರು. ಸಾಮಾನ್ಯವಾಗಿ ಇಂತಹ ಇಬ್ಬರು ಇವರಂತೆ ಗೆಳೆಯರಾಗುವುದು ಅಪೂರ್ವವೆನ್ನಬೇಕು. ಆದರೆ ಕನ್ನಡದ ಪುಣ್ಯದಿಂದ ಇವರಿಬ್ಬರಿಗೂ

ಚಿಕ್ಕಂದು ಜೊತೆಯಾಗಿ ಕನ್ನಡ ದೀಕ್ಷೆ ಬಂದಿತು. ಇಬ್ಬರೂ ಶುದ್ಧ ಚೇತನರು. ಇಬ್ಬರೂ ಋಜುಸ್ವಭಾವದವರು. ಇಬ್ಬರೂ ಕಾರ್ಯತತ್ಪರರು. ಇಬ್ಬರೂ ಸೇವಾನಿಷ್ಠರು. ರೀತಿ ಬೇರೆಯಾದರೂ ಇಬ್ಬರ ಗುರಿ ಒಂದೇ ಆಗಿ ಇಬ್ಬರೂ ಒಂದು ದಾರಿಯಲ್ಲಿ ನಡೆಯಬೇಕಾಯಿತು. ಒಂದು ಗುರಿಯ ಸಾಧನೆಯಲ್ಲಿ ಈ ಇಬ್ಬರ ಬಾಳು ಒಂದಾಗಿ ಬೆರೆಯಿತು. ಈ ಯಮಳಜೀವನ ಹೊಸಗನ್ನಡದ ಅಶ್ವಿನೀದೇವತೆ ಆಯಿತು.

ಹೊಸ ಸಾಹಿತ್ಯ ಇಪ್ಪತ್ತೈದು ವರ್ಷಕ್ಕೆ ಮೇಲ್ಪಟ್ಟು ಬೆಳೆದು ಈಗಿನ ತರುಣರು ಯಾರಿಂದ ಎಂದು ಏನು ಕೆಲಸವಾಯಿತೆನ್ನುವುದನ್ನು ಅಷ್ಟಾಗಿ ಗಣಿಸಬೇಕಾಗಿಲ್ಲದ ಕಾಲ ಬಂದಿದೆ. ಓದುವರು ನೂರು ಜನ ಇದ್ದ ಕಡೆ ಈಗ ಬರೆಯುವರ ಸಂಖ್ಯೆ ನೂರಾಗಿದೆ. ಓದುವರ ಸಂಖ್ಯೆ ಈ ಪ್ರಮಾಣ ದಲ್ಲಿ ಹೆಚ್ಚಿಲ್ಲ ಎನ್ನುವುದು ನಿಜ. ಆದರೂ ಕನ್ನಡದ ಸಾಹಿತ್ಯ ಈಗ ಅಗೆಯನ್ನು ಬಿಟ್ಟು ನಾಟಿಯಾಗಿ ಗದ್ದೆಗೆ ಬಂದಿದೆ. ಅದು ಅಗೆಯ ಸ್ಥಿತಿಯಲ್ಲಿದ್ದಾಗ ಅದಕ್ಕಾಗಿ ದುಡಿದವರು ಯಾರು ಎಂಬುದನ್ನು ಜ್ಞಾಪಕ ದಲ್ಲಿಡುವುದು ಲೇಖಕ ಲೋಕಕ್ಕೆ ಶ್ರೇಯಸ್ಕರ.

೩

ಲೇಖಕ ಲೋಕದ ಮಾತನ್ನು ಒಟ್ಟಿಗೆ ಹೇಳುವುದು ಕಷ್ಟ; ಲೇಖಕ ನೊಬ್ಬನ ಅನುಭವ ಒಂದು ಉದಾಹರಣೆಯಾಗುತ್ತದೆ. ಆದಕಾರಣ ಈ ನಮ್ಮ ಮಿತ್ರರಿಂದ ನನಗಾದ ಸಹಾಯವೇನೆಂಬುದನ್ನು ಇಲ್ಲಿ ನಾಲ್ಕು ಮಾತಿನಲ್ಲಿ ಹೇಳುವುದು ಪ್ರಕೃತವೆನಿಸುತ್ತದೆ. ನಾನೂ ಕೃಷ್ಣಶಾಸ್ತ್ರಿಗಳೂ ಮೈಸೂರಿನ ವೆಸ್ಲಿಯನ್ ಹೈಸ್ಕೂಲಿನಲ್ಲಿ ಒಂದು ಕಾಲದಲ್ಲಿ ಓದಿದವರು. ಅವರು ನನಗಿಂತ ಒಂದು ತರಗತಿ ಹಿಂದೆ ಇದ್ದರು. ನಮಗೆ ಆಗಲೇ ಪರಿಚಯವುಂಟು; ಆಗಲೇ ಸ್ನೇಹ ಮೊದಲಾಯಿತು. ಮೆಟ್ರಿಕ್ಯುಲೇಷನ್ ಪರೀಕ್ಷೆ ಮುಗಿದು ನಾನು ಕಾಲೇಜಿಗೆ ಸೇರಿದಾಗ ನನಗೆ ವೆಂಕಣ್ಣಯ್ಯ ನವರ ಪರಿಚಯವಾಯಿತು. ಆ ವಯಸ್ಸಿನಲ್ಲಿಯೇ ಅವರ ಆಕಾರ ಒಂದು ಗುಂಪಿನಲ್ಲಿ ಪ್ರಮುಖವಾಗಿ ನಿಲ್ಲುವ ಯೋಗ್ಯತೆಯನ್ನು ಪಡೆದಿತ್ತು. ಕಾಲೇಜಿಗೆ ಸಂಬಂಧಪಟ್ಟು ನಾಲ್ಕಾರು ಕೆಲಸದಲ್ಲಿ ನಾವು ಪರಸ್ಪರ ಕಂಡೆವು.

ಈ ಕಾಣುಧಿಕೆ ಆಗ್ಯೆ ಪರಿಚಯವಾಗಿಯೇ ಉಳಿಯಿತು. ಎಂ.ಎ. ಪರೀಕ್ಷೆ ನಡೆದ ಕಾಲದಲ್ಲಿ ನಾವು ಮದರಾಸಿನಲ್ಲಿ ಒಬ್ಬರನ್ನೊಬ್ಬರು ಮತ್ತೆ ಕಂಡೆವು. ಕನ್ನಡದ ಕೆಲಸಕ್ಕಾಗಿ ಅಲ್ಲದಿದ್ದರೆ ನನ್ನ ಇವರ ಪರಿಚಯ ಸ್ನೇಹವಾಗ ಬೇಕಾದ ಕಾರಣ ಇರಲಿಲ್ಲ. ಪ್ರಬುದ್ಧ ಕರ್ಣಾಟಕ ಪತ್ರಿಕೆಗಾಗಿ ಅಲ್ಲದಿದ್ದರೆ, ಕರ್ಣಾಟಕ ಸಂಘ, ಕನ್ನಡದ ಕೆಲಸ ಎನ್ನುವದಕ್ಕಾಗಿ ಅಲ್ಲದಿದ್ದರೆ, ನನ್ನ ಮತ್ತು ಕೃಷ್ಣಶಾಸ್ತ್ರಿಗಳ ಸ್ನೇಹವಾದರೂ ಬೆಳೆಯಬೇಕಾದ ಕಾರಣವಿರಲಿಲ್ಲ. ಇವರು ಇಬ್ಬರಿಗೂ ಕನ್ನಡದೀಕ್ಷೆ ಬಂದ ಕಾಲದಲ್ಲಿ ನನ್ನ ಮನಸ್ಸಿನಲ್ಲೂ ಕನ್ನಡದ ಸೇವೆಯ ಪ್ರೇರಣೆ ಮೂಡಿತು. ನನ್ನ ಸಣ್ಣಕತೆ ಒಂದೆರಡು ಮಧುರವಾಣಿಯಲ್ಲಿ ಅಚ್ಚಾದಾಗ ನನ್ನ ಇವರ ಸಂಬಂಧ ಬೆಸೆಯುವುದು ಸಹಜವಾಯಿತು. ೧೯೨೦ರ ಕೊನೆಯಲ್ಲಿ "ಕೆಲವು ಸಣ್ಣ ಕತೆಗಳು" ಪುಸ್ತಕ ಪ್ರಕಟವಾದಾಗ ಈ ಸ್ನೇಹಿತರಿಬ್ಬರೂ ಆ ಪುಸ್ತಕವನ್ನು ತಮ್ಮ ಕೈಯಲ್ಲಿ ಎತ್ತಿಕೊಂಡರು; ಅದನ್ನು ಬರೆದೆನೆಂಬ ಕಾರಣದಿಂದ ನನ್ನ ಮೇಲೆ ತಮ್ಮ ಪ್ರೇಮ ಆದರಗಳ ವರ್ಷವನ್ನು ಕರೆದರು. ಶ್ರೀ ಕೃಷ್ಣಶಾಸ್ತ್ರಿಗಳು ಆ ಪುಸ್ತಕವನ್ನು ಕುರಿತು ಪ್ರಬುದ್ಧ ಕರ್ನಾಟಕದಲ್ಲಿ ಬರೆದ ವಿಮರ್ಶೆ ಕನ್ನಡದ ಹೊಸ ವಿಮರ್ಶೆಗೆ ಒಂದು ಮಾದರಿ. ಇದು ಸಾಹಿತ್ಯವೇ ಎಂದೇ ಆಗ ಅನೇಕರಿಗೆ ಸಂದೇಹ. ಇದು ಸಾಹಿತ್ಯವಿರಬಹುದು, ಮಕ್ಕಳು ಮರಿ ಓದುವುದಕ್ಕೆ ಚೆನ್ನಾಗಿದೆ, ಎಂದು ಮತ್ತೆ ಕೆಲವರ ಅಭಿಪ್ರಾಯ. ಇಂತಹ ಪುಸ್ತಕವನ್ನು ತೆಗೆದು ಕೊಂಡು ಶಾಸ್ತ್ರಿಗಳು ಅದು ಸಾಹಿತ್ಯವೆಂದರು. ತಕ್ಕಷ್ಟು ಯೋಗ್ಯತೆಯ ಸಾಹಿತ್ಯವೆಂದೂ ಸ್ಪಷ್ಟವಾಗಿ ಹೇಳಿದರು. ಎಂತಹ ಲೇಖಕನಿಗೂ ಸಹೃದಯನಾದ ಪಾಠಕನು ಬೇಕು. ಹಳೆಯ ರೀತಿಯ ಪಂಡಿತರು ಈ ಕತೆಗಳನ್ನು ಒಪ್ಪದಿದ್ದರೆ ತಪ್ಪಲ್ಲ; ಅವರು ಈ ರೀತಿಯ ಸಾಹಿತ್ಯವನ್ನು ಕಾಣರು. ಆಂಗ್ಲಸಾಹಿತ್ಯವನ್ನು ಬಲ್ಲವರು ಇದನ್ನು ಒಪ್ಪಬೇಕು. ಆದರೆ ಆಂಗ್ಲಸಾಹಿತ್ಯವನ್ನು ಬಲ್ಲವರು ಕನ್ನಡದ ಒಂದು ಪುಸ್ತಕವನ್ನು ಓದಿ ಯಾರೆಂಬ ಚಪಲವೇಕೆ? ಇನ್ನಿದನ್ನು ಒಪ್ಪಬೇಕಾದರೆ ಅಥವಾ ತಪ್ಪೆನ್ನ ಬೇಕಾದರೆ ಆಂಗ್ಲಸಾಹಿತ್ಯವನ್ನು ಬಲ್ಲ ಕನ್ನಡ ಪ್ರೇಮಿಗಳಾಗಿರಬೇಕು. ಅಂತಹವರ ಅಭಿಪ್ರಾಯ ಏನು ಎಂಬುದನ್ನು ಅಥವಾ ಅಂತಹವರಲ್ಲಿ

ಬಹುಜನರ ಅಭಿಪ್ರಾಯ ಏನಿರಬಹುದು ಎಂಬುದನ್ನು ಶಾಸ್ತ್ರಿಗಳವರು ತಮ್ಮ ವಿಮರ್ಶೆಯಲ್ಲಿ ಸ್ಪಷ್ಟಪಡಿಸಿದರು. ಮಹಾಕವಿ ಹೇಳಿದ ಮಾತನ್ನು ಸಿಕ್ಕಿದವರೆಲ್ಲ ಪ್ರತಿ ಮಾಡಬಾರದು. ಆದರೆ ಮಹಾಕವಿಯ ಆತ್ಮ ವಿಚಾರಕ ಅಪ್ರತ್ಯಯ ಯಾರಲ್ಲಾದರೂ ತಲೆದೋರಬಹುದು. ಹೆತ್ತವರಿಗೆ ಹೆಗ್ಗಣ ಮುದ್ದು, ಬರೆದವರಿಗೆ ತನ್ನ ಕತೆ ಮುದ್ದು. ಈ ಮಗು, ಈ ಕತೆ, ಬೇರೆ ಯಾರಿಗಾದರೂ ಮುದ್ದಾಗಿ ಕಾಣುತ್ತದೆಯೋ? ಅದು ಹಾಗೆ ಕಾಣುವವರೆಗೆ ಹೆತ್ತವರು ಬರೆದವರು ಅವುಗಳ ಯೋಗ್ಯತೆಯನ್ನು ಕುರಿತು ಧೈರ್ಯಪಡುವಂತಿಲ್ಲ. ಪ್ರಬುದ್ಧ ಕರ್ಣಾಟಕ ಕೃಷ್ಣಶಾಸ್ತ್ರಿಗಳ ವಿಮರ್ಶೆಯ ಮೂಲಕ ನನಗೆ ಆಗ ಆವಶ್ಯಕವಾಗಿದ್ದ ಧೈರ್ಯವನ್ನು ಕೊಟ್ಟಿತು.

ಇದಾದ ಕೆಲವು ತಿಂಗಳಿಗೆ ನಾನು ಬೆಂಗಳೂರಿಗೆ ವರ್ಗವಾಗಿ ಬಂದೆನು. ವೆಂಕಣ್ಣಯ್ಯನವರು ಆಗ ಬೆಂಗಳೂರಲ್ಲಿದ್ದರು. ನನ್ನ ಅವರ ಬಾಂಧವ್ಯ ಗಾಢವಾಗಿ ಬೆಳೆಯಿತು. ಆ ದಿನಗಳಲ್ಲಿ ನಾನು ಬಿನ್ನಹದ ಗೀತೆಗಳನ್ನು ಬರೆದೆನು. ವೆಂಕಣ್ಣಯ್ಯನವರು ದಿನ ಬಿಡದೆ ಅಥವಾ ದಿನ ಬಿಟ್ಟು ದಿನ ಬಂದು ಆ ಒಂದು ದಿನ ಎರಡು ದಿನ ಬರೆದ ಒಂದು ಗೀತ ಎರಡು ಗೀತವನ್ನು ಕೇಳಿ ಹೋಗುತ್ತಿದ್ದರು. ನನ್ನ ಹೊಸ ಬರಹದ ಉತ್ಸಾಹ, ಅವರ ಹೊಸ ಕೇಳ್ಮೆಯ ಮೆಚ್ಚಿಗೆ, ಇದರ ಕಥೆಯನ್ನು ಇಲ್ಲಿ ವಿಸ್ತಾರವಾಗಿ ವರ್ಣಿಸುವುದು ಅನಾವಶ್ಯಕ. ಇಷ್ಟನ್ನು ಮಾತ್ರ ಹೇಳಬೇಕು. ಈ ಸಾಹಿತ್ಯ ನಿರ್ಮಾಣದ ಕಾರ್ಯದಲ್ಲಿ ವೆಂಕಣ್ಣಯ್ಯನವರ ಆದರದ ಕಾವು ತುಂಬ ಸಹಾಯಮಾಡಿತು. ಇವರ ಮತ್ತು ಶ್ರೀಗಳಾದ ಕೃಷ್ಣಶಾಸ್ತ್ರಿ, ಗುಂಡಪ್ಪ, ಬೆಳ್ಳಾವೆ ವೆಂಕಟನಾರಾಯಣಪ್ಪ, ಸೋಸಲೆ ಗರಳಪುರಿ ಶಾಸ್ತ್ರಿಗಳ ಮೆಚ್ಚಿಗೆಯಿಂದ ನನಗೆ ತುಂಬಾ ಹುರುಪು ಒದಗಿತು.

ಈ ಮಾತುಗಳಿಂದ ನಾನು ಬರೆದ ಎಲ್ಲ ಬರವಣಿಗೆಯನ್ನೂ ಈ ಮಿತ್ರರು ಎಲ್ಲ ಹೊತ್ತಿನಲ್ಲೂ 'ಒಪ್ಪಿಯೇಕೊಂಡರು' ಎಂದು ಗ್ರಹಿಸಬಾರದು. 'ಸುಬ್ಬಣ್ಣ' ಕತೆಯ ಹಸ್ತ ಪ್ರತಿ ಮೊದಲು ಈ ಮಿತ್ರರಿಗೆ ಹೋದಾಗ ಸುಬ್ಬಣ್ಣ ನೀಲಾ ಇವರ ಸಂಬಂಧವನ್ನು ಕುರಿತ ಭಾಗ, ಸುಬ್ಬಣ್ಣ ಲಲಿತಮ್ಮನ ಮನಸ್ಸು ಒಂದುಗೂಡಿದುದನ್ನು ವರ್ಣಿಸುವ ಶಯ್ಯಾಗಾರದ ವರ್ಣನೆಯ ಭಾಗ, ಇವು ಪ್ರಬುದ್ಧ ಕರ್ಣಾಟಕ ನಡೆಸಿಕೊಂಡು ಬಂದಿದ್ದ

ಒಂದು ವಿನಯದ ಎಲ್ಲೆಯಿಂದ ಆಚೆಗೆ ಬೀಳುತ್ತವೆ ಎಂದು ಅವರು ಅಂಜಿದರು. ಈ ಮಾತಿಗೆ ನಾನು ಒಪ್ಪಿದೆ; ಆದರೆ ಕಥೆಯ ಆ ಭಾಗಗಳನ್ನು ಈ ಕಾರಣದಿಂದ ಬಿಡುವುದಕ್ಕೆ ಅಥವಾ ತಿದ್ದುವುದಕ್ಕೆ ಒಪ್ಪುವುದು ಸಾಧ್ಯವಾಗಲಿಲ್ಲ. ಸದ್ಯಕ್ಕೆ ಅದನ್ನು ಪ್ರಕಟಿಸುವುದು ಬೇಡ, ಮುಂದೆ ನೋಡೋಣ, ಎಂದು ಪ್ರಕಟಣೆಯನ್ನು ನಿಲ್ಲಿಸಿದ್ದಾಯಿತು. ಮೂರು ವರ್ಷದ ನಂತರ ಮತ್ತೆ ಅದನ್ನು ನೋಡೋಣವೆಂದು ಮನಸ್ಸಾಯಿತು. ನಾನು ಶಯ್ಯಾಗಾರದ ಕಥನದಲ್ಲಿ ಒಂದು ಪದವನ್ನು ತೆಗೆದು ಬೇರೆಯ ಪದವನ್ನು ಹಾಕಿ ಕಥೆಯನ್ನು ಮತ್ತೆ ಕಳುಹಿದೆನು. ಮೂರು ವರುಷದಲ್ಲಿ ನಮ್ಮ ಮಿತ್ರರ ಮನಸ್ಸೂ ಒಂದು ಹೆಜ್ಜೆ ಇತ್ತ ಬಂದಿತ್ತು. ಜನರು ಅದನ್ನು ಆಗ ಒಪ್ಪಿಕೊಂಡಾರೆಂದು ಅವರಿಗೆ ತೋರಿತು. ಕಥೆ ಪತ್ರಿಕೆಯಲ್ಲಿ ಪ್ರಕಟವಾಯಿತು.

೪

ಪ್ರಬುದ್ಧ ಕರ್ಣಾಟಕ ಪತ್ರಿಕೆಯ ಮೂಲಕ ಅದರ ಯಮಳ ಸಂಪಾದಕರು ಕನ್ನಡಕ್ಕೆ ಎಂತಹ ಉನ್ನತ ಸೇವೆಯನ್ನು ಸಲ್ಲಿಸಿದರೆಂದು ಹೇಳುವುದಕ್ಕಾಗಿ ಈ ನಾಲ್ಕು ಮಾತನ್ನು ಬರೆದದಾಗಿದೆ. ಕನ್ನಡದ ಹೊಸ ಸಾಹಿತ್ಯದ ಚರಿತ್ರೆಯಲ್ಲಿ ಈ ಎರಡು ಹೆಸರು ಎಂದಿಗೂ ಒಂದಾಗಿ ಎಂದಿಗೂ ನೆನಪಾಗಿ ನಿಲ್ಲತಕ್ಕವು. ನಮ್ಮ ದುರದೃಷ್ಟದಿಂದ ಶ್ರೀ ವೆಂಕಣ್ಣಯ್ಯನವರು ಮುಪ್ಪಿಗೆ ಮುನ್ನ ತೀರಿಹೋದರು. ನಮ್ಮ ಅದೃಷ್ಟದಿಂದ, ದೇವರ ಕೃಪೆ ಯಿಂದ ಶ್ರೀ ಅಂಬಳೆ ಕೃಷ್ಣಶಾಸ್ತ್ರಿಗಳು ಮತ್ತಷ್ಟು ಸೇವೆ ನಡೆಸುತ್ತ ಬಂದಿ ದಾರೆ. ಅವರ ನೆನವು ನಿತ್ಯವಾಗಲಿ. ಇವರ ಸೇವೆ ಬಹುಕಾಲ ನಡೆಯಲಿ.

ಇದು ಎಲ್ಲ ಕನ್ನಡ ಲೇಖಕರೂ ಎಲ್ಲ ಕನ್ನಡ ಜನರೂ ಬಯಸುವ ಬಯಕೆ. ಎಲ್ಲ ಲೇಖಕರ, ಎಲ್ಲ ಕನ್ನಡಿಗರ ಈ ಬಯಕೆಯನ್ನು ಒಬ್ಬ ಲೇಖಕನಾಗಿ, ಒಬ್ಬ ಕನ್ನಡಿಗನಾಗಿ, ವ್ಯಕ್ತಪಡಿಸಿ ನಾನು ಅವರ ನೆನವಿಗೆ, ಇವರ ಸಮಕ್ಷಮಕ್ಕೆ, ನನ್ನ ಪ್ರೀತಿ ಕೃತಜ್ಞತೆಗಳ ಕಾಣಿಕೆಯನ್ನು ಸಲ್ಲಿಸುತ್ತೇನೆ.

ಯುಗಾದಿ, ೧೯೪೫ }
ಪ್ರಬುದ್ಧ ಕರ್ಣಾಟಕ }

# ಸಾಹಿತ್ಯದ ಗುರಿ

(ಧಾರವಾಡದ ೧೯೪೦ನೇ ಇಸವಿಯ ಸಾಹಿತ್ಯ ಸಮ್ಮೇಳನದ
ಲೇಖಕ ಗೋಷ್ಠಿಯಲ್ಲಿ ಮಾಡಿದ ಅಧ್ಯಕ್ಷ ಭಾಷಣ)

ಶ್ರೀ ಬಸವನಾಳ ಶಿವಲಿಂಗಪ್ಪನವರೇ, ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳವರೇ, ತಾಯದಿರೇ, ಮಹನೀಯರೇ,

ಈ ಸಲದ ಸಾಹಿತ್ಯ ಸಮ್ಮೇಳನದ ಅಂಗವಾದ ಈ ಗೋಷ್ಠಿಗೆ ನನ್ನನ್ನು ಅಧ್ಯಕ್ಷನಾಗಿರಲು ಆಹ್ವಾನಿಸಿ ಗೌರವಿಸಿದ ಬಗ್ಗೆ ನಾನು ಈ ಉತ್ಸವದ ನಿರ್ವಾಹಕರಾದ ಧಾರವಾಡದ ನನ್ನ ಹಿರಿಯರಿಗೆ, ಮಿತ್ರರಿಗೆ, ಬಹಳ ಕೃತಜ್ಞನಾಗಿದ್ದೇನೆ.

ಉತ್ತರ ಕರ್ನಾಟಕದ ಬೆಳಗಾಂವಿ ನನ್ನನ್ನು ಸಾಹಿತ್ಯ ಸಮ್ಮೇಳನದ ಅಧ್ಯಕ್ಷನನ್ನಾಗಿ ಮಾಡಿತು. ಧಾರವಾಡ ಈಗ ಈ ಮರ್ಯಾದೆಯನ್ನು ಸೇರಿಸಿದೆ. ಉತ್ತರ ಕರ್ನಾಟಕ ನನ್ನ ಭಾಗ್ಯಭೂಮಿ ಎಂದು ಕಾಣುತ್ತದೆ. ಬರುವ ಕಾಲದ ಜನರು ಸ್ವಲ್ಪ ಅಜಾಗ್ರತೆಯಿಂದ ಅಥವಾ ಅತಿ ಜಾಗ್ರತೆಯಿಂದ ಇದ್ದರೆ ಮಾಸ್ತಿ ಧಾರವಾಡ ಜಿಲ್ಲೆಯಲ್ಲಿ ಇಲ್ಲವೇ ಉತ್ತರ ಕರ್ನಾಟಕದಲ್ಲಿ ಇರುವ ಒಂದು ಗ್ರಾಮ ಎಂದು ತಪ್ಪು ತಿಳಿಯುವ ಸಂಭವವಿದೆ.

ಹಿಂದೆ ಕೆಲವು ಸಮ್ಮೇಳನಗಳಲ್ಲಿ ಕವಿಗೋಷ್ಠಿ, ನಾಟಕಕಾರರ ಗೋಷ್ಠಿ, ಮುಂತಾದ ಹೆಸರುಗಳಿಂದ ನಡೆಸುತ್ತಿದ್ದ ಹಲವು ಶಾಖೆಯ ಗೋಷ್ಠಿಗಳನ್ನು ಸೇರಿಸಿ ಈ ಸಲ ಈ ಒಂದೇ ಗೋಷ್ಠಿಯನ್ನು ಏರ್ಪಡಿಸಿರುವಂತೆ ಕಾಣುತ್ತದೆ. ಒಂದು ದೃಷ್ಟಿಯಿಂದ ಇದು ಸರಿ. ಕವಿ ಅಥವಾ ಸಾಹಿತಿ ಎಂದರೆ ಎಲ್ಲ ರೀತಿಯ ಲೇಖಕರೂ ಸೇರುತ್ತಾರೆ. ಆದರೆ ಒಂದು ದೃಷ್ಟಿಯಿಂದ ಹಿಂದಿನ ಏರ್ಪಾಡೇ ಚೆನ್ನವೋ ಎಂದು ಕಾಣುತ್ತದೆ. ಬೇರೆ ಬೇರೆ ಶಾಖೆಗಳಲ್ಲಿ ಅತ್ಯುತ್ತಮವಾದ ಕಾರ್ಯ ಮಾಡುತ್ತಿರುವ ಸಾಹಿತಿಗಳು ಅನೇಕರಿದ್ದಾರೆ. ಅಂಥವರನ್ನು ಗೌರವಿಸುವುದಕ್ಕೆ ಈ ಅಂಗ ಸಮ್ಮೇಳನಗಳು ಒಳ್ಳೆಯ ಅವಕಾಶವಾಗಿದ್ದವು.

ಸಾಹಿತಿಗಳ ಈ ಗೋಷ್ಠಿಯ ಎದುರಿನಲ್ಲಿ ನಾನು ಯಾವ ವಿಷಯುವನ್ನು ಕುರಿತು ಭಾಷಣ ಮಾಡಲಿ ಎಂದು ನಿರ್ಧರಿಸಿಕೊಂಡು ಸಂದರ್ಭಕ್ಕೆ ತಕ್ಕ ಒಂದು ಭಾಷಣವನ್ನು ರಚಿಸುವುದು ನನ್ನಿಂದ ಈ ಸಲ ಸಾಧ್ಯವಾಗಲಿಲ್ಲ. ಆದರೂ ಜೊತೆಯ ಸಾಹಿತ್ಯ ಸೇವಕರೊಂದಿಗೆ ಆಡಬಹುದಾದ ಎರಡು ಮಾತನ್ನು ಇಲ್ಲಿ ಗುರುತು ಹಾಕಿದ್ದೇನೆ. ಸಾಹಿತಿಗಳಾದ ನಾವು ಯಾವ ಗುರಿಯನ್ನು ಇಟ್ಟುಕೊಂಡು ಕೆಲಸಮಾಡುತ್ತೇವೆ, ಅದನ್ನು ಸಾಧಿಸುವುದಕ್ಕೆ ನಾವು ತಳೆಯಬೇಕಾದ ಮೂಲಧರ್ಮ ಯಾವುದು ಎನ್ನುವುದು ಮಾತಿನ ವಿಷಯ. ಈ ಮಾತನ್ನು ಸಾವಧಾನವಾಗಿ ಕೇಳಿ ನನ್ನಲ್ಲಿ ವಿಶ್ವಾಸ ತೋರುವಿರೆಂದು ನಾನು ನಂಬಿದೇನೆ.

ಉಪನಿಷತ್ತುಗಳಲ್ಲಿ ಒಂದು ಆಖ್ಯಾನವಿದೆ. ದೇವತೆಗಳು ಬ್ರಹ್ಮವನ್ನು ಅರಸಲು ತೊಡಗಿದರು. ಅಗ್ನಿ ವಾಯುಗಳು ಅದನ್ನರಸಲು ಹೋಗಿ ವಿಕಾರವಾದ ಒಂದು ಯಕ್ಷರೂಪವನ್ನು ಕಂಡರು. ಬ್ರಹ್ಮವನ್ನು ಅರಸಲು ಹೊರಟ ಈ ಇಬ್ಬರೂ ತಮ್ಮ ಶಕ್ತಿ ಯಾವುದೆಂದು ಯಕ್ಷನಿಗೆ ಹೇಳಿದರು. ಅಗ್ನಿ ಸುಡತಕ್ಕವನು; ವಾಯು ಯಾವುದನ್ನಾದರೂ ಹಾರಿಸತಕ್ಕವನು. ಯಕ್ಷನು ಒಂದು ಹುಲ್ಲುಕಡ್ಡಿಯನ್ನು ಕೊಟ್ಟನು. ಅಗ್ನಿ ಅದನ್ನು ಸುಡಲಾಗಲಿಲ್ಲ. ಅದೇ ಹುಲ್ಲನ್ನು ವಾಯು ಹಾರಿಸಲಾಗಲಿಲ್ಲ. ಇವರಿಬ್ಬರೂ ಸುಮ್ಮನೆ ಹಿಂತಿರುಗಿದರು. ಇಂದ್ರನೇ ಅರಸಲು ಹೊರಟನು. ಯಕ್ಷರೂಪವು ಕಂಡು ಮರೆಯಾಯಿತು. ಇಂದ್ರನು ಇದೇನೆಂದು ವಿಚಾರಿಸುತ್ತ ಸುಳಿದು ಹೈಮವತಿಯಾದ ಉಮಾದೇವಿಯನ್ನು ಕಂಡನು. ಆಕೆ ಇಂದ್ರನಿಗೆ ತಾನು ಯಾರು ಎನ್ನುವುದನ್ನು ಹೇಳಿ ಅಗ್ನಿ ವಾಯುಗಳನ್ನು ಸೋಲಿಸಿದ ಆ ಯಕ್ಷವೇ ಬ್ರಹ್ಮವೆಂದು ಉಪದೇಶಮಾಡಿದಳು.

ಉಮಾದೇವಿ ಕಲೆಗಳ ದೇವತೆ. ಅವಳೇ ಸಾಹಿತ್ಯ. ಬ್ರಹ್ಮವನ್ನು ಅರಸುವ ಮಾನವರ ದೈವೀಶಕ್ತಿಗಳು ತಮ್ಮಿಂದ ತಾವು ತಮ್ಮ ಅನ್ವೇಷಣದಲ್ಲಿ ಕೃತಕೃತ್ಯವಾಗಲಾರವು. ಅವು ತಾವಾಗಿ ಬ್ರಹ್ಮವನ್ನು ಕಂಡಾಗ ಏನೋ ವಿಕಾರರೂಪವೆಂದು, ಯಾವುದೋ ವಿಲಕ್ಷಣ ವಸ್ತುವೆಂದು ಗ್ರಹಿಸುತ್ತವೆ. ತಾವು ಕಂಡದ್ದು ತಮ್ಮನ್ನು ಸೋಲಿಸುವ ಯಾವುದೋ ಒಂದು ವಿರೋಧಿತತ್ವವೆಂದು ತಿಳಿದುಕೊಳ್ಳುತ್ತವೆ. ಮಾನವರ ದೈವೀ

ಶಕ್ತಿಯ ಅತ್ಯುತ್ತಮ ಭಾಗ ಮಾತ್ರ ಬ್ರಹ್ಮದೊಂದಿಗೆ ಸ್ಪರ್ಧೆಗೆ ನಿಲ್ಲುವುದಿಲ್ಲ. ಅದಕ್ಕೆ ಸುಂದರವಾದ ಕಲೆ ದೊರೆಯುತ್ತದೆ; ಆ ಕಂಡು ಮರೆತ ತತ್ವ ಬ್ರಹ್ಮ ಎಂದು ಹೇಳುತ್ತದೆ.

ಈ ಮಾತು ನಮ್ಮ ಬಾಳುವೆಯಲ್ಲೆಲ್ಲ ಅನುಭವಕ್ಕೆ ಬರುತ್ತಿರುತ್ತದೆ. ಇದು ಏನು ಲೋಕ? ಇದು ಏನು ಬಾಳು? ಎಲ್ಲರೂ ಒಳ್ಳೆಯದನ್ನು ಅಪೇಕ್ಷಿಸುವವರೇ. ಆದರೆ ಲೋಕದಲ್ಲಿ ಆಗುವ ಒಳ್ಳೆಯದು ಸಾಕಾದಷ್ಟು ಇಲ್ಲ. ಇರುವ ಒಳ್ಳೆಯದು ಸರಿಯಾಗಿ ಹಂಚಿಕೆಯಾಗಿಲ್ಲ. ಸತ್ಯವನ್ನು ಹುಡುಕಿದ್ದೂ ಹುಡುಕಿದ್ದೇ. ಆದರೆ ಅದು ಯಾವುದು ಎಂದು ಇನ್ನೂ ಇತ್ಯರ್ಥವಾಗಿಲ್ಲ. 'What is truth?' ಎಂದ ಮಂಡಲೇಶ್ವರ ಪೈಲೇಟನಿಗೆ ಯೇಸುಕ್ರಿಸ್ತ ಉತ್ತರ ಕೊಡಲಿಲ್ಲವಂತೆ. ಪ್ರಶ್ನೆ ಕೇಳಿ ಉತ್ತರ ಪಡೆಯದೆ ಇರುವವರಲ್ಲಿ ಪೈಲೇಟನು ಮನುಜವರ್ಗದ ಪ್ರತಿನಿಧಿ. ಬಾಳಿನಲ್ಲಿ ಎಷ್ಟು ಸಂಕಟ, ಎಷ್ಟು ನೋವು, ಎಷ್ಟು ಅಕಾಲಮರಣ, ಸಕಾಲ ಖೇದ. ಈ ಜೀವಿಸಬೇಕೆಂಬ ಆಸೆಯೇನು? ಈ ಜೀವನದ ಬೇನೆಯೇನು? ಇದು ಒಂದಕ್ಕೊಂದು ಹೊಂದುವುದು ಹೇಗೆ? 'To be or not to be, that is the question' ಎನ್ನುವ ಬುದ್ಧಿ ಕೊನೆಗೂ ಪ್ರಶ್ನೆಯಲ್ಲೇ ನಿಲ್ಲುವ ಈ ಸ್ಥಿತಿಯೇನು? ಮನುಷ್ಯನು ಏನನ್ನು ನಂಬುವುದು, ಎಲ್ಲಿ ನಿಲ್ಲುವುದು, ಯಾವುದು ಧ್ಯೇಯ ಎಂದು ಜೀವನ ನಡೆಸುವುದು? 'ಕಸ್ಮೈ ದೇವಾಯ ಹವಿಷಾ ವಿಧೇಮ?'

ಇದೇ ಅರಕೆ; ಇದೇ ಬ್ರಹ್ಮಾನ್ವೇಷಣ; ಇದೇ ಸತ್ಯಾನುಸಂಧಾನ. ಇದರಲ್ಲಿ ಒಂದು ವಿಚಾರಪದ್ಧತಿ ನಿರಾಶೆಗೆ ನಡೆಯುತ್ತದೆ; ಯಕ್ಷವನ್ನು ಕಾಣುತ್ತದೆ; ಬದುಕಿನ ಯೋಗ್ಯತೆಯೇ ಇಷ್ಟು, ಅದರಿಂದ ಹೆಚ್ಚನ್ನು ನಿರೀಕ್ಷಿಸಬಾರದು ಎಂದು ಹೇಳುತ್ತದೆ. "ನಾನು ತರುಣನಾಗಿದ್ದಾಗ ಪಂಡಿತರಲ್ಲಿಗೆ, ಶಾಸ್ತ್ರಿಗಳಲ್ಲಿಗೆ ಸಾಕಾದಷ್ಟು ಸಲ ಹೋದೆ. ಏನೆಂದು ಕೇಳಿದೆ. ಏನೆಂದು ಮಿಡುಕಿದೆ. ಆದರೆ ಕೊನೆಗೆ ಹೋದಬಾಗಿಲನ್ನು ಹಿಡಿದು ಮೊದಲಿದ್ದ ಸಂದೇಹದೊಂದಿಗೆ ಹಿಂದಕ್ಕೆ ಬಂದೆ" ಎಂದ ಉಮ್ಮರ ಖೈಯಾಮ್. 'A living dog is better than a dead lion' ಎಂದ ವಿಶ್ವಜ್ಞಾನಿ ಸಾಲೊಮನ್ನನ ಕುಮಾರ. ಬ್ರೌನಿಂಗ್ ಕವಿ

ಊಹಿಸಿದ ಗ್ರೀಕ್ ಕವಿ ಕ್ಲಿಯಾನ್ ತನ್ನ ವಿಚಾರದ ಸರಣಿಯ ಕೊನೆಯಲ್ಲಿ 'Most progress is most failure' ಎಂದು ಮುಗಿಸಿದನು. "ಗುರಿಯನ್ನು ಬಹುದೂರ ಮಾಡಿ ಅತ್ಯತಿಷ್ಠೆಯಲ್ಲಿ ನೋಟವನ್ನು ನೆಟ್ಟು ಇಹವನ್ನು ಇಲ್ಲದಂತೆ ಮಾಡಬೇಡ. ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ತಸ್ಮಾತ್ ಸರ್ವಪ್ರಕಾರೇಣ ಋಣಂ ಕೃತ್ವಾ ಘೃತಂ ಪಿಬ" ಎಂದನು ಈ ದಾರಿಯಲ್ಲಿ ಚಿಂತಿಸಿದ ಒಬ್ಬ ತತ್ವಜ್ಞಾನಿ. ಅಥವಾ ಅವನ ಮಾತು ಇತರರಿಗೆ ಹಾಗೆ ಭಾಸವಾಯಿತು. ಊಹಿಸಿದ ಒಂದು ಪ್ರಯೋಜನಕ್ಕಾಗಿ ಪ್ರತ್ಯಕ್ಷವಾದ ಒಂದು ಪ್ರಯೋಜನವನ್ನು ತೊರೆಯುದಿರು ಎಂದು ನಾವು ಯಾರಾದರೂ ಹೇಳಲೀ ಹೇಳುತ್ತೇವೆ. ಆ ಊಹೆಯು ಪ್ರಯೋಜನ ಬರಿಯ ಊಹೆಯೇ ಆದರೆ ಮತ್ತೆ ಏನನ್ನು ಹೇಳುವುದು ಸಾಧ್ಯ?

ಇನ್ನೊಂದು ಕಡೆಗೆ ಈ ವಾದಕ್ಕೆ ಒಪ್ಪಿಕೊಳ್ಳದೆ ಇನ್ನೊಂದು ಮನೋಧರ್ಮ ಇದೆ. ಈ ನಿರಾಶಾ ವಾದ ಮುಗಿಯುವುದು ಎಲ್ಲಿಗೆ? ಈ ಬಾಳು ಮುಗಿದಮೇಲೆ ಏನೂ ಇಲ್ಲವೆನ್ನುವುದೇ ನಿಜವಾದರೆ ಈಗ ತುಪ್ಪ ಕುಡಿದು ಆಗಬೇಕಾದದ್ದೇನು? ನಾಳೆ ಗಲ್ಲಿಗೆ ಹೋಗಬೇಕಾದವನಿಗೆ ಇಂದು ಔತಣ ಬೇಕೆನಿಸುತ್ತದೆಯೆ? ಅಲ್ಲದೆ ತುಪ್ಪ ಕುಡಿಯುವುದಕ್ಕಾಗಿ ಎಲ್ಲರೂ ಸಾಲಕ್ಕೆ ಹೊರಟರೆ ಅದನ್ನು ಕೊಡುವ ಮನುಷ್ಯ ಬೇರೆ ಯಾರು? ನಿನ್ನ ಸುಖ ನೀನು ನೋಡಿಕೊ ಎನ್ನುವುದೇ ಮನುಷ್ಯನಿಗೆ ದಾರಿಯಾದರೆ ತಾಯಿ ಮಗುವನ್ನು ಸಾಕುವಳು ಹೇಗೆ? ಒಬ್ಬ ಮನುಷ್ಯನು ತನ್ನ ಸುಖವನ್ನು ಮರೆತು ಮತ್ತೊಬ್ಬನಿಗಾಗಿ ದುಡಿಯುವನು ಹೇಗೆ? ಒಂದು ಫಲದ ಅಪೇಕ್ಷೆಯಿಲ್ಲದೆ ಕೆಲಸದಲ್ಲಿ ತೊಡಗುವ ಪ್ರವೃತ್ತಿ ಹೇಗೆ ಬರಬೇಕು? ವೈಯಾಕರಣಿ ಡುಕೃಂಕರಣೇ ಎಂದು ಪಾಠ ಮಾಡುತ್ತಾ ಜೀವನವನ್ನೇ ಮುಗಿಸುವುದೇಕೆ? ನಾವು ಕಂಡಂತೆ ಅಂಥ ಪ್ರವೃತ್ತಿ ಮಾನವರಲ್ಲಿ ಇದೆ. ಅದು ಇಲ್ಲವೆಂದು ತೋರುವಾಗಲಾದರೂ ಅದನ್ನು ನಮ್ಮ ಮನಸ್ಸು ಒಂದು ಧ್ಯೇಯವಾಗಿ ಕಲ್ಪಿಸುತ್ತದೆ. ನಾವು ಅದರಂತೆ ನಡೆಯುತ್ತೇವೋ ಬಿಡುತ್ತೇವೋ, ಆ ಕಲ್ಪನೆ ಮೇಲುಪಂಕ್ತಿಯೆಂಬುದು ನಿಜ. ಮನುಷ್ಯನಿಗೆ ಇದು ಒಂದು ಕನಸಾಗಿ ಆದರೂ ಬೇಳು

ವುದು ಹೇಗೆ? ಮಾನವನ ಚರಿತ್ರೆ ನಿರಾಶೆಯ ಸೂತ್ರದಿಂದ ಮುಂದು ವರಿಯಲಿಲ್ಲ; ಆಸೆಯ ಸೂತ್ರದಿಂದ ಮುಂದುವರಿದಿದೆ. ಈಗಲೂ ಆ ಪ್ರವಾಹ ಆ ಮುಖವಾಗಿಯೇ ಹರಿಯುತ್ತಿದೆ. ನಿಜವಾದ ನಿರಾಶೆ ತತ್ವತಃ ಆತ್ಮಹನನ. ಎಷ್ಟು ದೂರ ಅದು ಒಂದು ಧ್ಯೇಯವನ್ನು ನಿರಾಕರಿಸುತ್ತದೋ ಅಷ್ಟು ದೂರ ಅದು ಪರಮಾತ್ಮನನ್ನೇ ಹನನ ಮಾಡಿಯೇನು ಎನ್ನುತ್ತದೆ. ಮನುಷ್ಯನು ಉಳಿಯುವುದು ಬದುಕನ್ನು ಅಂಗೀಕರಿಸುವುದರಿಂದ. 'ಓಂ' ಎಂದರೆ ಹೌದು ಎಂದು ಅರ್ಥ. ಇದನ್ನೇ ಕಾರ್ಲೈಲ್ 'The everlasting yea' ಎಂದನು. ಯಕ್ಷಪ್ರಶ್ನೆ ಯಲ್ಲಿ ಮೂರ್ಖನು ಯಾರು ಎಂದು ಯಕ್ಷನು ಕೇಳಿದ್ದಕ್ಕೆ ಯುಧಿಷ್ಠಿರನು ನಾಸ್ತಿಕನು ಮೂರ್ಖನು ಎಂದನು. ಯೆಹೂದ್ಯರ ಧರ್ಮಗ್ರಂಥದಲ್ಲಿ 'The fool hath said in his heart there is no God' ಎಂದಿದೆ. ದೇವರಿಲ್ಲ ಎನ್ನುವವರ ಮಾತನ್ನು ಕುರಿತು ತನ್ನ ಒಂದು ನಾಟಕದಲ್ಲಿ ಮಿಲ್ಟನ್ ಒಂದು ಪಾತ್ರದ ಬಾಯಿಂದ 'Of such there is no school but the heart of the fool and no man therein master but himself' ಎಂದು ಹೇಳಿಸಿದನು.

ಸಾಹಿತ್ಯದ ಉಮಾ ಈ ತೊಡಕಿನಲ್ಲಿ ನಮಗೆ ಸತ್ಯವನ್ನು ತೋರಿಸ ಬೇಕಾಗಿದೆ. ನಾವು ಅಗ್ನಿ ವಾಯುಗಳಂತೆ ಹೆಮ್ಮೆಯಿಂದ ಹೊರಟರೆ ಸತ್ಯವನ್ನು ಕಂಡರೂ ಅರಿಯಲಾರೆವು. ಹೆಮ್ಮೆಯನ್ನುಳಿದು ನಾವು ಸತ್ಯ ವನ್ನು ಅರಸಬೇಕಾಗಿದೆ. ಈ ಸಂದರ್ಭದಲ್ಲಿ ಹೆಮ್ಮೆ ಎನ್ನುವುದು ಮುಖ್ಯ ವಾಗಿ ಎಲ್ಲ ಕಡೆಯೂ ನಮ್ಮ ಮೂಗಿನ ನೇರವನ್ನು ಹುಡುಕುವುದರಲ್ಲಿ ಕಾಣುತ್ತದೆ. ಮಮತೆ ಹೆಚ್ಚಾದಷ್ಟೂ ಸತ್ಯಕ್ಕೂ ನಮಗೂ ಮಧ್ಯೆ ಗೋಡೆ ಎತ್ತರವಾಗುತ್ತದೆ. ಹುಲಿ ಒಂದು ಶಾಸನ ಮಾಡಬಹುದಾದರೆ ಲೋಕ ದಲ್ಲಿ ತನ್ನ ಹೊರತು ಉಳಿದ ಎಲ್ಲವೂ ಕುರಿಯಾಗಿರಬೇಕೆಂದು ಬಯಸೀತು. ಜೊತೆಗೆ ಹೊಟ್ಟೆಯಲ್ಲಿ ಅಜೀರ್ಣವಾಗದ ಹಾಗೆ ಹೊಳೆಗಳಲ್ಲೆಲ್ಲ ಶುಂಠಿಯ ನೀರು ಹರಿಯಬೇಕೆಂದು ಏರ್ಪಡಿಸೀತು. ಇಸ್ಪೀಟಾಡುವವರು ಒಬ್ಬೊಬ್ಬರೂ ಒಂದಲ್ಲ ಒಂದು ಸಲ ಒಂದು ಕನಸನ್ನು ಕಂಡಿರುತ್ತಾರೆ. ತಮಗೆ ಬಂದ ಎಲ್ಲ ಚೀಟಿಯೂ ತುರುಫ್ ಗುಲಾಮು; ಉಳಿದವರಿಗೆ

ಒಂದು ಪಟ್ಟೂ ಇಲ್ಲ. ಇಂಥ ಸ್ವಾರ್ಥಕ್ಕೆ ತೃಪ್ತಿ ಸಾಧ್ಯವಲ್ಲ. ಸತ್ಯ ದೊರೆಯಬೇಕಾದರೆ ತನಗಾಗಿ ಬಹಳ ಆಸೆ ಇರಬಾರದು; ಇತರರಿಗಾಗಿ ತುಂಬ ಆಶೆ ಇರಬೇಕು. ಬೇಕಾದಷ್ಟು ಅಡಿಗೆ ಮಾಡಿ ಮಕ್ಕಳಿಗೆ ಬಡಿಸಿ, ಅವರು ಉಂಡದ್ದನ್ನು ನೋಡಿ ಸಂತೋಷಪಟ್ಟು, ತನಗೆ ಏನಿದ್ದರೂ ಆಯಿತು ಇಲ್ಲದಿದ್ದರೂ ಆಯಿತು, ಎನ್ನುವ ತಾಯ ಮನೋಧರ್ಮ ಸತ್ಯಾನ್ವೇಷಣೆಯಲ್ಲಿ ಸರ್ವಸಾಧಕವಾಗುತ್ತದೆ. ನಮಗೆ ಯಾವುದು ರುಚಿ ಯೆಂದು ಹೊರಟರೆ ನಾವು ಲೋಕದ ಮಂಗಳವನ್ನು ಸಾಧಿಸಲಾರೆವು. ಜನಕ್ಕೆ ಯಾವುದು ಒಳ್ಳೆಯದು, ಹತ್ತು ಜನಕ್ಕೆ ಮಾತ್ರ ಒಳ್ಳೆಯದು ಯಾವುದು, ನೂರು ಜನಕ್ಕೆ ಒಳ್ಳೆಯದು ಯಾವುದು, ಸದ್ಯದ ಸುಖ ಯಾವುದರಲ್ಲಿ, ಪರಿಣಾಮದ ಸುಖ ಯಾವುದರಲ್ಲಿ, ಎಂದೇ ನಾವು ಕಾರ್ಯ ಸಿದ್ಧಿ ಪಡೆಯಬೇಕು. ಜನಕ್ಕೆ ನಾವು ಯಾವ ಗುರಿಯನ್ನು ತೋರಿಸಿ ಕೊಡೋಣ. ಕಸ್ಮೈ ಹವಿಷಾ ವಿಧೇಮ? ಉತ್ತರ: ದೇವಾಯ. ಈ ದೇವ ಯಾವುದು?

ಈ ಮಾತಿನಲ್ಲೆಲ್ಲ ಭರತವರ್ಷದ ಮನೋಧರ್ಮ ಒಂದು ದಾರಿ ಯಲ್ಲಿ ನಡೆದಿದೆ. ಇತರ ದೇಶಗಳಲ್ಲಿ ಇದೇ ವಿಚಾರ ಎಷ್ಟೋ ಜಿಜ್ಞಾಸೆ ಯಾಗಿ ಬಾಳಿನಲ್ಲಿ ಬಹುವಿಧದ ಪ್ರಯೋಗ ಆಗಿದೆ. ನಾವು ಒಂದು ಜನಾಂಗವೆನಿಸಿ ರಾಜಕೀಯವಾಗಿ ಸೋತು ರಾಷ್ಟ್ರೀಯ ದಾಸ್ಯ ಸಂಸ್ಕೃತಿಯ ದಾಸ್ಯವೆಂದು ಭ್ರಮೆಗೊಂಡಂತೆ ನಡೆದುಕೊಂಡಿದ್ದೇವೆ. ನಿಜವಾಗಿ ಇವು ಒಂದಕ್ಕೊಂದು ಸಂಬಂಧಿಸಿಲ್ಲ. ಬೇರೆ ಜನತೆಗಳ ವಿಚಾರಪಥವನ್ನು ನಾವು ಅರಿಯಬೇಕು, ಅರಿಯೋಣ. ಆದರೆ ಗೆದ್ದಿರುವ ಜನರ ಮಾತು ಗೆಲ್ಲುವ ಮಾತು, ಸೋತಿರುವ ಜನರ ಮಾತು ಸೋಲುವ ಮಾತು, ಎಂಬ ತಿಳಿವಳಿಕೆ ನಮಗೆ ಬೇಡ. ನಾವೇ ಯೋಚನೆ ಮಾಡೋಣ. ನಮ್ಮ ಗುರಿಯನ್ನು ಕಾಣೋಣ. ಅದರ ಕಡೆಗೆ ನಡೆಯೋಣ.

ಈ ತತ್ತ್ವವನ್ನು ನಮ್ಮ ಸಾಹಿತ್ಯದಲ್ಲಿ ಹೇಗೆ ಅನ್ವಯಿಸಬೇಕು ಎಂಬುದನ್ನು ಕುರಿತು ನಾನು ಬಹಳ ಮಾತು ಹೇಳುವುದಿಲ್ಲ. ನಮ್ಮ ಕಥೆಗಳಲ್ಲಿ, ನಾಟಕಗಳಲ್ಲಿ, ಕವಿತೆಗಳಲ್ಲಿ, ಇತರ ಲೇಖನಗಳಲ್ಲಿ, ಬಾಳಿನಲ್ಲಿ ಒಳ್ಳೆಯದು ಯಾವುದು ಎನ್ನುವುದನ್ನು ಸೂಚಿಸುವ ವೇಳೆ ಲೇಖಕರಾದ

ನಾವು ಅಜಾಗ್ರತೆಯಿಂದ ಮಾತನಾಡದೆ ಇರಬೇಕೆನ್ನುವುದು ಮಾತ್ರ ನನ್ನ ಆಸೆ. ಆಸ್ತಿಕವಾದ, ಸಂಪ್ರದಾಯಶರಣತೆ, ನೀತಿಬಂಧನ ಇವುಗಳನ್ನು ಕುರಿತು ಪಕ್ಷಪಾತದಿಂದ ನನ್ನ ಯೋಚನೆ ಕೆಟ್ಟಿದೆಯೆಂದು ಯಾರೂ ಭಾವಿಸಬಾರದು. ಆಸ್ತಿಯುಳ್ಳವರೆಲ್ಲರೂ ಆಸ್ತಿಕರೆಂತಲೂ, ನಾಸ್ತಿ ಆಸ್ತಿಗೆ ಬಹು ಹತ್ತಿರವೆಂತಲೂ ನನ್ನ ಮಿತ್ರರೊಬ್ಬರು ಒಂದು ಸಲ ನಕ್ಕು ಹೇಳಿದರು. ನಾಸ್ತಿಗೆ ಆಸ್ತಿಯಷ್ಟೇ ನಾಸ್ತಿಯೂ ಹತ್ತಿರವೆಂದು ಇವರು ಅರಿಯದೆ ಇಲ್ಲ. ಸಾಲದ್ದಕ್ಕೆ ಇದೇ ಹೊತ್ತಿನಲ್ಲಿ ಸಂಪ್ರದಾಯವಂತರು ನನ್ನನ್ನು ಪಾಶ್ಚಾತ್ಯವಾದಗಳಿಗೆ ಮನಸೋತ ಸರಳಸ್ವಭಾವದ ಮನುಷ್ಯ ನೆಂದು ಕನಿಕರ ಪಡುತ್ತಾರೆ. ನನ್ನಂಥವನ ಸ್ಥಿತಿ ಈಸೋಪನ ಕಥೆಯ ಬಾವಲಿಯ ಸ್ಥಿತಿಯೆಂದು ನನಗೆ ಒಂದೊಂದು ಸಲ ಎನ್ನಿಸುತ್ತದೆ. ಆದರೆ ನನ್ನ ಈ ಮನೋಧರ್ಮ ನನ್ನ ಒಬ್ಬನದಲ್ಲ. ನನ್ನಂತೆ ಈಗ ಸಾವಿರ ಜನರಿದ್ದಾರೆ. ನಮಗೆ ಸಾಹಿತ್ಯ ಆಸ್ತಿಕ ಅಥವಾ ನಾಸ್ತಿಕವಾಗಿರು ವುದು ಮುಖ್ಯವಲ್ಲ. ಅದು ದೇವರನ್ನು ಕುರಿತು ಯಾವ ನಂಬಿಕೆಯಿಂದ ಲಾದರೂ ಪ್ರವರ್ತಿಸಬಹುದು, ನಮ್ಮ ಅಡ್ಡಿಯಿಲ್ಲ. ಇರುವ ದೇವರು ನಾವು ಇಲ್ಲವೆಂದರೆ ಎಲ್ಲೂ ಹೋಗುವುದಿಲ್ಲ. ಇಲ್ಲದ ದೇವರು ನಾವು ಇದ್ದಾನೆಂದು ಹೇಳಿದ್ದರಿಂದ ಮೂಡುವುದಿಲ್ಲ. ಇಷ್ಟಕ್ಕೆ ದೇವರ ಕಷ್ಟ ಸುಖ ನಮ್ಮ ವಿಚಾರಕ್ಕೆ ವಿಷಯವಲ್ಲ. ನಮಗೆ ಬೇಕಾದುದು ಜನದ ಕಷ್ಟ ಸುಖ. ಯಾವ ನಂಬಿಕೆಯಿಂದ ಮಾನವನು ತಲೆಯೆತ್ತಿ ನಿಲ್ಲ ಬಹುದೋ, ಬಾಳ ಏರು ಇಳಿತಗಳನ್ನು ಧೃತಿಯಿಂದ ಎದುರಿಸಬಹುದೋ, ದುಃಖದಲ್ಲಿ ಅನುದ್ವಿಗ್ನಮಾನಸನಾಗಿ ಸುಖದಲ್ಲಿ ವಿಗತಜ್ವರನಾಗ ಬಹುದೋ ಆ ನಂಬಿಕೆ ಹರಡಬೇಕು. 'No coward soul is mine; no trembler in the world's storm-troubled sphere. I see Heaven's glories shine and faith shines equal arming me from fear' ಎಂದರೂ, 'Out of the night that covers me, black as the pit from pole to pole, I thank whatever Gods there be for my unconquerable soul' ಎಂದರೂ ನಮಗೆ ಒಪ್ಪಿಗೆ. ಆತ್ಮ ದೇವರ ಹೆಸರನ್ನು ಹೇಳಿಯೋ; ಕಾಯುವ ದೇವರು ಇಲ್ಲ, ನಮಗೆ ದಿಕ್ಕು ನಾವೇ ಎಂದೋ; ಹೇಗಾದರೂ ಸರಿ, ಧೀರವಾದರೆ ಸಾಕು.

ಅಂಜುಬುರುಕನಾಗಬಾರದು, Unconquerable ಆಗಬೇಕು. ಮಾನವನ ಆತ್ಮ ತನ್ನ ಕನಸಿನಲ್ಲಿ ಕಂಡಿರುವ ಎತ್ತರವನ್ನು ಮುಟ್ಟುವುದಕ್ಕೆ ನೆರವಾಗ ದಿದ್ದರೆ, ಅಡ್ಡಿಯಾದರೆ, ದೇವರೇಕೆ, ನೀತಿಯೇಕೆ? ಯಾವ ನಂಬಿಕೆಯೂ ಅಂಗೀಕಾರಕ್ಕೆ ಅರ್ಹವೇ ಅಲ್ಲವೇ ಎನ್ನುವುದಕ್ಕೆ ನಾನು ಈ ಪರೀಕ್ಷೆ ಯನ್ನಿಟ್ಟೇನು. ರಾಮನಿಲ್ಲದ ಮಾಣಿಕಬೇಡ ಎಂದ ಹನುಮಂತನಂತೆ ಮನುಜಕುಲದ ಮಂಗಳಕ್ಕೆ ಅಲ್ಲದ ನಂಬಿಕೆ ಬೇಡ ಎಂದು ನಾನು ಹೇಳು ತ್ತೇನೆ. ನಾನು ಈಗ ನನ್ನ ನಂಬಿಕೆಯನ್ನು ಸಮರ್ಥನಮಾಡುತ್ತಿಲ್ಲ. ಯಾವ ನಂಬಿಕೆ ಸಮರ್ಥನಕ್ಕೆ ಅರ್ಹವೆಂದು ವಿಚಾರಮಾಡುತ್ತಿದ್ದೇನೆ.

ಈ ದೃಷ್ಟಿಯಿಂದ ನೋಡಿದರೆ ಯಾವ ಒಂದು ದೇಶದ ಸಾಹಿತ್ಯವೂ ಆ ದೇಶದ ಸ್ಥಿತಿಗತಿಯನ್ನು ಗಮನದಲ್ಲಿಟ್ಟುಕೊಂಡು ಪ್ರವೃತ್ತವಾಗ ಬೇಕೆಂದು ಸಿದ್ಧಾಂತವಾಗುತ್ತದೆ. ಒಂದೊಂದು ಜನತೆ ಸಂಸ್ಕೃತಿಯ ಒಂದೊಂದು ಮಟ್ಟದಲ್ಲಿರುತ್ತದೆ. ಆ ಮಟ್ಟ ಯಾವುದೆಂದು ನೋಡದೆ ಭಾವಗಳ ಪ್ರಚಾರಮಾಡುವುದು ಕ್ಷೇಮದ ದಾರಿಯಲ್ಲ. ಸತ್ಯವನ್ನು ಸಾರುವುದೆಂದು ನಾವು ಯಾರೂ ದುಡುಕಬಾರದು. ಗೀಜಗನ ಗೂಡಿಗೆ ಮಿಣುಕು ಹುಳ ಸಾಕಾದಷ್ಟು ಬೆಳಕನ್ನು ಕೊಡುತ್ತದೆ. ಊರಿಗೆ ಇನ್ನೂರು ಬತ್ತಿಯ ತೇಜಸ್ಸಿನ ದೀಪ ಇರಬೇಕು. ನಮ್ಮ ಕಣ್ಣಿಗಂತೂ ಎರಡು ಸಾವಿರ ಬತ್ತಿಯ ಬೆಳಕು ಹೆಚ್ಚು. ನಮ್ಮ ಯೋಗ್ಯತೆಗೆ ಮಿಂಚಿ ನಮ್ಮ ಕಣ್ಣನ್ನು ಕುಕ್ಕುವ ಬೆಳಕು ನಮ್ಮ ಪಾಲಿಗೆ ಕತ್ತಲಿಂದ ಬಹಳ ಬೇರೆಯಲ್ಲ: ಕತ್ತಲಲ್ಲಿ ಕಣ್ತೆರೆದರೂ ಏನೂ ಕಾಣುವುದಿಲ್ಲ; ಅತಿ ಬೆಳಕಿನಲ್ಲಿ ಕಣ್ತೆರೆಯು ವಂತಿಲ್ಲ. ಶ್ರೀ ಕೃಷ್ಣನು ಅರ್ಜುನನಿಗೆ ದಿವ್ಯವಾದ ದೃಷ್ಟಿಯನ್ನು ಕೊಟ್ಟನು. ಸ್ವಲ್ಪ ಆ ದೃಷ್ಟಿಯನ್ನು ಉಪಯೋಗಿಸಿ ಅರ್ಜುನನು ಇದು ತನಗೆ ಸಾಕೆಂದನು. ವ್ಯಾವಹಾರಿಕ ಸತ್ಯ ಪರಮಾರ್ಥದ ಸತ್ಯದಿಂದ ಯೋಗ್ಯತೆ ಯಲ್ಲಿ ಕಡಮೆಯುದಲ್ಲ. ಸತ್ಯ ನಮ್ಮ ಯೋಗ್ಯತೆಗಾಗಿ ನಾವು ಸಹಿಸುವ ಪ್ರಮಾಣದಲ್ಲಿ ಬಂದಾಗ ವ್ಯಾವಹಾರಿಕ ಸತ್ಯ ಎಂದೆನಿಸಿಕೊಳ್ಳುತ್ತದೆ. ಸೂರ್ಯನ ಉದಯಿಸುತ್ತಲೇ ತನ್ನ ಪ್ರಕಾಶದಿಂದ ಕಂಡರೆ ಲೋಕ ಸಹಿಸಲಾರದೆಂದು ದೇವತೆಗಳು ಅರುಣನನ್ನು ಅವನ ಸಾರಥಿಯನ್ನಾಗಿರಿ ಸಿದರು. ಸಾಹಿತ್ಯ ಸತ್ಯವನ್ನು ಹೀಗೆ ಸಹ್ಯವನ್ನಾಗಿ ಮಾಡಬೇಕಾಗಿದೆ.

ಇದೇ ಕಾಂತಾಸಮ್ಮಿತ. ಇದಕ್ಕಾಗಿಯೇ ಹೈಮವತಿಯಾದ ಉಮಾದೇವಿಯನ್ನು ಸಾಹಿತ್ಯದ ದೈವವೆಂದು ಹೇಳುವುದು.

ಪಾಶ್ಚಾತ್ಯ ಸಾಹಿತಿಗಳ Idealism, Realism ಮುಂತಾದ ಮಾತುಗಳನ್ನು ಕಲಿತು ಪಾಶ್ಚಾತ್ಯ ಸಮಾಜಗಳ Companionate Marriage, Communism, Fascism ಮುಂತಾದ ರಾಜನೀತಿಗಳ ಕಾರ್ಯದಕ್ಷತೆಯನ್ನು ನಮ್ಮ ಬಾಳಿನಲ್ಲಿ ಬಯಸಿ, ನಾವು ಅಲ್ಲಿಯ ಸುಧಾರಣೆಯನ್ನು ಇಲ್ಲಿ ತರೋಣ ಎಂದು ಯತ್ನಿಸುವ ಸಂಭವವಿದೆ. ಯಾವುದನ್ನೂ ವಿಚಾರ ಮಾಡುವುದಕ್ಕೆ ಅಡ್ಡಿಯಿಲ್ಲ. ಆದರೆ ವಿಚಾರದ ಹೊತ್ತಿನಲ್ಲಿ ಅದು ವಿಚಾರ ಮಾತ್ರವೆಂದು ನಮ್ಮ ನೆನಪಿನಲ್ಲಿರಬೇಕು. ಪಾಶ್ಚಾತ್ಯರಂತೆ ನಾವು ಏಕೆ ಆಗಬೇಕು? ಅವರು ಸುಖವಾಗಿದ್ದಾರೆ ಎಂದೇ? ಅವರು ಸುಖವಾಗಿದ್ದಾರೆಯೆ? ಅವರಂತೆ ನಡೆಯುವ ಜಪಾನು ಸುಖವಾಗಿದೆಯೆ? ಅಥವಾ ಅದು ಸುಖವಾಗಿತ್ತು: ಅದರ ಸುಖವನ್ನು ಅದರ ದಾರಿಯಲ್ಲಿ ನಡೆದು ಪಡೆಯಲು ನಾವು ಒಪ್ಪುವೆವೆ? ಒಂದು ದೇಶದ ಮಾತು ಇನ್ನೊಂದು ದೇಶಕ್ಕೆ ಅನ್ವಯಿಸಲೇ ಬೇಕೆಂದು ಹೇಳಲಾಗದು. ಹೊಟ್ಟೆ ತುಂಬ ಉಣ್ಣಲುಳ್ಳವರು ಹದಿನೈದು ದಿನಕ್ಕೆ ಒಂದು ಸಲ ಏಕಾದಶಿ ಮಾಡಬೇಕು. ದಿನವೂ ಹಸಿದುಕೊಂಡಿರುವವರು ಹದಿನೈದು ದಿನಕ್ಕೊಮ್ಮೆ ದ್ವಾದಶಿಮಾಡಬೇಕು. ನೀರು ಹೋಗದ ಗಂಟಲಲ್ಲಿ ಕಡುಬನ್ನು ತುರುಕುವುದೇ? ಸಾಹಿತ್ಯ ವಿಸ್ತಾರವಾದ ಪ್ರಪಂಚಕ್ಕೆ, ಅನಂತವಾದ ಕಾಲಕ್ಕೆ, ಗುರಿಯಿಡಬೇಕು ಎನ್ನುವುದು ಈ ಆಕ್ಷೇಪಕ್ಕೆ ಸಮಾಧಾನವಾಗುವುದಿಲ್ಲ. ಸಾಹಿತ್ಯ ಉತ್ತಮವಾದಷ್ಟೂ ಅದು ಸೃಷ್ಟಿಯಾಗುವ ಕಾಲ ದೇಶಕ್ಕೆ ಮಾತ್ರವಲ್ಲದೆ ಇತರ ಕಾಲದೇಶಗಳಿಗೂ ಪ್ರಯೋಜನಕ್ಕೆ ಬರುತ್ತದೆ ನಿಜ. ಆದರೆ ಯಾವ ಸಾಹಿತ್ಯವೂ ತಾನು ಹುಟ್ಟಿದ ಕಾಲ ದೇಶಕ್ಕೆ ಪ್ರಯೋಜನಕ್ಕೆ ಬಾರದೆ ಎಲ್ಲಾ ಕಾಲ ಎಲ್ಲಾ ದೇಶದ ಸಾಹಿತ್ಯ ಆಗುವುದಿಲ್ಲ.

ನನ್ನ ಅಭಿಪ್ರಾಯಗಳಿಗಿಂತ ಮುಂದುವರಿದ ಅಭಿಪ್ರಾಯಗಳ ಪ್ರಚಾರವನ್ನು ತಡೆಯಲು ನಾನು ಈ ಎಚ್ಚರಿಕೆಯ ಮಾತನ್ನು ಹೇಳುತ್ತಿಲ್ಲ. ವಾಲ್ಮೀಕಿಯ ಕಾವ್ಯವನ್ನು ಕುರಿತು ಬರೆದ ಗ್ರಂಥದಲ್ಲಿ ನಾನು

ರಾಮಾಯಣದ ಕೆಲವು ಭಾಗ ಪ್ರಕ್ಷಿಪ್ತ ಎಂಬ ಅಭಿಪ್ರಾಯವನ್ನು ಪ್ರಕಟಿಸಿದೆನು. ಸಂಪ್ರದಾಯವಂತರ ಮನಸ್ಸಿಗೆ ಇಂಥ ಅಭಿಪ್ರಾಯ ಒಪ್ಪುವುದಿಲ್ಲ. ಕೆಲವರು, ಜನ ನಂಬಿರುವ ವಿಷಯದಲ್ಲಿ ನೀವು ಬುದ್ಧಿ ಭೇದವನ್ನು ಏಕೆ ಉಂಟುಮಾಡುತ್ತೀರಿ, ಎಂದರು. ಮೂಢ ನಂಬಿಕೆ ಯಿಂದ ಒಳ್ಳೆಯದಾಗುತ್ತಿದ್ದರೆ ತಿಳಿವಳಿಕೆಯನ್ನು ಏಕೆ ಹರಡಬೇಕು? ಇದು ಇವರ ಪ್ರಶ್ನೆ. ಇಂಥ ಮಾತಿಗೆ ನನ್ನ ಸಮ್ಮತಿಯಿಲ್ಲ. ನಾನಾದರೂ ನಾನು ಕಂಡ ಸತ್ಯವನ್ನು ಪ್ರಚಾರಮಾಡಲು ಹೊರಟಿದ್ದೇನೆ. ಉಳಿದವರಿಗೆ ಈ ಸ್ವಾತಂತ್ರ್ಯ ಬೇಡವೆಂದು ನಾನು ಹೇಳುವುದಿಲ್ಲ. ಆದರೆ ಸತ್ಯದ ಸನ್ನಿಧಿಯಲ್ಲಿ ವಿನಯವಿರಲಿ ಎನ್ನುವುದೇ ನನ್ನ ಸೂಚನೆ. ಸಾಹಿತ್ಯ ಸೇವಕರು ಸತ್ಯದ ದೇವಾಲಯದಲ್ಲಿ ಊಳಿಗ ಮಾಡುತ್ತಿದ್ದಾರೆ. ತಾವೇ ದೇವರಾಗಿ ಬಂದು ಗುಡಿಯಲ್ಲಿ ಪ್ರತಿಷ್ಠೆಯಾಗಿಲ್ಲ. ದೇವಾಲಯದ ಮೇಲುವಿಚಾರಣೆಯಲ್ಲಿ ಉಮಾದೇವಿ ಇದ್ದಾಳೆ. ನಾವೆಲ್ಲ ಆಕೆಯನ್ನು ಗೌರವಿಸಿ ನಡೆಯಬೇಕು. ಇಷ್ಟನ್ನು ಮಾಡಿದರೆ ನಮ್ಮಿಂದ ಒಳ್ಳೆಯದೇ ಆಗುತ್ತದೆ. 'ನಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ.' ಉದ್ದೇಶ ಒಳ್ಳೆಯದಾಗಿದ್ದರೂ ಕೃತ್ಯ ತಪ್ಪಾಗಬಹುದಲ್ಲ ಎನ್ನಬಹುದು. ಅದಕ್ಕೂ ಸಮಾಧಾನ ಉಂಟು. ನಮ್ಮ ಆಸೆ ಒಳ್ಳೆಯದು. ನಮಗೆ ತಿಳಿದಮಟ್ಟಿಗೆ ಅದರಲ್ಲಿ ದೋಷವಿಲ್ಲ. ಹೀಗಿದ್ದ ನಮ್ಮ ಕೃತ್ಯವನ್ನು ಸತ್ಯದ ದೈವ ಸರಿಪಡಿಸಿಕೊಳ್ಳುತ್ತದೆ. 'ಅಪಿಚೇತ್ ಸುದುರಾಚಾರೋ ಭಜತೇ ಮಾಂ ಅನನ್ಯ ಭಾಕ್ ಸಾಧುರೇವ ಸಮಂತವ್ಯಃ ಸಮ್ಯಕ್ ವ್ಯವಸಿತೋಹಿ ಸಃ' ಎಂಬ ಮಾತು ಇಲ್ಲಿ ಅನ್ವಯಿಸುತ್ತದೆ.

ಇದೇನು ಸಾಹಿತ್ಯದ ವಿಚಾರವೇ, ವೇದಾಂತದ ವಿಚಾರವೇ ಎಂದು ಕೆಲವು ಮಿತ್ರರಿಗೆ ಈ ವೇಳೆಗೆ ಶಂಕೆದೋರಿರಬಹುದು. ಇನ್ನು ಕೆಲವರಿಗೆ ಇದು ವೇದಾಂತವೂ ಅಲ್ಲ, ಮತ ಎಂದೇ ಕಾಣಬಹುದು. ನನ್ನ ಮಟ್ಟಿಗೆ ಸಾಹಿತ್ಯ ಮತವನ್ನೂ ತತ್ತ್ವವನ್ನೂ ಬಿಟ್ಟ ಬೇರೆ ಒಂದು ವಿಷಯ ವಲ್ಲ. 'We are such stuff as dreams are made of' ಎಂಬ ಮಾತು ಬಂದಿರುವುದು ಒಂದು ಸಾಹಿತ್ಯದ ಗ್ರಂಥದಲ್ಲಿ. ಇಂಥ ಮಾತು ಒಂದು ನೂರು ಆ ಒಬ್ಬ ಲೇಖಕನ ಕೃತಿಯಲ್ಲಿದೆ. ಸಾಹಿತ್ಯದ ಕೆಲವು ಗುಣ

ಗಳನ್ನು ಉಳಿದು ತತ್ತ್ವವೂ ಧರ್ಮವೂ ಏರ್ಪಡುತ್ತವೆ. ಸಾಹಿತ್ಯದ ಹದಿನಾರು ಕಲೆಯಲ್ಲಿ ಕೆಲವೆಂಟು ಕಲೆಯಿಂದ ಮತವಾಗುತ್ತದೆ, ಕೆಲವೆಂಟು ಕಲೆಯಿಂದ ತತ್ತ್ವವಾಗುತ್ತದೆ. ಎಲ್ಲ ಕಲೆಯೂ ಇರುವುದು ಸಾಹಿತ್ಯ. ಇಲ್ಲಿ ಉಮೆ ಹೇಮವತಿ. Art for art's sake ಎನ್ನುವ ಅಭಿಪ್ರಾಯ ಸಾಹಿತ್ಯವನ್ನು ತತ್ತ್ವವಿಚಾರ ಧರ್ಮಾನುಷ್ಠಾನಗಳಿಂದ ಬೇರೆ ಮಾಡಿದೆಯೆಂದು ನಾನು ತಿಳಿದಿಲ್ಲ. ಧರ್ಮವನ್ನೂ ತತ್ತ್ವವನ್ನೂ ಅವು ಮಲಗಿರುವ ಅರಗಿನ ಮನೆಯಿಂದ ಹೊರಕ್ಕೆ ತಂದು ರಕ್ಷಿಸುವ ಭೀಮ ಸಾಹಿತ್ಯ ಎಂದು ನಾನು ನಂಬಿದ್ದೇನೆ.

ಸಾಹಿತ್ಯದಲ್ಲಿ ಶಬ್ದದ ಸ್ಥಾನ, ಶೈಲಿ ಛಂದಸ್ಸುಗಳ ಸ್ಥಾನ, ಮುಂತಾದ ಅನೇಕ ವಿಷಯಗಳನ್ನು ನಾನು ಇಲ್ಲಿ ಚರ್ಚೆಮಾಡದೆ ಬಿಟ್ಟಿದ್ದೇನೆ. ಸಾಹಿತ್ಯ ಇರುವುದು ಅರ್ಥಕ್ಕಾಗಿ, ಮಾತಿಗಾಗಿ ಅಲ್ಲ. ಅರ್ಥ ನಿಷ್ಕರ್ಷೆಯಾದಮೇಲೆ ಮಾತು ತಾನೇ ನಿಷ್ಕರ್ಷೆಯಾಗುತ್ತದೆ. ಶೈಲಿಯಾದರೂ ಅರ್ಥವನ್ನು ಅವಲಂಬಿಸಿದ ರೀತಿ ಮಾತ್ರ. ಛಂದಸ್ಸೂ ಹೀಗೆಯೇ ಕಾವ್ಯಾಂಗವಾದ ಒಂದು ವಿಚಾರ, ಕಾವ್ಯದ ತಿರುಳಲ್ಲ. ಪದ್ಯವೆಲ್ಲ ಕಾವ್ಯವಲ್ಲ; ಕಾವ್ಯವೆಲ್ಲ ಪದ್ಯವಾಗಿರಬೇಕಾದದ್ದಿಲ್ಲ. ಇಷ್ಟು ಮಾತನ್ನು ಜ್ಞಾಪಕದಲ್ಲಿಟ್ಟುಕೊಂಡರೆ ಈ ವಿಷಯಗಳನ್ನು ಕುರಿತ ಎಲ್ಲ ವಿವರವೂ ತಾನಾಗಿ ಮೂಡುತ್ತದೆ. ಈ ಗೋಷ್ಠಿಯ ಕಾರ್ಯಕ್ರಮದಲ್ಲಿ ನಡೆಯಬೇಕಾಗಿರುವ ಚರ್ಚೆಗಳಲ್ಲಿ ಇಂಥ ವಿವರಗಳು ತಕ್ಕಮಟ್ಟಿಗೆ ಸ್ಪಷ್ಟವಾಗುವುವೆಂದು ಕೂಡ ನಾನು ನಿರೀಕ್ಷಿಸಿದ್ದೇನೆ.

ನನ್ನ ಮಾತನ್ನು ಇಷ್ಟುರವರೆಗೆ ಲಾಲಿಸಿದ್ದಕ್ಕಾಗಿ ನಾನು ತಮ್ಮೆಲ್ಲರಿಗೆ ಬಹಳ ಋಣಿಯಾಗಿದ್ದೇನೆ.

ಡಿಸೆಂಬರ್ ೧೯೪೦

# ಸಾಹಿತ್ಯ ಮತ್ತು ಪ್ರಗತಿ

## ೧

ಸಾಹಿತ್ಯ ಪ್ರಗತಿಶೀಲವಾಗಬೇಕೆಂದು ಇತ್ತೀಚೆಗೆ ಕೆಲವರು ತರುಣ ಲೇಖಕರು ವಾದ ಎತ್ತಿದ್ದಾರೆ. ಇದುವರೆಗೆ ಬಂದಿರುವ ಸಾಹಿತ್ಯ ಪ್ರಗತಿಶೀಲ ಅಲ್ಲ, ಇನ್ನು ಮುಂದೆ ಬರುವ ಸಾಹಿತ್ಯ ಪ್ರಗತಿಶೀಲ ಆಗಬೇಕು, ಎನ್ನುವುದು ಈ ವಾದದ ಮುಖ್ಯ ಭಾವ. ವಾದದ ಸರಣಿಯಲ್ಲಿ ಇವರು, ಪ್ರಗತಿ ಎಂದರೆ ಏನು ಎಂಬ ವಿಷಯದಲ್ಲಿ, ಸಾಹಿತ್ಯದ ಕಾರ್ಯ ಏನು ಎಂಬ ವಿಷಯದಲ್ಲಿ, ನಿಜವಾದ ಪ್ರಗತಿಗೆ ಸಾಹಿತ್ಯ ಹೇಗೆ ಸಾಧನವಾದೀತು ಎಂಬ ವಿಷಯದಲ್ಲಿ, ಸಾಹಿತ್ಯದಲ್ಲಿ ಹಳೆಯದು ಹೊಸದು ಎಂಬ ವಿಷಯದಲ್ಲಿ, ದೇವರು, ಧರ್ಮ, ನೀತಿ, ರೀತಿ ಮುಂತಾದ ವಿಷಯಗಳಲ್ಲಿ, ಒಂದು ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದಾರೆ. ತಮ್ಮ ರೀತಿಯ ಅಭಿಪ್ರಾಯವೇ ಪ್ರಗತಿಶೀಲ, ಇದಕ್ಕೆ ವಿರುದ್ಧ ಎಂದುದೆಲ್ಲ ಲೋಕಕ್ಕೆ ಅಹಿತ ಎಂಬ ಮಾತುಗಳನ್ನು ಆಡುತ್ತಿದ್ದಾರೆ. ಆಯಾ ಹೊತ್ತಿನಲ್ಲಿ ಮಾತನಾಡುತ್ತಿರುವ ಲೇಖಕನಿಗೆ ಪ್ರಗತಿಶೀಲವೆಂದು ತೋರಿ ರುಚಿಸಿದ ಸಾಹಿತ್ಯ ಇರಬೇಕು ; ಉಳಿದ ಸಾಹಿತ್ಯ ಲೋಕಕ್ಕೆ ಬೇಡ: ಇದು ಇವರ ವಿಮರ್ಶೆಯ ಧೋರಣೆ. ಒಬ್ಬನೇ ಲೇಖಕನು ಒಮ್ಮೆ ಇವರಿಗೆ ಸಮ್ಮತವಾದ ಅಭಿಪ್ರಾಯವನ್ನು ಹೇಳಿದ್ದು, ಗ್ರಂಥವನ್ನು ರಚಿಸಿದ್ದು, ಇಂದು ಇವರು ಒಪ್ಪದ ಅಭಿಪ್ರಾಯವನ್ನು ಹೇಳಿದರೆ, ಗ್ರಂಥವನ್ನು ರಚಿಸಿದರೆ, ಅವನು ಸಾಹಿತ್ಯಧರ್ಮದಿಂದ ಭ್ರಷ್ಟನಾದನೆಂಬಂತೆ ಇವರು ಅಂತಹ ಲೇಖಕನನ್ನು ಕುರಿತು ಟೀಕಿಸುತ್ತಾರೆ. ಮುಖ್ಯವಾಗಿ ಈ ನಮ್ಮ ಮಿತ್ರರು ತಮ್ಮಂತೆ ಪ್ರಗತಿಶೀಲರಾದ ಲೇಖಕರೇ ಲೇಖಕರು, ಉಳಿದ ಲೇಖಕರು ಲೇಖಕರೇ ಅಲ್ಲ, ಎಂದು ಸಾಹಿತ್ಯಲೋಕದಲ್ಲಿ ಏಕಮಾತ್ರದಾಯಾದರಾಗಲು ಯೋಚಿಸಿದ್ದಾರೆ.

ಈ ಎಲ್ಲ ಎಣಿಕೆ, ಈ ಎಲ್ಲ ನಡೆನುಡಿ ಸಾಹಿತ್ಯದ ಧರ್ಮಕ್ಕೆ ತೀರಾ ವಿರುದ್ಧ. ಈ ನಮ್ಮ ಮಿತ್ರರು ಉದ್ದೇಶಿಸಿರುವ ಪ್ರಗತಿ ನಿಜವಾದ

ಪ್ರಗತಿಯ ಅತ್ಯಲ್ಪ ಭಾಗ. ಒಟ್ಟು ಜನತೆಗೆ ಒಳ್ಳೆಯದನ್ನು ಮಾಡುವ ಸಾಹಿತ್ಯ, ಒಳ್ಳೆಯದನ್ನು ತರುವ ಸಾಹಿತ್ಯ, ಒಳ್ಳೆಯ ಸಾಹಿತ್ಯ: ಇವರು ಈ ಗುರಿಯನ್ನು ಮರೆತಿದಾರೆ. ಪಾಶ್ಚಾತ್ಯ ದೇಶದಲ್ಲಿ ರಾಜಕೀಯ ಪಕ್ಷಗಳಿಗೆ ಸಹಾಯವಾಗಿ ಆಯಾ ಹೊತ್ತಿನಲ್ಲಿ ಲೇಖನವನ್ನು ಬರೆಯುತ್ತಾ ಲೇಖಕರು ಮಿತವಾದಿಗಳು, ಅತಿವಾದಿಗಳು ಆಗಿದ್ದಾರೆ; ಮಂದ ಪಕ್ಷದವರು, ಉಗ್ರಪಕ್ಷದವರು ಆಗಿದ್ದಾರೆ. ಶ್ರೀಮಂತ ಜನರು ಸಮಾಜದಲ್ಲಿ, ರಾಜ್ಯದಲ್ಲಿ, ಪ್ರಬಲರಾಗಿದ್ದು ಬಡವರನ್ನು ಬಾಳಿಸುವುದರಲ್ಲಿ ಆಸಕ್ತಿತೋರದೆ ಇದ್ದಾಗ ಬಡಜನರ ಪರವಾಗಿ ಗಂಟಲೆತ್ತುವುದಕ್ಕೆ ಹೊಸ ದನಿಯ ಸಾಹಿತ್ಯ ಮೊದಲಾಯಿತು. ಇದನ್ನು ಅಲ್ಲಿ ಸಾಮ್ಯವಾದದ ಸಾಹಿತ್ಯ ಎಂದು ಕರೆಯುತ್ತಾರೆ. ಹಲವು ದಶಮಾನಗಳ ಹಿಂದೆ ಆರಂಭವಾದ ಈ ಸಾಹಿತ್ಯ ಈಗ ರಷ್ಯಾದಲ್ಲಿ ವಿಸ್ತಾರವಾಗಿ ಹಬ್ಬಿದೆ. ಈಗ ಅಲ್ಲಿರುವುದೆಲ್ಲ ಪ್ರಾಯಶಃ ಈ ಹೊಸ ದನಿಯ ಸಾಹಿತ್ಯವೇ. ಸಾಮ್ಯವಾದದ ಈ ಸಾಹಿತ್ಯದಂತೆ ನಮ್ಮಲ್ಲಿಯೂ ಸಾಹಿತ್ಯ ಬಡವರ ಬಾಯಿ ಆಗಬೇಕೆಂದು ಭರತವರ್ಷದ ಲೇಖಕರು ಬಯಸಿದ್ದಾರೆ. ಅದರಂತೆ ಇಲ್ಲಿಯೂ ಸಾಹಿತ್ಯವನ್ನು ನಿರ್ಮಿಸಲು ತೊಡಗಿ ಅದನ್ನು Progressive ಎಂದು ಕರೆದಿದ್ದಾರೆ. ಈ Progressive ಎನ್ನುವ ಮಾತಿಗೆ ನಮ್ಮ ಮಿತ್ರರ 'ಪ್ರಗತಿಶೀಲ' ಎನ್ನುವುದು ಸಮಾನಾರ್ಥ ಶಬ್ದ. ಇದರಿಂದ, ಸಾಮ್ಯವಾದವನ್ನು ಅಧಿಕರಿಸಿದ ಸಾಹಿತ್ಯ 'ಪ್ರಗತಿಶೀಲ' ಎಂದೂ ಉಳಿದ ಸಾಹಿತ್ಯ 'ಪ್ರಗತಿಶೀಲ' ಅಲ್ಲ ಎಂದೂ ಭಾಸವಾಗುತ್ತದೆ. ಆದರೆ, ಪಾಶ್ಚಾತ್ಯರ ಸಾಮ್ಯವಾದ ಇಷ್ಟರಲ್ಲಿ ನಿಲ್ಲುವುದಿಲ್ಲ. ದೈವ, ಧರ್ಮ, ರಾಜ್ಯ, ಸಮಾಜ ಇವುಗಳ ವಿಚಾರದಲ್ಲಿ ಕೆಲವು ಅಭಿಪ್ರಾಯಗಳನ್ನು ಅಂಗೀಕರಿಸಿದೆ. ಭರತವರ್ಷದ ಪ್ರಗತಿಶೀಲರೂ ಈ ಭಾವಗಳನ್ನೇ ಮುಂದಿಟ್ಟುಕೊಂಡು. ಇವನ್ನು ಒಪ್ಪಿ ನಡೆಯುವುದೇ ಮುಂಬರಿವು, ಒಪ್ಪದೆ ನಡೆಯುವುದು ಹಿಂಬರಿವು, ಎಂದು ಹೇಳುತ್ತಿದಾರೆ. ಪಾಶ್ಚಾತ್ಯ ದೇಶಗಳ ಒಂದು ಪಂಗಡದ ಅಭಿಪ್ರಾಯಗಳು ಮಾತ್ರ ಪ್ರಗತಿಶೀಲ ಎನ್ನುವುದು ಭರತವರ್ಷದ ದೃಷ್ಟಿಯಿಂದಲಾಗಲಿ, ಪ್ರಪಂಚದ ದೃಷ್ಟಿಯಿಂದಲಾಗಲಿ ಸಾಧುವಾಗಲಾರದು. ಪ್ರಗತಿಯನ್ನು ಕುರಿತ ಈ ಭಾವನೆ

ಒಂದು ಪಂಗಡದ ಭಾವನೆ. ನಿಜವಾದ ಪ್ರಗತಿ ಒಂದು ಪಂಗಡಕ್ಕೆ ಮಾತ್ರ ಒಪ್ಪಿಗೆಯಾಗುವುದಿಲ್ಲ; ಅದು ಎಲ್ಲ ಪಂಗಡಗಳ, ಎಲ್ಲ ಜನಾಂಗ ಗಳ ಒಪ್ಪಿಗೆಯನ್ನೂ ಸೆಳೆಯುವಂತಿರಬೇಕು.

ಹೀಗೆ ಎಲ್ಲ ಪಂಗಡಗಳ, ಎಲ್ಲ ಜನಾಂಗಗಳ ಒಪ್ಪಿಗೆಯನ್ನು ಪಡೆಯ ಬಲ್ಲ ಪ್ರಗತಿಯನ್ನು ಸಾಹಿತ್ಯ ಅರಿಯಬೇಕಾಗಿದೆ; ವಿವರಿಸಬೇಕಾಗಿದೆ. ನಮ್ಮ ಸ್ನೇಹಿತರು ಪ್ರಗತಿಶೀಲ ಎಂದು ಕರೆಯುತ್ತಿರುವ ಸಾಹಿತ್ಯದಿಂದ ಈ ಕೆಲಸದಲ್ಲಿ ಸಹಾಯ ಆಗುತ್ತದೆ, ಇದು ನಿಜ. ಆದರೆ ಆ ಸಾಹಿತ್ಯ ಅಷ್ಟೇ ಈ ವಿಚಾರವನ್ನು ನಿಷ್ಕರ್ಷೆಗೆ ತಂದು ಮುಗಿಸುವುದು ಸಾಧ್ಯವಿಲ್ಲ. ಹಲವು ಪಕ್ಷದ ಭಾವನೆಗೂ ಸಾಹಿತ್ಯ ರೂಪು ಕೊಡಬೇಕು. ಅದು ಲೋಕದ ಎಲ್ಲಾ ಭಾಗದ ಬಾಳುವೆಯನ್ನೂ ಚಿತ್ರಿಸಬೇಕು; ಎಲ್ಲಾ ಭಾಗವನ್ನೂ ಉದ್ಧರಿಸಲು ಯತ್ನ ಮಾಡಬೇಕು. ಸಾಹಿತ್ಯ ಕೆಲವು ವೇಳೆ ಯಾವ ಒಂದು ಪಂಗಡಕ್ಕೂ ಸೇರದೆ, ಬಹು ಜನರ ಒಪ್ಪಿಗೆಯನ್ನು ಪಡೆಯಲಾರದೆ, ಮನುಜಕುಲದ ರಕ್ಷಣೆಗೆ ಅವಶ್ಯಕವೆಂಬ ತತ್ವವನ್ನೂ ಸಾರಬೇಕಾಗುತ್ತದೆ. ಬಡತನ, ಸಂಪತ್ತು, ಮಾನವ ಜೀವನದ ಒಂದು ಭಾಗ ಮಾತ್ರ. ಅಜ್ಞಾನ ಜ್ಞಾನ, ಸೌಶೀಲ್ಯ ಶೀಲರಾಹಿತ್ಯ, ಸೌಜನ್ಯ ದೌರ್ಜನ್ಯ, ಆಸ್ತಿಕ್ಯ ನಾಸ್ತಿಕ್ಯ, ವಿನಯ ಅವಿನಯ, ಇವು ಆ ಜೀವನದಲ್ಲಿ ಮುಖ್ಯಾಂಶಗಳು. ಈ ಎಲ್ಲ ವಿಷಯದಲ್ಲೂ ಎಲ್ಲಾ ರೀತಿಯ ವಿಚಾರವೂ ಸಾಹಿತ್ಯದಲ್ಲಿ ಈಗಲೂ ನಡೆಯಬೇಕಾಗಿದೆ. ಒಂದು ಮುಖದ ಭಾವನೆಗೆ ಪ್ರಗತಿಶೀಲವೆಂದು ಹೆಸರಿಟ್ಟು ಅದು ಹೊರತು ಯಾವುದೂ ನಮಗೆ ಬೇಡ ವೆಂದರೆ ಪ್ರಗತಿಯ ಒಂದು ಮುಖವನ್ನು ಎಲ್ಲಾ ಪ್ರಗತಿ ಎಂದು ಹೇಳಿ ದಂತಾಗುತ್ತದೆ. ಇದು ತೀರಾ ತಪ್ಪು. ಸರೋವರ ಸಮುದ್ರವಲ್ಲ; ಸಾಗರವೆಂದು ಹೆಸರಿಟ್ಟರೂ ಕೆರೆ ಸಾಗರವಲ್ಲ.

ಪ್ರಗತಿಯನ್ನು ಕುರಿತು ಮತ್ತು ಸಾಹಿತ್ಯದ ಕಾರ್ಯವನ್ನು ಕುರಿತು ಸುಸಂಬದ್ಧವಾದ ಭಾವನೆ ಇಲ್ಲದ್ದೇ ನಮ್ಮ ಮಿತ್ರರ ಮಾತು ಮತ್ತೆ ಮತ್ತೆ ತಪ್ಪುತ್ತಿರುವುದಕ್ಕೆ ಕಾರಣ. "ಪಂಪ ರನ್ನರು ದೊಡ್ಡ ಕವಿಗಳು, ಆದರೆ ನಮಗೆ ಈಗ ಅವರಿಂದ ಪ್ರಯೋಜನವಿಲ್ಲ, ಸಾಮಾನ್ಯ ಜನಕ್ಕೆ ತಿಳಿಯುವ ಸಾಹಿತ್ಯವನ್ನು ಈಗಿನ ಲೇಖಕರು ನಿರ್ಮಿಸಬೇಕು; ಎಲ್ಲ ಹೊತ್ತಿನಲ್ಲೂ

ರಾಮಾ, ಸೀತಾ, ದ್ರೌಪದಿ, ಸಾವಿತ್ರಿ, ಎನ್ನುವ ಸಂಪ್ರದಾಯಶರಣರ ಬರವಣಿಗೆ ನಮಗೆ ಬೇಕಿಲ್ಲ, ಹೊಸ ರೀತಿಯ ಬರವಣಿಗೆ ಬರಬೇಕು; ನಮ್ಮ ದೇಶಕ್ಕೆ ಈಗ ಬೇಕಾಗಿರುವುದು ಸ್ವಾತಂತ್ರ್ಯ, ಅದನ್ನು ಸಾಧಿಸಲು ನೆರವಾಗುವ ಸಾಹಿತ್ಯ ನಮಗೆ ಬೇಕು, ಉಳಿದ ಸಾಹಿತ್ಯ ಬೇಡ; ನಮ್ಮ ಜನಕ್ಕೆ ಈಗ ಹೊಟ್ಟೆಗೆ ಅನ್ನವಿಲ್ಲ ; ಉಡಲು ಬಟ್ಟೆಯಿಲ್ಲ, ಅನ್ನ ಒದಗಿಸುವ, ಬಟ್ಟೆ ಒದಗಿಸುವ ಸಾಹಿತ್ಯ ಬರಬೇಕು; 'ತುತ್ತಿನ ಚೀಲ' 'ಸುಬ್ಬಮ್ಮ ಹೆಗ್ಗಡಿತಿ' 'ಮರಳಿ ಮಣ್ಣಿಗೆ' ಬರೆದ ಲೇಖಕರು ಗಂಗಾವತರಣ, ರಾಮಾಯಣ, ಬೆಟ್ಟದ ಜೀವ ಎಂಬ ಗ್ರಂಥಗಳನ್ನು ಬರೆದದ್ದು ದುಃಖಕರ; ರಾಜಸೇವಾಸಕ್ತ, ರಾಜಸೇವಾಪ್ರಸಕ್ತರು ಬರೆಯುವ ಸಾಹಿತ್ಯದಿಂದ ದೇಶಕ್ಕೆ ಏಳಿಗೆ ಆಗುವುದಿಲ್ಲ; ಮಾಸ್ತಿಯವರ ಸುಬ್ಬಣ್ಣ ಉತ್ತಮವಾದ ಕಥೆ, ಆದರೆ ಇಂಥ ಕೃತಿಗಳನ್ನು ಓದಿ ನಮಗೆ ಸಾಕಾಗಿ ಈಗ ಅಜೀರ್ಣವಾಗಿದೆ, ನಮಗೆ ಬೇರೆ ಸಾಹಿತ್ಯ ಬೇಕು.'' ಇವು ಈ ಸ್ನೇಹಿತರು ಹೇಳುವ ಮಾತುಗಳಲ್ಲಿ ಕೆಲವು. ಈ ಸ್ನೇಹಿತರು ಈ ರೀತಿಯ ತಮ್ಮ ದೃಷ್ಟಿಯಿಂದ, ನಮಗೆ ಬೇಕಾದ ಸಾಹಿತ್ಯ, ನಮಗೆ ಬೇಡದ ಸಾಹಿತ್ಯ, ಎಂದು ಸಾಹಿತ್ಯವನ್ನೆಲ್ಲ ವಿಂಗಡಿಸಲು ಯೋಚಿಸುತ್ತಾರೆ. ತಮಗೆ ಬೇಕಾದುದು ಲೋಕಕ್ಕೆ ಬೇಕು, ತಮಗೆ ಬೇಡದ್ದು ಲೋಕಕ್ಕೆ ಬೇಡ, ಎಂದೇ ಇವರ ಅಭಿಪ್ರಾಯವೋ ಎಂದೇ ಇವರ ಮಾತನ್ನು ಕೇಳುವವರಿಗೆ ಸಂದೇಹ ಹುಟ್ಟುತ್ತದೆ.

೨

ಪಂಪ ರನ್ನರು ಕನ್ನಡಕ್ಕೆ ಇಂದು ಬೇಡವೆ? ದೇಶದ ಹಿತ, ಭಾಷೆಯ ಹಿತವನ್ನು ಬಲ್ಲ ಯಾರು ತಾನೇ ಇಂತಹ ಮಾತನ್ನು ಹೇಳಬಹುದು? ಇಂತಹ ಮಾತಿಗೆ ಒಪ್ಪಬಹುದು? ನಮ್ಮ ಸಾಹಿತ್ಯದ ಹಿರಿಯಾಲ ಸ್ಥಿರವಾಗಿ ನಿಂತಿರುವುದು ಈ ಪಂಪ ರನ್ನರ ಬುಡದ ಮೇಲೆ. ಶಾಖೆ ಉಪಶಾಖೆಗಳು ಈ ಬುಡ ಬೇಡವೆಂದು ತೊರೆದು ಬಾಳುವುದು ಸಾಧ್ಯವೇ? ಸಾಮಾನ್ಯರಿಗೆ ಅರ್ಥವಾಗುವ ಸಾಹಿತ್ಯ ಬೇಕು ಎನ್ನುವುದು ಈ ವಾದದ ಸಮರ್ಥನ. ಪಂಪ, ರನ್ನರ ಕೃತಿ ಇಂದು ಸಾಮಾನ್ಯರಿಗೆ ಅರ್ಥವಾಗುವು

ದಿಲ್ಲವೆನ್ನುವುದು ನಿಜವಿರಬಹುದು. ಆದರೆ ಹಿಂದೆ ಸ್ಥಿತಿ ಹೀಗೆಯೇ ಇತ್ತೇ? ಮುಂದೆ ಹೀಗೆಯೇ ಇರಬೇಕೇ? ಅಥವಾ ಪಂಪ ರನ್ನರ ಶೈಲಿ ತೀರ ಪಾಮರ ಜನಕ್ಕೆ ಎಂದಿದ್ದರೂ ಕಠಿಣವೇ ಎಂದು ಒಪ್ಪಿದರೂ, ಸಾಹಿತ್ಯವನ್ನು ಪಾಮರರಿಗೂ ದೊರಕಿಸಬೇಕು ಎಂಬ ಮಾತು ಇಂದಿನ ದಲ್ಲವಲ್ಲ. ವಚನಕಾರರು, ಹರಿದಾಸರು, ಷಟ್ಪದಿಕಾರರು, ರಗಳೆಕಾರರು, ತ್ರಿಪದಿಕಾರರು, ಸಾಂಗತ್ಯಕಾರರು ಹಲವು ಶತಮಾನಗಳ ಹಿಂದೆ ಜನತೆ ಗಾಗಿ ಕೃತಿಗಳನ್ನು ರಚಿಸಿದರು. ಸಾಹಿತ್ಯ ಅಂದೇ ಪ್ರಗತಿಶೀಲವಾಯಿತು. ಜನತೆಗೆಂದು ಬರೆದ ಆ ಸಾಹಿತ್ಯವಾದರೂ ವಿದ್ಯಾವಂತರಿಗೂ ಅರ್ಥವಾಗದ ದಿನ ಇಂದು ಒದಗಿದೆ. ಜನತೆಗಾಗಿ ಸಾಹಿತ್ಯವನ್ನು ಸುಲಭಮಾಡ ಬೇಕೆನ್ನುವುದು ಸಾಹಿತಿಯ ಗುರಿಯಾಗಿರಬೇಕು, ನಿಜ. ಹಾಗೆಯೇ ಜನತೆಯ ಸಾಹಿತ್ಯಗ್ರಹಣಶಕ್ತಿಯನ್ನು ಹೆಚ್ಚಿಸುವುದೂ ಸಮಾಜನೇತೃ ಗಳ ಗುರಿಯಾಗಿರಬೇಕು. ನಾವು ಜನತೆ ಎನ್ನುವ ಜನ ನಿಜವಾಗಿ ನಾವು ಎಣಿಸುತ್ತಿರುವಷ್ಟು ಅವಿದಗ್ಧರಲ್ಲ. ಸಾಹಿತ್ಯವನ್ನು ತಕ್ಕರೀತಿಯಲ್ಲಿ ಪ್ರಸಾರಮಾಡಿದರೆ ನಮ್ಮ ಸಮಾಜದಲ್ಲಿ ಪಂಪ ರನ್ನರ ಕೃತಿಗಳನ್ನು ಎಂತಹವರೂ ಅರ್ಥಮಾಡಿಕೊಳ್ಳುವರು.

ತನ್ನ ಕಾಲದ ಕನ್ನಡಿಗರು ಕುರಿತು ಓದದೆಯೇ 'ಕಾವ್ಯಪ್ರಯೋಗ ಪರಿಣತಮತಿಗಳು' ಎಂದು ಪೂರ್ವ ಕವಿ ಒಬ್ಬನು ಹೇಳಿದನು. ಅವನ ಆ ಹೆಮ್ಮೆಯ ಮಾತು ನಮ್ಮ ಕಾಲಕ್ಕೆ ಸುಳ್ಳಿನಿಸದಿರಲಿ. ಇಂದಿಗಾಗಲಿ ಮುಂದೆ ಎಂದಿಗಾಗಲಿ ಕನ್ನಡ ಜನಕ್ಕೆ ಪಂಪ ರನ್ನರು ಬೇಡ ಎಂಬ ಮಾತು ಇಲ್ಲಿಗೆ ನಿಲ್ಲಲಿ.

೨

ರಾಮ, ಸೀತೆ, ಗೀತೆ, ಭಾರತಗಳನ್ನು ಕುರಿತು ಬರೆಯುವವರು ಸಂಪ್ರದಾಯ ಶರಣರು, ಇಂಥವರು ನಿರ್ಮಿಸುವ ಸಾಹಿತ್ಯ ದೇಶಕ್ಕೆ ಕೆಡಕು ಮಾಡುತ್ತದೆ, ಎಂದು ಈ ಸ್ನೇಹಿತರ ವಾದ. ರಾಮಾಯಣ ಭಾರತದ ವಿಷಯವಾಗಿ ಏನು ಹೇಳಿದರೂ ಅದು ಸಂಪ್ರದಾಯ ಶರಣತೆ ಯನ್ನು ಸೂಚಿಸುತ್ತದೆಯೇ? ಕೆಲವರಿಗೆ ಇಡೀ ರಾಮಾಯಣ ವೇದಕಲ್ಪ;

ಕೆಲವರು ರಾಮ ಎಂದರೆ ಕಿಡಿಕಿಡಿಯಾಗುತ್ತಾರೆ. ಈ ಎಲ್ಲೆಗಳ ಮಧ್ಯೆ ರಾಮಾಯಣದಿಂದ ಸುಖಪಡುವ, ಆ ಗ್ರಂಥವನ್ನು ಕುರಿತು ತಮ್ಮ ಬುದ್ಧಿ ಶಕ್ತಿಗೆ ಸಾಧ್ಯವಾದಂತೆ ವಿಚಾರಮಾಡುವ, ಎಷ್ಟೋ ರೀತಿಯ ಜನರಿದಾರೆ. ಈ ಎಲ್ಲ ಜನವೂ ಸಂಪ್ರದಾಯ ಶರಣರೇ? ರಾಮನ, ಸೀತೆಯ, ವಿಚಾರ ಬರೆಯುವುದು ಹಾಗಿರಲಿ, 'ರಾಮನವಮಿ' ಎಂದು ಹೆಸರಿಟ್ಟ ಗ್ರಂಥ ವನ್ನು ಕಂಡರೂ ಈ ಗೆಳೆಯರಿಗೆ ಬೇಸರ. ಹೆಸರಿಂದಲೇ ಬೇಸರಗೊಂಡು ಇವರು ಅದರೊಳಗೆ ಏನಿದೆಯೆಂದು ನೋಡುವುದಿಲ್ಲ. ಈ ನಮ್ಮ ಸ್ನೇಹಿತ ರಿಗೆ, ಹಳೆಯ ವಿಷಯವಲ್ಲ, ಹಳೆಯ ಹೆಸರೇ ಒಲ್ಲದಾಗಿದೆ. ಹಳೆಯ ಹೆಸರಷ್ಟೇ ಕೃತಿಯನ್ನು ಸಂಪ್ರದಾಯ ಶರಣಮಾಡುವುದಾದರೆ ಇವರು ಇಷ್ಟರಲ್ಲೇ ತಮ್ಮ ಹೆಸರುಗಳನ್ನು ಮಾರ್ಪಡಿಸಿ ಹೊಸ ಹೆಸರುಗಳನ್ನು ಇಟ್ಟುಕೊಳ್ಳಬೇಕಾದೀತು. ರಾಮಚಂದ್ರ, ಕೃಷ್ಣಮೂರ್ತಿ, ವೆಂಕಟ ರಮಣ ಈ ಹೆಸರುಗಳು ಸಂಪ್ರದಾಯ ಶರಣವಾಗಿವೆ.

ಸಂಪ್ರದಾಯವನ್ನು ಅತಿಕ್ರಮಿಸುವುದೇ ಪ್ರಗತಿಯೆಂದು ತಿಳಿದಿರುವ ಈ ಮಿತ್ರರು ಒಂದು ಮುಖ್ಯವಾದ ಸಂಗತಿಯನ್ನು ಮರೆತಿದಾರೆ. ಸಂಪ್ರದಾಯವೆನ್ನುವುದು ಜೀವನದ ಸಾವಿರ ಸಂದರ್ಭಗಳನ್ನು ಕುರಿತು ನಿಯಮಗಳನ್ನೇರ್ಪಡಿಸಿದೆ. ವನ್ಯ ಜೀವನದಿಂದ ನಾಗರಿಕತೆಗೆ ಬೆಳೆಯುವು ದರಲ್ಲಿ ಮನುಜಕುಲ ಸಂಪ್ರದಾಯವನ್ನು ಬೆಳಸಿಕೊಂಡು ಬಂದಿದೆ. ಬಟ್ಟೆ ಹಾಕಿಕೊಳ್ಳಬೇಕು, ಸ್ನಾನಮಾಡಬೇಕು, ದಿಟ ನುಡಿಯಬೇಕು, ಕಳವು ಮಾಡಬಾರದು, ಕೊಲೆ ಮಾಡಬಾರದು, ಪರಸ್ತ್ರೀ ಸಂಗ ತಪ್ಪು, ಸಮಾಜಕ್ಕೆ ಅನುಕೂಲವಾಗಿ ನಡೆದುಕೊಳ್ಳಬೇಕು, ಈ ಎಲ್ಲವೂ ಸಂಪ್ರ ದಾಯವೇ. ಈ ನಿಯಮಗಳನ್ನು ಒಳಗೊಂಡ ಸಂಪ್ರದಾಯ ಕಳವು ಎಂದರೆ ಏನು ಎಂದು, ಪರಸ್ತ್ರೀ ಎಂದರೆ ಏನು ಎಂದು, ಸಮಾಜಕ್ಕೆ ಅನುಕೂಲ ಎಂದರೆ ಏನು ಎಂದು, ನಿಯಮಿಸಿದೆ. ಈ ನಮ್ಮ ಗೆಳೆಯರು ಕೂಡ ಈ ನಿಯಮಗಳ ರಕ್ಷಣೆಯಿಂದಲೇ ಬದುಕಿದಾರೆ. ತಾಯಿ ತಂದೆ ಮಕ್ಕಳನ್ನು ಸಾಕಬೇಕೆಂಬ ಸಂಪ್ರದಾಯದಿಂದ ಇವರು ಬದುಕುವುದು ಸಾಧ್ಯವಾಯಿತು. ಇವರೂ ಈ ಸಂಪ್ರದಾಯಕ್ಕೆ ತಗ್ಗಿಯೇ ತಮ್ಮ ಮಕ್ಕಳನ್ನು ಸಾಕುತ್ತಿದಾರೆ. ತಂದೆಯ ಆಸ್ತಿ ಮಗನಿಗೆ ಇರತಕ್ಕದ್ದು

ಎನ್ನುವುದು ನಮ್ಮ ಒಂದು ಸಂಪ್ರದಾಯ. ಇದರಿಂದಲೇ ಇವರಿಗೆ ತಲೆಗೆ ನೆರಳು, ವೆಚ್ಚಕ್ಕೆ ರೊಕ್ಕ. ಬಟ್ಟೆಬರೆಯಲ್ಲಿ, ಊಟಉಪಚಾರದಲ್ಲಿ, ಆಟಪಾಟದಲ್ಲಿ ಇವರೆಲ್ಲರೂ ಬಹುಪಾಲು ಸಂಪ್ರದಾಯ ಶರಣರೆ. ಇವರಿಗೆ ಬೇಡವಾದ ಕೆಲವು ನಿಯಮಗಳನ್ನು ಉಲ್ಲಂಘಿಸಿ ಇವರು ಪ್ರಗತಿಪರರಾದೆವೆನ್ನುತ್ತಿದಾರೆ. ಇವರು ಯಾವ ಅರ್ಥದಲ್ಲಿ ಪ್ರಗತಿಪರರೋ ಈ ಅರ್ಥದಲ್ಲಿ ಲೋಕವೇ ಪ್ರಗತಿಪರ. ಸಂಪ್ರದಾಯ ಶರಣರೆಂದು ಇವರು ಮೂದಲಿಸಿ ಹಳಿಯುವ ಜನರೂ ಕೂಡ ತಮಗೆ ಬೇಡವಾದ ನಿಯಮಗಳನ್ನು ಉಲ್ಲಂಘಿಸುತ್ತಾರೆ. ಪ್ರಗತಿಪರ ಎಂಬ ಪಟ್ಟವನ್ನು ಇವರು ಮಾತ್ರ ಕಟ್ಟಿಕೊಳ್ಳಬಹುದು ಎನ್ನುವಂತಿಲ್ಲ.

ಇನ್ನೂ ಒಂದು ಮಾತು. ಈ ನಮ್ಮ ಸ್ನೇಹಿತರಿಗೆ ರಾಮ ಸೀತಾ ಎಂಬ ಹೆಸರು ಬೇಡವೊ, ಹಿಂದಣವರು ಮಾಡಿಕೊಂಡ ಆ ಹೆಸರಿನ ಹಿರಿಯ ವ್ಯಕ್ತಿಗಳು ಬೇಡವೊ, ಆ ವ್ಯಕ್ತಿಗಳಲ್ಲಿ ದೋಷವೆಂದು ಕಾಣುವ ಲಕ್ಷಣ ಮಾತ್ರ ಬೇಡವಾಗಿವೆಯೊ? ಹೆಸರಿಗೆ ಅಡ್ಡಿ ಮಾಡುವುದು ವಿವೇಕವಲ್ಲ. ರಾಮ ಎಂದರೆ ಬೇಡ, ಲೆನಿನ್ ಎಂದರೆ ಬೇಕೆ? ರಾಮ, ಸೀತೆ ಇವರ ಬಯಕೆಯ ಶ್ರೇಷ್ಠ ನಾಯಕ ನಾಯಕಿಯರು ಆಗಲಿಲ್ಲ ಎನ್ನೋಣ. ಆಗ ಇವರು ರಾಮ ಸೀತೆ ನಮಗೆ ಸಾಲದು ಎನ್ನಬಹುದು. ಇದು ಒಪ್ಪಬೇಕಾದ ಮಾತು: ಕೆಲವರಿಗೆ ಈ ಧ್ಯೇಯಗಳು ಸಾಕಾದಷ್ಟು ಎತ್ತರದವಲ್ಲ ಎನ್ನಿಸುವುದು ಸಾಧ್ಯ. ಆದರೆ ಎಲ್ಲ ವಿಧದಲ್ಲಿಯೂ ಇವರು ಬಯಸುವ ಮಟ್ಟವನ್ನು ಮುಟ್ಟದಿದ್ದರೂ ರಾಮ ಸೀತೆ ತಮ್ಮ ಜೀವನದಲ್ಲಿ ತೋರಿಸಿದ ಕೆಲವು ಗುಣವಾದರೂ ಇವರಿಗೆ ಒಪ್ಪಿಗೆ ಆಗಬಹುದಲ್ಲ. ಆ ಗುಣದಷ್ಟಕ್ಕೆ ಇವರು ರಾಮ ಸೀತೆಯನ್ನು ಒಪ್ಪಬೇಕಲ್ಲವೇ? ರಾಮನು ರಾಜಪುತ್ರನಾದರೂ ಸಾಮಾನ್ಯರೊಂದಿಗೆ ಸುಲಭವಾಗಿ ನಡೆದುಕೊಂಡನು; ಆಸ್ತಿಗೆ ಆಶೆಪಡದೆ ಸೋದರರೊಂದಿಗೆ ಸ್ನೇಹದಿಂದ ಬಾಳಿದನು; ಹೆಂಡತಿ ತನ್ನ ವಿಷಯದಲ್ಲಿ ನಿಷ್ಠೆಯಿಂದ ನಡೆದುಕೊಂಡಂತೆ ತಾನೂ ಅವಳ ವಿಷಯದಲ್ಲಿ ನಿಷ್ಠೆಯಿಂದ ನಡೆದುಕೊಂಡನು. ಈ ಗುಣಗಳು ಯಾರಿಗೆ ಬೇಡ? ತಾವು ಪ್ರಗತಿಪರರೆಂದು ಹೇಳಿಕೊಳ್ಳುವ ಯಾವ ಮಹನೀಯರೂ ಸಂಪ್ರದಾಯ ಪೂಜಿಸುವ ಮಹಾ ವ್ಯಕ್ತಿ

ಗಳಲ್ಲಿ ಈ ಅಥವಾ ಇಂಥ ಕೆಲವಾದರೂ ಗುಣಗಳನ್ನು ಒಪ್ಪಿಕೊಳ್ಳಲೇ ಬೇಕು.

ರಾಮ ಸೀತೆ ಎನ್ನುವುದು ಹಿಂದಿನ ಮಾತು, ನಮಗೆ ಬೇಕಾದುದು ಇಂದಿನದು, ಎನ್ನುವುದಾದರೆ 'ನಿಮ್ಮ ಇಂದು ಯಾವಾಗ ಮೊದಲಾಯಿತು' ಎಂದು ಕೇಳಬೇಕಾಗುತ್ತದೆ. ಬುದ್ಧ ಶಂಕರಾದಿ ಆಚಾರ್ಯರು, ಕನಕಣ್ಣ ಬಸವಣ್ಣಗಳು, ಹರಿದಾಸ ಶಿವಶರಣರು ಎಲ್ಲರೂ ಹಿಂದಿನವರೇ. ಸರ್ವಜ್ಞ ಇಂದಿನವನಲ್ಲ. ಸೀತೆ ರಾಮ ಹಳಬರು, ಇನ್ನಿವರು ನಮಗೆ ಬೇಡ, ಎಂದರೆ ಗೌರಿ ಶಂಕರರು ಇವರಿಗೆ ಬೇಕಾಗುವುದೆಂತು? ಹಳೆಯುದನ್ನೆಲ್ಲ ಗುಡಿಸಿ ಎಸೆಯುವ ಇವರ ವಿಚಾರಪದ್ಧತಿ ಹೊಸತಲ್ಲದ ಯಾವುದನ್ನೂ ಉಳಿಸುವಂತಿಲ್ಲ. ರಾಮ ಬೇಡವೆಂದರೆ ರಾಮನ ಹೆಸರು ಹೇಳಿದ ದಾಸರಿಗೆ ಇಂಬಿಲ್ಲ. ಶಿವ ಬೇಡವೆಂದರೆ ಅವನನ್ನು ಸಾರಿದ ಬಸವಣ್ಣನವರಿಗೆ ಎಡೆಯಿಲ್ಲ. ರಾಮನನ್ನು ಬೇಡವೆಂದು ಶಿವನನ್ನು ಬೇಕೆಂದರೆ, ಉಳಿದೆಲ್ಲವನ್ನು ಹಳಿದು ತಮಗೆ ತೋರಿದ ಒಂದು ಪಂಥವನ್ನು ಹೊಗಳಿ ಹಾಡಿದರೆ; ಹೀಗೆ ಮಾಡುವವರ ಉದ್ದೇಶ ಶುದ್ಧವಿರಬಹುದೇ ಎಂಬ ಶಂಕೆ ಹುಟ್ಟುತ್ತದೆ. ಅನ್ನಕ್ಕಾಗಿ ಪರಧರ್ಮವನ್ನು ಅವಲಂಬಿಸುವ ಜನರಂತೆ ಇಂಥವರು, ತಮ್ಮ ನಡತೆ ಧರ್ಮಶ್ರದ್ಧೆಯಿಂದ ಪ್ರೇರಿತವಾಗಿಲ್ಲ, ಬೇರೆ ಯಾವುದೋ ಆಶೋತ್ತರದಿಂದ ಪ್ರೇರಿತವಾಗಿದೆ, ಎಂಬ ಅನುಮಾನಕ್ಕೆ ಎಡೆಕೊಡುತ್ತಾರೆ. ಧರ್ಮೈಕನಿಷ್ಠೆಯಿಂದಲ್ಲದೆ ಪ್ರಯೋಜನಕ್ಕಾಗಿ ಈ ರೀತಿ ನಡೆಯುವವರು ತಾವೇ ಹೊಗಳುವ ಪ್ರಗತಿಯನ್ನು ಸಾಧಿಸುತ್ತಿಲ್ಲ.

೪

ಭರತವರ್ಷದ ದಾಸ್ಯದಾರಿದ್ರ್ಯಗಳನ್ನು ನಿವಾರಿಸುವ ಸಾಹಿತ್ಯ ಬೇಕು ಎಂಬ ಮಾತು ಒಪ್ಪತಕ್ಕದ್ದು. ಆದರೆ ಸಾಹಿತ್ಯ ದಾಸ್ಯವನ್ನೂ ದಾರಿದ್ರ್ಯವನ್ನೂ ನೀಗುವುದು ಹೇಗೆ? ಆಂಗ್ಲ ಜನರನ್ನೂ ಒಳ್ಳೆಯವರೆಂದು ಹೇಳಿ, ಅವರ ಪ್ರಮುಖರ ಮನಸ್ಸನ್ನು ಒಲಿಸಿ ನಾಳೆ ಭರತವರ್ಷಕ್ಕೆ ಸ್ವಾತಂತ್ರ್ಯವನ್ನು ಕೊಡಿಸುವೆನೆಂದು ಒಬ್ಬನು ತಿಳಿದಿದಾನೆನ್ನೋಣ. ಅವನು ಆ ಭಾವನೆಯಿಂದ ತನ್ನ ಉದ್ದೇಶ ಸಾಧಿಸಲು ಒಂದು ಗ್ರಂಥ ಬರೆದರೆ

ಅದು ಪ್ರಗತಿಶೀಲವೆ? ಇಲ್ಲ ಆಂಗ್ಲರನ್ನು ವಿರೋಧಿಗಳೆಂದೆಣಿಸಿ ಬರೆದ ಬರಹ ಮಾತ್ರ ಪ್ರಗತಿಶೀಲವೋ? ಮತ್ತೊಬ್ಬನು ಪುಣ್ಯವಂತರ ಹೃದಯವನ್ನು ಕರಗಿಸಿ ಅವರಿಂದ ಬಡಬಗ್ಗರಿಗೆ ದಾನ ಮಾಡಿಸುತ್ತೇನೆ ಎಂಬ ಉದ್ದೇಶದಿಂದ ಒಂದು ಗ್ರಂಥ ಬರೆದನೆನ್ನೋಣ. ಅವನು ದಾರಿದ್ರ್ಯ ನಿವಾರಣೆಗಾಗಿ ಪ್ರಯತ್ನ ಮಾಡಿದ್ದಾನೆನ್ನುವುದೆ? ಇಲ್ಲವೆ ಪುಣ್ಯವಂತರನ್ನು ವಿರೋಧಿಸಿ ಬಡಿದುಹಾಕಿ ಸಾಮಾನ್ಯರಿಗಾಗಿ ಅವರ ಆಸ್ತಿಯನ್ನೆಲ್ಲ ಬಳಸುವೆನೆಂಬ ವಾದ ಮಾತ್ರ ಪ್ರಗತಿಶೀಲವೆ? ಎಲ್ಲ ಬಡತನವೂ ಹಣವಂತನ ದುಷ್ಟತನದಿಂದ ಹುಟ್ಟಿದ್ದಲ್ಲ. ಅಲಸನಾದ ಹಣವಂತನು ತಂದೆ ಬಿಟ್ಟ ಆಸ್ತಿಯನ್ನು ದುಂದುಗಾರಿಕೆಯಿಂದ ಪೋಲುಮಾಡಿ ದರಿದ್ರನಾಗುತ್ತಾನೆ: ಇವನ ದಾರಿದ್ರ್ಯವನ್ನು ನಿವಾರಿಸುವುದಕ್ಕೆ ಮತ್ತೊಬ್ಬ ಹಣವಂತನನ್ನು ಬಡಿದು ಅವನ ಆಸ್ತಿಯನ್ನು ಹಂಚಿ ಇವನಿಗೆ ಕೊಡಬೇಕೆ? ಮನೆಗೆ ಸಾಕಾದಷ್ಟನ್ನು ಗಳಿಸುವವನು ಜೂಜು, ಕುಡಿತ, ಸೂಳೆಗಾಗಿ ದುರ್ವ್ಯಯ ಮಾಡಿ ಮನೆಯ ಬಾಳಷ್ಟನ್ನು ಬಡ ಮಾಡುತ್ತಾನೆ: ಈ ದಾರಿದ್ರ್ಯವನ್ನು ನೀಗುವ ಸಾಹಿತ್ಯ ಪ್ರಗತಿಶೀಲ ಅಲ್ಲವೆ? ನೆಲ ಮನೆ ಇದ್ದು ದುಡಿಯಲಾರದೆ ಬೇರೊಬ್ಬನು ಬಡವನಾಗಿರುತ್ತಾನೆ: ಅವನನ್ನು ತಿದ್ದುವ ಸಾಹಿತ್ಯ ನಮಗೆ ಬೇಡವೆ?

ಹೀಗೆ, ದಾರಿದ್ರ್ಯಕ್ಕೆಲ್ಲ ಒಂದೇ ಕಾರಣ, ಅದನ್ನು ನಿವಾರಿಸುವುದಕ್ಕೆ ಒಂದೇ ದಾರಿ, ಎಂಬಂತೆ ಮಾತನಾಡುವುದು ಅತಂತ್ರವಾದ ವಿಚಾರ ಆಗುತ್ತದೆ.

ಸಾಹಿತ್ಯ ಸ್ವಾತಂತ್ರ್ಯವನ್ನು ಸಾಧಿಸುವುದೆಂದರೇನು? ಸ್ವಾತಂತ್ರ್ಯ ಯಾವುದು? ಭರತವರ್ಷ ಆಂಗ್ಲರಿಂದ ಬಿಡುಗಡೆಹೊಂದಬಹುದು; ತನ್ನೊಳಗೆ ಪ್ರಬಲರಾದ ಕೆಲವು ಜನಕ್ಕೆ ಉಳಿದೆಲ್ಲ ಜನ ದಾಸರಾಗಿರುವ ಸ್ಥಿತಿಯಲ್ಲಿ ಕೊರಗಬಹುದು: ಆಗ್ಗೆ ಸ್ವಾತಂತ್ರ್ಯದಿಂದ ಪ್ರಯೋಜನವಿಲ್ಲ. ಪ್ರಬಲರಾದ ಕೆಲವರಿಂದ ಹಲವರಲ್ಲ, ಪ್ರಬಲರಾದ ಹಲವರಿಂದ ಕೆಲವರು ಕೆಡುವ ಸ್ಥಿತಿಯಲ್ಲಿ ದೇಶ ಮರುಗಬಹುದು: ಆಗಲೂ ಸ್ವಾತಂತ್ರ್ಯದಿಂದ ಶುಭ ದೊರೆಯಲಿಲ್ಲ. ರಾಜ್ಯದ ಜೀವನ ವಾಡಿಕೆಯು ಸ್ವಾತಂತ್ರ್ಯದಿಂದ ನಡೆಯುತ್ತಿರಬಹುದು; ಆದರೆ ಜನ ಒಳ್ಳೆಯ ದಾರಿಯನ್ನರಿಯದೆ

ಬದುಕನ್ನು ಕೆಡಿಸಿಕೊಳ್ಳಬಹುದು : ಸ್ವಾತಂತ್ರ್ಯದಿಂದ ಆಗಲೂ ಸುಖವಿಲ್ಲ. ಮನುಷ್ಯನ ಸ್ವಾತಂತ್ರ್ಯ ಬರಿಯ ಹೊರಗಣ ಸ್ವಾತಂತ್ರ್ಯವಲ್ಲ. ಹೊರಗಣ ಸ್ವಾತಂತ್ರ್ಯ ಎಷ್ಟು ಅವಶ್ಯಕವೋ ಅಷ್ಟೇ ಒಳಗಣ ಒಂದು ಸ್ವಾತಂತ್ರ್ಯ ಅವನ ಉದ್ಧಾರಕ್ಕೆ ಬೇಕು. ಹೊರಗೆ ದಾಸ್ಯ ಇರುವಂತೆ ಒಳಗೂ ದಾಸ್ಯ ಉಂಟು. ಸ್ವಾತಂತ್ರ್ಯವನ್ನು ಬಯಸುವವನು ಈ ಎರಡು ದಾಸ್ಯದಲ್ಲಿ ಒಂದನ್ನು ಗೆದ್ದು ಇನ್ನೊಂದನ್ನು ನಿಲ್ಲಿಸಿಕೊಳ್ಳಲಾಗದು. ಸ್ವಾತಂತ್ರ್ಯ ವನ್ನು ಕಲಿಸುವ ಸಾಹಿತ್ಯ ಈ ಎರಡರಲ್ಲಿ ಒಂದರ ಮಾತನ್ನಾಡಿ ಇನ್ನೊಂದನ್ನು ಬಿಡಲಾಗದು. ಸ್ವಾತಂತ್ರ್ಯದ ಕಲ್ಪನೆಯನ್ನು ಅಲ್ಪ ಮಾಡಿಕೊಂಡು ತಮ್ಮ ಕಲ್ಪನೆಯಷ್ಟರ ಸ್ವಾತಂತ್ರ್ಯವನ್ನು ಸಾಧಿಸುವ ಸಾಹಿತ್ಯವೇ ಒಳ್ಳೆಯದು ಎನ್ನುವವರ ವಿಚಾರಪದ್ಧತಿ ತೀರ ಅತಂತ್ರ.

೫

ಇಷ್ಟರಿಂದಲೇ ಈ ಗೆಳೆಯರ ವಾದ ಅಸಾಧುವೆನ್ನುವುದು ಕಾಣಬೇಕು. ಆದರೆ ಇದರ ತಪ್ಪು ಇಲ್ಲಿಯೇ ನಿಲ್ಲುವುದಿಲ್ಲ. ತಮ್ಮ ಕಲ್ಪನೆಯ ರೀತಿ ಯಲ್ಲಿ ಸ್ವಾತಂತ್ರ್ಯವನ್ನು ಗಳಿಸುವ, ದಾರಿದ್ರ್ಯವನ್ನು ನೀಗುವ, ಸಾಹಿತ್ಯ ಬೇಕು ಎನ್ನುವ ಈ ನಮ್ಮ ಮಿತ್ರರು ಬೇರೆ ಯಾವ ಸಾಹಿತ್ಯವೂ ಬೇಡ ಎನ್ನುತ್ತಾರೆ. ಈ ಬೇಡ ಎಂಬ ಮಾತು ತೀರ ಅಸಮಂಜಸಕ್ಕೆ ಇಟ್ಟು ಕೊಳ್ಳುತ್ತದೆ. ಸ್ವಾತಂತ್ರ್ಯ ಮುಖ್ಯ, ಅನ್ನದ ಮಾತು ಕೂಡ ಆಮೇಲೆ, ಎನ್ನುವರು ಇರಬಹುದು. ಅವರು ದಾರಿದ್ರ್ಯವನ್ನು ನೀಗುವ ಸಾಹಿತ್ಯವೂ ಸದ್ಯಕ್ಕೆ ಬೇಡ ಎನ್ನಬಹುದು. ಮತ್ತೆ ಕೆಲವರಿಗೆ ಸ್ವಾತಂತ್ರ್ಯ, ದಾರಿದ್ರ್ಯ ಸದ್ಯಕ್ಕೆ ದೊಡ್ಡ ವಿಷಯವಲ್ಲ, ಬೇರೆ ಯಾವುದೋ ಒಂದು ವಿಷಯ ಪ್ರಮುಖ, ಎಂದು ತೋರಬಹುದು. ಅವರು ಈ ಎರಡನ್ನು ಕುರಿತ ಸಾಹಿತ್ಯವೂ ಬೇಡ ಎಂದು ಹೇಳುವರು. ಕೆಲವು ತಿಂಗಳ ಹಿಂದೆ ಬೆಂಗಳೂರಲ್ಲಿ ಕ್ಷೌರದ ಚೂರುಕತ್ತಿ ಸಿಕ್ಕದಾದುವು. ದಿನದಿನವೂ ಅಥವಾ ದಿನ ಬಿಟ್ಟು ದಿನ ಮುಖ ಕ್ಷೌರಮಾಡಿಕೊಳ್ಳುವ ಹೊಸ ಕಾಲದ ಜನ ಅನೇಕರಿಗೆ ಆಗ ಏನಾದರೂ ಮಾಡಿ ವ್ಯಾಲೆಟ್, ಜಿಲೆಟ್ ಕತ್ತಿಗಳನ್ನು ಒದಗಿಸಿದರೆ ಇದ್ದೀತು ಎನಿಸುತ್ತಿತ್ತು. ಆ ಹೊತ್ತಿನಲ್ಲಿ ಅವರಲ್ಲಿ ಕೆಲವರು,

'ಬ್ಲೇಡ್' ಒದಗಿಸುವ ಸಾಹಿತ್ಯವನ್ನು ನಿರ್ಮಿಸಿರಿ, ಉಳಿದ ಸಾಹಿತ್ಯಕ್ಕೆ ಇದು ಹೊತ್ತಲ್ಲ, ಎನ್ನಬಹುದಾಗಿತ್ತು. ತಮ್ಮ ರುಚಿಯ ಸಾಹಿತ್ಯಬೇಕು ಎಂದು ಯಾರು ಹೇಳಿದರೂ ತೊಂದರೆಯಿಲ್ಲ. ಉಳಿದ ಸಾಹಿತ್ಯ ಬೇಡವೆನ್ನುವುದಾದರೆ ಈ ಮಾತಿಗೆ ಕೊನೆ ಎಲ್ಲಿ? ಹೀಗೆ ಇದು ಬೇಡ ಇನ್ನೊಂದು ಬೇಡ ಎನ್ನುವ ಎಲ್ಲ ಜನರ ಮಾತೂ ನಡೆದರೆ ಲೋಕದಲ್ಲಿ ಉಳಿಯುವ ಸಾಹಿತ್ಯ ಯಾವುದು? ವಯಸ್ಸಾದ ಒಬ್ಬ ಯಜಮಾನನಿಗೆ ತನ್ನ ವಯಸ್ಸಿನ ಒಬ್ಬ ಮೊದಲ ಹೆಂಡತಿ, ಕಿರಿಹರೆಯದ ಒಬ್ಬ ಎರಡನೆಯ ಹೆಂಡತಿ ಇದ್ದರಂತೆ. ಮೊದಲವಳ ತಲೆಕೂದಲು ತುಂಬಾ ನರೆ: ತಾನು ಗಂಡನಿಗಿಂತ ಮುದುಕಿಯಾಗಿ ಕಾಣಬಾರದೆಂದು ಅವಳು ಅವನ ತಲೆಯ ಕರಿಯ ಕೂದಲನ್ನೆಲ್ಲಾ ಕಿತ್ತೆಸೆದಳಂತೆ. ಗಂಡ ತನಗಿಂತ ಬಹು ಮುದುಕ ನಾಗಿ ಕಾಣಬಾರದೆಂದು ಕಿರಿಯವಳು ಅವನ ತಲೆಯ ಬಿಳಿ ಕೂದಲನ್ನೆಲ್ಲಾ ಕಿತ್ತೆಸೆದಳು. ತಿಂಗಳಾರು ಹೀಗೆ ಕಳೆಯಲು ಅವನ ತಲೆ ತೀರ ಬೋಳಾಯಿತು. ತಮಗೆ ಒಲ್ಲದ ಸಾಹಿತ್ಯ ಬೇಡ ಎನ್ನುವ ಎಲ್ಲರ ಮಾತೂ ನಡೆದರೆ ನಾಡ ಸಾಹಿತ್ಯಕ್ಕೆ ಇದೇ ಗತಿ ಒದಗುವುದು. ಪ್ರಗತಿಪರರೆಂದು ಕರೆದುಕೊಳ್ಳುವ ನಮ್ಮ ಸ್ನೇಹಿತರು ತಮ್ಮ ಸಾಹಿತ್ಯ ಹೊರತು ಉಳಿದದ್ದೆಲ್ಲ ನಿಂತು ಹೋಗಬೇಕೆಂದು ಹೇಳುವುದು ತಪ್ಪು ಎಂದು ಖಂಡಿತವಾಗಿ ಒಪ್ಪಲೇಬೇಕು.

ತಾವು ಒಪ್ಪುವ ಲೇಖನವನ್ನು ಬರೆದ ಸಾಹಿತಿಗಳು ತಮಗೆ ಒಪ್ಪಿಗೆ ಅಲ್ಲದ ಕೃತಿಗಳನ್ನು ನಿರ್ಮಿಸಿದರೆಂದು ಈ ನಮ್ಮ ಮಿತ್ರರು ಜೊತೆಯ ಲೇಖಕರನ್ನು ದೂರಿದಾರೆ. 'ತುತ್ತಿಲ ಚೀಲ'ವನ್ನು ಬರೆದ ಕವಿ 'ಗಂಗಾವತರಣ' ಬರೆಯಬಾರದಾಗಿತ್ತು; 'ಮರಳಿ ಮಣ್ಣಿಗೆ' ಬರೆದ ಕವಿ 'ಬೆಟ್ಟದ ಜೀವ' ಬರೆಯಬಾರದಿತ್ತು; 'ಸುಬ್ಬಮ್ಮ ಹೆಗ್ಗಡಿತಿ' ಬರೆದಾತನು ರಾಮಾಯಣವನ್ನು ಬರೆಯಕೂಡದು: ಇದು ಇವರ ಗ್ರಹಿಕೆ. ಏಕೆ? 'ಹೆಗ್ಗಡಿತಿ'ಯನ್ನು ಬರೆದ ಕವಿ ರಾಮಾಯಣವನ್ನು ಬರೆಯ ಬಾರದು ಎನ್ನುವ ಮಾತಿಗೆ ಇವರ ಕಾರಣ ಸ್ಪಷ್ಟವಾಗಿದೆ: ರಾಮಾಯಣ ಹಳೆಯ ಮಾತು. 'ಅಯ್ಯಾ ಅದನ್ನು ಓದಿ ನೋಡಿದಿರಾ? ಈ ರಾಮಾಯಣ ಹಳೆಯ ಮಾತನ್ನು ಹೇಳುತ್ತಿದೆಯೇ? ಅಥವಾ ಹೊಸ

ಕಾಲದ ಮನಸ್ಸನ್ನು ಪ್ರಕಟಿಸುತ್ತಿದೆಯೇ?' ಇದಕ್ಕೆ ಉತ್ತರವಿಲ್ಲ. ಈ ಮಾತನ್ನು ಆಡುವ ನಮ್ಮ ಮಿತ್ರರು ಪದ್ಯಗಳನ್ನು ಓದುವುದಿಲ್ಲವಂತೆ. ಹೊಸ ಕವಿಯು ರಾಮಾಯಣ, ರಾಮಾಯಣವಲ್ಲದೆ ಬೇರೆ ಯಾವ ವಿಷಯವನ್ನು ಕುರಿತಿದ್ದರೂ ಕೂಡ ಇಂಥ ಸ್ನೇಹಿತರು ಅದನ್ನು ಮುಟ್ಟು ವುದಿಲ್ಲ. ಇನ್ನು ಅದರ ಒಳಗೆ ಏನು ಬರೆದರೆ ತಾನೆ ಇವರಿಗೆ ಪ್ರಯೋಜನ? 'ತುತ್ತಿನ ಚೀಲ' ಬರೆದ ಕವಿ ಆ ಪದ್ಯದಿಂದ ಎಷ್ಟು ಜನರ ಮನಸ್ಸನ್ನು ಒಲಿಸಿದನೋ ತನ್ನ ಗಂಗಾವತರಣದಿಂದಲೂ ಅಷ್ಟು ಜನದ ಮನಸ್ಸನ್ನು ಒಲಿಸಿಕೊಂಡನು. ಪ್ರಗತಿಶೀಲವೆನಿಸಿ ಕೊಳ್ಳುವ ಈ ಕೆಲವರ ಮನಸ್ಸು ಅದಕ್ಕೆ ಒಲಿಯಲಿಲ್ಲ. ಪಾಪ, ಇವರನ್ನೂ ಒಲಿಸಿಕೊಳ್ಳುವ ಪುಣ್ಯ ಕವಿಗೆ ಇಲ್ಲವಾಯಿತು. ಆದರೆ ಸಾವಿರ ಸಾವಿರ ಜನದ ಮನಸ್ಸನ್ನು ಒಲಿಸಿದ ಸಂತೋಷವಾದರೂ ನಿಜವಷ್ಟೆ? ಸಾಮಾನ್ಯ ಜನಕ್ಕಾಗಿ ಸಾಹಿತ್ಯಬೇಕೆಂಬ ಈ ನಮ್ಮ ಸ್ನೇಹಿತರು ಈ ಸೇವೆಯನ್ನು ಅಲ್ಲಗಳೆಯ ಬಹುದೇ? ಸಾವಿರ ಸಾವಿರ ಜನಕ್ಕೆ ಸಂತೋಷ ಕೊಟ್ಟರೆ ಸಾಲದು, ಆ ಸಂತೋಷ ಸರಿಯಾದ ವಿಷಯದಿಂದು ಬಂದಿರಬೇಕು, ಎಂದು ಇವರು ಹೇಳಬಹುದು. 'ಗಂಗಾವತರಣ'ದ ವಿಷಯ ಸರಿಯಾದುದು ಹೊರತು ಕೆಟ್ಟುದೇನೂ ಅಲ್ಲ. ಅದನ್ನು ಹಳಿಯುವ ಸ್ನೇಹಿತರು ಆ ವಿಷಯವನ್ನು ತಿಳಿದುಕೊಂಡಿಲ್ಲ ಎಂದು ಕಾಣುತ್ತದೆ. ಗಂಗೆ ಇಳಿದು ಬಂದು ಮೈ ತೊಳೆಯಬೇಕು ಎಂದು ಅದರಲ್ಲಿ ಬರುವ ಮಾತು ಈ ಸ್ನೇಹಿತರಿಗೆ ಬೇಸರ ಉಂಟುಮಾಡಿದೆಯಂತೆ. ತಾಯಿ ಮಗುವಿನ ಮೈ ತೊಳೆದು ಅದನ್ನು ಹೊರೆಯುವುದು ಹೊಸತೂ ಅಲ್ಲ, ತಪ್ಪೂ ಅಲ್ಲ. ಅದು ಹಳೆಯ ಸಂಗತಿ, ಹಾಗೆಯೇ ಒಳ್ಳೆಯ ಸಂಪ್ರದಾಯ. ಜೀವನವನ್ನು ನಿರ್ಮಲಮಾಡುವ ಸತ್ವವನ್ನು ಕವಿ ಈ ಮಾತಿನಲ್ಲಿ ಆಹ್ವಾನಿಸಿದರೆ ಈ ಗೆಳೆಯರಿಗೆ ಬೇಸರವೇಕೆ? ಮೈ ತೊಳೆಯುವ ಮಾತು ಬಂದುದರಿಂದಲೇ? ವಾಸ್ತವ ಜೀವನದ ಯಾವ ಸಂಗತಿಯನ್ನಾದರೂ ನಿಸ್ಸಂಕೋಚವಾಗಿ ಹೇಳಬೇಕೆಂದು, ಅಂತಹ ಮಾತು ಹೇಳುವುದು ವಾಡಿಕೆಯಲ್ಲ ಎಂಬ ಕಾರಣದಿಂದ ಹಿಂದುಮುಂದು ನೋಡಕೂಡದೆಂದು, ಶಪಥ ಮಾಡಿರುವ ನಮ್ಮ ಪ್ರಗತಿಶೀಲ ಮಿತ್ರರು

'ಮೈ ತೊಳೆ ಬಾ' ಎಂಬ ಶಬ್ದ ಬಂದೊಡನೆಯೇ ಬೇಸರಗೊಳಬೇಕೆ? 'ಮರಳಿ ಮಣ್ಣಿಗೆ' ಬರೆದ ಲೇಖಕ 'ಬೆಟ್ಟದ ಜೀವ' ಬರೆದು ತಪ್ಪಿದ್ದೇನು? ಯಾವ ಲೇಖಕನೂ ಎಲ್ಲ ಹೊತ್ತಿನಲ್ಲೂ ಒಂದೇ ರೀತಿಯ ಕೃತಿಯನ್ನು ಬರೆಯುವುದಿಲ್ಲ. ಈ ಪುಸ್ತಕ ಆ ಪುಸ್ತಕದಷ್ಟು ಚೆನ್ನಾಗಿಲ್ಲ ಎಂದು ಇವರ ಅಭಿಪ್ರಾಯ ಇರಬಹುದು. ಅಷ್ಟುಮಾತ್ರಕ್ಕೆ ಈ ಪುಸ್ತಕವನ್ನು ಬರೆದದ್ದು ಅಪರಾಧವಾಯಿತೇ?

ಆಹಾರ, ಸ್ವಾತಂತ್ರ್ಯ ವಿಷಯಗಳ ಸಾಹಿತ್ಯ ಹೊರತು ಉಳಿದ ಸಾಹಿತ್ಯ ಬೇಡ ಎನ್ನುವಂತೆಯೇ ಈ ಮಾತೂ ಅಸಮಂಜಸಕ್ಕೆ ಇಟ್ಟುಕೊಳ್ಳುತ್ತದೆ. 'ಮರಳಿ ಮಣ್ಣಿಗೆ' ಬರೆದವನು 'ಬೆಟ್ಟದ ಜೀವ' ಬರೆಯಲು ಒಂದು ದಿನ ತೊಡಗುತ್ತಾನೆ. 'ಮರಳಿ ಮಣ್ಣಿಗೆ' ಚೆನ್ನವಾದಂತೆ ಇದೂ ಚೆನ್ನವಾಗಬೇಕೆಂದೇ ಅವನ ಬಯಕೆ. ಆದೀತೆಂಬುದು ನಂಬಿಕೆ. ಸರಿ, ಬರೆದಾಯಿತು. ಕೃತಿ ಅಷ್ಟೇ ಚೆನ್ನವಾಯಿತೋ ತಕ್ಕಷ್ಟು ಚೆನ್ನವಾಯಿತೋ ಅವನೇ ಹೇಳಲಾರ. ಅಷ್ಟು ಚೆನ್ನವಿಲ್ಲದಿದ್ದರೂ ಮಾಡಿದ ಕೆಲಸವನ್ನು ಮಣ್ಣಿಗೆಸೆಯುವುದಕ್ಕೆ ಮನಸ್ಸಿಲ್ಲ. ಅಲ್ಲದೆ ಪ್ರಗತಿಶೀಲರೆಂದು ಕರೆದುಕೊಳ್ಳುವ ತನ್ನ ಗೆಳೆಯರು ಅದನ್ನು ಒಪ್ಪುತ್ತಾರೋ ಇಲ್ಲವೋ ಅವನಿಗೆ ತಿಳಿಯದು. ಪ್ರಕಟಿಸದೆ ಅದು ಜನರ ಕೈ ಸೇರುವಂತಿಲ್ಲ. ಆದ್ದರಿಂದ ಅವನು ಅದನ್ನು ಪ್ರಕಟಿಸುತ್ತಾನೆ. ಅದು ನಾಲ್ಕು ಜನಕ್ಕೆ ಒಪ್ಪಿಗೆಯಾಗಲಿಲ್ಲ. ಇನ್ನು ನಾಲ್ಕು ಜನಕ್ಕೆ ಒಪ್ಪುತ್ತದೆ. ಲೇಖಕನು ಇಷ್ಟರಿಂದ ತೃಪ್ತನಾಗಬೇಕು. ಮತ್ತೆ ತನ್ನ ಕಾರ್ಯದಲ್ಲಿ ತೊಡಗಬೇಕು. ಅದಕ್ಕೂ ಇಷ್ಟೇ ಫಲಶ್ರುತಿ ಎಂದು ತೃಪ್ತಿ ಕಾಣಬೇಕು. ಪುಸ್ತಕ ಎಂಥದಾಗುತ್ತದೆ ಎಂದು ಲೇಖಕನೇ ಕಾಣದಿರುವಾಗ ಈ ಮಿತ್ರರು ಕಂಡರೆ? ಅದನ್ನು ಬರೆಯಕೂಡದಾಗಿತ್ತೆಂದು ಇವರು ಹೇಳುವರೆ? ಕೂಡದು ಎಂದು ಹೇಳುವುದಕ್ಕೆ ಇವರ ಅರಿವೇನು? ಅಧಿಕಾರವೇನು? ಇವರ ಅರಿವು ಎಷ್ಟೇ ಸಂಪೂರ್ಣ, ಇವರ ಅಧಿಕಾರ ಎಷ್ಟೇ ಸರ್ವವ್ಯಾಪಿ, ಎಂದರೂ ಪುಸ್ತಕ ಹುಟ್ಟುವ ಮೊದಲೇ ಅದರ ಜಾತಕ ಬರೆಯುವ ಪೂರ್ಣಪ್ರಜ್ಞೆ, ಪೂರ್ಣಾಧಿಕಾರ, ಇವರಿಗೆ ಉಂಟೇ? ಇವರ ಈ ನಿಲುವೇ ತಪ್ಪು; ಅದರಿಂದ ನುಡಿ ತಪ್ಪುತ್ತಿದೆ.

ಒಬ್ಬೊಬ್ಬ ಲೇಖಕನೂ ತನಗೆ ಲಭಿಸಿರುವ ಜ್ಞಾನದಿಂದ ಯೋಚಿಸಿ, ತನಗೆ ಲಭಿಸಿರುವ ಶಕ್ತಿಯಿಂದ ಸಾಧ್ಯವಾದ, ತನಗೆ ಒಳಿತೆಂದು ಕಾಣುವ, ಕೃತಿಯನ್ನು ರಚಿಸಬೇಕು. ತನಗೆ ಲಭಿಸಿದ ಜ್ಞಾನ ಶಕ್ತಿ ತೀರ್ಮಾನ ವನ್ನು ಅನುಸರಿಸಿ ಅವನವನು ಕೃತಿಯನ್ನು ನಿರ್ಮಿಸಬಹುದು ಹೊರತು ಬೇರೊಬ್ಬನ ಜ್ಞಾನ ಶಕ್ತಿ ತೀರ್ಮಾನವನ್ನು ಬಳಸುವುದು ಸಾಧ್ಯವಲ್ಲ. ಎಷ್ಟು ಪ್ರಗತಿಶೀಲನಾದರೂ ಆ ಬೇರೊಬ್ಬನು ಈ ಲೇಖಕನಿಗೆ ಈ ಕೃತಿ ಯನ್ನು ನೀನು ಬರೆಯಕೂಡದಾಗಿತ್ತು ಎಂದು ಹೇಳಬಾರದು. ಲೇಖಕನು ತಪ್ಪುವುದು ಹೇಗೆ ಸಾಧ್ಯವೋ ಹಾಗೆ ಈ ವಿಮರ್ಶಕನು ತಪ್ಪುವುದೂ ಸಾಧ್ಯ. ಈ ಮಾತು ವಿನಯದಿಂದಲೇ ಸಿದ್ಧಿಸಬೇಕು; ವಿನಯ ಸಾಲದೆನ್ನುವುದಾದರೆ ವ್ಯಕ್ತಿಸ್ವಾತಂತ್ರ್ಯ ಆವಶ್ಯಕ ಎಂಬ ತತ್ವ ದಿಂದ ಅಗತ್ಯವಾಗಿ ಸಿದ್ಧಿಸಲೇ ಬೇಕು. ಈ ಪ್ರಗತಿಶೀಲ ಮಿತ್ರರಿಗೆ ಬೇಡವೆನಿಸಿದ ಮಾತ್ರಕ್ಕೆ ಲೇಖಕನು ತನಗೆ ಬೇಕು ಎನ್ನಿಸಿದ ಕೃತಿಯನ್ನು ಬರೆಯದೆ ಬಿಡಲಾಗದು.

೬

ರಾಜಸೇವಾಸಕ್ತ ರಾಜಸೇವಾಪ್ರಸಕ್ತರು ರಚಿಸುವ ಸಾಹಿತ್ಯದಿಂದ ಒಳ್ಳೆಯದಾಗುವುದಿಲ್ಲವೆಂದು ಈ ಗೆಳೆಯರು ಹೇಳುವ ಮಾತು ಹೇಗೆಯೋ ವ್ಯಥಾ ವಾದ ಎಂದು ಹೇಳಬೇಕು. ಕನ್ನಡದಲ್ಲಿ ಪುಸ್ತಕ ಬರೆಯುತ್ತಿರುವ ರಾಜಸೇವಾಸಕ್ತರು ರಾಜಸೇವಾಪ್ರಸಕ್ತರು ಎಷ್ಟು ಜನ? ರಾಜಸೇವಾ ಸಕ್ತರ, ರಾಜಸೇವಾಪ್ರಸಕ್ತರ, ಸಂಖ್ಯೆ ತಕ್ಕಷ್ಟು ದೊಡ್ಡದಾಗಿದೆ; ಇವರಲ್ಲಿ ಬಹುಮಂದಿ ಕನ್ನಡದಲ್ಲಿ ಪುಸ್ತಕ ಬರೆಯುವ ತಂಟೆಗೆ ಹೋಗಿಲ್ಲ. ಇದನ್ನು ಮಾಡಿರುವ ಒಬ್ಬರಿಬ್ಬರೂ ಎಲ್ಲ ಹೊತ್ತಿನಲ್ಲೂ ರಾಜಸೇವಾ ಸಕ್ತರೂ ರಾಜಸೇವಾಪ್ರಸಕ್ತರೂ ಆಗಿರಲಿಲ್ಲ. ಈಗ ಇವರನ್ನು ಹಳಿಯುವ ಈ ಗೆಳೆಯರೇ ಒಂದು ದಿನ ಇವರನ್ನು ಹೊಗಳಿದರು; ರಾಜಸೇವಾಪ್ರಸಕ್ತ ಬಿರುದು ಬಂದಾಗ ಅಭಿನಂದಿಸಿದರು. ಈ ಬಿರುದು ಪಡೆದವರು ರಾಜಸೇವಾ ಸಕ್ತಿ ಅಥವಾ ಪ್ರಸಕ್ತಿಯಿಂದ ಕೆಡುಕರಾದದ್ದು ಹೇಗೆ? ಬಿರುದು ಬರುವ ಮೊದಲು ಒಳ್ಳೆಯವರಾಗಿದ್ದು ಬಿರುದು ಬಂದಮೇಲೆ ಅವರು ಕೆಟ್ಟರೇ?

ಅಂದು ಅಭಿನಂದನೆಗೆ ಅರ್ಹವಾದ ಬಿರುದು ಇಂದೇಕೆ ದೂರಿಗೆ ಗುರಿಯಾಯಿತು? ಬಿರುದನ್ನು ಕುರಿತಂತೆ ಕಂಡರೂ ನಿಜದಲ್ಲಿ ಈ ನಿಂದೆ ವ್ಯಕ್ತಿಪರವಾದದ್ದೆಂದು ತೋರುತ್ತದೆ. ಇವರಿಗೆ ಯಾರೋ ಲೇಖಕರು ಬೇಕಾಗಿಲ್ಲ; ಆದುದರಿಂದ ಬಿರುದನ್ನು ತೆಗೆದುಕೊಂಡು ಇವರು ಕೆಟ್ಟ ಮಾತನ್ನಾಡುತ್ತಾರೆ. ಇದು ಸಾಹಿತ್ಯವೂ ಅಲ್ಲ, ಪ್ರಗತಿಯೂ ಅಲ್ಲ: ತಮಗೆ ಆಗದವರನ್ನು ಬಯ್ಯುವ ಚಪಲ ಎಷ್ಟೋ ಅಷ್ಟು. ರಾಜಸೇವಾಸಕ್ತರಾಗಲಿ, ರಾಜಸೇವಾಪ್ರಸಕ್ತರಾಗಲಿ ರಚಿಸಿರುವ ಸಾಹಿತ್ಯವನ್ನು ತೆಗೆದುಕೊಂಡು ಈ ಗೆಳೆಯರು ವಿಮರ್ಶಿಸಲಿ; ಅದರಲ್ಲಿರುವ ದೋಷವನ್ನು ಉದ್ಘಾಟನೆ ಮಾಡಲಿ. ಸಕ್ತ ಪ್ರಸಕ್ತರು ಅದನ್ನು ತಕ್ಕಷ್ಟು ಗಮನದಿಂದ ತಿಳಿದುಕೊಳ್ಳುತ್ತಾರೆ; ಸಾಧ್ಯವಾದರೆ ತಮ್ಮ ಸಾಹಿತ್ಯವನ್ನು ತಿದ್ದಿಕೊಳ್ಳುತ್ತಾರೆ. ಇದರಿಂದ ಸಾಹಿತ್ಯ ಒಳಿತಾಗಬಹುದು; ಪ್ರಗತಿ ಸಾಧಿಸಬಹುದು. ಬಿರುದು ಪಡೆದವನು ಒಳ್ಳೆಯ ಕೃತಿಯನ್ನು ಮಾಡಲಾರ ಎಂದರೆ ಮಾತು ಅಸಂಗತವಾಗುತ್ತದೆ.

ನಾನು ಈಗ ಇಪ್ಪತ್ತು ವರ್ಷದ ಹಿಂದೆ ಬರೆದ ಒಂದು ಕತೆ ಒಳ್ಳೆಯ ಸಾಹಿತ್ಯ, ಆದರೂ ಅದು ಈಗ ನಮ್ಮ ಜನಕ್ಕೆ ಅನುಪಯುಕ್ತವಾದ ಸಾಹಿತ್ಯ, ಎಂದು ಈ ಮಿತ್ರರಲ್ಲಿ ಒಬ್ಬರ ಮಾತು. ಇವರ ಅಭಿಪ್ರಾಯ ವಿಚಾರಣೀಯವಾದದ್ದು. ಆ ಕಥೆಯನ್ನು ಬರೆದ ಲೇಖಕನನ್ನು ಜ್ಞಾಪಕದಲ್ಲಿಟ್ಟುಕೊಂಡಿದ್ದೇವೆ, ರಾಜಸೇವಾಪ್ರಸಕ್ತರನ್ನು ಮರೆತಿದ್ದೇವೆ, ಎಂದು ಈ ಸ್ನೇಹಿತರಲ್ಲಿ ಮತ್ತೊಬ್ಬರ ಮಾತು. ಈ ಮಾತು ಚಮತ್ಕಾರವಾಗಿದೆ, ಆದರೆ ನನಗೆ ಅದರ ಅರ್ಥ ತಿಳಿಯುತ್ತಿಲ್ಲ. ನಮ್ಮ ಸ್ನೇಹಿತರು ಅದನ್ನು ವಿವರಿಸಬೇಕಾಗುತ್ತದೆ. ವಿವರಣೆ ಯಾವುದೇ ಆದರೂ ಅಂದು ಆ ಕತೆಯನ್ನು ಬರೆದ ಲೇಖಕನು ಇಂದು ಅಂಥದೇ ಇನ್ನೊಂದು ಕತೆಯನ್ನು ಬರೆದರೆ ಬಿರುದಿನ ಕಾರಣದಿಂದ ಅದರ ಬೆಲೆ ಕಡಮೆಯಾಗುತ್ತದೆಯೋ? ಬಿರುದಿನ ಕಾರಣದಿಂದ ಒಬ್ಬ ಲೇಖಕನ ಕೃತಿಗೆ ಹೆಚ್ಚು ಗೌರವ ಕೊಟ್ಟರೆ ಅದು ತಪ್ಪಾಗುತ್ತದೆ; ಹಾಗೆಯೇ ಆ ಕಾರಣದಿಂದ, ಕೃತಿಗೆ ಸಲ್ಲಬೇಕಾದ ಗೌರವಕ್ಕಿಂತ ಕಡಮೆ ಗೌರವ ಕೊಟ್ಟರೂ ತಪ್ಪಾಗುತ್ತದೆ. ಕೃತಿಯ ಯೋಗ್ಯತೆಯನ್ನು ವಿಮರ್ಶಿಸುವಲ್ಲಿ ಕೃತಿ ಮುಖ್ಯ; ಅದರ ಲೇಖಕನ

ಸ್ಥಾನಮಾನ ಅಪ್ರಕೃತ: ಈ ತತ್ವ ಎಲ್ಲ ಮುಖದಿಂದಲೂ ಅನ್ವಯಿಸುತ್ತದೆ. ನಮ್ಮ ಈ ಸ್ನೇಹಿತರು, ನಿಜವಾಗಿ, ಈಗ ಬರೆಯುತ್ತಿರುವ ರಾಜಸೇವಾಸಕ್ತ ಪ್ರಸಕ್ತರ ಉತ್ಸಾಹವನ್ನು ಭಂಗಮಾಡುವುದಕ್ಕೆ ಪ್ರತಿಯಾಗಿ ಈಗ ಕನ್ನಡದ ವಿಷಯದಲ್ಲಿ ಉದಾಸೀನರಾಗಿರುವ ರಾಜಸೇವಾಸಕ್ತ ಪ್ರಸಕ್ತರನ್ನು ಕನ್ನಡದ ಕೆಲಸಕ್ಕೆ ಆಹ್ವಾನಿಸಬೇಕು; ಅವರಿಗೆ ತಿಳಿವಳಿಕೆಯಿಲ್ಲದ ಸಂಗತಿಯನ್ನು ಅವರಿಗೆ ತಿಳಿಸಿಕೊಡಬೇಕು; ತಮ್ಮ ಉದಾತ್ತ ಧ್ಯೇಯಗಳನ್ನು ಸಾಧಿಸುವುದಕ್ಕೆ ಇವರಿಂದ ದೊರೆಯಬಹುದಾದ ನೆರವನ್ನು ಬಳಸಿಕೊಳ್ಳಬೇಕು. ದೇಶದ ಯಾವ ಜನದ ಬುದ್ಧಿ, ಧನ, ಶೀಲವೂ ನಿರುಪಯೋಗವಾಗಿ ಹೋಗದಂತೆ ಬಳಸಿಕೊಳ್ಳುವುದು ಬಲ್ಲವರ ಲಕ್ಷಣ; ಹೀಗೆ ಮಾಡುವುದೇ ಪ್ರಗತಿಗೆ ಮುಖ್ಯ ಸಾಧನ; ಇದನ್ನು ಹೇಗೆ ಮಾಡುವುದೆಂದು ಈ ನಮ್ಮ ಗೆಳೆಯರು ಯೋಚಿಸಲಿ.

ಯಾವುದೋ ವಿಷಯವನ್ನು ಕುರಿತ ಮಾತ್ರಕ್ಕೆ, ಯಾರೋ ಕೆಲ ಜನರು ರಚಿಸಿದ ಮಾತ್ರಕ್ಕೆ, ಯಾವುದೋ ಒಂದು ಉದ್ದೇಶ್ಯವನ್ನು ಕುರಿಯದ ಮಾತ್ರಕ್ಕೆ, ಸಾಹಿತ್ಯ ಕೆಟ್ಟದಾಗುವುದೆನ್ನುವುದೇ ಈ ನಮ್ಮ ಗೆಳೆಯರ ಇಷ್ಟೆಲ್ಲ ಮಾತಿನ ದೋಷ. ಇಂತಹ ಸಾಹಿತ್ಯ ತಮಗೆ ಬೇಡದ್ದರಿಂದ ಸೃಷ್ಟಿಯಾಗುವುದೇ ಬೇಡ ಎನ್ನುವುದು ಅದರ ಮೇಲಿನ ಮತ್ತೊಂದು ದೋಷ. ಇದೆಲ್ಲಕ್ಕೆ ಕಾರಣ, ಸಾಹಿತ್ಯವನ್ನು ಕುರಿತ ಇವರ ಕಲ್ಪನೆ ಸರಿಯಾಗಿಲ್ಲದಿರುವುದು. ಸಾಹಿತ್ಯ ಜನದ ಮನಸ್ಸಿನಂತೆ ನಾನಾರೀತಿಯದಾಗಿರುತ್ತದೆ; ಅನೇಕ ಮಟ್ಟದ್ದಾಗಿರುತ್ತದೆ. ಎಲ್ಲ ರೀತಿಯಿಂದಲೂ ಎಲ್ಲ ಮಟ್ಟದಿಂದಲೂ ಅದು ನಿರ್ಮಾಣವಾಗುತ್ತದೆ. ಆದಕಾರಣ ಅದರ ಭಾವನೆ, ಅದರ ರುಚಿ, ಅದರ ವ್ಯಾಪನೆ, ನಾನಾರೀತಿ, ನಾನಾಮುಖವಾಗಿರುತ್ತವೆ. ಬಹುವಿಧದ ಎಲ್ಲ ಭಾವನೆಯೂ ಜನದ ಮುಂದೆ ಹಾಯ್ದು ಆದರಲ್ಲಿ ಅತ್ಯುತ್ತಮವಾದುದನ್ನು ಜನ ನಿಲಿಸಿಕೊಳ್ಳಬೇಕು. ಇದಕ್ಕೆ ಅವಕಾಶಮಾಡಿ ಕೊಡುವುದರಿಂದಲೇ ಸಾಹಿತ್ಯ ಸಾರ್ಥಕವಾಗುವುದು. ಸಾಹಿತ್ಯದ ಈ ಮೂಲಧರ್ಮವನ್ನು ನಮ್ಮ ಈ ಸ್ನೇಹಿತರು ಒಪ್ಪಿಕೊಳ್ಳಬೇಕು. ಒಪ್ಪಿಕೊಂಡರೆ ತಮ್ಮ ಸದ್ಯದ ಉದ್ದೇಶ ತಮ್ಮ ಸದ್ಯದ ಅಭಿಪ್ರಾಯಗಳನ್ನು ಮಾತ್ರವಲ್ಲದೆ ಉಳಿದ ಉದ್ದೇಶ ಅಭಿಪ್ರಾಯಗಳನ್ನು

ವ್ಯಕ್ತಪಡಿಸುವ ಸಾಹಿತ್ಯವೂ ಲೋಕದಲ್ಲಿ ಇರಬಹುದೆಂದು ಇವರು ಅಪ್ಪಣೆ ಕೊಡಬೇಕಾಗುತ್ತದೆ.

೭

ಇದಿಷ್ಟೂ ಸಾಹಿತ್ಯದ ಮಾತಾಯಿತು. ಪ್ರಗತಿಯನ್ನು ಕುರಿತೂ ಇವರ ಭಾವನೆ ವಿಶಾಲವಾಗಬೇಕು. ಇವರ ಪ್ರಗತಿಶೀಲತೆಯ ತಿರುಳು ಸಮತಾ ವಾದ. ಈ ವಾದಕ್ಕೆ ಈಗಿನ ರೂಪ ಅಳವಟ್ಟಿದ್ದು ಯೂರೋಪ್ ಖಂಡದಲ್ಲಿ; ಅದರಲ್ಲೂ ಶ್ರೀಮಂತರು ಸಾಮಾನ್ಯರನ್ನು ಬಹು ಹೀನಾಯ ವಾಗಿ ನಡೆಸಿಕೊಂಡ ದೇಶಗಳಲ್ಲಿ. ಶ್ರೀಮಂತನು ಸಾಮಾನ್ಯನನ್ನು ಹೀನಾಯವಾಗಿ ಕಾಣಬಾರದೆನ್ನುವುದು ಸಮಾಜದ ನೀತಿಯಲ್ಲಿ ಹೊಸ ಮಾತೇನೂ ಅಲ್ಲ. "The rank is but the guinea stamp: the man is the gold for all that" ಎಂದ ಕವಿಯೂ, ರಾಜಮಂದಿರದ ದುಷ್ಟ ಸೇವಕರನ್ನು ಅರಮನೆಯ ನಾಯಿಗಳು ಎಂದ ಕವಿಯೂ, ಇಂತಹ ಮಾತನ್ನು ನೂರು ದೇಶದಲ್ಲಿ ನೂರು ಕಾಲದಲ್ಲಿ ಆಡಿರುವ ಎಲ್ಲ ಕವಿಗಳೂ, ನೀತಿವಂತರ ಒಂದು ನಂಬಿಕೆಗೆ, ನೀತಿವಂತರ ಒಂದು ಆಗ್ರಹಕ್ಕೆ, ಆಕಾರ ಕೊಟ್ಟರು. ತನ್ನ ಗುರಿಯನ್ನು ಬಲ್ಲ ಎಲ್ಲ ಸಾಹಿತ್ಯವೂ ಎಲ್ಲ ಕಾಲದಲ್ಲೂ ಈ ಮಾತನ್ನೇ ಹೇಳುತ್ತದೆ. ಶ್ರೀಮಂತನು ಉಂಡು ಸೊಕ್ಕಿ ತನ್ನ ಆಳನ್ನು ಒದೆಯಲಿ ಎಂದು ಯಾವ ಸಾಹಿತ್ಯವೂ ಹೇಳಲಿಲ್ಲ. ಹೇಳಿದ್ದರೆ ಆ ಕೃತಿ ಸಾಹಿತ್ಯವಾಗಲಿಲ್ಲ, ಸಾಹಿತ್ಯವಾಗಿ ಉಳಿಯಲಿಲ್ಲ. ಆದುದರಿಂದ ಎಲ್ಲ ಸಾಹಿತ್ಯದ ಗುರಿಯೂ ಒಂದೇ. ಮಾನವ ಮಾತ್ರನ ಆತ್ಮಗೌರವವನ್ನು ಹೆಚ್ಚಿಸಬೇಕು, ಎದುರಾಳಿಯ ಆತ್ಮಗೌರವಕ್ಕೆ ಕುಂದು ತರದೆ ನಡೆದು ಕೊಳ್ಳುವುದನ್ನು ಎಲ್ಲರಿಗೂ ಕಲಿಸಬೇಕು. ಇದನ್ನು ಪ್ರಗತಿಯ ಮೂಲ ಸೂತ್ರಗಳಲ್ಲಿ ಒಂದು ಎಂದು ಲೋಕವೇ ಒಪ್ಪುತ್ತದೆ.

ಆದರೆ ಇದನ್ನು ಬಳಕೆಗೆ ತರುವುದಕ್ಕೆ ಯಾವುದೋ ಒಂದು ದೇಶ ದಲ್ಲಿ, ಒಂದು ಕಾಲದಲ್ಲಿ, ಬಳಸಿದ ವಿಚಾರ ಸರಣಿಯನ್ನು, ಕಾರ್ಯ ಕ್ರಮವನ್ನು, ಎಲ್ಲ ಕಡೆಯಲ್ಲಿಯೂ ಬಳಸಬೇಕು ಎನ್ನುವುದು ಸರಿಯಲ್ಲ. ಆ ದೇಶದ ಅಂದಿನ ಸ್ಥಿತಿಗೆ ಆ ವಿಚಾರ, ಆ ಕಾರ್ಯ ಆವಶ್ಯಕ ಇದ್ದಿರ

ಬಹುದು. ನಮ್ಮ ಸೀಮೆಯಲ್ಲಿ ಈಗ ಪ್ರಗತಿಯನ್ನು ಬಯಸುವವರು ನಮ್ಮ ಜನರ ಈಗಿನ ಸ್ಥಿತಿಯನ್ನು ಪರಿಶೀಲಿಸಿ ಮುಂದಿನ ಹೆಜ್ಜೆಯಾವುದೆಂದು ನಿರ್ಧರಿಸಬೇಕು. ಮೂಲಸೂತ್ರ ಒಂದೇ. ಅದನ್ನು ಸಾಧಿಸುವ ಮಾರ್ಗ ಸನ್ನಿವೇಶದಿಂದ ಬೇರೆಯಾಗುತ್ತದೆ. ರೋಗದ ಸ್ವರೂಪ ಬೇರೆ; ಔಷಧ ಬೇರೆಯಾಗಬೇಕು. ಬೆಟ್ಟದ ತುದಿಯನ್ನು ಮುಟ್ಟಬೇಕೆಂದೇ ನಾವು ಹೊರಡುತ್ತೇವೆ; ಬುಡದ ಬೇರೊಂದು ಕಡೆ ಇದೇ ಉದ್ದೇಶದಿಂದ ಹೊರಟವರು ಹತ್ತಿ ಇಳಿಯುವ ಏರು ಇಳಿವು ಬೇರೆ, ನಾವು ಹತ್ತಿ ಇಳಿಯುವ ಏರು ಇಳಿವು ಬೇರೆ. ಅಲ್ಲದೆ ಬೆಟ್ಟವನ್ನು ಹತ್ತಲು ಹೊರಟವನು ದಾರಿಯಲ್ಲಿ ಕೆಲವೇಳೆ ಇಳಿಯಬೇಕಾಗುತ್ತದೆ. ಇಳಿಯುವುದೆಲ್ಲ ಮುಂಬರಿವಿಗೆ ವಿರೋಧವಲ್ಲ. ಕೆಲವು ಕಡೆ ಇಳಿಯದೆ ಮುಂಬರಿಯುವಂತಿಲ್ಲ. ಬೇರೆ ದೇಶದವರು ಒಂದು ದಿಕ್ಕಿನಲ್ಲಿ ನಡೆದವೇಳೆ ನಾವು ಅದಕ್ಕೆ ಎದುರು ದಿಕ್ಕಿನಲ್ಲಿ ಹೋಗುವುದೇ ಕ್ಷೇಮವಾಗಬಹುದು. ಜೋಗದ ಜಲಪಾತದ ತಲೆಯಮೇಲೆ ನೀರಿಗೆ ಬಿದ್ದ ದೋಣಿ ಪಾತದ ಕಡೆಗೆ ಹೋಗುವುದು ಒಳ್ಳೆಯದಲ್ಲ. ಬೇರೊಂದು ನದಿಯಲ್ಲಿ ಬೇರೊಂದು ಸನ್ನಿವೇಶದಲ್ಲಿ ಬೇರೆ ದೋಣಿ ಪ್ರವಾಹವನ್ನು ಅನುಸರಿಸಬಹುದು, ಸಾಗರವನ್ನು ಮುಟ್ಟಬಹುದು. ಇಲ್ಲಿ ಅದು ಉಳಿಯಬೇಕೆಂದರೆ ನೀರಿಂದ ಬಿಡಿಸಿಕೊಳ್ಳಬೇಕು. ಅಲ್ಲಿ ಶ್ರೀಮಂತರಿದ್ದರು; ಬಡವರಿದ್ದರು. ಹೊಸ ನಾಗರಿಕತೆಯನ್ನು ತರುವುದಕ್ಕೆ, ಈ ನಾಗರಿಕತೆಯನ್ನು ತರುವೆವೆನ್ನುವವರು ಎಷ್ಟೋ ಶ್ರೀಮಂತರನ್ನು ಕೊಂದರು; ಬಡವರಲ್ಲಿ ಸ್ವಾರ್ಥಪರರಾದವರು ಇತರ ಬಡವರನ್ನು ಸಾವಿರ ಸಾವಿರದಲ್ಲಿ ಸದೆದರು. ನಾಗರಿಕತೆಯನ್ನು ತರಲು ಯತ್ನಿಸಿದವರಲ್ಲಿ ಒಂದು ಪಕ್ಷದವರು ಇನ್ನೊಂದು ಪಕ್ಷದವರನ್ನು ಹಳಿದರು, ಬಡಿದರು, ನಿರ್ಮೂಲಮಾಡಿದರು. ಅಲ್ಲಿ ಆದದ್ದೆಲ್ಲ ಇಲ್ಲಿಯೂ ಆಗಬೇಕೆನ್ನುವ ಆವಶ್ಯಕವಿಲ್ಲ. ಅಲ್ಲಿ ಅವರು ಉಗ್ರವಾಗಿ ಟೀಕೆಮಾಡಿ ಹಾರಾಡಿದರೆಂದ ಮಾತ್ರಕ್ಕೆ ಇಲ್ಲಿಯೂ ಉಗ್ರವಾದ ಟೀಕೆ ಹಾರಾಟ ಆವಶ್ಯಕ ಎನ್ನುವುದು ಬೇಡ. ಅಲ್ಲಿಯಂತೆ ವರ್ಗವಿದ್ವೇಷ ಬೆಳೆಯದೆ, ರಕ್ತಪಾತ ಸೋದರಘಾತ ಇಲ್ಲದೆ, ನಮ್ಮ ಸೀಮೆಯ ಸಮಸ್ಯೆಯನ್ನು ಬಿಡಿಸುವುದು ಸಾಧ್ಯವಾದೀತೆ ಎಂದು ನಾವು ನೋಡಬೇಕಾಗಿದೆ.

ಆಸ್ತಿಯನ್ನು ಕುರಿತ, ಬಡತನ ಶ್ರೀಮಂತಿಕೆಯನ್ನು ಕುರಿತ, ಬಾಳುವೆಯ ಧ್ಯೇಯ ಅದನ್ನು ಸಾಧಿಸುವ ಮಾರ್ಗ ಇವನ್ನು ಕುರಿತ, ಭಾವನೆಯ ನೂರಾರು ವಿವರ ನಮ್ಮ ದೇಶದವು ಆ ದೇಶಗಳ ವಿವರಗಳಿಂದ ಬೇರೆಯಾಗಿವೆ. ನಮ್ಮ ದೇಶದ ನಾಗರಿಕತೆ ಹಲವು ಸಾವಿರ ವರ್ಷದ್ದು; ಅಲ್ಲಿ ಹೊಸದೆಂದು ಕಾಣುವ ಸನ್ನಿವೇಶ ಇಲ್ಲಿ ಎಷ್ಟೋ ಹಿಂದೆ ಒದಗಿ ಮುಗಿದಿರಬಹುದು. ಅವರಿಗೆ ಹೊಸದೆಂದು ಕಾಣುವ ನೀತಿ ನಮ್ಮ ಜನತೆಯ ಮನಸ್ಸಿನಲ್ಲಿ ಎಂದಿನಿಂದಲೋ ಹಳದಾಗಿರಬಹುದು. ಅನುಭವ ಕಡಮೆಯಾದ ಆ ಜನತೆಗಳು ನಡೆದಂತೆ ಪುರಾತನ ಸಂಸ್ಕೃತಿಯ ನಮ್ಮ ಜನವೂ ನಡೆಯಬೇಕು ಏಕೆ? ಪ್ರಾಕೃತರ ಪಾಳೆಯದ ಕೂಗು ಕೋಲಾಹಲ ಸಂಸ್ಕೃತರ ಬೀಡಲ್ಲಿ ಬೇಕಾಗಬಾರದು. ನಮ್ಮ ಲೇಖಕರು ನಮ್ಮ ನಾಗರಿಕತೆ ಬೆಳಸಿಕೊಂಡು ಬಂದಿರುವ ಭಾವನೆಗಳನ್ನು ಗಮನಕ್ಕೆತಂದುಕೊಂಡು ನಮ್ಮ ಜನಕ್ಕೆ ಮುಂದಿನ ಹೆಜ್ಜೆ ಯಾವುದೆನ್ನುವುದನ್ನು ತೋರಿಸಿಕೊಡಲಿ. ಇದು ಪ್ರಗತಿಯಾಗುತ್ತದೆ. ಬೇರೆಲ್ಲಿಯೋ ಯಾರೋ ಇಟ್ಟ ಹೆಜ್ಜೆಯನ್ನು ಇಲ್ಲಿ ಇಡಿಯೆಂದರೆ ಜನ ಮುಂದರಿಯುವುದನ್ನು ಬಿಟ್ಟು ಮುಗ್ಗರಿಸಬಹುದು.

ದೈವವನ್ನು ಕುರಿತು, ಧರ್ಮವನ್ನು ಕುರಿತು, ರೀತಿ ನೀತಿಗಳನ್ನು ಕುರಿತಾದರೂ ಇದೇ ಮಾತನ್ನು ನಾವು ಹೇಳಬೇಕಾಗುತ್ತದೆ. ರಷ್ಯದ ಜನರ ಪ್ರಗತಿವಾದಿಗಳು ದೇವರು ಬೇಡ ಎಂದು ಧರ್ಮಕ್ಕಾಗಿ ನಿರ್ಮಿತವಾಗಿದ್ದ ಪ್ರಾರ್ಥನಾ ಭವನಗಳನ್ನು ವಿನೋದಮಂದಿರಗಳಾಗಿ ಮಾರ್ಪಡಿಸಿಕೊಂಡರು. ಯುದ್ಧ ಆರಂಭವಾಗಿ ಮಿತ್ರ ಜನಾಂಗಗಳ ಜೊತೆಗೆ ನಿಲ್ಲಬೇಕಾದಾಗ, "ಈಗಲೂ ನಮ್ಮ ಜನ ಪ್ರಾರ್ಥನೆಗೆ ಹೋಗಿಬರುತ್ತಿದಾರೆ" ಎಂದು ತೋರಿಸಲು ಚಿತ್ರಗಳನ್ನು ಪ್ರಕಟಿಸಿದರು. ಇದೆಲ್ಲವೂ ಇಲ್ಲಿ ಆಗಬೇಕಾದದ್ದಿಲ್ಲ. ದೇವರು ಎಂಬ ಶಬ್ದ ಒಂದೇ ಆದರೂ ಜನದಿಂದ ಜನಕ್ಕೆ ಮನುಷ್ಯನಿಂದ ಮನುಷ್ಯನಿಗೆ ದೇವರು ಎಂದರೆ ಏನು ಎಂಬ ಭಾವನೆ ಬೇರೆಯಾಗಿರುತ್ತದೆ. ಅಲ್ಲಿಯ ಜನರು ಅಲ್ಲಿ ಒಲ್ಲೆವೆಂದ ದೈವ, ನಮ್ಮ ದೇಶದಲ್ಲಿ ನಮ್ಮ ಜನ ಈಗ ಪೂಜಿಸುವರೆಂಬ ಸಾವಿರ ದೈವ, ಒಂದೇ ಅಲ್ಲ. ಅವರು ಆ ದೈವವನ್ನು ಅಲ್ಲಿ ಬೇಡವೆಂದರೆ ಇಲ್ಲಿ ನಾವು

ಈ ದೈವ ಯಾವುದೂ ಬೇಡ ಎಂದು ಹೇಳುವುದು ಸರಿಯಾಗಲಾರದು. ರಾಸಪುಟಿನನ ದೈವ ಬೇರೆ. ರಾಮಕೃಷ್ಣನ ದೈವ ಬೇರೆ. ರಾಸಪುಟಿನನ ದೈವ ಕೇಡಿಗ ದೈವ. ರಾಮಕೃಷ್ಣನ ದೈವ ಸರ್ವಭೂತ ಹಿತೇರತವಾದದ್ದು. ಆ ದೈವ ಬೇಡವೆಂದು ಅಲ್ಲಿ ಹೇಳಿದರೆ ಈ ದೈವ ಬೇಡವೆಂದು ಇಲ್ಲಿ ಹೇಳುವುದು ಸಲ್ಲದು. ರುದ್ರವಾದರೂ ಶಂಕರವಾದ ದೈವ, ಕುಬ್ಜವನ್ನು ಸೋಕಿ ಚೆಲುವುಮಾಡುವ ದೈವ, ಪತಿತಪಾವನ ಅನಾಥ ರಕ್ಷಕ ದೀನಬಂಧು ದೈವ, ಲೋಕಕ್ಕೆ ಬೇಕು. ನಮ್ಮ ದೇಶ ಆ ದೈವವನ್ನು ನಿರ್ಮಿಸಲು ಯತ್ನಮಾಡಿದೆ. ಕಾಣದಿದ್ದರೂ ಅದರೆದುರು ನಿಂತು ಕೈ ಮುಗಿದು ಬೇಡಿದೆ. ಇದಕ್ಕೆ ಅಪವಾದವಾಗಿ ಯಾವ ನಡೆನುಡಿ ಇದ್ದರೂ ಅದನ್ನು ನಾವು ತಿದ್ದಲು ಯತ್ನಿಸೋಣ: ಮೂಲದ ಭಾವನೆಯನ್ನು ಕೆಡಿಸುವೆವೆನ್ನುವುದು ಬೇಡ. ತಿಳುವಳಿಕೆಯಿಲ್ಲದೆ ಅದನ್ನು ನಾವು ಕೆಡಿಸಿ ಎಸೆದರೂ ಮತ್ತೆ ಅದು ಲೋಕದ ಜೀವನಕ್ಕೆ ಬಂದೇ ಬರುತ್ತದೆ. ವಾಡಿಕೆಯ ತಮ್ಮ ದೇವರನ್ನು ಬೇಡವೆಂದ ರಷ್ಯನ್ ಜನ, ಪೂರ್ವದಲ್ಲಿ ದೇವರ ಹಬ್ಬದಂದು ಲಕ್ಷೋಪಲಕ್ಷವಾಗಿ ಪ್ರಾರ್ಥನಾ ಭವನಕ್ಕೆ ಹೋಗುತಿದ್ದುದು, ಈಗ ವರ್ಷದಲ್ಲಿ ಒಂದು ದಿನ ಲೋಕೋಪಕಾರಿ ಲೆನಿನ್ ಮಹಾಶಯನ ಸಮಾಧಿಗೆ ಬಂದು ಅವನಡಿಗೆ ಹೂವನ್ನರ್ಪಿಸಿ ಅವನ ಹೆಸರನ್ನು ಜಪಿಸಿ ಮನಸ್ಸನ್ನು ತಂಪು ಮಾಡಿಕೊಂಡು ಹಿಂತಿರುಗುತ್ತಿದೆ. ಏಕೆ? ಲೆನಿನ್ ಪತಿತಪಾವನ, ಅನಾಥರಕ್ಷಕ, ದೀನಬಂಧು. ನಮ್ಮಲ್ಲಿ ಇಂದು ಮಹಾತ್ಮಾ ಗಾಂಧಿಯವರು ಇಂತಹದೇ ಕಾರಣದಿಂದ ಭಗವದವತಾರ ಆಗಿ ನಡೆಯುತ್ತಿದಾರೆ. ಪತಿತಪಾವನ, ಅನಾಥರಕ್ಷಕ, ದೀನಬಂಧು ದೈವ ಪ್ರಗತಿಗೆ ಆವಶ್ಯಕ; ಸರ್ವ ಭೂತ ಹಿತೇರತ ಆದ ದೈವ ಪ್ರಗತಿಯ ಆಶ್ರಯ, ಅಧಿಷ್ಠಾನ. ಪ್ರಗತಿಯನ್ನು ಬಯಸುವ ಯಾರೂ ಇದನ್ನು ಬಿಟ್ಟು ನಡೆಯುವಂತಿಲ್ಲ.

ಸ್ತ್ರೀ ಸ್ವಾತಂತ್ರ್ಯ, ವಿವಾಹ ಸುಧಾರಣೆ, ಲಿಂಗ ವಿಷಯಕ ಶಿಕ್ಷಣ, ಇವೇ ಮೊದಲಾಗಿ ಹಲವು ವಿಷಯಗಳಲ್ಲಿ ತಾವು ಹೊಸದಾಗಿ ಏನನ್ನೋ ಕಂಡು ಹಿಡಿದಿರುವಂತೆಯೂ, ತಾವು ಹತ್ತು ಜನ ಹೊರತು ಉಳಿದವರೆಲ್ಲರು ಕತ್ತಲನ್ನೇ ಬೆಳಕೆನ್ನುತ್ತಿರುವಂತೆಯೂ ನಮ್ಮ ಈ ಮಿತ್ರರು

ಮಾತನಾಡುತ್ತಾರೆ. ಈ ಎಲ್ಲ ವಿಷಯವನ್ನೂ ತೆಗೆದುಕೊಂಡು ಒಂದೊಂದನ್ನು ಕುರಿತು ಒಂದೊಂದು ದೀರ್ಘಲೇಖನವನ್ನು ಬರೆಯಬಹುದು; ವಿಷಯ ಸ್ಪಷ್ಟವಾಗಬೇಕಾದರೆ ಬರೆಯಬೇಕಾಗುತ್ತದೆ. ಆ ಕೆಲಸಕ್ಕೆ ಇದು ಸ್ಥಳವಲ್ಲ. ಆಸ್ತಿಯನ್ನು ಕುರಿತ, ದೈವವನ್ನು ಕುರಿತ ಮೇಲಣ ಮಾತುಗಳಂತೆ ಈ ವಿಷಯಗಳನ್ನು ಕುರಿತೂ ಸರ್ವಸಮ್ಮತವಾದ ಕೆಲವು ಮೂಲತತ್ವಗಳಿವೆ ಎನ್ನುವುದನ್ನು ಹೇಳಿದರೆ ಇಲ್ಲಿ ಸಾಕು. ಪೌರ್ವಾತ್ಯ ಸಮಾಜದಲ್ಲಿ ಸ್ತ್ರೀಯ ಸ್ಥಾನ ಕೀಳಾಗಿದೆ, ಪಾಶ್ಚಾತ್ಯರಲ್ಲಿ ಅದು ಮೇಲಾಗಿದೆ, ಎಂದು ದುರಭಿಮಾನಿ ಪಾಶ್ಚಾತ್ಯರು ಹೇಳುವುದುಂಟು. ಪರಾಭಿಮಾನಿ ಪೌರ್ವಾತ್ಯರು ಇದು ಹೌದೆನ್ನುತ್ತಾರೆ. ಕೆಲವು ವಿವರದಲ್ಲಿ ಇಂದಿನ ಪಾಶ್ಚಾತ್ಯ ಜೀವನದಲ್ಲಿ ಸ್ತ್ರೀಯ ಸ್ಥಾನ ಸ್ವಲ್ಪ ಒಳ್ಳೆಯದೆಂದು ಕಾಣಬಹುದು; ಎಲ್ಲ ವಿವರದಲ್ಲೂ ಅದು ಒಳ್ಳೆಯದೆಂದು ಹೇಳುವಂತಿಲ್ಲ. ಗಂಡಿಗಿರುವ ಸೌಕರ್ಯವೆಲ್ಲ ಹೆಣ್ಣಿಗೂ ಇರಬೇಕೆನ್ನುವವರು ಹೆಣ್ಣನ್ನು ಗಂಡಿನ ಮಟ್ಟಕ್ಕೆ ಏರಿಸುತ್ತಿಲ್ಲ, ಇಳಿಸುತ್ತಿದಾರೆ. ಸಮಾಜದಲ್ಲಿ ಸ್ತ್ರೀಯ ಸ್ಥಾನ ಹೇಗಿರಬೇಕೆನ್ನುವುದೂ ಅನುಭವದಿಂದ ಕಲಿಯಬೇಕಾದ ಸಂಗತಿ. ಈ ವಿಷಯದಲ್ಲಿಯೂ ನಮ್ಮ ಜನಾಂಗದ ಅನುಭವ ಬಹು ದೀರ್ಘಕಾಲದ್ದು, ಬಹುಮುಖವಾದದ್ದು. ಈ ನಮ್ಮ ಅನುಭವವನ್ನು ಉಪಯೋಗಿಸಿಕೊಂಡು ನಾವು ಮುಂದಿನ ಹೆಜ್ಜೆ ಇಡಬೇಕಾಗಿದೆ. ಮದುವೆಯನ್ನು ಕುರಿತೂ ಅಷ್ಟೇ. ಪಾಶ್ಚಾತ್ಯ ಲೇಖಕನು ತನ್ನ ಸಮಾಜದ ವಿವಾಹ ವ್ಯವಸ್ಥೆಯನ್ನು ದೂರಿದನೆಂದು ನಾವೂ ನಮ್ಮ ಸಮಾಜದ ವಿವಾಹ ವ್ಯವಸ್ಥೆಯನ್ನು ಅದೇ ಮಾತುಗಳಲ್ಲಿ ಹಳಿಯಬಾರದು. ಈ ವ್ಯವಸ್ಥೆ ಅಲ್ಲಿಯೂ ತಿದ್ದಬೇಕಾಗಿರುವಂತೆ ಇಲ್ಲಿಯೂ ತಿದ್ದಬೇಕಾಗಿದೆ. ಆದರೆ ಅವರು ಅಲ್ಲಿ ಇಡಬೇಕಾಗಿರುವ ಹೆಜ್ಜೆ ನಾವು ಇಲ್ಲಿ ಇಡಬೇಕಾದದ್ದಲ್ಲ. ರೋಗ ಬೇರೆ; ಔಷಧ ಬೇರೆಯಾಗಬೇಕು. ಹೊರಡುವ ಸ್ಥಳ ಬೇರೆ; ದಾರಿ ಬೇರೆಯಾಗಬೇಕು. ಪೂರ್ವದ ವಿವಾಹಕ್ರಮ ಸರಿಯಿಲ್ಲವೆಂದು ರಷ್ಯದ ಪ್ರಗತಿಶೀಲರು ಮದುವೆಯಿಂದ ಬಿಡಿಸಿಕೊಳ್ಳುವುದನ್ನು ಗಂಡನಿಗೂ ಹೆಂಡತಿಗೂ ಸುಲಭ ಮಾಡಿದರು. ಇದರಿಂದ ಸಂಸಾರಗಳ ಸುಖ ಹೆಚ್ಚಿತೆಂದು, ಸಮಾಜ ಹೆಚ್ಚು ನೀತಿವಂತವಾಯಿತೆಂದು,

ಜನಾಂಗ ಶುಭವನ್ನು ಸಾಧಿಸಿತೆಂದು, ಇನ್ನೂ ಗೊತ್ತಾಗಿಲ್ಲ. ಈ ಬಿಡುಗಡೆಯ ಸೌಲಭ್ಯದಿಂದ ಅಯೋಗ್ಯರು ಅತಿವರ್ತನದಲ್ಲಿ ತೊಡಗಿದ್ದೂ ಉಂಟು. ಸುಧಾರಣೆ ಆವಶ್ಯಕವೆಂದ ಲೆನಿನ್ ಕೂಡ ಅದರ ಪ್ರಯೋಗದಲ್ಲಿ ಎಚ್ಚರಿಕೆ ಆವಶ್ಯಕ ಎಂದು ಹೇಳಿದನು. ಲಿಂಗದ ವಿಷಯ ಜನಕ್ಕೆ ತಿಳುವಳಿಕೆ ಕೊಡಬೇಕೆನ್ನುವುದು ನಿಜ. ಇದನ್ನು ಎಲ್ಲ ಕಾಲದಲ್ಲೂ ಎಲ್ಲ ಜನದಲ್ಲೂ, ಬಲ್ಲವರು ಅರಿಯದವರಿಗೆ ತಿಳಿಸುವ ಯತ್ನ ಮಾಡಿದ್ದಾರೆ. ನಮ್ಮ ಕಾವ್ಯಗಳಲ್ಲಿ ಬರುವ ಶೃಂಗಾರಪರ ಕೃತಿಯೆಲ್ಲ ಜನತೆಗೆ ವಿಷಯ ಸುಖದ ಹವಣರಿತ ಅನುಭೋಗವನ್ನು ಕಲಿಸುವುದಕ್ಕಾಗಿ ಹೊರಟವು. ಓದಿ ತಿಳಿಯಲಾರದವನಿಗೆ ನೋಡಿ ತಿಳಿಯಲೆಂದು ಪೂರ್ವಿಕರು ಶಿಲ್ಪದಲ್ಲಿ, ಚಿತ್ರದಲ್ಲಿ ಆಕೃತಿಗಳನ್ನು ನಿರ್ಮಿಸಿ ತೋರಿಸಿದರು. ವಿಷಯಸುಖ ಅಶುಚಿ ಸುಖ ಎನ್ನುವುದು ಪಾಶ್ಚಾತ್ಯರ ಭಾವನೆ ಇರಬಹುದು; ಅದು ಎಂದೂ ನಮ್ಮ ಜನದ ಭಾವನೆ ಅಲ್ಲ. ಆ ಸುಖದ ಗುರಿಯಾದ ಸಂತಾನವಂತೂ ನಮ್ಮ ಧರ್ಮದಲ್ಲಿ ಒಂದು ಅವಶ್ಯ ಫಲ. ಅದರಿಂದಲೇ ನಮ್ಮಲ್ಲಿ ಗರ್ಭಾಧಾನ ವಿವಾಹದ ಒಂದು ಅಂಗವಾದದ್ದು; ಒಬ್ಬೊಬ್ಬ ವ್ಯಕ್ತಿಗೂ ಜೀವನ ಕ್ರಮದಲ್ಲಿ ಮೊದಲ ಕರ್ಮವಾದದ್ದು. ಅರ್ಥ ತಿಳಿದುಕೊಳ್ಳದೆ ಮಂತ್ರವನ್ನು ಹೇಳಿ ಅಥವಾ ಮಂತ್ರವನ್ನೇ ಹೇಳದೆ ಮದುವೆಯಾಗುವವರು ನಮ್ಮ ಸಂಪ್ರದಾಯದ ಲಿಂಗ ವಿಷಯದ ಶಿಕ್ಷಣದಲ್ಲಿ ಕುಂದನ್ನು ಕಾಣಬಹುದು. ಆದರೆ ಅದರ ಹೊಣೆ ಸಂಪ್ರದಾಯದ್ದಲ್ಲ; ಪಶ್ಚಿಮಕ್ಕೆ ಮುಖಮಾಡಿ ಪೂರ್ವದಲ್ಲಿ ಏನೂ ಇಲ್ಲ ಎನ್ನುವವರದು. ಇಂತಹ ಯಾವ ವಿಚಾರದಲ್ಲೂ ನಮ್ಮ ಈಗಿನ ಸ್ಥಿತಿ ಬಹಳ ಚೆನ್ನಾಗಿದೆಯೆಂದು ನಾನು ಹೇಳುತ್ತಿಲ್ಲ. ಈ ನಮ್ಮ ಮಿತ್ರರು ಸುಧಾರಣೆ ಬೇಕು ಎನ್ನುವಂತೆ ಎಲ್ಲರೂ ಸುಧಾರಣೆಬೇಕು ಎಂದೇ ಹೇಳುತ್ತಿದೇವೆ. ಇವರು ಸಂಪ್ರದಾಯಶರಣರೆಂದು ಹಳಿಯುತ್ತಿರುವ ಜನರು ಕೂಡ ಇವರಿಗಿಂತ ಮೊದಲಿಂದ ಈ ಮಾತನ್ನು ಹೇಳುತ್ತಿದಾರೆ. ಸುಧಾರಣೆ ಆವಶ್ಯಕ. ಸ್ತ್ರೀಯ ಸ್ಥಿತಿ ಚೆನ್ನಾಗಬೇಕು. ವಿವಾಹಕ್ರಮ ತಿದ್ದಬೇಕು. ಸ್ತ್ರೀ ಪುರುಷ ಸಂಬಂಧದ ವಿಚಾರ ಆರೋಗ್ಯ, ವ್ಯಕ್ತಿಸುಖ, ಸಾಮಾಜಿಕ ಕಲ್ಯಾಣದ ದೃಷ್ಟಿಯಿಂದ ಪುನರ್ವ್ಯವಸ್ಥೆ ಆಗಬೇಕು. ಆದರೆ ಇದು ಯಾವುದರಲ್ಲೂ

ನಮ್ಮ ದೇಶದ ಸ್ಥಿತಿಗತಿಯನ್ನು ಪರಿಶೀಲಿಸಿ, ನಮ್ಮಲ್ಲಿ ಬಲ್ಲವರು ಸಾಧ್ಯವಾದರೆ ಬಹುಮತದಿಂದ ಒಪ್ಪಿ, ಈ ಬಲ್ಲವರೆನ್ನುವವರು ಉಳಿದವರಿಗೆ ಸಂಗತಿಯನ್ನು ತಿಳಿಸಿ, ಅವರನ್ನು ಒಡಂಬಡಿಸಿ, ಮುಂದೆ ಹೆಜ್ಜೆ ಇಡಬೇಕು. ಇಂದು ಸ್ತ್ರೀಯರ ಸ್ಥಿತಿ ಚೆನ್ನಾಗಿಲ್ಲ, ಅವರು ಇಷ್ಟಬಂದಂತೆ ನಡೆಯಲಿ ಎನ್ನುವುದಾಗಲಿ, ಇಂದು ವಿವಾಹಕ್ರಮ ಚೆನ್ನಾಗಿಲ್ಲ, ವಿವಾಹ ಎನ್ನುವ ವ್ಯವಸ್ಥೆಯೇ ಬೇಡ ಎನ್ನುವುದಾಗಲಿ, ಲಿಂಗ ವಿಷಯವಾಗಿ ಮೌನ ಹೆಚ್ಚಾಗಿದೆ, ಇನ್ನುಮೇಲೆ ಅದರ ವಿಷಯ ಯಾರು ಎಲ್ಲಿ ಏನು ಬೇಕಾದರೂ ಹೇಳಲಿ ಎನ್ನುವುದಾಗಲಿ, ಕ್ಷೇಮವಲ್ಲ. ಹೀಗೆನ್ನುವವರು ಯಾರಾದರೂ ಇದ್ದರೆ ಅವರು ತಮ್ಮ ಮನೆಯ ಹೆಣ್ಣುಮಕ್ಕಳಿಗೆ ಏನನ್ನು ಬಯಸುವರೆಂದು, ತಮ್ಮ ಸಂಸಾರವನ್ನು ಕುರಿತು ಯಾವ ಆಸೆ ಇಟ್ಟುಕೊಂಡಿರುವರೆಂದು, ತಾವು ಯಾರಯಾರಲ್ಲಿ ಯಾವ ಯಾವ ಮಾತನ್ನು ಎಷ್ಟು ಧಾರಾಳವಾಗಿ ಹೇಳುವುದಕ್ಕೆ ಸಿದ್ಧರಾಗಿದಾರೆಂದು, ನೋಡಿಕೊಳ್ಳಲಿ. ಇಂತಹವರಲ್ಲಿ ಒಬ್ಬರಿಬ್ಬರು ಬಹು ಪ್ರಾಜ್ಞರಾಗಿದ್ದು ಈ ವಿವರಗಳಲ್ಲಿ ಯಾವ ತೊಡಕೂ ಇಲ್ಲವೆಂದು ತಮ್ಮ ವಿಷಯದಲ್ಲಿ ತಾವು ತಿಳಿದುಕೊಂಡರೆ ತಾವು ಆ ಸ್ಥಿತಿಗೆ ಬರುವುದಕ್ಕೆ ಎಷ್ಟು ಕಷ್ಟವಾಯಿತು ಎನ್ನುವುದನ್ನು ಗ್ರಹಿಸಲಿ. ತಮ್ಮ ಆ ನಿಶ್ಶೃಂಖಲ ಸ್ಥಳಕ್ಕೆ ಸಾಮಾನ್ಯರು ಬರುವುದಕ್ಕೆ ಅವರು ಸಮಾಜಕ್ಕೆ ಕಾಲವನ್ನು ಕೊಡಲು ಒಪ್ಪುವರು. ಮನುಜಕುಲವನ್ನೇ ತಿದ್ದುವುದು ಆತುರದಲ್ಲಿ ಆಗುವ ಕೆಲಸವಲ್ಲ. ನಾವು ಇಷ್ಟಪಟ್ಟರೂ ಬೇಸರಗೊಂಡರೂ ಮಾನವ ಮಾರ್ಗದ ಬೆಳವಣಿಗೆ ಸಾವಕಾಶವಾಗಿಯೇ ಆಗತಕ್ಕದ್ದು.

ಬದುಕುವ ದಾರಿಯನ್ನು ಬಲ್ಲೆವೆಂದು ತಿಳಿದಿರುವ ಈ ನಮ್ಮ ಸೋದರರು, ಇರುವ ಸ್ಥಿತಿಯನ್ನು ಪರಿಶೀಲಿಸಿ, ಕಂಡ ತಪ್ಪನ್ನು ಚಿಕಿತ್ಸಾಬುದ್ಧಿಯಿಂದ ಸರಿಪಡಿಸಿ, ಹೆಚ್ಚುಹೆಚ್ಚು ಜನಕ್ಕೆ ಹಿತವಾಗುವಂತೆ ಸಮಾಜವನ್ನು ತಿದ್ದಲಿ. ಇದು ಪ್ರಗತಿಯ ಸೂತ್ರ; ಎಲ್ಲ ಪಂಗಡಗಳೂ ಒಪ್ಪುವ ಸೂತ್ರ. ಒಂದು ದೇಶದಲ್ಲಿ ಒಂದು ಕಾಲದಲ್ಲಿ ಒಂದು ಪಂಗಡ ಮಾತ್ರ ಒಪ್ಪಿ ಉಳಿದವರು ಒಪ್ಪಲಾರದ್ದು ಪ್ರಗತಿ ಅಲ್ಲ.

೮

ಸಾಹಿತ್ಯ ದೇಶದ ಹಿತವನ್ನು ಸಾಧಿಸಬೇಕು, ಎಂಬ ಒಳ್ಳೆಯ ಮಾತನ್ನು ಹೇಳುವ ಈ ನಮ್ಮ ಸ್ನೇಹಿತರು ಅದನ್ನು ಹೇಳುವಲ್ಲಿ ಅನವಶ್ಯಕವಾಗಿ ಒರಟು ಮಾತು ಒರಟು ನಡೆಯಿಂದ ತಮ್ಮ ವಾದವನ್ನು ತಿಳಿಸುತ್ತಿದಾರೆಂದು ಕಾಣುತ್ತದೆ. ತಮ್ಮಂತೆ ಅಲ್ಲದೆ ಬೇರೆ ಯಾರೂ ಪುಸ್ತಕ ಬರೆಯುವುದು ಬೇಡ ಎನ್ನುವುದು ಹೇಗೆ ತಪ್ಪೋ ಹಾಗೆ ತಮ್ಮಂತೆ ಅಲ್ಲದವರನ್ನು ಕುರಿತು ಒರಟಾಗಿ ನುಡಿಯುವುದೂ ತಪ್ಪು. ಪ್ರಗತಿಯ ಪ್ರತಿಪಾದನೆಯಲ್ಲಿಯಾಗಲಿ ಸಾಧನೆಯಲ್ಲಾಗಲಿ ಒರಟುತನ ಅವಶ್ಯ ಸಾಮಗ್ರಿ ಎಂದು ಇವರು ತಿಳಿಯಬಾರದು. ಎಷ್ಟೋ ಕಠಿಣವಾದ ಮಾತನ್ನು ನಯವಾಗಿ ಹೇಳಬಹುದು; ಒಂದು ಸಲ ಹೇಳಿ ತಿಳಿಯದಿದ್ದರೆ, ಒಂದು ರೀತಿ ಹೇಳಿ ತಿಳಿಯದಿದ್ದರೆ, ಇನ್ನೊಂದು ಸಲ ಹೇಳಬಹುದು, ಇನ್ನು ಒಂದು ರೀತಿಯಿಂದ ಹೇಳಬಹುದು. ಒಪ್ಪಿದರೆ ಜೊತೆಗೆ ಬಾ, ಒಪ್ಪದಿದ್ದರೆ ಬಡಿಯುತ್ತೇನೆ, ಎನ್ನುವುದು ಪ್ರಗತಿಯಲ್ಲ; ಕಾಡನಡೆ. ನಮ್ಮ ದೇಶಕ್ಕೆ ಒಳಿತಾಗಬೇಕೆಂದೇ ನಾವೆಲ್ಲ ಬಯಸುತ್ತಿರುವುದು. ದೇಶದ ಬಡತನ ಕಡಮೆಯಾಗಬೇಕೆಂದೇ ಎಲ್ಲರೂ ಬೇಡುತ್ತಿರುವುದು. ದೇಶದಲ್ಲಿರುವ ಅಜ್ಞಾನ ತೊಲಗಲೆಂದೇ ಎಷ್ಟೋ ಜನ ದುಡಿಯುತ್ತಿರುವುದು. ಗುರಿ ಒಂದಾಗಿರುತ್ತ ವಿವರವನ್ನು ಕುರಿತು ಒಬ್ಬರನ್ನೊಬ್ಬರು ಹಳಿಯುವುದು ಅವಶ್ಯಕವಲ್ಲ. ಈ ಚರ್ಚೆಯನ್ನೆತ್ತಿರುವ ನಮ್ಮ ಸ್ನೇಹಿತರು ತಮ್ಮ ಈ ಒರಟುಮಾತಿನ ಸಂಪ್ರದಾಯವನ್ನು ಇಲ್ಲಿಗೆ ನಿಲ್ಲಿಸಬೇಕೆಂದು ನಾನು ವಿನಯದಿಂದ ಪ್ರಾರ್ಥಿಸುತ್ತೇನೆ.

ನೀವು ಹೇಳುವ ವಿಷಯವನ್ನು ಹೇಳಿ, ಆದರೆ ಅದಕ್ಕೆ ಕೆಟ್ಟ ಮಾತನ್ನು ಬಳಸಬೇಡಿ, ಎಂದು ನಾವು ಹೇಳಿದರೆ ಈ ನಮ್ಮ ಸ್ನೇಹಿತರು ತಮ್ಮ ವ್ಯಕ್ತಿ ಸ್ವಾತಂತ್ರ್ಯಕ್ಕೆ ನಾವು ಅಡ್ಡಿಮಾಡುವೆವೆನ್ನುತ್ತಾರೆ. ಇವರ ಉಳಿದ ಮಾತಿನಂತೆಯೇ ಇದೂ ಗುರಿತಪ್ಪುತ್ತದೆ. ನಿಮ್ಮ ಅಭಿಪ್ರಾಯವನ್ನು ಹೇಳಲೇಬೇಡ ಎಂದರೆ ಅದು ವ್ಯಕ್ತಿ ಸ್ವಾತಂತ್ರ್ಯಕ್ಕೆ ಅಡ್ಡಿ. ಇದನ್ನು ನಾವು ಹೇಳುತ್ತಿಲ್ಲ. ಪ್ರತಿಪಕ್ಷವನ್ನು ಬೈಯಬೇಡಿ ಎಂದಷ್ಟು ಮಾತ್ರ ನಾವು ಹೇಳುವುದು. ವ್ಯಕ್ತಿ ಸ್ವಾತಂತ್ರ್ಯದಲ್ಲಿ ಬೈಯುವ ಸ್ವಾತಂತ್ರ್ಯ ಸೇರಿರ

ಲಾರದು. ಬೈಯುವುದು ಅಸಾಮಾಜಿಕ ವರ್ತನೆ. ನಿಜದಲ್ಲಿ ವ್ಯಕ್ತಿ ಸ್ವಾತಂತ್ರ್ಯವನ್ನು ಅಲ್ಲಗಳೆಯುತ್ತಿರುವವರು ಈ ನಮ್ಮ ಮಿತ್ರರೇ. ತಮ್ಮ ಅಭಿಪ್ರಾಯ ಹೊರತು ಬೇರೆ ಅಭಿಪ್ರಾಯ ಪ್ರಕಟವಾಗಲೇ ಕೂಡದೆಂದು ಇವರು ಹಟಮಾಡುತ್ತಾರೆ. ಅಲ್ಲದೆ ಇವರು ಬೈದಮಾತಿಗೆ ಬೇರೆಯುವರು ಪ್ರತಿ ಹೇಳಿದರೆ ಅವರು ತಮ್ಮನ್ನು ಬೈಯುತ್ತಿದಾರೆಂದು ದನಿಯೆತ್ತುತ್ತಾರೆ. ಇವರಿಗೆ ಬೈಯುವ ಸ್ವಾತಂತ್ರ್ಯ ಬೇಕು; ಪ್ರತಿಪಕ್ಷದವರಿಗೆ ಅಯ್ಯಾ ನಮ್ಮನ್ನು ಬೈಯಬೇಡಿ ಎನ್ನುವ ಸ್ವಾತಂತ್ರ್ಯ ಕೂಡ ಬೇಡ. ಇದು ಇವರ ವ್ಯಕ್ತಿ ಸ್ವಾತಂತ್ರ್ಯದ ಕಲ್ಪನೆ. ಇದನ್ನು ನಮ್ಮ ಸ್ನೇಹಿತರು ತಿದ್ದಿಕೊಳ್ಳಲಿ. ಸಾಹಿತ್ಯಕ್ಷೇತ್ರದಲ್ಲಿ, ದೇಶಸೇವಾ ಕ್ಷೇತ್ರದಲ್ಲಿ, ವ್ಯಕ್ತಿ ಸ್ವಾತಂತ್ರ್ಯ ಬಹಳ ಅವಶ್ಯಕ. ಉಕ್ತಿ ಸ್ವಾತಂತ್ರ್ಯವೂ ಬಹಳ ಅವಶ್ಯಕ. ಹಾಗೆಯೇ ಪರಸ್ಪರ ಸಹನ, ಪರಸ್ಪರ ಸೌಹಾರ್ದ, ಬಹಳ ಅವಶ್ಯಕ. ಜೊತೆಯ ಕೆಲಸಗಾರರ ಹೆಸರನ್ನು ಬೇಟೆಯಾಡುವುದು ಪ್ರಗತಿಯೂ ಅಲ್ಲ, ಸಾಹಿತ್ಯವೂ ಅಲ್ಲ; ಇದನ್ನು ಮಾಡುವ ಸ್ವಾತಂತ್ರ್ಯ ಬೇಟೆಯಾಡುವವನಿಗಾದರೂ ಸುಖ ತರತಕ್ಕದ್ದಲ್ಲ.

೯

ಸಾಹಿತ್ಯವೆನ್ನುವುದು ದೇಶಕಾಲ ಅವಸ್ಥೆಗಳಿಂದ ಅಬಾಧಿತವಾದ ವಿಷಯಗಳನ್ನು ಕುರಿತಿರಬೇಕು, ನಿತ್ಯತತ್ವಗಳಿಗೆ ಸಂಬಂಧಪಟ್ಟಿರಬೇಕು. ಯಾವುದೋ ಒಂದು ಸ್ಪಷ್ಟವಾದ ಉದ್ದೇಶದಿಂದ ಹೊರಟ ಕೃತಿ ನಿಜವಾದ ಸಾಹಿತ್ಯವಲ್ಲ, ಪ್ರಚಾರಲೇಖನ, ಪ್ರಚಲಿತಲೇಖನ ಮಾತ್ರ ಆಗುತ್ತದೆ, ಎಂದು ಈ ನಮ್ಮ ಮಿತ್ರರಿಗೆ ಕೆಲವರು ಉತ್ತರ ಹೇಳುವುದುಂಟು. ಪ್ರಗತಿಶೀಲರೆಂದುಕೊಳ್ಳುವ ಸ್ನೇಹಿತರು ಸದ್ಯ ಸ್ಥಿತಿಗೆ ಅತಿ ಪ್ರಾಮುಖ್ಯ ಕೊಡುವಂತೆ ಈ ನಿತ್ಯತತ್ವದ ಮಾತನಾಡುವ ಸ್ನೇಹಿತರು ಊಹೆಯ ಒಂದು ಲೋಕಕ್ಕೆ ಅತಿ ಪ್ರಾಮುಖ್ಯ ಕೊಡುತ್ತಾರೆ. ಈ ಭಾವವೂ, ಸ್ವಲ್ಪ ಮಟ್ಟಿಗೆ, ಸಾಹಿತ್ಯ ಅನ್ನವನ್ನು ಒದಗಿಸಬೇಕು ಎನ್ನುವ ಭಾವದಂತೆ ಹೊರದೇಶದ Art for art's sake ಎಂಬ ಒಂದು ಭಾವನೆಯ ಪ್ರತಿಬಿಂಬ ಎಂದು ಕಾಣುತ್ತದೆ. ಭರತವರ್ಷದ ಸಾಹಿತ್ಯ ಇಂತಹ ದೃಷ್ಟಿಯಿಂದ

ಎಂದೂ ನಡೆದಿಲ್ಲ. ಸಾಹಿತ್ಯ ಇರುವುದು ಧರ್ಮವನ್ನು ಸ್ಥಾಪಿಸುವುದಕ್ಕೆ. ಈ ಕೆಲಸವನ್ನು ಅದು 'ಕಾಂತಾಸಮ್ಮಿತ'ದಿಂದ ಮಾಡಬೇಕು. ಆದ್ದರಿಂದ ಬಾಳನ್ನು ಮುಟ್ಟದ ಸಾಹಿತ್ಯ ನಮ್ಮ ಜನಕ್ಕೆ ಒಪ್ಪಿಗೆ ಇಲ್ಲ. ಮೈಯ ಹಸಿವಿಗೆ ಅನ್ನವನ್ನು ಒದಗಿಸುವುದು ಮೊದಲಾಗಿ ಆತ್ಮವನ್ನು ಮುಕ್ತಿಗೆ ಮುಟ್ಟಿಸುವವರೆಗೆ ಎಲ್ಲ ವ್ಯಾಪಾರವೂ ಸಾಹಿತ್ಯಕ್ಕೆ ವಿಷಯವೇ. ಆದ ಕಾರಣ ಇಂದಿನ ಸಾಹಿತ್ಯ ಇಂದಿನ ಜೀವನವನ್ನು ತಿದ್ದಬೇಕು ಎನ್ನುವ ಮಾತಿಗೆ ನಮ್ಮ ದೇಶದ ಸಾಹಿತಿಗಳಂತೂ ಒಪ್ಪಲೇಬೇಕು. ಈ ವಿಚಾರ ದಲ್ಲಿ ಪ್ರಗತಿಶೀಲರ ವಾದ ತಪ್ಪಲ್ಲ.

೧೦

ಪ್ರಗತಿಯನ್ನು ಕುರಿತು, ಸಾಹಿತ್ಯವನ್ನು ಕುರಿತು, ಇಲ್ಲಿ ಹೇಳಿರುವ ವಿಷಯಗಳಿಗೆ ಗಮನಕೊಟ್ಟರೆ ನಮ್ಮ ಸ್ನೇಹಿತರು ತಾವು ನಿರ್ಮಿಸುವ ಸಾಹಿತ್ಯ ಮಾತ್ರ ಪ್ರಗತಿಶೀಲ ಎಂಬ ತಿಳುವಳಿಕೆಯನ್ನು ಬಿಟ್ಟುಬಿಡುವರು. ಈ ವಿಷಯಗಳನ್ನು ಯೋಚಿಸದೆ ಇವರು ತಮ್ಮ ಕೃತಿಗಳಿಗೆ ಇದೇ ಹೆಸರನ್ನು ಇಟ್ಟುಕೊಂಡು ಮುಂದುವರಿದರೆ ಇತರ ಅನೇಕ ಸಾಹಿತಿಗಳಿಗೆ ಅನ್ವಯಿಸಬಹುದಾದ ಗುಣವಾಚಕವನ್ನು ಇವರು ತಮ್ಮ ಸ್ವಂತಕ್ಕೆ ಉಪಯೋಗಿಸಿದಂತಾಗುವುದು. ಇಂತಹ ಸಂದರ್ಭದಲ್ಲಿ ಹೆಸರು ಹೆಸರು ಮಾತ್ರ ಆಗುತ್ತದೆ; ಗುಣವನ್ನು ನಿರೂಪಿಸುವ ಶಬ್ದವಾಗುವುದಿಲ್ಲ. Excelsior Soap, Superior Silk ಎನ್ನುವಂತೆ 'ಪ್ರಗತಿಶೀಲ' ಒಂದು ಗುಂಪಿನ ಅಂಕಿತದ ಹೆಸರಾಗುತ್ತದೆ. ನಿಜವಾದ ಸಾಹಿತಿ ಯಾವನೂ ಇಷ್ಟಕ್ಕಾಗಿ ತನ್ನ ಕೃತಿಯನ್ನು 'ಪ್ರಗತಿಶೀಲ' ಎಂದು ಕರೆದು ತೃಪ್ತನಾಗ ಲಾರನು. ಈ ಗುಂಪಿಗೆ ಸೇರಿ 'ಪ್ರಗತಿಶೀಲ' ಎನ್ನಿಸಿಕೊಳ್ಳುವುದು ಅವನಿಗೆ ಮುಖ್ಯ ಎಂದು ತೋರದು. ಈ ಗುಂಪಿನ ಹೊರಗಿದ್ದೂ ಅವನು ಪ್ರಗತಿಯ ಸೇವಕನಾಗಬಹುದು. ನಮ್ಮಲ್ಲಿ ಅನೇಕರು ಈಗ ಈ ಗುಂಪಿಗೆ ಸೇರದೆ ಪ್ರಗತಿಯನ್ನೇ ಸಾಧಿಸುತ್ತಿದೇವೆ ಎಂದು ತಿಳಿದಿದೇವೆ. ಪ್ರಗತಿ ಪ್ರಗತಿ ಎಂದ ಮಾತ್ರಕ್ಕೆ ಪ್ರಗತಿ ಆಗುವುದಿಲ್ಲ. ದೊಡ್ಡ ಹೆಸರನ್ನು ಹೇಳಿ ಕೊಳ್ಳುವುದು ಬೇಡ, ಕೈಯಲ್ಲಾದ ಒಳ್ಳೆಯದನ್ನು ಮಾಡೋಣ, ಎಂದರೆ

ಪ್ರಗತಿ ಕೈತಪ್ಪುವುದಿಲ್ಲ. Not all who say Lord, Lord, will enter the Kingdom of Heaven. Lord, Lord ಎನ್ನದೆ ಇದ್ದರೂ ಸತ್ಯ, ಆಚಾರ, ನಿಷ್ಠೆ, ಶಾಂತಿ, ದಮ ಇವುಗಳಿಂದ 'ಪ್ರಗತಿ' ಸಿದ್ಧಿಸುತ್ತದೆ. ತಾವೇ ಬೇರೆಯೆಂದು ತಿಳಿದು, ಉಳಿದವರೆಲ್ಲರೂ ಕೆಲಸಕ್ಕೆ ಬಾರದವರೆಂದು ಹಳಿದು, ಜನದ ಕ್ಷೇಮಕ್ಕೆ ತಾವು ಮಾತ್ರ ಹೊಣೆ ಎನ್ನುವ ಮಾತನ್ನು ಈ ಸ್ನೇಹಿತರು ಬಿಡಲಿ. ಜನದ ಕ್ಷೇಮಕ್ಕಾಗಿ ಎಲ್ಲರೂ ದುಡಿಯಬೇಕಾಗಿದೆ. ತಮಗೆ ತೋರಿದ ಒಳ್ಳೆಯದನ್ನು ಮಾಡಿ ಇತರರನ್ನು ಅವರಿಗೆ ತೋರಿದ ಒಳ್ಳೆಯದನ್ನು ಮಾಡುವುದಕ್ಕೆ ಬಿಟ್ಟು, ಈ ಸ್ನೇಹಿತರು ದೇಶಸೇವೆಗೆ ಎಲ್ಲರೊಂದಿಗೆ ಕಲೆಯಲಿ.

ನಾನು ವಾದದಲ್ಲಿ ಕುಶಲನಲ್ಲ. ಅದರಿಂದಲೇ ಇರಬೇಕು, ನನಗೆ ವಾದದಲ್ಲಿ ರುಚಿಯಿಲ್ಲ. ನನ್ನನ್ನೂ ನನ್ನ ಗ್ರಂಥಗಳನ್ನೂ ನಮ್ಮ ತರುಣ ಮಿತ್ರರು ಹಳಿಯುತ್ತಿರುವ ಮಾತು ನನಗೆ ಎಂದೋ ತಿಳಿಯಿತು. ನನ್ನ ಪುಸ್ತಕ ಬೇಡದಿದ್ದರೆ ಇವರು ಓದಬೇಕಾದದ್ದಿಲ್ಲ. ಬೇಡದವರು ಇನ್ನು ಯಾರೂ ಓದಬೇಕೆಂಬ ಕಡ್ಡಾಯವಿಲ್ಲ. ನನ್ನ ಕೃತಿಗಳು ಯಾರಿಗೆ ಬೇಕಾಗುವುವೋ ಅವರು ಅವನ್ನು ಓದಬಹುದು. ಹೀಗೆಂದು ನಾನು ಸುಮ್ಮನಿದ್ದೆನು. ಈಚೆಗೆ ಈ ಮಾತು ಒಬ್ಬರಿಬ್ಬರನ್ನು ನಿಷ್ಪ್ರಯೋಜಕರೆಂದು ಹೇಳುವಷ್ಟರಲ್ಲಿ ಮುಗಿಯದೆ ಯಾವುದೋ ಒಂದು ಹೊಸ ಧರ್ಮದ ಪ್ರಚಾರದಂತೆ ತಲೆಯೆತ್ತಿತು. ಈ ಮಾತು ರೀತಿ ಎಲ್ಲ ಕನ್ನಡ ಸಂಸ್ಕೃತಿಗೆ ತೀರ ವಿರೋಧವಾದದ್ದೆಂದು ಕಂಡದ್ದರಿಂದ ಈ ಲೇಖನ ಮಾಲೆಯನ್ನು ಬರೆಯಲು ಮನಸ್ಸು ಮಾಡಿದೆನು. ಇಲ್ಲಿ ವಾದ ಮುಖ್ಯವಲ್ಲ. ನನ್ನ ವಾದವನ್ನು ಒಪ್ಪಬೇಕೆಂದೂ ಈ ಮಿತ್ರರನ್ನು ನಾನು ಒತ್ತಾಯ ಮಾಡುವುದಿಲ್ಲ. ನಿಮ್ಮದೊಂದು ಗುಂಪು ಕಟ್ಟಿಕೊಳ್ಳಬೇಡಿ ಎಂದು ಅವರನ್ನು ಬೇಡುತ್ತೇನೆ. ಗುಂಪು ಕಟ್ಟಲೇಬೇಕು ಎಂದರೆ ಉಳಿದವರೆಲ್ಲ ಅಪ್ರಯೋಜಕರು ಎಂದು ಹೇಳಬೇಡಿ ಎಂದು ಬೇಡುತ್ತೇನೆ. ಅದು ನಮ್ಮ ಅಭಿಪ್ರಾಯ, ಹೇಳದೆ ಗತಿಯಿಲ್ಲ, ಎಂದರೆ ಅದನ್ನೂ ಹೇಳಿ, ಅದಕ್ಕೆ ಕೆಟ್ಟ ಮಾತನ್ನು ಬಳಸಬೇಡಿ, ಎಂದು ಹೇಳುತ್ತೇನೆ. ಜೊತೆಗೆ, ಎಲ್ಲರಂತೆ ನೀವೂ ಮನುಷ್ಯರು, ಅವರ ಅಭಿಪ್ರಾಯ ತಪ್ಪಾಗಿರುವುದು ಹೇಗೆ

ಸಾಧ್ಯವೋ ಹಾಗೆ ನಿಮ್ಮ ಅಭಿಪ್ರಾಯ ತಪ್ಪಾಗಿರುವುದೂ ಸಾಧ್ಯ, ನಿಮ್ಮ ಅಭಿಪ್ರಾಯವೇ ಸರಿ ಉಳಿದೆಲ್ಲ ಅಭಿಪ್ರಾಯ ತಪ್ಪು ಎಂದು ಹಟ ಮಾಡಬೇಡಿ, ಎಲ್ಲ ಅಭಿಪ್ರಾಯವೂ ಜನದ ಮುಂದೆ ಹಾಯಲಿ, ಎಂದು ಅವರನ್ನು ಪ್ರಾರ್ಥಿಸುತ್ತೇನೆ. ಈ ಮಾತು ಯಾವುದಾಗಲಿ ವಾದದ ಮಾತು ಆಗಬೇಕಾಗಿರಲಿಲ್ಲ; ಒಂದು ಚರ್ಚೆಯ ಕೊನೆಯಲ್ಲಿ ಬರಬೇಕಾಗಿರಲಿಲ್ಲ. ಇದು ಹೀಗಾಗುವುದಕ್ಕೆ ಕಾರಣ ನಮ್ಮ ಮಿತ್ರರು ಆರಂಭ ಮಾಡಿದ ವಾದ. ನನ್ನ ಮಾತಿನಲ್ಲಿ ಏನಾದರೂ ಹೆಚ್ಚು ಕಡಮೆ ಇದ್ದರೆ ಅದನ್ನು ಈ ಸ್ನೇಹಿತರೂ ಈ ಲೇಖನವನ್ನೋದುವ ಇನ್ನೆಲ್ಲ ಸ್ನೇಹಿತರೂ ಮನ್ನಿಸಬೇಕು. ನನ್ನ ಉದ್ದೇಶದಲ್ಲಿ ಕಲ್ಮಷವಿಲ್ಲ. ಮಾತಿನಲ್ಲಿಯೂ ಕಲ್ಮಷ ಬಾರದಂತೆ ನಾನು ಪ್ರಯತ್ನಮಾಡಿದೇನೆ. ಈ ಚರ್ಚೆ ಮುಂದಕ್ಕಾದರೂ ಜಗಳವಾಗಿ ಬೆಳೆಯದೆ ತತ್ತ್ವಾನ್ವೇಷಿಗಳ ಸೌಹಾರ್ದದಿಂದ ಮುಂದುವರಿಯಲೆಂದು ಹಾರೈಸಿ ಈ ವಿಚಾರವನ್ನು ಇಲ್ಲಿ ಮುಗಿಸಿದೇನೆ.

"ಜೀವನ", ಅಕ್ಟೋಬರ್, ನೊವೆಂಬರ್, ಡಿಸೆಂಬರ್ ೧೯೪೪

# ನಮಗೆ ಬೇಕಾದ ಸಾಹಿತ್ಯ

## ೧

ಸಾಹಿತ್ಯವೆನ್ನುವುದು ಪ್ರಗತಿಗೆ ಸಾಧಕವಾಗಬೇಕು ಎಂಬ ತತ್ವವನ್ನು ಕುರಿತು ಕಳೆದ ವರ್ಷ ಕನ್ನಡದಲ್ಲಿ ವಿಸ್ತಾರವಾದ ಚರ್ಚೆ ನಡೆದದ್ದು ನಮ್ಮಲ್ಲಿ ಎಲ್ಲರಿಗೂ ನೆನಪಿರಬೇಕು. ಪ್ರಗತಿ ಎನ್ನುವುದಕ್ಕೆ ಏಕಮುಖವಾದ ಒಂದು ಅರ್ಥವನ್ನು ಇಟ್ಟುಕೊಂಡು ನಮ್ಮ ತರುಣಮಿತ್ರರು ಕೆಲವರು ನಮಗೆ ಇಂತಹ ಸಾಹಿತ್ಯ ಬೇಕು, ಇಂತಹ ಸಾಹಿತ್ಯ ಬೇಡ, ಎಂದು ಹೇಳುತ್ತ ಆಗ ಸಾಹಿತ್ಯವನ್ನು ಎರಡು ತರಗತಿಯಾಗಿ ವಿಂಗಡಿಸಿದರು. ಇವರಲ್ಲಿ ಒಬ್ಬರು ಒಂದು ಸಭೆಯಲ್ಲಿ "ಸುಬ್ಬಣ್ಣ ಶ್ರೇಷ್ಠ ಕೃತಿ; ಆದರೆ ನಮ್ಮ ಇಂದಿನ ಸ್ಥಿತಿಯಲ್ಲಿ ಇಂತಹ ಕೃತಿ ನಮಗೆ ಬೇಕಿಲ್ಲ. ಅಜೀರ್ಣದಲ್ಲಿರುವವನಿಗೆ ಲಡ್ಡು, ಜಿಲೇಬಿ ಹೇಗೆ ಬೇಡವೋ ಹಾಗೆ ಈ ತೆರದ ಬರವಣಿಗೆ ಈಗ ನಮಗೆ ಅಪ್ರಸ್ತುತ, ನಮಗೆ ಈಗ ಬೇಕಾಗಿರುವುದು ನಮ್ಮ ದೇಶಕ್ಕೆ ಸ್ವಾತಂತ್ರ್ಯವನ್ನು ಸಾಧಿಸುವ ಸಾಹಿತ್ಯ, ನಮ್ಮ ಜನರ ಹಸಿವನ್ನು ನಿವಾರಿಸುವ ಸಾಹಿತ್ಯ" ಎಂದು ಮೊದಲಾಗಿ ನಮಗೆ ಬೇಡದ ಸಾಹಿತ್ಯಕ್ಕೆ ಒಂದು ಉದಾಹರಣೆಯನ್ನು ಕೊಟ್ಟು ನಮಗೆ ಬೇಕಾದ ಸಾಹಿತ್ಯದ ಗುರಿಯನ್ನು ಸೂಚಿಸಿದರು.

ದೇಶಕ್ಕೆ ಸ್ವಾತಂತ್ರ್ಯವನ್ನು ಸಾಧಿಸುವ ಸಾಹಿತ್ಯ ಆವಶ್ಯಕ ಎನ್ನುವ ಬಗೆಗೆ ನಮ್ಮನಮ್ಮಲ್ಲಿ ಅಭಿಪ್ರಾಯ ಭಿನ್ನವಾಗುವುದಿಲ್ಲ. ಯಾವ ರೀತಿಯ ಬರವಣಿಗೆ ಸ್ವಾತಂತ್ರ್ಯವನ್ನು ಸಾಧಿಸುತ್ತದೆ, ಸಾಹಿತ್ಯ ಸ್ವಾತಂತ್ರ್ಯವನ್ನು ಹೇಗೆ ಸಾಧಿಸುತ್ತದೆ, ನಾವು ಸಾಧಿಸಬೇಕಾದ ಸ್ವಾತಂತ್ರ್ಯದ ಸ್ವರೂಪವೇನು, ಎಂಬ ವಿವರಗಳಲ್ಲಿ ಭಾವನೆಗಳು ಬೇರೆಯಾಗುವ ಸಂಭವಗಳಿವೆ. ಈ ವಿಚಾರವನ್ನು ನಾನು ಪ್ರಗತಿ ಮತ್ತು ಸಾಹಿತ್ಯವನ್ನು ಕುರಿತ ಒಂದು ಲೇಖನದಲ್ಲಿ ಆಗಲೇ ಸೂಚಿಸಿದೆನು. ನಮ್ಮ ಭಾವನೆಗಳು ಹೇಗಿದ್ದರೂ ತಮ್ಮ ತಮ್ಮ ಭಾವನೆಯನ್ನು ಅನುಸರಿಸಿ ಬರೆಯಬಲ್ಲವರೆಲ್ಲ ಬಲ್ಲಷ್ಟು ಚೆನ್ನಾಗಿ ಬರೆದು ಸಾಹಿತ್ಯವನ್ನು ಬೆಳಸಬೇಕು

ಎಂದೂ, ಇಂತಹ ಅಂತಹ ಸಾಹಿತ್ಯಬೇಕು ಎಂಬ ನಮ್ಮ ತರುಣಮಿತ್ರರು ಒಳ್ಳೆಯ ಸಾಹಿತ್ಯವನ್ನು ಬರೆಯಲಿ ಎಂದೂ, ಆಶಿಸಿದೆನು. ಇದು ನನ್ನೊಬ್ಬನ ಆಶೆ ಅಲ್ಲ. ಎಲ್ಲ ಕನ್ನಡಿಗರ ಆಶೆ.

ಇದಕ್ಕೆ ತಕ್ಕಂತೆ ಈ ನಮ್ಮ ಸ್ನೇಹಿತರು ಈಚೆಗೆ ಒಂದು ಕಥೆ ಬರೆದಿರುವ ಸಂಗತಿ ಅದನ್ನು ಕುರಿತ ಒಂದು ವಿಮರ್ಶೆಯಿಂದ ನನಗೆ ತಿಳಿಯಿತು. ಈ ಮಿತ್ರರು ಬರೆದ ಕಥೆ ಎಂಬ ಕಾರಣದಿಂದ ನಮಗೆ ಬೇಕಾದ ಸಾಹಿತ್ಯದ ಸ್ವರೂಪವನ್ನು ತಿಳಿಯಲು ಬಯಸಿ ವಿಮರ್ಶೆಯನ್ನು ಸ್ವಲ್ಪ ಕುತೂಹಲದಿಂದ ನೋಡಿದೆನು.

೨

ವಿಮರ್ಶೆಯಲ್ಲಿ ಕಥೆಯ ಸಾರವನ್ನು ಹೀಗೆಂದು ಕೊಟ್ಟಿತ್ತು:

"ಬೆಂಗಳೂರಿನಲ್ಲಿ ಅಂಗಡಿಯಿಟ್ಟು ನಷ್ಟಹೊಂದಿದ್ದ ಶಾಮರಾಯರು ರಾಮಪುರದಲ್ಲಿ ಹಳ್ಳಿಯಲ್ಲಿದ್ದ ಜಮೀನು, ಮನೆ ಮಠ ನೋಡಿಕೊಂಡು ಸುಖವಾಗಿದ್ದರು. ಅವರಿಗೆ ಗೋಪಾಲ, ರಾಧಾಕೃಷ್ಣ ಎಂಬಿಬ್ಬರು ಮಕ್ಕಳೂ ಲಲಿತಮ್ಮ ಎಂಬ ಹೆಂಡತಿಯೂ ಇದ್ದಾರೆ. ರಾಯರ ಸ್ನೇಹಿತ ಮಾಧವರಾಯರು ಮೃತಿಹೊಂದಿ ತಮ್ಮ ಇಪ್ಪತ್ತು ಸಾವಿರ ರೂಪಾಯಿನ ಆಸ್ತಿಯನ್ನು ರಾಧಾಕಿಟ್ಟಿಗೆ ಬಿಟ್ಟಿದಾರೆ. ಇದು ಊರಲ್ಲಿ ಊಹಾಪೋಹಕ್ಕೆ ಎಡೆಕೊಟ್ಟಿತು. ಊಹೆಗೆ ಕೈಕಾಲು ಬಂದು ಅದೊಂದು ಆಕೃತಿಹೊಂದಿ ಪೆಡಂಭೂತವಾಗಿ ನಿಲ್ಲುತ್ತೆ. ಊರಲ್ಲಿ ಇದರ ಗುಸುಗುಸು. ಗೋಪಾಲ ಈ ಸಮಸ್ಯೆ ಬಿಡಿಸಲು ಪ್ರಯತ್ನಿಸಿ ತನ್ನ ತಾಯಿ ಜಾರಿದ ವಿಷಯ-ತಿಳಿಯುತ್ತಾನೆ. ಗೋಪಾಲನಿಗೆ ಈ ವಿಷಯ ತಿಳಿದಿದೆಯೆಂದು ತಾಯಿಗೂ ಗೊತ್ತಾಗುತ್ತದೆ. ತಾನು ಮನೆಯಲ್ಲಿದ್ದರೆ ತನ್ನ ತಾಯಿಗೆ ತನ್ನ ಪಾಪದ ಮುಳ್ಳು ಅಳುಕುತ್ತದೆಂದು ಗೋಪಾಲ ಮನೆ ಬಿಟ್ಟು ಎಲ್ಲಿಗೋ ತೆರಳುತ್ತಾನೆ—"

ಕಥಾಸಾರದ ಮೂರನೆಯ ವಾಕ್ಯವನ್ನು ಓದುತ್ತ ನನಗೆ ಇದು ಎಲ್ಲಿಯೋ ಓದಿದ ಕಥೆ ಎಂದು ಮನಸ್ಸು ಅಳುಕಿತು. ಮುಂದಿನ ವಾಕ್ಯಗಳಲ್ಲಿ 'ಇದು ಹೌದು' ಎಂದು ದೃಢವಾಯಿತು. ಆದರೂ

ವಿಮರ್ಶೆಯನ್ನು ಕೊನೆಯುವರೆಗೂ ನೋಡಿದರೂ ಇದು ಬೇರೆ ಯಾವ ಒಂದು ಕಥೆಯ ಆಧಾರದಿಂದ ಬರೆದ ಕಥೆ ಎನ್ನುವುದು ಉಕ್ತವಾಗಿರಲಿಲ್ಲ. ಲೇಖಕರು ಯಾವುದೋ ಒಂದು ಕಥೆಯ ಆಧಾರದ ಮೇಲೆ ತಮ್ಮ ಕಥೆಯುನ್ನು ರಚಿಸಿ ಇದನ್ನು ಒಪ್ಪಿಕೊಳ್ಳದೆ ಇರುವರೆಂದು ಕಂಡಿತು. ಇದನ್ನು ನಿರ್ಧರಿಸಿಕೊಳ್ಳುವುದಕ್ಕಾಗಿ ನಾನು ನನ್ನ ಜ್ಞಾಪಕದ ಪುಸ್ತಕವನ್ನು ತೆಗೆದು ನೋಡಿದೆನು. ಅದು ಮಾನ್‌ಸಿಯರ್ ಆ್ಯನಟೋಲ್ ಫ್ರಾನ್ಸ್ ಅವರ On Life and Letters (ಬಾಳು-ಬರಹ) ಎಂಬ ಸಾಹಿತ್ಯ ಸಂಕಥೆಗಳ ಎರಡನೆಯ ಭಾಗ. ಅದರ ಒಂದು ಉಪನ್ಯಾಸ Maupassaunt, Critic and Novelist ಎಂಬ ಹೆಸರಿನದು. ಅದರಲ್ಲಿ ಫ್ರಾನ್ಸ್ ಮಹಾಶಯರು ಮೊಪಾಸಾಂ ಅವರ Pierre et Jean (ಪಿಯರ್ ಮತ್ತು ಜೀನ್) ಎಂಬ ಕಥೆಯುನ್ನು ಅವಲೋಕಿಸಿದ್ದಾರೆ. ಅವಲೋಕನದಲ್ಲಿ ಕಥೆಯ ಸಾರವನ್ನು ಹೀಗೆಂದು ಕೊಟ್ಟಿದಾರೆ.

"A sentimental jeweller's wife of the Rue Montmartre, whose husband to whom she had borne a little boy was a very commonplace tradesman, pretty Madame Roland felt painfully the emptiness of her existence. A stranger, a customer, who had come to the shop by chance, fell in love with her and told her so with delicacy. He was a M. Marechal, a civil servant. Divining in him a tender and prudent soul like her own, Madame Roland loved and gave herself. She then had a second child, another boy, of whom the jeweller believed that he was the father, but whom she knew to have been born under a happier influence. Between this woman and her lover there were profound affinities. Their intimacy was prolonged, harmonious and concealed. She only broke with him when the tradesman, retiring from business, took his wife now past middle age, and the children, already grown up, to Havre . . Suddenly we learn that Marechal has died and appointed the second of the Roland boys as his sole legatee . . . . The lover's too expressive legacy suggests no reflection to the husband, who is a simple minded man . . . . Jean the younger son also finds natural a legacy by which he benefits, but Pierre the elder accepts less easily a disposition which is

to his disadvantage. It appears, to say the least, peculiar to him . . . . When suspicions have entered there is no more rest for him . . . . He piles them up whilst wishing to dissipate them. He makes a regular enquiry. He troubles, frightens, overwhelms his unhappy mother whom he adores. He spares that mother no contumely and proclaims to his adulterine brother the secret he has surprised and ought to keep . . . . Do you ask what is the issue? There is none. From such a situation there can be no issue . . . .”

“ಭಾವಲೋಲುಪೆಯಾದ ಮಹಿಳೆ, ಮಾಂಟ್‌ಮಾರ್‌ಟ್ರೆ ಪೇಟೆಯ ಒಬ್ಬ ರತ್ನಪಡಿ ವ್ಯಾಪಾರಿಯ ಪತ್ನಿ, ಅವನಿಂದ ಒಬ್ಬ ಮಗನನ್ನು ಪಡೆದಿದ್ದಾಳೆ. ಆ ಗಂಡ ಬಹು ಸಾಮಾನ್ಯ ತರದ ಮನುಷ್ಯ. ಚೆಲುವೆ ಈ ಪತ್ನಿ ತೀರಾ ಬರಿದಾದ ತನ್ನ ಬಾಳಿಂದ ಬೇಸರಗೊಂಡಿದಾಳೆ. ವ್ಯಾಪಾರಕ್ಕೆ ಬಂದ ಒಬ್ಬ ಅಪರಿಚಿತ ವ್ಯಕ್ತಿ ಅವಳಿಗೆ ಮನಸೋತು ಅವಳಿಗೆ ಈ ಹದನನ್ನು ನಯವಾಗಿ ತಿಳಿಸುತ್ತಾನೆ. ಅವನೊಬ್ಬ ಸರಕಾರೀ ಅಧಿಕಾರಿ. ತನ್ನಂತೆ ಇವನೂ ರಸಿಕ, ಜಾಣ, ಎಂದು ಗ್ರಹಿಸಿ ಈಕೆ ತಾನೂ ಅವನಿಗೆ ಮನಸೋತಳು; ತನ್ನನ್ನು ತೆತ್ತುಕೊಂಡಳು. ಅವಳಿಗೆ ಮತ್ತೊಬ್ಬ ಮಗನಾದನು. ವ್ಯಾಪಾರಿ ಈ ಮಗುವೂ ತನ್ನದೆಂದೇ ತಿಳಿದಿದಾನೆ. ಆಕೆ ಬಲ್ಲಳು: ಅದು ಬೇರೆಯ ಒಂದು ಸುಖದ ಫಲ ಎಂದು. ಈ ಹೆಂಗಸಿಗೂ ಇವಳ ಈ ಪ್ರಿಯನಿಗೂ ಗಾಢವಾದ ಪ್ರೇಮ ಬೆಳೆಯಿತು. ಇವರಿವರ ಗೆಳೆತನ ಬಹುಕಾಲ ಹೊಂದಿಕೆಯಿಂದ ಗುಪ್ತವಾಗಿ ನಡೆಯಿತು. ಈಕೆ ಈ ಪ್ರಿಯನಿಂದ ಬಿಡಿಸಿಕೊಂಡದ್ದು ತನ್ನ ಗಂಡ ವ್ಯಾಪಾರವನ್ನು ನಿಲ್ಲಿಸಿ ಹೇವರ್ ಗ್ರಾಮಕ್ಕೆ ಹೋದಾಗಲೇ. ಆಗ್ಗೆ ಆಕೆಗೆ ಮಧ್ಯ ವಯಸ್ಸು ಮೀರಿತ್ತು. ಹುಡುಗರು ಬೆಳೆದು ದೊಡ್ಡವರಾಗಿದ್ದರು. . . . ಇದ್ದದಿದ್ದ ಹಾಗೆ ಗೆಳೆಯ ಅಧಿಕಾರಿ ತೀರಿಕೊಳ್ಳುತ್ತಾನೆ. ಸಾಯುತ್ತ ಈಕೆಯ ಎರಡನೆಯ ಮಗನನ್ನು ತನ್ನ ಎಲ್ಲಾ ಆಸ್ತಿಯ ಏಕಮಾತ್ರ ದಾಯಾದನಾಗಿ ನೇಮಿಸಿರುತ್ತಾನೆ. . . . ತಂದೆಯಾದ ವ್ಯಾಪಾರಿಗೆ ಅಧಿಕಾರಿಯ ಈ ಅರ್ಥಗರ್ಭಿತವಾದ ಮರಣಶಾಸನದಿಂದ ಯಾವ ಅಚ್ಚರಿಯೂ ಉಂಟಾಗುವುದಿಲ್ಲ. ಅವನ ಚೇತನ ಅಷ್ಟು ಸರಳ. ಎರಡನೆಯ ಮಗ ಜೀನ್ ಕೂಡ ತನಗೆ ಇಷ್ಟು ಅನುಕೂಲವಾಗಿ ಬಂದ ಐಶ್ವರ್ಯದ

ವಿಷಯ ಯಾವ ಪ್ರಶ್ನೆಯನ್ನೂ ಮಾಡುವುದಿಲ್ಲ. ಹಿರಿಯನಾದ ಪಿಯರ್ ಆದರೆ ತನ್ನ ಪಾಲಿಗೆ ಬರದ ಈ ಆಸ್ತಿಯನ್ನು ಕುರಿತು ವಿಚಾರಮಾಡುತ್ತಾನೆ. ಶಂಕೆ ಹುಟ್ಟಿದ್ದೇ ತಡ. ಅವನಿಗೆ ಸುಮ್ಮನಿರುವುದು ಸಾಧ್ಯವಿಲ್ಲ. ಅದನ್ನು ಹರಿಸಿಕೊಳ್ಳುವ ಯತ್ನದಲ್ಲಿ ಅವನು ಅದನ್ನು ಹೆಚ್ಚಿಸಿಕೊಳ್ಳುತ್ತಾನೆ. ಹಾಗೆಯೇ ಅವನು ಸತ್ಯ ತಿಳಿಯಲು ಶೋಧನೆ ನಡೆಸುತ್ತಾನೆ. ತನ್ನ ತಾಯನ್ನು ಹಿಂಸಿಸುತ್ತಾನೆ, ಹೆದರಿಸುತ್ತಾನೆ, ತೀರ ಭೂಗತಮಾಡುತ್ತಾನೆ. ಅವನು ಅವಳಿಗೆ ಮಾಡದ ಅವಮಾನವಿಲ್ಲ. ತನಗೆ ತಿಳಿದರೂ ಇತರರಿಂದ ಗುಪ್ತವಾಗಿಡಬೇಕಾದ ಈ ರಹಸ್ಯವನ್ನು ಇವನು ತನ್ನ ಸೋದರ ಜೀನನಿಗೆ ತಿಳಿಸುತ್ತಾನೆ.... ಇದೆಲ್ಲದರ ಪರಿಣಾಮ ಇರುವುದು ಏನು ಎಂದು ಕೇಳುವಿರಾ? ಏನೂ ಇಲ್ಲ. ಇಂತಹ ಪರಿಸ್ಥಿತಿಯಿಂದ ಯಾವುದಾದರೊಂದು ಪರಿಣಾಮ ಇರುವುದು ಸಾಧ್ಯವಲ್ಲ...."

ಕಥೆಗಳ ಸಾರವನ್ನು ಹೋಲಿಸಿ ನೋಡಿದರೆ ಕನ್ನಡದ ಲೇಖಕರು ಫ್ರೆಂಚ್ ಕಥೆಯ ವಸ್ತುವನ್ನು ಸಂಗ್ರಹಿಸಿಕೊಂಡಿದಾರೆಂದು ತಿಳಿಯುತ್ತದೆ. ಇದು ಬಹು ದೊಡ್ಡ ವಿಷಯವೆಂದಲ್ಲ. ಆದರೆ ಸಾಹಿತ್ಯಧರ್ಮ ಇಂತಹ ಸಂದರ್ಭದಲ್ಲಿ ಮೂಲವನ್ನು ಒಪ್ಪಿಕೊಳ್ಳಬೇಕೆಂದು ನಿಯಮಿಸುತ್ತದೆ. ಲೇಖಕರು ಇದನ್ನು ಮಾಡಬೇಕಾಗಿತ್ತು.

ಹೀಗೆ ತೆಗೆದುಕೊಂಡ ಕಥೆಯಲ್ಲಿ ಲೇಖಕರು ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿದಾರೆ. ಅಲ್ಲಿ ಗಂಡ ವ್ಯಾಪಾರಿ; ಗೆಳೆಯ ಅಧಿಕಾರಿ; ಅವರಿಗೆ ಗುರುತಿತ್ತೆಂದು ಕಾಣುವುದಿಲ್ಲ. ಆ ಸೀಮೆಯಲ್ಲಿ ಇವರು ಬೇರೆ ಬೇರೆ ತರಗತಿಯ ಜನರು. ಇಲ್ಲಿ ಗಂಡ ಗೆಳೆಯ ಇಬ್ಬರೂ ಒಂದು ಕುಲದವರು. ಗೆಳೆಯ ಗಂಡನ ಸ್ನೇಹಿತ. ಮೂಲದಲ್ಲಿ ಹಿರಿಯ ಸೋದರ ಒಳ್ಳೆಯ ಸ್ವಭಾವದ ಹುಡುಗನಲ್ಲ. ಅವನು ತಾಯನ್ನು ಹಿಂಸಿಸುತ್ತಾನೆ; ತಮ್ಮನ ವಿಷಯ ಅಸೂಯೆಪಡುತ್ತಾನೆ. ಇಲ್ಲಿ ಗೋಪಾಲ ತಾಯ ಮನಸ್ಸು ನೋಯದಂತೆ ಎಲ್ಲಿಗೋ ತೆರಳುತ್ತಾನೆ. ತಮ್ಮನ ವಿಷಯದಲ್ಲಿ ಅಸೂಯೆಪಟ್ಟರೂ ಅವನೂ ತಮ್ಮನೇ ಎಂಬ ಪವಿತ್ರ ಭಾವನೆಯನ್ನು ತಳೆಯುತ್ತಾನೆ.

ನಮ್ಮ ಲೇಖಕರು ಈ ವ್ಯತ್ಯಾಸಗಳನ್ನು ಮಾಡಿಕೊಂಡಿರುವುದಕ್ಕೆ ಕಾರಣವೇನಿರಬಹುದು? ಇಲ್ಲಿ ಗೆಳೆಯ ಅಲ್ಲಿಗಿಂತ ಹೆಚ್ಚಿನ ವಿಶ್ವಾಸ ಘಾತಕ; ಮಿತ್ರದ್ರೋಹಿ. ಇಲ್ಲಿಯ ಹಿರಿಯಮಗ ಗುಣಶಾಲಿ. ಕಥೆಯನ್ನು ತೆಗೆದುಕೊಳ್ಳುವುದರಲ್ಲಿ ತೀರ ದಾಸ್ಯದ ಋಣ ಬೇಡ, ಸ್ವಾತಂತ್ರ್ಯವೂ ಸ್ವಲ್ಪ ಇರಲಿ, ಎಂದು ಮಾರ್ಪಾಡುಗಳನ್ನು ಮಾಡಿರಬಹುದೊ? ಫ್ರಾನ್ಸ್ ದೇಶದ ಸಂಗತಿಯನ್ನು ಕನ್ನಡ ದೇಶಕ್ಕೆ ಹೊಂದಿಸುವುದರಲ್ಲಿ ಆವಶ್ಯಕವಾದ ಮಾರ್ಪಾಡಾಗಿ ಭಾವಿಸಿ ಮಾಡಿರಬಹುದೊ? ಇಂತಹ ವಿಷಯವನ್ನು ಲೇಖಕರು ಸ್ಪಷ್ಟಪಡಿಸುವವರೆಗೆ ನಮ್ಮಂತಹವರು, ಬಿಡುವಿದ್ದರೆ, ಕೇವಲ ಊಹಿಸಬಹುದು ಮಾತ್ರ.

೩

ಫ್ರಾನ್ಸ್ ದೇಶದ ಕಥೆ ಒಂದನ್ನು ಹೀಗೆ ತೆಗೆದುಕೊಂಡು ಹೀಗೆ ಮಾರ್ಪಡಿಸಿಕೊಂಡು ಕನ್ನಡ ಜನದ ಜೀವನದ ಚಿತ್ರ ಎಂಬಂತೆ ಈ ಕೃತಿಯನ್ನು ಬರೆದು ಈ ನಮ್ಮ ಸ್ನೇಹಿತರು ಕನ್ನಡದ ವಿಷಯದಲ್ಲಿ ತಪ್ಪಿ ನಡೆದಿದ್ದಾರೆ ಎಂದು ನನಗೆ ತೋರುತ್ತದೆ.

ಎತ್ತಿಕೊಳ್ಳುತ್ತ ಇವರು ಮಾಡಿರುವ ತಪ್ಪು, ತಾವೇ ಹಾಕಿಕೊಂಡಿರುವ ಒಂದು ಸೂತ್ರವನ್ನು ನಡೆಸದೆ ಇರುವುದು. ಇವರಿಗೆ ಈಗ ದೇಶಕ್ಕೆ ಸ್ವಾತಂತ್ರ್ಯವನ್ನು ಸಾಧಿಸುವ ಸಾಹಿತ್ಯ ಬೇಕು. ಇದನ್ನು ಮಾಡದ ಕೃತಿ ಎಷ್ಟೇ ಒಳ್ಳೆಯದಾದರೂ ಈಗ ಬೇಡ. ಇದು ಬಾಯಲ್ಲಿ ಹೇಳುವ ಸೂತ್ರ. ಮಾಡಿರುವ ಕಾರ್ಯ ಈ ಸೂತ್ರದಿಂದ ಬಹುದೂರ.

ದೇಶಕ್ಕೆ ಸ್ವಾತಂತ್ರ್ಯವನ್ನು ಸಾಧಿಸುವ ಸಾಹಿತ್ಯ ಬರುವುದೇ ಒಳಿತು, ಏನೋ ನಮಗೆ ಪುಣ್ಯವಿಲ್ಲ, ಬರಲಿಲ್ಲ, ಕೃತಿಯಾದರೂ ಸ್ವತಂತ್ರವಾಗಿ ನಾವು ಸ್ವತಂತ್ರರಾಗಿರಲು ಶಕ್ತರು ಎಂದು ತೋರಿಸಿದರೆ ಅಷ್ಟೇ ಸಾಕು, ಎಂದು ನಾವು ಹೇಳಬಹುದು. ನಮ್ಮ ಸ್ನೇಹಿತರು ಇದನ್ನೂ ಮಾಡಲೊಲ್ಲರು. ಪರಸಾಹಿತ್ಯದ ಸಹಾಯವಿಲ್ಲದೆ ತಾವು ನಿಲ್ಲಲಾರೆವೆಂಬಂತೆ ನಡೆದುಕೊಂಡಿದಾರೆ. ನಮಗಿರುವ ರಾಜಕೀಯ ದಾಸ್ಯ ಸಾಲದು ಎಂಬಂತೆ ಸಾಹಿತ್ಯ ದಾಸ್ಯದಿಂದ ಅಲಂಕರಿಸಿಕೊಂಡಿದಾರೆ.

ಹೀಗೆ ಮಾಡುವುದರಲ್ಲಿ ಇವರು ಕನ್ನಡ ನಾಡಿನಲ್ಲಿ ಇಲ್ಲದ ರೀತಿಯ ಒಂದು ಜೀವನವನ್ನು ಕನ್ನಡಿಗರಿಗೆ ಆರೋಪಿಸಿದ್ದಾರೆ. ಕನ್ನಡನಾಡ ಜನ ಪರಸ್ತ್ರೀಯರನ್ನು ಮುಟ್ಟುವುದಿಲ್ಲ ಎಂದಲ್ಲ; ಮುಟ್ಟುವ ಸಾವಿರದಲ್ಲಿ ಒಬ್ಬ ತನ್ನ ಸ್ನೇಹಿತನ ಹೆಂಡತಿಯನ್ನು ಮುಟ್ಟಿರಬಾರದೆಂದಲ್ಲ. ಆದರೆ ದೇಶವನ್ನುಳಿಸುವ ಕಥೆ ಬರೆಯುವವರು ಈ ಕೊಳಕನ್ನು ಸಂಗ್ರಹಿಸಿ ನಮ್ಮದಾಗಿ ಮಾಡಿಕೊಂಡು ನಲಿಯಬೇಕೇ? ಅಲ್ಲಿಯ ಆ ಹೊಟ್ಟೆಯುರಿಯ ಕ್ರೂರಸ್ವಭಾವದ ಹಿರಿಯಮಗ ಇಲ್ಲಿ ಮರುಕದ ತಾಳ್ಮೆಯ ತರುಣನಾದಂತೆ ಆ ಗೆಳೆಯನೂ ಹೆಚ್ಚು ಘಾತಕವಲ್ಲದ ಒಂದು ರೂಪವನ್ನು ಪಡೆಯಬಾರದಿತ್ತೇ?

ಇದರ ಮೇಲೆ ಇನ್ನೊಂದು ಪ್ರಶ್ನೆ. ತನ್ನ ಗೆಳತಿಯಲ್ಲಿ ಹುಟ್ಟಿದ ತನ್ನ ಮಗನಿಗೆ ಇಪ್ಪತ್ತು ಸಾವಿರ ರೂಪಾಯಿ ಆಸ್ತಿಯನ್ನು 'ವಿಲ್' ಬರೆದು ಬಿಡುವ ಮಾಧವರಾಯ ಕನ್ನಡ ಸಮಾಜದಲ್ಲಿ ಎಷ್ಟು ಮಟ್ಟಿಗೆ ಸಂಭವನೀಯ ವ್ಯಕ್ತಿ? ಮಾಧವರಾಯನಿಗೆ ಇದಿಷ್ಟೂ ಸ್ವಾರ್ಜಿತ ಆಸ್ತಿಯೇ? ಅವನಿಗೆ ನೆಂಟರು ಇಷ್ಟರು ಯಾರೂ ಇರಲಿಲ್ಲವೇ? ಇಂತಹ ಮನುಷ್ಯ ಗೆಳತಿಗೆ ಹಣವನ್ನೋ ಒಡವೆಯನ್ನೋ ಕೊಟ್ಟಾನೇ? ಅವಳ ಹೊಟ್ಟೆಯಲ್ಲಿ ಹುಟ್ಟಿದ ತನ್ನ ಮಗನಿಗೆ ಆಸ್ತಿಯನ್ನು ಬಿಟ್ಟಾನೇ? ತನ್ನ ಪ್ರಿಯೆಯ ಮಾನವನ್ನು ಕಾಯಬೇಕೆಂದು ಅವನಿಗೆ ತೋರುವುದಿಲ್ಲವೇ? ಹಲವಾರು ವಿವರವನ್ನೊಳಗೊಂಡ ಈ ದೊಡ್ಡ ಪ್ರಶ್ನೆ ಪರದೇಶದ ಕಥೆಯೊಂದನ್ನು ನಮ್ಮ ದೇಶದ್ದಾಗಿ ಹೇಳುವ ಲೇಖಕರ ನೆನವಿನಲ್ಲಿ ಇರಲೇಬೇಕು. ನಮ್ಮ ಸಮಾಜದಲ್ಲಿ ಗೆಳೆಯ ಮಾಧವರಾಯನಂತಹ ವಿಲ್‌ಕಾರ ಸಂಭವನೀಯವಲ್ಲ ಎಂದು ನಮಗೆ ತೋರುತ್ತದೆ.

೪

ಕನ್ನಡ ಜೀವನದ ಅಥವಾ ಸಂಸ್ಕೃತಿಯ ಒಂದು ಚಿತ್ರವೆಂದು ಭಾಸವಾಗುವಂತೆ ಕೊಟ್ಟಿರುವ ಈ ಕಥೆಯ ಮೂಲವನ್ನು ಕುರಿತು ಆ್ಯನಟೋಲ್ ಫ್ರಾನ್ಸ್ ಅವರು ಈ ಮಾತುಗಳನ್ನು ಹೇಳಿದ್ದಾರೆ.

"It is not a purely naturalist novel. The author knows this well. He is conscious of what he has done. This time,—and it is not for the first time—he has set out from an hypothesis. He said to himself: 'If such an event took place in such circumstances what would be the result?' Now the starting point of the Novel 'Pierre et Jean' is so singular, or at least so exceptional, that observation is almost powerless to show its consequences . . . . To discover them it is necessary to have recourse to reasoning and to proceed by deduction. That is what has been done by M. Guy de Maupassant, who is, like the devil, a great Logician". . . ."Such is the situation, I was going to say the hypothesis, from which the novelist has started. Am I not right to affirm that it is a strange one? Marechal had during his life-time shown the same affection for the two little Rolands. Nothing was more natural than that he should prefer his own son. But he felt that his preference could not be disclosed without discretion. Why did he not understand that this same preference would be even more indiscreet if it burst forth suddenly in a posthumous and solemn act? Why was it not evident to him that he could not favour the second of the children without exposing their mother's reputation to suspicion?"

"ಇದು ವಾಸ್ತವಿಕ ಜೀವನವನ್ನು ಶುದ್ಧಾಂಗವಾಗಿ ಕುರಿತ ಕಾದಂಬರಿ ಅಲ್ಲ. ಇದರ ಕರ್ತೃ ಇದನ್ನು ಚೆನ್ನಾಗಿ ಬಲ್ಲರು. ತಮ್ಮ ರಚನೆಯ ಸ್ವರೂಪವನ್ನು ಅವರು ಮನವರಿತಿದಾರೆ. ಈ ಮೊದಲು ಅನೇಕ ಸಲ ಮಾಡಿರುವಂತೆ ಈ ಸಲವೂ ಇವರು ಒಂದು ಊಹಾ ಸ್ಥಾನದಿಂದ ಕಥೆಯನ್ನು ಮೊದಲು ಮಾಡಿದಾರೆ. ಇಂತಹ ಒಂದು ಸಂದರ್ಭದಲ್ಲಿ ಇಂತಹ ಒಂದು ಸಂಗತಿ ನಡೆದರೆ ಅದರ ಫಲಿತಾಂಶ ಹೇಗೆ ಎಂದು ಪ್ರಶ್ನೆ ಹಾಕಿಕೊಂಡಿದಾರೆ. ಪಿಯರ್ ಮತ್ತು ಜೀನ್ ಎಂಬ ಕಥೆಯ ಆರಂಭದ ಈ ಊಹಾಸ್ಥಾನ ತೀರಾ ಅಪೂರ್ವವಾದದು. ಏನಿಲ್ಲೆಂದರೂ ಬಹು ವಿಚಿತ್ರವಾದದ್ದು. ಈ ಕಾರಣದಿಂದ ಅದರ ಪರಿಣಾಮವೇನೆಂಬುದನ್ನು ಜೀವನ ಪರಿಚಯದಿಂದ ನಿರ್ಧರಿಸುವುದು ಹತ್ತಿರ ಹತ್ತಿರ ಅಸಾಧ್ಯ. ಅದನ್ನು ತಿಳಿಯುವುದಕ್ಕೆ ತರ್ಕವನ್ನು

ಅವಲಂಬಿಸಬೇಕು; ಊಹೆಯಿಂದ ಮುಂದುವರಿಯಬೇಕು. ಲೇಖಕರು ಇದನ್ನೇ ಮಾಡಿದಾರೆ. ಮೊಪಾಸಾಂ ಮಹನೀಯರು ಸೈತಾನನಂತೆ ಉದ್ದಾಮ ತಾರ್ಕಿಕರು..ಕಥೆಗಾರರು ತಮ್ಮ ಕಥೆಯನ್ನು ಆರಂಭಿಸಲು ವರಿಸಿರುವ ಈ ಪರಿಸ್ಥಿತಿ—ಪರಿಸ್ಥಿತಿ ಏಕೆ, ಊಹಾಸ್ಥಾನ ಎನ್ನುವುದರಲ್ಲಿದ್ದೆ—ಈ ಸ್ಥಿತಿ ವಿಸ್ಮಯಕರವಾದದ್ದು ಎಂಬ ನನ್ನ ಅಭಿಪ್ರಾಯ ಸರಿ, ಅಲ್ಲವೇ? ಅಧಿಕಾರಿ ತನ್ನ ಜೀವಮಾನಕಾಲದಲ್ಲಿ ತನ್ನ ಗೆಳತಿಯ ಇಬ್ಬರು ಮಕ್ಕಳಿಗೂ ಏಕ ರೀತಿ ಪ್ರೇಮವನ್ನು ತೋರಿದ್ದನು. ತನ್ನ ಮಗನ ಮೇಲೆ ಅವನಿಗೆ ಹೆಚ್ಚು ಪ್ರೀತಿ ಇತ್ತು ಎನ್ನುವುದು ತೀರಾ ಸಹಜ. ಆದರೆ ಆ ಹೆಚ್ಚಿನ ಪ್ರೇಮ ಪ್ರಕಟನೆಗೆ ತಕ್ಕುದಲ್ಲ. ಅಂಥ ಪ್ರಕಟನೆಯಿಂದ ಒಂದು ಗುಟ್ಟು ಹೊರಬೀಳುತಿತ್ತು. ಇದನ್ನು ತಿಳಿದ ಈ ಮಹನೀಯನು ಸಾಯುವ ಹೊತ್ತು ತಾನು ಬರೆದ ಆ ಮರಣಶಾಸನವನ್ನು ಬರೆದು ತನ್ನ ಪುತ್ರಪ್ರೇಮವನ್ನು ಪ್ರಕಟಿಸುವುದು ಚದುರಲ್ಲೆಂದು ತಿಳಿಯದೆ ಹೋದದ್ದು ಹೇಗೆ? ಈ ಹೆಂಗಸಿನ ಇಬ್ಬರು ಮಕ್ಕಳಲ್ಲಿ ಎರಡನೆಯವನ ವಿಷಯದಲ್ಲಿ ಈ ಪ್ರೇಮವನ್ನು ತೋರಿದರೆ ಆ ತಾಯಿಯಾದವಳ ನಡತೆ ಶಂಕೆಗೆ ಗುರಿಯಾಗುವುದೆಂದು ಅವನಿಗೆ ಏಕೆ ತೋರಲಿಲ್ಲ?''

ಆ್ಯನಟೋಲ್ ಫ್ರಾನ್ಸ್‌ರವರು ಫ್ರಾನ್ಸ್‌ದೇಶದ ಜೀವನವನ್ನು ಬಹಳ ಚೆನ್ನಾಗಿ ತಿಳಿದಿದ್ದರು. ಅವರ ತಿಳಿವು ಮೊಪಾಸಾಂ ಅವರ ತಿಳಿವಿಗಿಂತ ಕಡಮೆಯದಲ್ಲ. ಆದರೂ ಅವರಿಗೆ ಈ ಕಥೆಯ ಸಂದರ್ಭ ಫ್ರಾನ್ಸ್ ಜನದ ಜೀವನದಿಂದ ಬಂದದ್ದು ಎಂದು ನಂಬಿಕೆ ಹುಟ್ಟಲಿಲ್ಲ. ಫ್ರಾನ್ಸ್ ದೇಶದಲ್ಲಿ ಸ್ತ್ರೀ ಪುರುಷರ ಸಂಬಂಧವನ್ನು ಕುರಿತ ಭಾವನೆ ನಮ್ಮ ರೀತಿಯಿಂದ ಬಹುದೂರ ಮುಂದರಿದಿದೆ. ಒಳಿತಕ್ಕಾಗಿಯೋ ಕೆಟ್ಟದಕ್ಕಾಗಿಯೋ; ಅದು ನಮಗೆ ಬೇಡದ ವಿಷಯ. ಆದರೆ ಹೆಂಗಸಿನ ನಡತೆ ಸರಿಯಲ್ಲ ಎಂಬ ಮಾತು ನಮ್ಮಲ್ಲಿ ಉಂಟುಮಾಡುವಷ್ಟು ಭೀಕರ ಪರಿಣಾಮವನ್ನು ಅಲ್ಲಿ ಉಂಟುಮಾಡುವುದಿಲ್ಲ. ಇಂಥದರಲ್ಲಿ ಅಲ್ಲಿಯೇ ಅಸಂಭವವೆಂದು ತೋರಿದ ಈ ವಿಲ್ ಸಂಗತಿಯನ್ನು ನಾವು ಕನ್ನಡದಲ್ಲಿ, ಕನ್ನಡ ದೇಶದಲ್ಲಿ, ಸಂಭವನೀಯ ಎಂದು ಹೇಳಬಹುದೇ? ಗೆಳೆಯನಾದವನು ಅಲ್ಲಿಯೇ ಇಷ್ಟು ಯೋಚನೆಮಾಡಬೇಕಾದ ಸಂದರ್ಭದಲ್ಲಿ

ಇಲ್ಲಿ ನಮ್ಮ ಮಾಧವರಾಯ ಹೀಗೆ ದುಡುಕಿದನೆಂಬ ಮಾತು ಒಪ್ಪ ಬಹುದಾದ ಮಾತೇ?

೫

ಕನ್ನಡದ ಕತೆಯನ್ನು ವಿಮರ್ಶಿಸಿರುವ ಲೇಖಕರ ಮಿತ್ರರು ಕಥೆಯ ಸಾರವನ್ನು ಕೊಟ್ಟು ಹೀಗೆಂದು ಹೇಳಿದ್ದಾರೆ: "ಚಿಕ್ಕದಾದ ಚೊಕ್ಕ ಕಥೆ ....ಲೇಖಕರು ಸಮಯ ಸನ್ನಿವೇಶಗಳಿಗಿಂತ ಮಾನವ ಮನಸ್ಸತ್ವಕ್ಕೆ ಹೆಚ್ಚು ಗಮನಕೊಟ್ಟಿದಾರೆ. ಲಲಿತಮ್ಮನವರು ತಾವು ಜಾರಿದ ಕುಕ್ಕು ಮುಳ್ಳು ಕುಟುಕುತ್ತಿದ್ದಾಗ ಅವರಿಗಾದ ಆ ವೇದನೆ, ಅದನ್ನು ಮರೆಯಲು ಅವರುಮಾಡಿದ ಆ ಮಹಾಪ್ರಯತ್ನ, ಕುರೂಪಿಗೆ ಸುರೂಪಿ ಒಬ್ಬಳನ್ನು ಕಟ್ಟಿದರಾಗುವ ಅನರ್ಥ, ತಾಯ್ತನದ ಕರುಳಿನ ಮೂಕರೋದನ, ಮುಂತಾದ ಸಂಭವಗಳು ಕಲ್ಲಿನಲ್ಲಿ ನೀರು ತರಿಸುವಂತಹವು. ಶ್ರೀ.... ರವರ ಮೊದಲನೆ ಕಾದಂಬರಿ ಇದು ಆದರೂ ಪಳಗಿದ ಕೈಯಿಂದ ಬಂದಂತಿದೆ.......ರು ಇನ್ನೂ ಇಂತಹ ಕಾದಂಬರಿಗಳನ್ನು ಬರೆಯ ಲೆಂದು ಆಶಿಸುತ್ತೇವೆ." ಹೀಗೆ ಹೇಳಿ ಇವರು ತಮ್ಮ ವಿಮರ್ಶೆಯನ್ನು ಮುಗಿಸಿದಾರೆ.

ಈ ನಮ್ಮ ವಿಮರ್ಶಕರಿಗೆ ಈ ಕಥೆ ಪರಭಾಷೆಯಿಂದ ಸಂಗ್ರಹಿಸಿದ್ದು ಎನ್ನುವುದು ತಿಳಿಯದು. ಇದನ್ನು ವಿಮರ್ಶಕರಲ್ಲಿ ಒಂದು ತಪ್ಪು ಎಂದು ನಾವು ಹೇಳಲಾಗದು. ಲೇಖಕರಾದವರು ಎಲ್ಲೆಲ್ಲಿಂದ ಕಥೆಯ ತಡಿಕೆ ಯನ್ನು ಸಂಗ್ರಹಿಸಬಹುದೋ ಆ ಎಲ್ಲ ಸ್ಥಳಗಳ ಪರಿಚಯವೂ, ನೆನವೂ ಎಲ್ಲ ವಿಮರ್ಶಕರಿಗೂ ಎಲ್ಲ ವೇಳೆಯೂ ಇರುವುದು ಸಾಧ್ಯವಲ್ಲ. ಆದರೆ ಕನ್ನಡ ಜೀವನವನ್ನು ಬಲ್ಲ ವಿಮರ್ಶಕರು ಇಂತಹ ಕಥೆಯನ್ನು ಓದಿದರೆ ಇದೇನು ಸಾಧ್ಯವೇ ಎಂದು ಪ್ರಶ್ನೆಮಾಡಬೇಕು ಎಂದು ನನಗೆ ತೋರುತ್ತದೆ. ಮಾಪಾಸಾಂ ಅವರ ವಿಷಯವಾಗಿ ಆ್ಯನಟೋಲ್ ಫ್ರಾನ್ಸ್‌ರು ಬರೆದಷ್ಟು ತಿಳಿವಿಂದ ನಯದಿಂದ ಕಥೆಯ ಸಂದರ್ಭ ಬರಿಯ ಊಹೆಯದು ಎಂದು ಹೇಳದಿದ್ದರೆ ಬೇಡ. ಸ್ವಲ್ಪ ಸಂದೇಹ, ಸ್ವಲ ಪರಿಶೀಲನೆ, ಇಂಥ ಕಥೆಯ ವಿಮರ್ಶೆಯಲ್ಲಿ ಕಾಣಲೇಬೇಕು. ನಮ್ಮ ವಿಮರ್ಶಕರಲ್ಲಿ ಇದು ಕಂಡಿಲ್ಲ.

ವಿಮರ್ಶಕರು ಲೇಖಕರ ಹತ್ತಿರದ ಗೆಳೆಯರಲ್ಲೊಬ್ಬರು. ಲೇಖಕರು ಕಥೆಯ ಸಂಗತಿಯನ್ನು ಈ ಗೆಳೆಯರೊಂದಿಗೆ ಪ್ರಸ್ತಾಪಿಸಿದ್ದರೂ ಆಶ್ಚರ್ಯವಿಲ್ಲ. ಹೀಗಿದ್ದೂ ಲೇಖಕರು ತಾವು ಈ ಕಥೆಯನ್ನು ಬೇರೆಯ ಕಡೆಯಿಂದ ಸಂಗ್ರಹಿಸಿರುವ ವಿಷಯ ಗೆಳೆಯರಿಗೆ ಹೊಳೆಯದಂತೆ ನಡೆದುಕೊಂಡಿದಾರೆ. ಕಥೆಯ ವಸ್ತುವನ್ನು ಸಂಗ್ರಹಿಸಿದ ಲೇಖಕರು ಯಾವುದೇ ಕಾರಣದಿಂದ ಅದನ್ನು ಲೋಕಕ್ಕೆಲ್ಲಾ ಹೇಳದಿದ್ದರೂ ಗೆಳೆಯರಿಗೂ ತಿಳಿಸದೆ ಮರ್ಮವನ್ನು ಪಾಲಿಸುವುದು ತೀರಾ ತಪ್ಪು ಎಂದು ಹೇಳಬೇಕು. ಮಿಕ್ಕ ಮಾತು ಹಾಗಿರಲಿ. ಇಂತಹ ಲೇಖಕನು ವಿಮರ್ಶೆ ಮಾಡ ಹೊರಟ ತನ್ನ ಗೆಳೆಯನಿಗೆ ಅಡ್ಡ ಕಾಲಿಟ್ಟು ಅವನನ್ನು ಉರುಳಿಸಿದಂತಾಯಿತು. ಇದು ಸಾಹಿತ್ಯವನ್ನು ಕುರಿತು ಮಾತ್ರ ತಪ್ಪಲ್ಲ. ಗೆಳೆತನವನ್ನು ಕುರಿತೂ ತಪ್ಪು.

೬

ಹಿಂದಿನ ವರ್ಷದ ಚರ್ಚೆಯ ಸಂದರ್ಭದಲ್ಲಿ ನಾನು ನಮ್ಮಲ್ಲಿ ಯಾರೇ ಆಗಲಿ, ಯಾವ ರೀತಿಯ ಕೃತಿಯನ್ನು ಕುರಿತೇ ಆಗಲಿ, ಈ ಸಾಹಿತ್ಯ ಬೇಡ ಆ ಸಾಹಿತ್ಯಬೇಡ ಎನ್ನುವುದು ಬೇಡ ಎಂಬ ಒಂದು ಸೂತ್ರವನ್ನು ಸೂಚಿಸಿದೆನು. ಆ ಸೂತ್ರಕ್ಕೆ ವಿರೋಧವಾಗಿ ಎಂಬಂತೆ ತೋರುವ ಒಂದು ಮಾತನ್ನು ಈಗ ಹೇಳಬಯಸುತ್ತೇನೆ. ನಮ್ಮ ಜೀವನಕ್ಕೆ ಹೊಂದುತ್ತದೆಯೆ ಇಲ್ಲವೆ ಎಂಬುದನ್ನು ನೋಡದೆ ಪಾಶ್ಚಾತ್ಯ ಸಾಹಿತ್ಯದ ಸನ್ನಿವೇಶಗಳನ್ನು ಸಂಗ್ರಹಿಸಿ ಕನ್ನಡದ ಬಾಳು ಎಂಬಂತೆ ಚಿತ್ರಿಸುವ ಇಂತಹ ಸಾಹಿತ್ಯ ನಮಗೆ ಒಳ್ಳೆಯದನ್ನು ಮಾಡಲಾರದು. ನಮ್ಮ ಮಿತ್ರರು ಇಂತಹ ಕೃತಿಗಳನ್ನು ರಚಿಸದಿದ್ದರೆ ಚೆನ್ನವೆಂದು ನಾನು ಸೂಚಿಸುತ್ತೇನೆ. ಹಾಗೂ ತೆಗೆದುಕೊಳ್ಳುವುದಾದರೆ ಅಂತಹ ಕೃತಿ ಸ್ವತಂತ್ರನೆಂಬ ಭ್ರಮೆಯನ್ನು ಉಂಟುಮಾಡದೆ ಮೂಲವನ್ನು ಒಪ್ಪಿಕೊಳ್ಳುವುದು ತೀರಾ ಆವಶ್ಯಕ. ಆಗ್ಯೆ ಓದುವವರು ಅಸಂಭವನೀಯವೆಂದು ಕಂಡ ಸಂಗತಿಯನ್ನು ಮೂಲದ ಪಾಲಿಗೆ ಹಾಕುವುದು ಸಾಧ್ಯವಾಗುತ್ತದೆ. ಮತ್ತೊಂದು ದೃಷ್ಟಿಯಿಂದಲೂ ಈ ಸ್ಪಷ್ಟೀಕರಣ ಆವಶ್ಯಕ. ಕಥೆ ಫ್ರೆಂಚ್ ಕಥೆಯ ಭಾಷಾಂತರವೆಂದು ತಿಳಿಯದವರು ಅದು ಕನ್ನಡ

ಸಾಹಿತ್ಯದ ಒಂದು ನಾಯಕರತ್ನ ಎಂದು ಅದನ್ನು ಇಂಗ್ಲೀಷಿಗೋ ಫ್ರೆಂಚಿಗೋ ಭಾಷಾಂತರಮಾಡಿದರೆ ಕನ್ನಡಿಗರ ಬಂಡವಾಳ ಇಷ್ಟೆಯೋ ಎಂದು ಹೊರಗಿನ ಜನ ಬೆರಗಾದಾರು. ಲೇಖಕನ ಅನಾರ್ಜವ ನಾಡಿಗೆ ನುಡಿಗೆ ಸೋಕಿದರೆ ಕಷ್ಟ. ತಮಿಳಿನ ಬಹು ಉತ್ತಮವಾದುದೆಂಬ ಒಂದು ಕಥೆಯ ವಿಷಯದಲ್ಲಿ ಅಮೇರಿಕಾದಲ್ಲಿ ಹೀಗೆ ಆಯಿತಂತೆ. ಕನ್ನಡಕ್ಕೆ ಹೀಗಾಗದಂತೆ ನಾವೆಲ್ಲ ನೋಡಿಕೊಳ್ಳಬೇಕು.

ಸಾಹಿತ್ಯ ಸತ್ಯದಿಂದ, ಆರ್ಜವದಿಂದ, ಮೂಡಬೇಕು; ಓದುವವರಲ್ಲಿ ಸತ್ಯವನ್ನು, ಆರ್ಜವವನ್ನು ಮೂಡಿಸಬೇಕು. ಇಂತಹ ಸಾಹಿತ್ಯ ನಮಗೆ ಬೇಕಾದ ಸಾಹಿತ್ಯ. ಇಂತಹದಲ್ಲದ ಎಂಥ ಸೋಗಿನ ಸಾಹಿತ್ಯವೂ ಕನ್ನಡಕ್ಕೆ ಎಂದಿಗೂ ಬೇಡ.

"ಜೀವನ"
ಜುಲೈ ೧೯೪೫

# ಜೀವನವನ್ನು ಕುರಿತ ಸಾಹಿತ್ಯ

ಈಚೆಗೆ ನಮ್ಮಲ್ಲಿ ಸಾಹಿತ್ಯವನ್ನು ಕುರಿತ ಚರ್ಚೆಗಳಲ್ಲಿ ಸಾಹಿತ್ಯ ಜೀವನಕ್ಕೆ ಸಂಬಂಧಿಸಿರಬೇಕು, ಜೀವನದಿಂದ ಬಂದಿರಬೇಕು, ಎಂಬ ಮಾತು ಕೇಳಬರುತ್ತದೆ. ವಿಚಾರಮಾಡಿನೋಡಿದರೆ ಎಲ್ಲ ಸಾಹಿತ್ಯವೂ ಜೀವನದಿಂದಲೇ ಬರಬೇಕು. ಆದ್ದರಿಂದ ಅದು ಜೀವನಕ್ಕೆ ಸಂಬಂಧಿಸಿಯೇ ಇರುತ್ತದೆ; ಸಂಬಂಧಿಸದೆ ಇರುವುದು ಸಾಧ್ಯವಲ್ಲ. ಅದರ ನಿರ್ಮಾಪಕ ಒಂದು ದೇಶ, ಒಂದು ಕಾಲ, ಒಂದು ಸಂದರ್ಭದಲ್ಲಿ ಬಾಳುತ್ತಿರುವ ವ್ಯಕ್ತಿ. ಅವನ ಜೀವನದ ಆವರಣವನ್ನು, ಅವನ ಮನೋಧರ್ಮವನ್ನು, ಅನುಸರಿಸಿ ಅವನಿಗೆ ಯಾವುದೋ ಅನುಭವವುಂಟಾಗಿ ಅವನಲ್ಲಿ ಸಾಹಿತ್ಯರಚನೆಯ 'ಪ್ರವೃತ್ತಿ ಉದಿಸುತ್ತದೆ. ಅವನ ಕೃತಿ ಅವನ ಜೀವನದಿಂದ ಹುಟ್ಟಿದ್ದು; ಅದಕ್ಕೆ ಸಂಬಂಧಿಸಿದ್ದು.

ಆದರೆ ಕೆಲವು ವೇಳೆ ಈ ಸಾಹಿತ್ಯ ನಿರ್ಮಾಪಕ ತನ್ನ ಮನೋಧರ್ಮದ ಫಲವಾಗಿ ತನ್ನ ಬಾಳ ಆವರಣದ ಫಲವಾಗಿ ತನಗೆ ಮತ್ತು ತನ್ನಂತಹ ವಿಶಿಷ್ಟರೀತಿಯ ಜನರಿಗೆ ಒಪ್ಪಿಗೆಯಾಗುವ ಕೃತಿಯನ್ನು ನಿರ್ಮಿಸಬಹುದು. ಅದು ಅನುಭವದಿಂದ ಪ್ರಚೋದಿತವಾಗದೆ ವಿನೋದದ, ವಿಹಾರದ, ಉಲ್ಲಾಸದ, ಬಯಕೆಯಿಂದ ಪ್ರೇರಿತವಾಗಿರಬಹುದು. ಇಂತಹ ಸಂದರ್ಭದಲ್ಲಿ ಅವನು ಕುರಿತ ವಿಶಿಷ್ಟರೀತಿಯವರಲ್ಲದ ಬಹು ಸಂಖ್ಯೆಯ ಜನ ಕೃತಿಯ ಭಾವವನ್ನು ಗ್ರಹಿಸದೆ ಹೋಗಬಹುದು; ಗ್ರಹಿಸಿದರೂ ಒಪ್ಪದೆ ಹೋಗಬಹುದು; ಒಪ್ಪಿದರೂ ಇದು ಲೋಕ ಕಲ್ಯಾಣಕ್ಕೆ ಸಾಧಕ ಅಲ್ಲ ಎನ್ನಬಹುದು. ಹೀಗೆನ್ನುವವರನ್ನು ಕುರಿತು ಅಂತಹ ಕೃತಿ ವ್ಯರ್ಥವಾಗುತ್ತದೆ.

ಈ ಅರ್ಥದಲ್ಲಿಯೇ ಕಾವ್ಯಾನುಭೂತಿಗೆ ಸಹೃದಯತೆಬೇಕೆನ್ನುವುದು. ಕೃತಿಕಾರನ ಮನೋಧರ್ಮವೂ ಓದುವವನ ಮನೋಧರ್ಮವೂ ಹೊಂದಿದಾಗ ಅವರ ಹೃದಯಗಳು ಸ–ಮಾನ ಆಗುತ್ತವೆ. ಆಗಲೇ ಕೃತಿ ಓದುವವನಿಗೆ ರುಚಿಸುವುದು. ಹಾಗೆ ರುಚಿಸಿಯೇ ಅದರ ಸೃಷ್ಟಿ ಸಾರ್ಥಕವಾಗುವುದು.

ಯಾವ ಕೃತಿಯನ್ನು ತೆಗೆದುಕೊಂಡರೂ ಅದಕ್ಕೆ ಸಹೃದಯರೂ ಇರುತ್ತಾರೆ; ಸಹೃದಯರಲ್ಲದವರೂ ಇರುತ್ತಾರೆ. ಕೃತಿಯ ಯೋಗ್ಯತೆ ಕಡಮೆಯದಾಗಿ ಓದುವವನ ಯೋಗ್ಯತೆ ಹೆಚ್ಚಿನದಾಗಿ ಕಾವ್ಯ ರುಚಿಸದೆ ಹೋಗುವಂತೆಯೇ ಕೃತಿಯ ಯೋಗ್ಯತೆ ಹೆಚ್ಚಿನದಾಗಿ ಓದುವವನ ಯೋಗ್ಯತೆ ಕಡಮೆಯದಾಗಿ ಕೃತಿ ಅವನಿಗೆ ರುಚಿಸದೆ ಇರಬಹುದು. ಅಥವಾ ಇಬ್ಬರ ಯೋಗ್ಯತೆಯೂ ಹೆಚ್ಚಿನದೇ ಆಗಿದ್ದರೂ ಈ ಕಾವ್ಯದಷ್ಟಕ್ಕೆ ಓದುವವನು ಸಹೃದಯನಾಗದ್ದರಿಂದ ಅದು ಅವನಿಗೆ ರುಚಿಸದೆ ಇರಬಹುದು.

ಹೀಗೆ ರುಚಿಸದ ಕಾವ್ಯವನ್ನು ಕುರಿತು ಸಹೃದಯನಲ್ಲದ ಇಂತಹ ಓದುಗನು ಇದು ಜೀವನಕ್ಕೆ ಸಂಬಂಧಿಸುವುದಿಲ್ಲ ಎಂದು ಹೇಳುತ್ತಾನೆ. ಹೀಗೆಂದರೆ ಕೃತಿ ಇವನು ಅರಿತ ಜೀವನಕ್ಕೆ ಸಂಬಂಧಿಸಿಲ್ಲ ಎಂದು ಅರ್ಥ. ಇವನು ಕೃತಿಯಿಂದ ಏನನ್ನೋ ನಿರೀಕ್ಷಿಸುತ್ತಾನೆ, ಆ ನಿರೀಕ್ಷೆ ಕೈಗೂಡ ಲಿಲ್ಲ. ಆದರ ಅತೃಪ್ತಿಯನ್ನು ಅವನು ಈ ಟೀಕೆಯಿಂದ ಹೊರಗೆಡಹು ತ್ತಾನೆ. ಆದರೆ ಕೃತಿಕಾರನ ನ್ಯಾಯವಾದ ಕೃತಿನಿರ್ಮಾಣ ಪ್ರವೃತ್ತಿಗೆ ಆಕಾರ ಕೊಡುವ ಕೃತಿಯೆಲ್ಲ ನಿರ್ಮಾಣಮಾತ್ರದಿಂದ ಸ್ವಲ್ಪ ಒಳಿತನ್ನು ಸಾಧಿಸಿದಂತೆಯೇ. ಆದು ಆ ಜೀವನಕ್ಕೆ ಸಬಂಧಿಸಿದೆ. ಅಲ್ಲದೆ ಅದು ಯಾರಿಗೆ ನಿಷ್ಪ್ರಯೋಜಕವೆಂದು ಕಂಡರೂ ಕೃತಿಕಾರನು ಅದನ್ನು ನಿರ್ಮಿಸುವುದೇ ಸರಿ. ಅವನಿಗೆ ಅದನ್ನು ನಿರ್ಮಿಸುವ ಸ್ವಾತಂತ್ರ್ಯ ಇರಲೇಬೇಕು. ಯಾವ ಓದುಗಾರನೂ ಕೃತಿಕಾರನಿಂದ ಈ ಸ್ವಾತಂತ್ರ್ಯ ವನ್ನು ಕಸಿಯ ನೋಡಬಾರದು.

ಹಾಗಾದರೆ ಕೃತಿಗಳಲ್ಲಿ ತಾರತಮ್ಯ ಇಲ್ಲವೆ ಎನ್ನಬಹುದು. ಈ ಪ್ರಶ್ನೆ ಅನವಶ್ಯಕ. ತಾರತಮ್ಯ ಇದ್ದೇ ಇದೆ. ಅದಕ್ಕೆ ನಾವು ಕಾರಣವನ್ನು ತಿಳಿಯಬೇಕು, ಅಷ್ಟೆ. ಯಾವಾಗ ಕೃತಿಕಾರನ ಅನುಭವ ಬಹುಜನದ ಜೀವನವನ್ನು ಕುರಿತುದಾಗಿ ಬಹುಜನದ ಮನಸ್ಸಿಗೆ ಮುಟ್ಟುವುದಾಗಿ ಕಾವ್ಯರೂಪದಿಂದ ಹೊರಹೊಮ್ಮುತ್ತದೆಯೋ ಆಗ ಅದು ಎಲ್ಲರೂ ಒಪ್ಪು ವಂತೆ ಜೀವನಕ್ಕೆ ಸಂಬಂಧಿಸಿರುವುದು ಕಾಣುತ್ತದೆ. ಹೀಗೆ ಬಹು ಸಂಖ್ಯಾತ ಜೀವರನ್ನು ಪ್ರತಿಬಿಂಬಿಸಿ ವರ್ಣಿಸಿದ್ದರಿಂದಲೇ ರಾಮಾಯಣ

ಮಹಾಭಾರತ ಗ್ರಂಥಗಳು, ಶಾಕುಂತಲ, ಗೀತಾಂಜಲಿಗಳು, ಇಡೀ ಒಂದು ಖಂಡದ ಮಹಾ ಕಾವ್ಯಗಳಾದದು; ದೇಶವಿದೇಶಗಳ ಮನವನ್ನು ಮುಟ್ಟಿದ್ದು. ಮಾನವ ಸಾಮಾನ್ಯವಾದ ಅನುಭವ ರೂಪುಗೊಂಡ ಕೃತಿಗಳೆಲ್ಲ ಈ ಕೃತಿಗಳಂತೆ ಬಹು ಜನಕ್ಕೆ ರುಚಿಸುತ್ತವೆ.

ಇಂತಹ ಕೃತಿಗಳನ್ನು ಕುರಿತೂ ಕೆಲವುವೇಳೆ ಇವು ಜೀವನಕ್ಕೆ ಸಂಬಂಧಿಸಿಲ್ಲ ಎಂಬ ಟೀಕೆ ಕೇಳುವುದುಂಟು. ಇದರ ಅರ್ಥ ಇವು ಸದ್ಯ ಕಾಲದಲ್ಲಿ ನಮಗೆ ತೀರ ಹತ್ತಿರವಾಗಿ ಬಾಧಿಸುತ್ತಿರುವ ವಿಷಯಗಳನ್ನು ಕುರಿತಿಲ್ಲ ಎನ್ನುವುದು. ಸಾಹಿತ್ಯವಾದ ಕೃತಿ ಜೀವನವನ್ನು ತಿದ್ದಬೇಕು ಎಂಬ ಭಾವ ಈ ಟೀಕೆಯಲ್ಲಿ ಅಡಗಿದೆ. ಈ ಭಾವ ಉದಾತ್ತವಾದುದು; ಸಾಹಿತ್ಯವನ್ನು ಕುರಿತು ಗೌರವವನ್ನು ಸೂಚಿಸತಕ್ಕುದು.

ಇದಕ್ಕೆ ನಾವು ಗಮನಕೊಡಲೇ ಬೇಕು. ಸಾಹಿತ್ಯ ಅಂದು ಅಂದಿನ ಜೀವನದ ಚಿಂತೆಯಲ್ಲಿ ತೇಲಬಾರದೆಂದು, ಅದು ದೇಶಕಾಲಾತೀತ ದೇಶ ಕಾಲಾಬಾಧಿತವಾದ ವಿಷಯವನ್ನು ಕುರಿತಿರಬೇಕೆಂದು, ಕೆಲವರು ಹೇಳುವುದುಂಟು. ಇಂದಿನ ಜೀವನದ ಚಿಂತೆಯೂ ದೇಶಕಾಲಗಳಿಂದ ಅತೀತ ಅಬಾಧಿತವಾದ ವಿಷಯವೂ ಬೇರೆ ಬೇರೆ ಎಂಬ ಧ್ವನಿ ಈ ಮಾತಿನಲ್ಲಿ ಕಾಣುತ್ತದೆ. ಈ ಭಾವ ಸಾಧುವಾದದಲ್ಲ. ದೇಶಕಾಲಗಳಿಂದ ಅತೀತ ಅಬಾಧಿತವಾದದು ಎನ್ನುವ ವಿಷಯ ಒಂದು ಕಾಲಕ್ಕೂ ಅನ್ವಯಿಸದ ವಿಷಯವಲ್ಲ. ಎಲ್ಲ ಕಾಲ ಎಲ್ಲ ದೇಶಕ್ಕೂ ಅನ್ವಯಿಸುವುದಾಗಿರಬೇಕು. ಇಂದಿನ ಚಿಂತೆ ನಿತ್ಯದ್ದಾಗದಿರಬಹುದು; ನಿತ್ಯವಾದದ್ದು ಇಂದಿನದೂ ಆಗಿ ಇರುತ್ತದೆ. ಇಂಥ ಸಂಗತಿಯನ್ನು ಕುರಿತದ್ದಾದರೂ ಕೃತಿಯಲ್ಲಿ ರಸಮೂಡದಿದ್ದರೆ ಅದರ ಯೋಗ್ಯತೆ ಅಷ್ಟು ಕಡಮೆಯಾಗುತ್ತದೆ. ಇದಕ್ಕೆ ಸಂದೇಹವಿಲ್ಲ. ಆದರೆ ಸಾಹಿತ್ಯಕ್ಕೆ ಈ ಎರಡು ನಿಲುವಿನಿಂದ ಬೆಲೆ ಕಟ್ಟುವಲ್ಲಿ ತೀರ ಕಣ್ತೆರೆದ ಒಂದು ಎಚ್ಚರ ಬೇಕು.

ಸಾಹಿತ್ಯ ಜೀವನವನ್ನು ತಿದ್ದಬೇಕು ಎಂಬ ಭಾವ, ಎಚ್ಚರ ತಪ್ಪಿದರೆ, ಸದ್ಯದಲ್ಲಿ ನಮಗೆ ಕಂಡಂತೆ ಜನ ಜೀವನವನ್ನು ಬಾಧಿಸುವ ಕೆಡಕೇ ಕೆಡಕು, ಅದನ್ನು ಸರಿಪಡಿಸಲು ತೊಡಗುವುದು ಒಂದೇ ಎಲ್ಲರ ಕರ್ತವ್ಯ, ಅದನ್ನು ಕೈಗೊಳ್ಳುವುದೇ ಧರ್ಮ, ಕೈಕೊಳ್ಳದಿರುವುದೇ

ಪಾತಕ, ಎಂದು ಹೇಳುವುದರಲ್ಲಿ ಪರ್ಯವಸಾನವಾಗುತ್ತದೆ. ಹೀಗೆ ಹೇಳುವ ಜನರ ದೃಷ್ಟಿಯೇ ದೃಷ್ಟಿ, ತಿಳುವಳಿಕೆಯೇ ತಿಳುವಳಿಕೆ, ಎಂಬ ಹಟ ಮೇಲ್ಗೈ ಆಗುವ ಸಂಭವ ಇದೆ. ಈ ಹಟದ ಹಿಂದೆ ಒಂದು ಸಂಕುಚಿತ ಮನೋಧರ್ಮ ಇರುತ್ತದೆ; ಬೇರೆ ತೆರದ ಮನೋಧರ್ಮ ವನ್ನು ಕುರಿತು ಅಸಹನೆ ಇರುತ್ತದೆ. ನಾವು ಈ ಸಂಕೋಚ ಅಸಹನೆ ಗಳಿಂದ ಬಿಡಿಸಿಕೊಳ್ಳುವುದು ಆವಶ್ಯಕ.

ಇಂದು ಇಲ್ಲಿ ನಮ್ಮೆದುರಿಗೆ ಕಾಣುವ ಒಂದು ಕೆಡಕಿರುವಂತೆ, ಇಂದೇ ಇನ್ನೊಂದಲ್ಲಿ, ನಮಗೆ ಕಾಣದೆ ಬೇರೊಬ್ಬರಿಗೆ ಕಾಣುತ್ತ, ಬೇರೆ ಕೆಡಕು ಇರಬಹುದು. ಸದ್ಯಕಾಲಕ್ಕೆ ಕೇಡುಮಾಡುತ್ತ ಲೋಪ ಇರುವಂತೆ ನೂರು ಕಾಲಕ್ಕೆ ಕೇಡುಮಾಡುವ ಲೋಪ ಇರಬಹುದು. ಎಲ್ಲವೂ ನಮ್ಮ ಕಣ್ಣಿಗೆ ಕಾಣುತ್ತದೆನ್ನುವಂತಿಲ್ಲ. ನಿತ್ಯವಾಗಿ ಮಾನವ ಜೀವನವನ್ನು ಬಣ್ಣಗೆಡಿಸುತ್ತಿರುವ ಅಷ್ಟೇ ನಿಜವಾದ ಕೆಡಕು, ಸ್ವಭಾವದ ಮರೆಯುದು, ನೂರಿರಬಹುದು. ಒಂದು ಕೃತಿ ನಾವರಿತ ಕೆಡಕನ್ನು ಸರಿಪಡಿಸಲು ಹೊರಡಬಹುದು. ಇನ್ನೊಂದು ನಾವರಿಯದ ಕೆಡಕುಗಳಲ್ಲಿ ಯಾವು ದನ್ನೋ ಸರಿಪಡಿಸಲು ನೆರವಾಗಬಹದು. ಮೊದಲನೆಯದು ಜೀವನಕ್ಕೆ ಸಂಬಂಧಿಸಿರುವುದು ಸ್ಪಷ್ಟವಾಗಿ ಕಾಣಬಹುದು. ಎರಡನೆಯದು ಅಷ್ಟು ಸ್ಪಷ್ಟವಾಗಿ ಜೀವನಕ್ಕೆ ಸಂಬಂಧಿಸಿದಂತೆ ಕಾಣದೆ ಇರಬಹುದು. ಆಗ ನಾವು ಮೊದಲನೆಯದು ಒಳ್ಳೆಯ ಸಾಹಿತ್ಯ, ಎರಡನೆಯದು ಅಲ್ಲ, ಎಂದು ಹೇಳಿದರೆ ತಪ್ಪಾದೀತು.

ಊರಿಗೆ ನೀರನ್ನು ಒದಗಿಸುವ ಕಾರಂಜಿ ಊರ ಒಳಗೇ ಇರಬೇಕಾದ ದಿಲ್ಲ. ಊರಿನಿಂದ ದೂರದಲ್ಲಿದ್ದು ಮರೆಯ ನಾಳದಿಂದ ಊರಿಗೆ ನೀರು ಬರಬಹುದು. ಸಂಸ್ಕೃತಿ ಹೀಗೆ ಗುಪ್ತವಾಗಿ ಜೀವನಕ್ಕೆ ಸಂಬಂಧಿಸಿರುತ್ತದೆ. ಜೀವನವನ್ನು ಪೋಷಿಸುತ್ತದೆ.

ಬಂಗಾಳದ ಬರವನ್ನು ಕುರಿತು ಕನ್ನಡ ಕವಿಗಳು ಪದ್ಯ ಬರೆಯಲಿಲ್ಲ, ರಾಮಾಯಣ, ಗಂಗಾವತರಣವನ್ನು ಕುರಿತು ಕೃತಿಗಳನ್ನು ರಚಿಸಿ ಹೊತ್ತು ಕಳೆದರು, ಎಂಬ ದೂರು ಎರಡು ವರ್ಷದ ಹಿಂದೆ ಕನ್ನಡ ಸಾಹಿತಿಗಳಲ್ಲಿ ಕೇಳಬಂದಿತು. ಆ ಆಕ್ಷೇಪಕ್ಕೆ ಇದೇ ಸಮಾಧಾನ. ಕವಿತೆ

ಬಾಳನ್ನು ಮುಟ್ಟುವುದಕ್ಕೆ ಅದರ ತಲೆಕಟ್ಟು ಇಂದು ಲೋಕದಲ್ಲಿ ನಡೆದ ಒಂದು ಸಂದರ್ಭ ಆಗಿರಬೇಕಾಗಿಲ್ಲ. ರಾಮಾಯಣವನ್ನು ಬರೆಯುತ್ತ ಇಂದು ಲೋಕವನ್ನು ಉದ್ಧರಿಸುವ ದಾರಿಯನ್ನು ತೋರಿಸಬಹುದು. ಗಂಗಾವತರಣ ಎಂಬ ಹೆಸರಿನ ಪದ್ಯದಲ್ಲಿ ಇನ್ನು ಸಾವಿರ ವರ್ಷದ ಮೇಲಾದರೂ ಮನುಜಜೀವನವನ್ನು ಶುದ್ಧಮಾಡುವ ತತ್ವ ಯಾವು ದೆಂದು ವಿವರಿಸಬಹುದು. ಜಪಾನ್ ನಗರಗಳಮೇಲೆ ಬಿದ್ದ (Atom Bomb) ಅಣು ಬಾಂಬನ್ನು ಹಳಿಯದೆ ಆ ಬಾಂಬನ್ನು ಎಸೆದ ನರಪಿಶಾಚಿ ಘಾತಕ ಮನೋಧರ್ಮವನ್ನು ಒಂದು ಕೃತಿಯಲ್ಲಿ ವರ್ಣಿಸಿ ಜನರ ಮನಸ್ಸು ಕ್ರೌರ್ಯಕ್ಕೆ ಹೇಸುವಂತೆ ಮಾಡಬಹುದು. ಇಂಥ ಎಲ್ಲ ಕೃತಿ ಒಳ್ಳೆಯ ದನ್ನು ಸಾಧಿಸುತ್ತದೆ. ಜೀವನಕ್ಕೆ ಸಂಬಂಧಿಸಿದ್ದೇ ಆಗಿರುತ್ತದೆ.

ಕುಡಿ ಒಣಗಿದಂತೆ ಕಂಡರೆ ತೋಟಗಾರ ಲತೆಯ ಬುಡಕ್ಕೆ ನೀರೆರೆಯುತ್ತಾನೆ. ಒಣಗದ ಬುಡಕ್ಕೆ ಏಕೆ, ಒಣಗುತ್ತಿರುವ ಕುಡಿಗೆ, ನೀರು ಹಾಕಬೇಕು ಎಂದು ಮನೆಯ ಮಗುವಿಗೆ ಕಾಣಬಹುದು. ಆದರೆ ತೋಟಗಾರನ ಚಿಕಿತ್ಸೆ ತಪ್ಪಲ್ಲ ಮಾತ್ರವಲ್ಲ. ಅದೇ ಸರಿಯಾದ ಚಿಕಿತ್ಸೆ.

ಉತ್ತಮ ಕೃತಿಯಲ್ಲಿ ಬಾಳನ್ನು ತಿದ್ದುವ ಶಕ್ತಿ ನೆರೆಯುವುದು ತಿದ್ದಬೇಕೆಂಬ ಉದ್ದೇಶದಿಂದಲ್ಲ. ಕರ್ತೃವಿನ ಬಾಳು ತಿದ್ದಿದ್ದಾದರೆ ಅವನ ಕೃತಿಯಲ್ಲಿ ಆ ಶಕ್ತಿ ತಾನಾಗಿ ಮೂಡುತ್ತದೆ. ಕವಿಯ ಭಾವವಿಮೋಚನ ಕ್ಕಾಗಿ ಪ್ರಕೃತವಾದ ಕೃತಿ ಸಹೃದಯನಾದ ಓದುಗಾರನ ಮನಸ್ಸನ್ನು ಅವನರಿಯದಂತೆಯೇ ತಿದ್ದಿಬಿಡುತ್ತದೆ.

ಇಷ್ಟೇ ನಿಜವಾಗಿ, ಇಂದಿನದೆಂಬ ಒಂದು ಸಂಗತಿಯನ್ನು ವಿಷಯ ವಾಗಿ ತೆಗೆದುಕೊಂಡರೂ ಕೃತಿ, ಮನುಜನೊಬ್ಬನ ಸುಖವನ್ನು ಹಿರಿದು ಮಾಡಿ, ಮನುಜಕುಲದ ಸುಖವನ್ನು ಹೇಗೆ ಸಾಧಿಸುವುದೆಂಬುದನ್ನು ಮರೆತು, ಮನುಜ ಜೀವನದ ಹೊರಭಾಗಕ್ಕೆ ಸಂಬಂಧಿಸಿ ಒಳಭಾಗಕ್ಕೆ ಸಂಬಂಧಿಸದೆ ಹೋಗಬಹುದು. ಕೃತಿಯನ್ನು ಜೀವನಕ್ಕೆ ಸಹಾಯಕ ವಾಗಿ ಮಾಡುವುದು ಕರ್ತೃವಿನ ಯೋಗ್ಯತೆ, ಅನುಭವ, ದರ್ಶನ. ಇದು ಉದಾತ್ತವಾಗಿರಬೇಕು. ಲೋಕ ಗ್ರಂಥಕರ್ತರಿಂದ ಇದನ್ನು ಬಯಸ ಬೇಕು.

ಇರುವ ಬಾಳನ್ನು ತಿದ್ದುವುದರಿಂದ ಅಲ್ಲದೆ ಸಾಹಿತ್ಯ ಬರಿದೊಂದು ಮೇಲ್ಪಂಕ್ತಿಯನ್ನು ಹಾಕಿ ಬಾಳ ಮಟ್ಟವನ್ನು ಎತ್ತರಿಸಬಹುದು. ನೇತಿ, ನೇತಿ, ನೇತಿ ಎಂದು ಬಾಳ ನೂರು ತಪ್ಪನ್ನು ನಿರ್ದೇಶಿಸುವಂತೆಯೇ ಇತಿ ಏವ ಎಂದು ಗುರಿಯನ್ನು ತೋರಿಸುವುದೂ ಉಪಕಾರವೇ. ಇಂಥ ಗುರಿ ಅನೇಕ ಸಂದರ್ಭದಲ್ಲಿ ಬರಿಯ ಒಂದು ಕನಸು ಎಂದು ಕಾಣ ಬಹುದು; ಮಾನವನಿಗೆ ಅಸಾಧ್ಯವಾದ ಒಂದು ಧ್ಯೇಯದ ಕಾಲ್ಪನಿಕ ವರ್ಣನೆ ಎನಿಸಬಹುದು. ಆದರೂ ಅದು ಸತ್ಯವಾದ ಒಂದು ದರ್ಶನದ ವ್ಯಂಜನವಾಗಿದ್ದರೆ ಜೀವನಕ್ಕೆ ಸಂಬಂಧಿಸಿದ ವಿಷಯವೇ ಸರಿ.

ಒಂದು ವೇಳೆ ಈ ಗುರಿ ಬಹು ದೂರ ಬಹು ಎತ್ತರದ್ದು ಆಗಿದ್ದು, ಒಬ್ಬ ಮಹಾಪುರುಷನಿಗೆ ಮಾತ್ರ ಗೋಚರವಾಗಿ, ಅವನಿಂದ ಒಂದು ಕೃತಿಯಲ್ಲಿ ನಿರ್ದಿಷ್ಟವಾಗಬಹುದು. ಅವನ ಅನುಭವ ಅನ್ಯಾದೃಶವಾದ ಕಾರಣದಿಂದ ಅದಕ್ಕೆ ನಿಜದಲ್ಲಿ ಸಹೃದಯರೇ ಇಲ್ಲದೆ ಹೋಗಬಹುದು. ಆದರೂ ಅದು ಜೀವನದಿಂದ ಉದಿಸಿದ್ದೇ; ಜೀವನಕ್ಕೆ ಸಂಬಂಧಿಸಿದ್ದೇ. ಮನುಜಕುಲ ಮುಂದರಿಯಲು ಆ ಸಾಹಿತ್ಯ ಸಾಧಕವೇ ಸರಿ.

ಅಸ್ತೇಯ, ಅಹಿಂಸಾ, ಬ್ರಹ್ಮಚರ್ಯ ಮುಂತಾದ ಮಂಗಲ ಸೂತ್ರಗಳನ್ನು ಇಂದು ಕಾವ್ಯ ಹೊಗಳಿ ಹಾಡಿದರೆ ಅದನ್ನು ಜೀವನಕ್ಕೆ ಸಂಬಂಧಿಸಿದೆಯೆಂದು ನಾವು ಹೇಳುವೆವೆ? ಹಿಂಸೆಯೇ, ಸ್ತೇಯವೇ, ಅಬ್ರಹ್ಮಚರ್ಯವೇ ಲೋಕದ ಬಾಳನ್ನು ಇಂದು ಮುಳುಗಿಸಿ ತೇಲಿಸು ತ್ತಿವೆ. ಈ ಧ್ಯೇಯಗಳಿಗೆ ಈ ಬಾಳುವೆಗೆ ಏನು ಸಂಬಂಧ ಎಂದು ಕೇಳಿ ದರೆ ಏನೂ ಸಂಬಂಧ ಇಲ್ಲದಿರುವುದೇ ಸಂಬಂಧ ಎನ್ನಬೇಕಾಗಿದೆ. ಆದರೂ ಸಂಬಂಧ ಇಲ್ಲವೆಂದೇ ತೋರುವ ಈ ಸ್ಥಿತಿ, ನಿಜವಾಗಿ ಇರುವ ಸಂಬಂಧ ಹರಿದು ಹೋಗಿರುವ ಸ್ಥಿತಿ. ಆದ್ದರಿಂದಲೇ ಹಿರಿಯರಾದವರು ಇಂಥ ಧ್ಯೇಯದ ಮಾತನ್ನು ಎತ್ತಿದಾಗ ಇದನ್ನು ಮಾನವ ಹೃದಯ ಗುರುತಿಸು ತ್ತದೆ, ಒಪ್ಪುತ್ತದೆ. ನಡೆಯಲಾರದಿದ್ದರೂ ನುಡಿಗೆ ಕಿವಿಗೊಡುತ್ತದೆ.

ಉಳಿದೆಲ್ಲ ನೆಲವನ್ನೂ ತಗ್ಗಿನಲ್ಲಿ ಬಿಟ್ಟು ಮುಗಿಲನ್ನು ಮುದ್ದಿಸುವ ಧವಳಗಿರಿ ಗೌರೀಶಂಕರ ಶಿಖರಗಳು ತಗ್ಗಿನ ನೆಲಕ್ಕೆ ಆದರ್ಶವೇನೂ ಅಲ್ಲ. ತಗ್ಗಿನ ನೆಲ ಆ ಮಟ್ಟಕ್ಕೆ ಏಳಲಾರದು. ಆದರೂ ಕವಿ ಅವು ಎಲ್ಲ ನೆಲದ

ಹೆಮ್ಮೆಗೆ ವಸ್ತು. ನಮ್ಮ ಕುಲ ಇಷ್ಟು ಎತ್ತರಕ್ಕೆ ಏರಿದೆ ಎಂದು ನೆಲ ನೆಲವೇ ಇವುಗಳಿಂದ ತಿಳಿಯುತ್ತದೆ. ಒಮ್ಮೆ ಮಾತ್ರ ಮುಟ್ಟಿದರೂ ಈ ಎತ್ತರ ನಮ್ಮದು. ಇದು ನಮ್ಮ ಸ್ವರೂಪದ ಔನ್ನತ್ಯದ ಸೂಚಿ.

ಮರ್ತ್ಯ ದೈವಗಳನ್ನು, ತಮ ಜ್ಯೋತಿಗಳನ್ನು, ಒಳಿತಲ್ಲದುದು ಒಳಿತಾದದ್ದನ್ನು, ಪರಸ್ಪರ ಅಂಟಿಸಿ ಗುಪ್ತವಾದ ಒಂದು ರಕ್ಷಕ ಸತ್ವ ಇದೆ. ಅದನ್ನರಿತು ಮಾನವನ ಬಾಳನ್ನು ಕಾಯಲು ಹೊರಟ ಕವಿ, ಜೀವನಕ್ಕೆ ಸಂಬಂಧಿಸಿದ ಕೃತಿಯನ್ನು, ಹಾಗೆಯೇ ಕೋಟಿ ಜೀವನಕ್ಕೆ ಶುಭವನ್ನು ತರುವ ಕೃತಿಯನ್ನು, ರಚಿಸುತ್ತಾನೆ. ಅದು ಅವನಿಗೆ, ಅವನಂತೆ ಕೆಲವರಿಗೆ, ಮಾತ್ರ ಮೆಚ್ಚಾಗಬಹುದು. ಅದರ ಕಾರಣ ಅವನ ಅರಿವು ಸಾಮಾನ್ಯರೆಲ್ಲರ ಅರಿವಿಗಿಂತ ಹೆಚ್ಚಿನದಾಗಿರತಕ್ಕದು. ಆ ಕೃತಿ ಲೋಕಕ್ಕೆ ಬೇಕು. ಅದರಿಂದ ಲೋಕ ಉಳಿಯುತ್ತದೆ.

ಬರಿಯ ವಿಲಾಸಕ್ಕಾಗಿ, ವಿನೋದಕ್ಕಾಗಿ, ವಿಹಾರಕ್ಕಾಗಿ, ಬರೆದ ಕೃತಿಯೂ ಹೀಗೆ ಕೃತಿಕಾರನಿಗೆ, ಅವನಂತೆ ಕೆಲವರಿಗೆ, ಮಾತ್ರ ರುಚಿಸ ಬಹುದೆಂದು ಈ ಮೊದಲಲ್ಲಿ ಹೇಳಿದೆ. ಎರಡು ತೆರನ ಕೃತಿಯೂ ಕೆಲವ ರಿಗೆ ಮಾತ್ರ ರುಚಿಸುವುದಾದರೂ ಈ ಎರಡು ಸಂದರ್ಭಗಳ ಮಧ್ಯೆ ದೊಡ್ಡ ಅಂತರವಿದೆ. ವಿನೋದಿ, ವಿಹಾರಿ, ವಿಲಾಸಿಯ ಕೃತಿ ಸ್ವಾರ್ಥದ ಒಂದು ಸುಖಾಭಿಲಾಷೆಯಿಂದ ಪ್ರವೃತ್ತವಾಗಿದೆ. ಅದು ಜೀವನಕ್ಕೆ ಸಂಬಂಧಿಸಿದ್ದೆ; ಒಂದು ಅಲ್ಪ ಜೀವನಕ್ಕೆ. ದುಸ್ಸಾಧ್ಯವಾದ ಧ್ಯೇಯ ವನ್ನು ಸಾಧ್ಯಮಾಡಲು ಹೊರಟ ಕೃತಿ ಸ್ವಾರ್ಥವನ್ನು ಧ್ವಂಸಮಾಡಿ ಲೋಕಕಲ್ಯಾಣವನ್ನು ಬಯಸಿದ ಬಾಳಿಂದ ಹೊಮ್ಮಿದೆ. ಅದು ಕನಸಂತೆ ಕಾಣುತ್ತದೆ, ಆದರೂ ಜೀವನಕ್ಕೆ ಸಂಬಂಧಿಸಿದೆ. ಮಹಜ್ಜೀವನಕ್ಕೆ. ಎರಡು ಸಂದರ್ಭದಲ್ಲಿಯೂ ಹೊರನೋಟಕ್ಕೆ ಕೃತಿ ಜೀವನಕ್ಕೆ ಸಂಬಂಧಿ ಸಿಲ್ಲವೆಂದು ತೋರಬಹುದು. ಮೊದಲ ಸಂದರ್ಭದಲ್ಲಿ ಈ ಭಾವನೆ ತತ್ತ್ವತಃ ನಿಜ. ಎರಡನೆಯ ಸಂದರ್ಭದಲ್ಲಿ ನಿಜವಲ್ಲ. ಬಾಳನ್ನು ಕಾಯುವ ಸತ್ಯ ಎಷ್ಟು ದೂರದ್ದಾಗಿ ಕಂಡರೂ ಜೀವನಕ್ಕೆ ಸಂಬಂಧಿಸಿದ್ದೇ. ಹೊರಗೆ ಕಾಣದ್ದರಿಂದ ಆ ಸಂಬಂಧಕ್ಕೆ ಕೊರತೆಯಿಲ್ಲ. ಅದು ಅಗ್ರಾಹ್ಯ ವಾದುದೇ ಸರಿ. ಆದರೆ ಹಾಗೆಯೇ ಅಚ್ಛೇದ್ಯವೂ ಆಗಿದೆ.

"ಜೀವನ"
ಫೆಬ್ರವರಿ ೧೯೪೬

# ಕಾವ್ಯಾಲಾಪ

"ಕಾವ್ಯಾಲಾಪಾಂಶ್ಚ ವರ್ಜಯೇತ್," ಕಾವ್ಯಾಲಾಪಗಳನ್ನು ಬಿಡತಕ್ಕದ್ದು : ಇದು ಹಿರಿಯರ ವಚನ. ಆ ವ್ಯಸನವನ್ನು ಬಿಡತಕ್ಕದ್ದು; ಈ ವ್ಯಸನವನ್ನು ಬಿಡತಕ್ಕದ್ದು; ಹಾಗೆಯೇ ಕಾವ್ಯಾಲಾಪವನ್ನೂ ಬಿಡತಕ್ಕದ್ದು. ಅದೂ ಒಂದು ವ್ಯಸನವೇ. ಅಂತೂ ಹಿರಿಯರು ಸಜ್ಜನರಿಗೆಲ್ಲ ಕಾವ್ಯಾಲಾಪವನ್ನು ಬಿಡುವುದು ಒಳ್ಳೆಯದೆಂದು ಎಚ್ಚರಿಕೆ ಹೇಳಿದರು.

ಆದರೆ ಯಾವ ಎಚ್ಚರಿಕೆಯ ಮಾತೇ ಆಗಲಿ ಹೇಳಿದವರಿಗೆ ಎಷ್ಟು ಸಮಂಜಸವೆಂದು ಕಾಣುತ್ತದೋ ಕೇಳಿದವರಿಗೆ ಅಷ್ಟು ಸಮಂಜಸವೆಂದು ಕಾಣುವುದಿಲ್ಲ. ಸಮಂಜಸವೆಂದು ಕಂಡರೂ ಅದು ನಮ್ಮ ಕಾವ್ಯಾಲಾಪಕ್ಕೆ ಅನ್ವಯಿಸುವುದಿಲ್ಲ ಎಂಬ ಒಂದು ಕಲ್ಪನೆ ನಮ್ಮ ನಮ್ಮ ವಿಷಯಕ್ಕೆ ತೀರಾ ಖಚಿತವಾಗಿರುತ್ತದೆ. ಪೂರ್ವಿಕರ ಎಚ್ಚರಿಕೆಯ ಮಾತನ್ನು ಕೇಳಿದ ಕನ್ನಡದ ಹಿರಿಯ ಕವಿಯೊಬ್ಬನು ಆ ಮಾತು ತನಗೆ ಅನ್ವಯಿಸುವುದಿಲ್ಲವೆಂದು ಭಾವಿಸಿದನು; ತನಗೆ ಸಾಧ್ಯವಾದ, ತನಗೆ ಒಳಿತೆಂದು ತೋರಿದ, ಸಾಹಿತ್ಯವನ್ನು ನಿರ್ಮಿಸಿದನು. ಅದು ಅತ್ಯುತ್ತಮ ಸಾಹಿತ್ಯವೆಂದು ಜನರ ಮೆಚ್ಚುಗೆಯನ್ನು ಪಡೆದದ್ದನ್ನು ನೋಡಿದನು; ತನ್ನ ಕಾರ್ಯ ಸಾರ್ಥಕವಾಯಿತೆಂದು ತಿಳಿದನು. ಇಂದು ನಾವು ಆ ಹಿರಿ ಕವಿಯ ಸಾಹಿತ್ಯವನ್ನು ಓದುತ್ತೇವೆ; ಅವನ ಹೆಸರನ್ನು ಹೊಗಳಿ ಹೇಳುತ್ತೇವೆ. ಕಾವ್ಯಾಲಾಪಾಂಶ್ಚ ವರ್ಜಯೇತ್? ಏಕೆ? ವರ್ಜಿಸಬೇಕಾದದಿಲ್ಲ. ಅಥವಾ ವರ್ಜಿಸಬೇಕಾದದು ಇಂಥ ಕಾವ್ಯವನ್ನಲ್ಲ. ಲೋಕಕ್ಕೆ ಇಂಥ ಕಾವ್ಯವೂ ಅದರ ಆಲಾಪವೂ ಸರ್ವ ಕಾಲಕ್ಕೂ ಬೇಕು. ಅವು ಸರ್ವ ಕಾಲಕ್ಕೂ ನಿಲ್ಲಲಿ, ಸರ್ವ ಕಾಲಕ್ಕೂ ನಡೆಯಲಿ; ಸರ್ವ ಕಾಲಕ್ಕೂ ಜನಗಳ ಬಾಳನ್ನು ಬೆಳಗಲಿ.

"ಇಂಥ ಕಾವ್ಯ; ಇಂಥ ಆಲಾಪ" ಎಂದೆವು. ಆಗಬಹುದು; ಉಳಿದದ್ದು ಕೊನೆಯಾಗಬೇಕಲ್ಲವೆ? ಆದರೆ ಈ ಉಳಿದದ್ದು ಯಾವುದು? ಕಾವ್ಯವನ್ನು ರಚಿಸುವವನೇ "ಇಂಥ ಕಾವ್ಯ" ಎಂದು ನಿರ್ಧರಿಸುವುದಾದರೆ ಲೋಕದಲ್ಲಿ ಹುಟ್ಟುವ ಎಲ್ಲ ಕಾವ್ಯವೂ ಉಳಿಯತಕ್ಕದೇ.

"ಯಾರು ಬದುಕಿ ಲೋಕಕ್ಕೆ ಪ್ರಯೋಜನವಿಲ್ಲವೋ ಅವರು ಆತ್ಮಹತ್ಯೆ ಮಾಡಿಕೊಳ್ಳಿ." ಹೀಗೆಂದು ಒಂದು ಆಜ್ಞೆ ಹೊರಟರೆ ಎಷ್ಟು ಜನ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ? ನಾನು ಇದ್ದು ಲೋಕಕ್ಕೆ ಪ್ರಯೋಜನ ವಿಲ್ಲ ಎಂದು ಯಾರೂ ಹೇಳುವುದಿಲ್ಲ. ಕೊನೆಯ ಮಾತಿಗೆ ಬಂದರೆ, ನಾನು ಇರುವುದರಿಂದ ನನಗೆ ಪ್ರಯೋಜನವಿದೆ, ನಾನು ಸಾಯಲಾರೆ ಎಂದೇ ಮನುಷ್ಯ ಹೇಳುತ್ತಾನೆ. ಬಾಳು ಸಾರ್ಥಕವಾಗುವುದಕ್ಕೆ ಬೇರೆ ಉದ್ದೇಶ ಬೇಕಿಲ್ಲ. ಬಾಳುವೆಯ ಉದ್ದೇಶ ಬಾಳುವುದಷ್ಟೇ. ಕಾವ್ಯವೂ ಅದರ ಆಲಾಪವೂ ಅಷ್ಟೆ. ಯಾವ ಕವಿಯೇ ಆಗಲಿ, ಯಾವ ಕಾವ್ಯಾಲಾಪಿಯೇ ಆಗಲಿ, ತನ್ನ ಕೃತಿ, ತನ್ನ ಆಲಾಪ ನಿಂತರೂ ನಷ್ಟವಿಲ್ಲ ಎಂದು ಹೇಳಲಾರನು. ಎಂಥ ನಿಕೃಷ್ಟ ಕಾವ್ಯವೂ, ಅದರ ಕವಿಯ ಜೀವನ ಸಾರ್ಥಕವಾಗಲು ಒಂದು ಸಾಧನ. ಅದು ಬಾರದೆ ಲೋಕದ ಜೀವನ ಸಂಪೂರ್ಣವಾಗಲಾರದು. ಅದರ ಆಲಾಪವಿಲ್ಲದೆ ಲೋಕದ ಜೀವನ ತುಂಬಲಾರದು. ಅದನ್ನು ವರ್ಜಿಸುವುದು ಒಳ್ಳೆಯದೂ ಅಲ್ಲ; ಸಾಧ್ಯವೂ ಅಲ್ಲ.

ಹಾಗಾದರೆ ಹಿರಿಯರ ವಚನ ಏನಾಯಿತು? ನನಗೆ ತೋರುತ್ತದೆ. ಅವರು ಹೇಳಿದ್ದು 'ಕಾವ್ಯಾಲಾಪಾನ್ನ ವರ್ಜಯೇತ್,' ಎಂದು. **ನ** ತಪ್ಪಿ ನಮಗೆ **ಚ** ಇಳಿದುಬಂದಿದೆ. ಕಾವ್ಯಾಲಾಪವನ್ನು ಬಿಟ್ಟೀಯೆ, ಜೋಕೆ, ಎನ್ನುವುದೇ ಹಿರಿಯರ ಎಚ್ಚರಿಕೆಯ ಮಾತು. ಲೋಕದ ಉದ್ಯಾನದಲ್ಲಿ ಎಲ್ಲ ಹುಲ್ಲೆಸಳಿಗೂ ಅವಕಾಶವಿದೆ. ಇದರಲ್ಲಿ ಯಾವುದು ಇಲ್ಲವಾದರೂ ಜೀವನ ಅಸಮಗ್ರವಾಗುತ್ತದೆ. ಹಾಡಬೇಕೆಂದು ತೋರಿದವರು ಯಾರೂ ಹಾಡದೆ ಇರಬೇಡಿ, ಬೇರೆ ಯಾವುದನ್ನು ಬೇಕಾದರೂ ವರ್ಜಯೇತ್; ಕಾವ್ಯಾಲಾಪಾನ್ ನ ವರ್ಜಯೇತ್.

೨

ನಾನು ಈಗ ಈ ಮಾತು ಹೇಳುವುದಕ್ಕೆ ನನ್ನ ಪ್ರಿಯ ಮಿತ್ರರಾದ ಕವಿಮಿತ್ರರ "ಕಾವ್ಯಾಲಾಪ" ಕಾರಣ. ಕವಿಮಿತ್ರರು ತರುಣರು. ತರುಣಜನಸಹಜವಾದ ಉತ್ಸಾಹದಿಂದ ಪ್ರೇರಿತರಾಗಿ ಕಾವ್ಯಸೇವೆ

ಮಾಡುತ್ತಿರುವ ಧೀಮಂತರು. "ಕಾವ್ಯ ಬೇಡ, ಇಂಥ ಕಾವ್ಯ ಬೇಡ, ಬೇರೆ ಅಂಥ ಕಾವ್ಯ ಬೇಡ," ಎನ್ನುವ ಪ್ರಾಜ್ಞಮಾನಿಗಳು ಎಲ್ಲ ಕಾಲದಲ್ಲೂ ಉಂಟು. ಹಿಂದೆ ಇಂಥ ಮಾತನ್ನು ಹೇಳಿದವರು ಯಾರೋ ನಾವು ನಿಷ್ಕರ್ಷೆಯಾಗಿ ಊಹಿಸಿಕೊಳ್ಳುವಂತಿಲ್ಲ. ಅಂದು ಲೋಕವನ್ನು ಹಳಿದವರು ನಿಜವಾದ ಜ್ಞಾನಪರಿಪಾಕದಿಂದ ನಿರೀಹಾವಾದಿಗಳಾಗಿದ್ದರೋ ಬಾಳಲಾರದೆ ಅಜೀರ್ಣದ ಫಲವಾಗಿ ಬಾಳು ಕೆಟ್ಟದೆನ್ನುತಿದ್ದರೋ ನಾವೆಂತು ಬಲ್ಲೆವು? ಇಂದು ಹೀಗೆ ಹೇಳುವವರು ಯಾರು ಎಂದು ತಿಳಿಯಲು ಸಾಧ್ಯ. ಒಬ್ಬ ದೊಡ್ಡ ಮನುಷ್ಯರು ಹೇಳುತ್ತಾರೆ: "ಕಾವ್ಯ ಎಂದರೆ ಬರಿಯ ಪದ್ಯ ಮಾತ್ರವಲ್ಲ. ಗದ್ಯವೂ ಕಾವ್ಯವಾಗಿರಬಹುದು." ಇವರು ಏಕೆ ಹೀಗೆ ಹೇಳಬೇಕಾಗಿ ಬಂದಿತು? ಮತ್ತೊಬ್ಬರು ಹೇಳಿದ್ದರು: "ಬರಿಯ ವಚನಗ್ರಂಥವನ್ನು ಬರೆದವರು ಕವಿ ಹೇಗೆ?" ಈ ಮತ್ತೊಬ್ಬರ ತಪ್ಪು ತಿಳುವಳಿಕೆಯನ್ನು ತಿದ್ದುವುದಕ್ಕಾಗಿ ಆ ಮೊದಲನೆಯವರು ತಮ್ಮ ಮಾತನ್ನು ಹೇಳಬೇಕಾಯಿತು. ಮತ್ತೊಬ್ಬರು ಹೇಳಿದರು: "ಈ ರಾಮಾಯಣ ರಾಮಾಯಣ ಎನ್ನುವವರ ರಾಮಾಯಣ ಸಾಕಪ್ಪಾ ಸಾಕು. ಎಲ್ಲಿ ಹೋದರೂ ರಾಮ ಸೀತೆ!" ಇವರು ಏಕೆ ಹೀಗೆಂದರು? ಇವರು ಹೊಸ ಕಾಲದ ಉತ್ಸಾಹಿಗಳು: ಅದಕ್ಕೆ ಹೊಂದಿಕೆಯಾಗದ ಕೆಲಸದಲ್ಲಿ ಇವರಿಗೆ ಬೇಸರ. ಸರಿ; ನ್ಯಾಯವೇ; ಅವರು ಹೇಳುವ ಮಾತಿನಲ್ಲೂ ಅರ್ಥವಿದೆ. ರಾಮಾಯಣ ಬೇಡಲೇ ಬೇಡ ಎಂದು ಅವರ ಅಭಿಪ್ರಾಯವಲ್ಲ, ಬರಿಯ ಅದೇ ಬೇಡ, ಹೊಸದು ಮುಂದಾಗಲಿ, ಎಂದು ಅವರ ಬಯಕೆ. ಇನ್ನೊಬ್ಬರು ಹೇಳಿದರು: "ಪದ್ಯ ಬರೆಯುವುದು ಸುಲಭ, ಗದ್ಯ ಕಷ್ಟ. ಪ್ರಾಸವಿಟ್ಟರೆ ಪದ್ಯವಾಯಿತು; ಪ್ರಾಸ ಇಲ್ಲದೆ ಸೊಗಸು ತರುವುದಲ್ಲವೇ ಕಷ್ಟ!" ಸರಿ; ಇವರು ಪದ್ಯ ಬರೆಯುವುದಿಲ್ಲ. ಗದ್ಯ ಬರೆಯುತ್ತಾರೆ, ಚೆನ್ನಾಗಿ ಬರೆಯುತ್ತಾರೆ. ಅದನ್ನು ಬರೆಯುವುದರಲ್ಲಿ ಎಷ್ಟು ಕಲೆಯಿದೆ ಎನ್ನುವುದನ್ನು ಜನಕ್ಕೆ ತಿಳಿಸುವುದಕ್ಕಾಗಿ ಈ ಮಾತನಾಡಿದಾರೆ. ಮಗುದೊಬ್ಬರು ಹೇಳುತ್ತಾರೆ: "ಈಗಿನ ಪದ್ಯಕ್ಕೆ ಪ್ರಾಸವೂ ಬೇಕಿಲ್ಲ. ಆದ್ದರಿಂದ ಅದು ಮತ್ತಷ್ಟು ಸುಲಭವಾಗಿದೆ." ಇದು ಹೇಗೆ? ಹೇಗೂ ಅಲ್ಲ; ಮಾತು ತಪ್ಪು. ಹಾಗಾದರೆ ಇಂಥ

ಮಾತನ್ನು ಇವರು ಏಕೆ ಹೇಳಿದರು? ಏನೋ, ಪಾಪ, ಹೇಳಿದರು. ಇಲ್ಲವೇ ಪದ್ಯದ ಸಂಗತಿ ತಿಳಿಯದು, ಇಲ್ಲವೇ ಏನೋ ಬೇಸರದ ಹೊತ್ತಿನಲ್ಲಿ ಹೇಳಿದರು. ಹೇಳಿದ ಮಾತಿಗೆಲ್ಲ ಅರ್ಥ ಹುಡುಕಿದರೆ ಯಾರು ತಾನೇ ಬದುಕಬಹುದು? ಇಂಥ ನೂರು ವಿವರಕ್ಕೆ ಕವಿ ಮಿತ್ರರು ತಮ್ಮ ಪದ್ಯಗುಚ್ಛದಲ್ಲಿ ಸಮಾಧಾನ ಹೇಳಿದ್ದಾರೆ. ಅದನ್ನು ಸುಂದರವಾಗಿ ಹೇಳಿದಾರೆ.

ಯಾರಾದರೂ, ತಮ್ಮೊಬ್ಬರ ಮಾತೇ ಮಾತು ಉಳಿದವರು ಮಾತನಾಡಬೇಡ,—and when I open my lips let no dog bark—ಎನ್ನುವರೋ :

ನಾಲ್ಕು ಗೋಡೆಯ ನಡುವೆ ಕುಳಿತು, ನೋಡದೆ ಹೊರಗೆ
ತನ್ನ ಠಾವೇ ಸರ್ವಲೋಕವೆಂದೆಣಿಸಿ,
ಲೋಕನಾಯಕ ತಾನು, ತನಗೆ ಸಮನಾರಿಲ್ಲ,
ಎಂದೆಂಬ ಬರಿ ಬಯಲು ಭ್ರಾಂತಿ ಏಕೆ?

* * * *

ತಾನು ನುಡಿದುದೆ ವೇದ, ತಾನು ನಡೆದುದೆ ಮಾರ್ಗ
ತಾನು ಕಂಡುದೆ ಸತ್ಯವೆಂಬ ಹಮ್ಮೇಕೆ?
ತಾನೆ ರಸಿಕರ ರಸಿಕ, ಕಲಿಯುಗದ ಮನ್ಮಥನು
ಎಂದೆಂಬ ಬಡಿವಾರ ಬಿಂಕ ಬಿಮ್ಮೇಕೆ?

ಹಳೆಯ ಕೃತಿ ಬೇಡ, ಹಳೆಯ ವಿಷಯ ಬೇಡ ಎಂದು ಯಾರಾದರೂ ಹಳೆಯದನ್ನೆಲ್ಲ ಅಲ್ಲಗಳೆಯುವರೋ?

ಹಳೆಯದೆಲ್ಲವು ಹೊಲ್ಲ, ಹಾಕು ಬೆಂಕಿಗೆ ಎಲ್ಲ,
ಹೊಸದೊಂದನಲ್ಲದೆನುವೀ ಕೂಗು ಏಕೆ?

* * * *

ಒಳಗೆ ಹೂರಣವಿರಲು ಹಳತೇನು ಹೊಸತೇನು?
ಕಾಲಪುರುಷನಿಗಿಲ್ಲ ಅದರ ತಂಟೆ.

* * * *

ರಾಮಾಯಣವ ಸುಡಿರೊ, ಭಾರತವ ಬಿಸುಡಿರೊ,
ಎಂದೆನಲು ಅವು ಬರಿಯ ಹಾಳೆ ಕಟ್ಟಿ?
ಆ ಮಹಾ ಕಾವ್ಯಗಳು ನಮ್ಮ ಜನ ಜೀವನದ
ಹಾಸುಹೊಕ್ಕವ ತೆಗಳೆ ನೀನೆ ಕೆಟ್ಟೆ.

* * * *

ಹೊಸ ಮನೆಯ ಕಟ್ಟುವೊಡೆ ಕಟ್ಟಿಕೊಳು; ಅದಕಾಗಿ
ಪಾಳುಮನೆಗಳನೆಲ್ಲ ಕುಟ್ಟಿಕೆಡಹು:
ಹೊಸದೆಂಬ ಮೋಹದಲಿ ಕಲೆಯ ಹಳೆಬೀಡುಗಳ
ಒಡೆಯದಿರು; ಕೇಳು ಅವು ನಾಡ ತೊಡವು.

ಒಡನೆಯೇ ಉಪಯೋಗಕ್ಕೆ ಬರುವ ಸಾಹಿತ್ಯಬೇಕು, ಬರಿಯ ಸುಖಕ್ಕೆ ಬರಿಯ ಸೌಂದರ್ಯಕ್ಕೆ ಹೆಣಗುವ "ಕೇವಲ" ಸಾಹಿತ್ಯ ನಮಗೆ ಬೇಡ ವೆನ್ನುವರಿದಾರೆಯ?

ಮೂಲಿಕೆಗಳೌಷಧಕ್ಕುಪಯೋಗವೆಂದವನೆ
ಎಲ್ಲ ತೋಟಗಳಲ್ಲು ಬೆಳೆಯಲಹುದೆ?
ಬಾಳಿಗೇನುಪಯೋಗ ಹೂಗಳಿಂದೆನುತೆಲ್ಲ
ಹೂಗಿಡಗಳನು ಕಿತ್ತು ಬಿಸುಡಬಹುದೆ?

* * * *

ಹೊರಗೆ ಬಾ ಸಾಹಿತಿಯೆ; ಬಡತನವನಪ್ಪುಕೈ;
ಬಡವರೊಡನಿರು ನೀನು ಬಡವನಾಗಿ;

* * * *

ಹಾಡು ನಾಟಕ ಕಥಾ ಕಾದಂಬರಿಯ ಬರೆದು
ಅವರಿಗನ್ನವ ಕೊಡುವ ಮಾತು ಲೊಟ್ಟು.

ಕವಿಮಿತ್ರರ ಮಾತು ಅಲ್ಲಲ್ಲಿ ಬಿರುಸಾಗಿದೆ. ಅಲ್ಲಲ್ಲಿ ರಸದ ಕ್ಷುರಧಾರೆಯ ಎಲ್ಲೆಯನ್ನು ದಾಟಿದ ಕಾವನ್ನು ತೋರುತ್ತಿದೆ. ಇವರು ಈ ಬಿರುಸು ಈ ಕಾವಿಂದ ಬಿಡಿಸಿಕೊಂಡಿದ್ದರೆ ಚೆನ್ನಾಗಿತ್ತು. ವಾದ ಕಾವ್ಯವಾಗು ವುದಕ್ಕೆ ಇವು ಅಡ್ಡಿಯಾಗುತ್ತವೆ. ಇವುಗಳಿಂದ ಬಿಡಿಸಿಕೊಂಡ ವೇಳೆ ವಾದದಲ್ಲಿ ರಸ ಬೆರೆಯುತ್ತದೆ. ಕವಿಮಿತ್ರರಿಗೆ ಕಾವ್ಯದ ರಸ ದೂರದ

ವಸ್ತುವೇನಲ್ಲ. ಈ ಪದ್ಯಗುಚ್ಛದ ನಾಲ್ಕಾರು ಪದ್ಯಗಳಲ್ಲಿ ಇವರ ಕಾವ್ಯ ಹೃದಯ ರೂಪುಗೊಂಡಿದೆ.

ಓ ಪ್ರಕೃತಿದೇವಿ, ಪ್ರಪಂಚ ಪಂಚಪ್ರಾಣೆ,
ಸೃಷ್ಟ್ಯಾದಿ ಸಂಭೂತೆ, ಲೋಕ ಮಾತೆ,
ಓ ರುದ್ರ ರಮಣೀಯೆ, ಶಕ್ತಿಸ್ವರೂಪಿಣಿಯೆ,
ನಿತ್ಯ ನೂತನೆ ವರದೆ ನಾಶರಹಿತೆ.

ನೀಲ ಮೇಘವೆ ಕುರುಳು, ತಾರೆಗಳೆ ಮುಡಿಹೂವು
ಸೂರ್ಯ ಚಂದ್ರರೆ ಕಣ್ಣು, ನೆಲವೆ ಒಡಲು
ಸಾಲು ಬೆಟ್ಟಗಳೆಲ್ಲ ಕಾಲು ಕೈಗಳು ನಿನ್ನ.
ಹೊದಿಕೆ ಹಾಸುಗೆ ನಿನಗೆ ಬಾನು ಕಡಲು.

ಈ ಪದ್ಯಗಳು ಕಾವ್ಯದ ಒಂದು ಅನಿರ್ದೇಶ್ಯವಾದ ಆದರೂ ಬುದ್ಧಿ ಗೋಚರವಾದ ಲಕ್ಷಣದಿಂದ ಕೂಡಿವೆ. ಕವಿಮಿತ್ರರು ವಾದಸರಣಿಯಲ್ಲಿ ಇಂಥ ಮಾತನ್ನು ತಂದಿರುವುದರಿಂದ ಓದುವವರಿಗೆ ಇವರು ಬರಿಯ ಒಂದು ಪಕ್ಷದ ರಕ್ಷಣೆಗಾಗಿ ವಾದಿಸುತ್ತಿರುವ ವಾದಿ ಮಾತ್ರವಲ್ಲ; ಆ ಪಕ್ಷ ಯಾವುದು ಎಂಬುದನ್ನು ತಮ್ಮದೇ ಅನುಭವದಿಂದ ಬಲ್ಲ ಒಬ್ಬ ಕವಿ ಎನ್ನುವುದು ಸ್ಪಷ್ಟವಾಗುತ್ತದೆ. ಕವಿಗಳಲ್ಲದವರು ಕಾವ್ಯ ಬೇಡ ವೆನ್ನಬಹುದು. ಕವಿಗಳಾದವರಿಗೆ ಇದು ಸಾಧ್ಯವಲ್ಲ. ಕಾವ್ಯಾಲಾಪವನ್ನೂ ಬಿಡಬೇಕೆ? ನಿಜವಾಗಿ? ಹಾಗಾದರೆ ಇನ್ನು ಜೀವದಿಂದ ಇರಬೇಕೆ? ಕವಿಯಾದವನಿಗೆ ಕವನ ಜೀವಕ್ಕೆ ಉಸಿರಂತೆ. ಕವಿ ಕವಿಯೇ ಆದರೆ ಕಾವ್ಯಾಲಾಪಾನ್ ನ ವರ್ಜಯೇತ್.

೩

ಕವಿಮಿತ್ರರಂಥ ತರುಣ ಕವಿಗಳಿಗೆ ಇದು ಒಂದು question of life and death ಉಳಿವು ಅಳಿವಿನ ಸಮಸ್ಯೆ. To be or not to be, that is the question. ಬರೆಯುವುದೆ, ಬಿಡುವುದೇ? ಬಿಟ್ಟು ಉಳಿಯು ವುದೆಂತು?

ಮಾವು ನೇರಿಳೆ ನಿಂಬೆ ಕಿತ್ತೀಳೆ ಚಕ್ಕೋತ
ದಾಳಿಂಬೆ ಚೆಂತೆಂಗು ಹಲಸು ಬೇಲ
ಬೇವು ಬೂರಗ ಬಸಿರಿ ಸುರಗೆ ಸಂಪಗೆ ಸಾಲ
ಆಲ ಪಣಿಯಾಲ ತಂಪಿನ ತಮಾಲ.

ಈ ಮಾತಿನ ಜೋಡಣೆಯನ್ನು ನೋಡಿ. ಮಾತನ್ನು ಹೀಗೆ ಜೋಡಿಸ ಬಲ್ಲವನು ಅದನ್ನು ಜೋಡಿಸದೆ ಬಾಳಲಾರನು. ಇದು ಹೊರಕ್ಕೆ ಮಾತಿನ ಜೋಡಣೆ. ಅದಕ್ಕೆ ಮೊದಲು ಅವನ ಹೃದಯದಲ್ಲಿ ಒಂದು ವಸ್ತು ಸಂಯೋಜನೆ ಆಗಿದೆ. ಅದರ ಹಿಂದೆ ಅವನ ಜೀವದಲ್ಲಿ ಆ ಸ್ವರಗಳ ಸಂಬಂಧದಿಂದ ಒಂದು ಆನಂದ ಉಂಟಾಗಿರುತ್ತವೆ. ಕಿವಿಗೆ ಇಂಪಾಗಿ ಬೆರೆಯುವ ಈ ಸ್ವರಗಳಿಂದ ಕೂಡಿದ ಆ ಪದಗಳಿಂದ ನಿರ್ದಿಷ್ಟವಾದ ವಸ್ತು ನಿಚಯ ಅದಕ್ಕೆ ಬೇರೆ ಒಂದು ಆನಂದವನ್ನೂ ಉಂಟುಮಾಡಿದೆ. ಹಲಸು, ಬೇವು, ಬೇಲ, ಸಾಲ, ಆಲ, ತಮಾಲ; ಈ ಸಂಪೃಕ್ತವಾಗರ್ಥ ಈ ಜೀವವನ್ನು ನಲಿಸಿವೆ. ಅದರಿಂದಲೇ ಆ ಜೀವ ಈ ಮಾತುಗಳನ್ನು ನುಡಿದು ನಮ್ಮನ್ನು ನಲಿಸಬಯಸಿತು. ಆ ನಲಿವು ನಿಜವಾದ್ದರಿಂದ ತನ್ನ ಯತ್ನದಲ್ಲಿ ಸಿದ್ಧಿಯನ್ನು ಪಡೆಯಿತು. ಇಂಥ ಉಸಿರಿಗೆ ಕವಿತೆ ಸಹಜಕರ್ಮ, ಅವಶ್ಯಕರ್ಮ.

೪

ಈ ಸಹಜವಾದ ಅವಶ್ಯವಾದ ಕಾವ್ಯಪ್ರೇರಣೆಯ ಬಗ್ಗೆ ನಾನು ಕವಿ ಮಿತ್ರರನ್ನು ಅಭಿನಂದಿಸುತ್ತೇನೆ. ಇದೇ ಸಂದರ್ಭದಲ್ಲಿ ಕವಿಮಿತ್ರರ ಕಾವ್ಯಜೀವನದ ಇನ್ನೊಂದು ಫಲವನ್ನು ಕಾವ್ಯಪ್ರೇಮಿಗಳ ದೃಷ್ಟಿಗೆ ತರಲು ಬಯಸುತ್ತೇನೆ. 'ಕಾವ್ಯಾಲಾಪದ' ಕವಿಮಿತ್ರರು "ಹಕ್ಕಿ ಹಾಡಿನ" ರಾಘವರು, ನಮಗೆಲ್ಲ ಪ್ರಿಯರಾದ ಶ್ರೀ. ವ್ಹಿ. ವೆಂ. ಸೀತಾರಾಮಯ್ಯನವರು. ಇದು ನಮ್ಮಲ್ಲಿ ಅನೇಕರಿಗೆ ತಿಳಿದಿರಬೇಕು. ಶ್ರೀ. ಸೀತಾರಾಮಯ್ಯನವರು ಎಳೆತನದಿಂದ ಕಾವ್ಯದೇವಿಯ ಆರಾಧನೆ ಮಾಡಿರುವ ಸಾಧಕರು. "ಹಕ್ಕಿ ಹಾಡು" ಈ ಸಾಧನೆಯ ದಾರಿಯನ್ನು ಗುರುತಿಸುತ್ತದೆ; ಹಾಗೆಯೇ ಇವರ ಜೀವನದ ಹಲವಾರು ಭಾವ ಅನುಭವಕ್ಕೆ ರೂಪನ್ನು ಕೊಟ್ಟಿದೆ. ಕವಿ ತಾನೊಂದು ಕಿರುಸೊಡರು

ಎಂದು ಹೇಳಿಕೊಳ್ಳುತ್ತಾನೆ. ಅದರ ಕುಡಿ ದೇವರಿಂದ ಬಂದಿದೆಯೆಂದು ಅವನು ಬಲ್ಲನು. ಈತನಿಗೆ ಕರುನಾಡು ತನ್ನ ಮನೆಯೆಂಬ ಸಂತೋಷ, ಹೆಮ್ಮೆ, ಉಂಟು.

ಹೊಂಗೆಯು ತಳಿರ ತೊಂಗಲ ತೋರಣ
ಸೌರಭ ಸೂಸುವ ಮಂದ ಸಮೀರಣ
ಕಲರವ ಕೂ ಕೂ ಕೋಕಿಲ ಗಾನ
ಸರ್ವ ಸುಖದ ಬೆಳೆ, ನೆಲೆ, ಈ ನಾಡು,
ಈ ಕರುನಾಡಿದು ನನ್ನ ಮನೆ,
ನನ್ನ ಮನೆ, ಇದು ನನ್ನ ಮನೆ.

ಅರಳಿಮರ ತಳಿತಿದೆ, ತಳಿರು ಕವಿಗೆ ಹೊಸಬಾಳ ಸರ್ವ ವಿಜಯಿಯಾದ ಸತ್ವದ ಗುರುತಾಗಿ ಕಾಣುತ್ತವೆ. ಚಿಟ್ಟೆಯೊಂದು. ಕವಿ ಅದರ ಓಟವನ್ನು ನೋಡಿದನು. ಯಾರಿಗೂ ಚೆನ್ನ ಈ ನೋಟ ನೋಡುವುದಕ್ಕೆ. ಕವಿಗೆ ಚಿಟ್ಟೆ ಹಾರಾಡುವ ಒಂದು ಹೂವಿನಂತೆ ಕಂಡಿತು. ತಂಗಿ ದಾಳಿಂಬೆ ಹೂವನ್ನು ಬಯಸಿದಳು. ಕವಿಗೆ ಅದನ್ನು ಕಿತ್ತುಕೊಡಲು ಮನಸ್ಸಿಲ್ಲ. ಗಿಡದಿಂದ ಕೀಳುವುದೇ ಎಂದು. ಹೂ ತಾನೇ ಉದುರಿತು. ತಂಗಿ ತೆಗೆದುಕೊಂಡಳು, ನಲಿದು ಕುಣಿದಳು. ಹೂವನ್ನು ಕೀಳಲು ಕವಿಗೆ ಮನಸ್ಸಿಲ್ಲ. ಆ ಹೂ ತನ್ನನ್ನು ತಾನೇ ಕೊಟ್ಟು ಕೊಂಡಿತು. ಇಂಥದೇ ಇನ್ನೊಂದು ಸಂದರ್ಭ.

ನೆರೆಯ ಮನೆಯಂಗಳದ ಮಲ್ಲಿಕಾ ಕುಸುಮ ಅದು
ಅದ ಕೊಯ್ದು ಹಿಡಿಯಲೇಕೆಳಸುತಿರುವೆ?
ಇದೊ ವಸಂತದ ಗಾಳಿ ಅದರ ಕಂಪನು ಕೊಂಡು
ತಂದೀಯುತಿದೆ; ಏಕೆ ಹೂವ ಬಯಕೆ?

ಎಷ್ಟು ಒಳ್ಳೆಯ ಮಾತು? ಹೂವಷ್ಟೇಯೋ, ಮತ್ತೇನಾದರೂವೋ? ಹೇಗೋ ನಮಗೇನು? ಆಸೆ ಬೇಕು, ಅಂತೇ ಸಂಯಮಬೇಕು, ಎಂದು ಕವಿ ಹೇಳಿದಾನೆ. ಕವಿಯ ಗುರಿ ಬರಿಯ ಕಾವ್ಯಸುಖವಲ್ಲ, ಜೀವನದ ಕ್ಷೇಮವೂ ಹೌದು. ಇನ್ನೊಂದು ಸಲ ಇನ್ನೊಂದು ಚಿಟ್ಟೆ; ಅಂದು ಹಾರುವ ಹೂ ಇಂದು ಮುಡಿದು ಬಿದ್ದಿದೆ.

ಬಿಸಿಲಿನಲಿ ಬೆಂದೆಯೋ ಯಾರಿಂದ ನೊಂದೆಯೋ,
ಮುಡಿದು ಬಿದ್ದುರುಳಿರುವೆ ನೆಲದ ಮೇಲೆ;
ಕುಸುಮಗಳ ಮೃದು ತಲ್ಪದಲಿ ಮಲಗುತಿಹ ನಿನಗೆ
ಹುಡಿಮಣ್ಣು ಹಾಸುಗೆಯೆ ಈ ಗತಿಯೆ ಕೊನೆಗೆ?

ಈ ಕನಿಕರವೂ ಕವಿಯದೆ. ಕೋಗಿಲೆ ಕರೆಯುತ್ತದೆ. ಕವಿ ಅದನ್ನು "ನನ್ನ ಹರುಷದಲ್ಲಿ ಕೂಗಿ ಹರುಷ ಹೆಚ್ಚಿಸು, ನನ್ನ ಕೊರಗಿನಲ್ಲಿ ಕೂಗಿ ಕೊರಗ ಮುಚ್ಚಿಸು; ನೆಚ್ಚನಡು, ಕೆಚ್ಚಕೊಡು, ಜಡತೆ ತೊಲಗಿಸು" ಎನ್ನುತ್ತಾನೆ. ಒಂದಿರುಳು; ಬೆಳುದಿಂಗಳು ಸುರಿಯುತ್ತಿದೆ; ಕವಿ

ಸುಧೆ ಸುರಿಯುವ ತಿಂಗಳ ಕಳೆ;
ನೀಲಿಯ ತಿಳಿ ಬಾನು:
ಕೆಳಗಿದೊ ನೆರೆ ಮಲಗಿದ ಇಳೆ;
ಒಬ್ಬನೆ ಸುಖಿ ನಾನು.
ಎನಗಮೃತವು ತಿಳಿ ಜೊನ್ನ
ನಾನದ ಕುಡಿಯುವೆನು
ಅಮರತ್ವವನಿಗೊ ಮುನ್ನ
ನಾನಿಲ್ಲಿಯೆ ಪಡೆಯುವೆನು,

ಎನ್ನುತ್ತಾನೆ. ಸಂಜೆಬಾನ ಚೆಲುವನೋಟ, ಸ್ವಲ್ಪದರಲ್ಲಿ ಮುಗಿಯುತ್ತಿದೆ. ಆದರೇನು? ಚಣವೆ ಸಾಕು ಚೆಲುವಿನ ನೋಟ. ಒಂದು ಕಿರುತಾರೆ. "ಬಗೆಯನು ಬಾನಿಗೆ ಬಿಗಿಯುವ ಕೊಂಡಿ; ಬಾನಿಂದಾಚೆಯ ಬೆಳಕಿನ ಕಂಡಿ." ಎಂಥ ಉತ್ಪ್ರೇಕ್ಷೆ. ಚಮತ್ಕಾರ ಹೌದು; ಆದರೆ ಬರಿಯ ಚಮತ್ಕಾರ ಅಲ್ಲ. ಈ ಕವಿ ಬರಿಯ ಸುಖದ ಕವಿ ಮಾತ್ರವಲ್ಲ. ಆ ಸತ್ತ್ ಚಿಟ್ಟೆಯಿಂದಲೇ ಇದು ಕಂಡಿರಬೇಕು. "ಗೋಳು" ಪದ್ಯ ಇದನ್ನು ಇನ್ನೂ ಸ್ಪಷ್ಟಮಾಡುತ್ತದೆ. "ನನ್ನ ಹಿಂದಿನ ದಿನದ ಆಸೆ ಕನಸುಗಳು ಇನ್ನೆಲ್ಲಿ ಯಾವೆಡೆಗೆ ಓಡಿಹೋಗಿಹವು? ಚಳಿಗಾಲದಿರುಳಿನಲಿ ಮಿನುಗು ಹುಳುವೆಲ್ಲ ಸುಳಿ ಸುಳಿದು ಅಳಿವಂತೆ ಇಳೆಯ ಬಾಳೆಲ್ಲ." ಈ ಕವಿ ಸೋಲನ್ನೂ ಬಲ್ಲ ಕವಿಯೂ ಹೌದು. "ಒಳದನಿ" ಇದನ್ನು ಸ್ಪಷ್ಟ

ಪಡಿಸುತ್ತದೆ. ಇವನಿಗೆ ಬಡತನದ ಬೇನೆಯು ಅರಿವಾಗಿದೆ. "ಬೀದಿಯೊಳಗಲೆಯುತಿಹಳಾರಿವಳು ?" ಹಾಗೆಯೇ,

ಕವಳ ತಾಯಿ, ಕವಳ ತಾಯಿ,
ಕವಳ ತಾಯಿ, ಕವಳ ತಾಯಿ.
ಬಂದನದೋ "ಕವಳ ತಾಯಿ."
ಎಂಜಲುಣುವ ಇರುಳ ನಾಯಿ.

"ಕವಳ ತಾಯಿ" ಹೆಸರಾಗಿರುವುದು ಆಶ್ಚರ್ಯವಲ್ಲ; ಅದನ್ನು ಕಂಡದ್ದು ಈ ಕವಿಯ ವಿಶೇಷ ಗುಣ. ಹಾಗೆಯೇ ಕವಿ ಹಣವಂತರಿಗೆ ಎಚ್ಚರಿಕೆ ಹೇಳುತ್ತಾನೆ. ಸಮಾಜದ ಇನ್ನಿತರ ಕೇಡನ್ನು ಕವಿ ಬಲ್ಲನು. ಬಾಳಬೇನೆ, ಸಾವು ನೋವು, ಕವಿಯಾದವನ ಮನಸ್ಸನ್ನು ತಮ್ಮಲ್ಲೇ ನಿಲ್ಲಿಸಿಕೊಳ್ಳುವುದಿಲ್ಲ, ಮುಂದಕ್ಕೆ ಒಯ್ಯುತ್ತವೆ. ಈ ಕವಿಯ ಮನಸ್ಸನ್ನು ದೈವದ ಕಡೆಗೆ ಒಯ್ದುವೆ. ಕವಿ ದೇವರನ್ನು "ನಿನ್ನನರಿಯುವ ತೆರನ ತೋರು ದೇವ" ಎಂದು ಬೇಡಿದಾನೆ. ಇದು ಇಂಥ ಸ್ವಭಾವಕ್ಕೆ ಸಹಜ. ಲೋಕದ ಸ್ಥಿತಿಗತಿಯನ್ನು ತೀವ್ರವಾಗಿ ಗ್ರಹಿಸುವ ಮನಸ್ಸು ಅಷ್ಟೇ ತೀವ್ರವಾಗಿ ಮಾನವನ ಅಸಹಾಯತೆಯನ್ನು ಗ್ರಹಿಸುತ್ತದೆ; ಅಷ್ಟೇ ತೀವ್ರವಾಗಿ ಅದನ್ನು ದಾಟಲು ಯತ್ನಮಾಡುತ್ತದೆ; ಬರಿ ಒಬ್ಬನ ಯತ್ನದಲ್ಲಿ, ಬರಿ ಮಾನವಯತ್ನದಲ್ಲಿ ಅದಕ್ಕೆ ನಿವಾರಣೆಯನ್ನು ಕಾಣದೆ ತೊಳಲುತ್ತದೆ; ಎಲ್ಲವನ್ನೂ ನಡಸುತ್ತಿರುವ ಶಕ್ತಿಯನ್ನು ಮರೆಹೊಗುತ್ತದೆ. ಇದು ಹಿಂದೆ ಎಷ್ಟೋ ಸಲ ಅನುಭವಕ್ಕೆ ಬಂದಿದೆ. ಇಂದೂ ಮುಂದೂ ಅನುಭವಕ್ಕೆ ಬರತಕ್ಕದ್ದಾಗಿದೆ.

"ಹಕ್ಕಿ ಹಾಡು" ಉದ್ದಕ್ಕೂ ಒಂದು ಮಟ್ಟದಲ್ಲಿಲ್ಲ. ಇದು ಸಾಧ್ಯವಲ್ಲ. ಅಲ್ಲಲ್ಲಿ ಮಾತು ಬೇರೆಯಾಗಿರಬಹುದಾಗಿತ್ತು ಎನ್ನಿಸುತ್ತದೆ. ಆದರೆ ಒಟ್ಟಿನಲ್ಲಿ ಇದು ಒಳ್ಳೆಯ ಕೃತಿ. ಕನ್ನಡಕ್ಕೆ ಇಂಥ ಕವಿತೆಬೇಕು. ಸಾಹಿತ್ಯ ಸದ್ಯದ ಸಮಸ್ಯೆಗಳಿಗೆ ನಿವಾರಣೆ ತರಬೇಕೆನ್ನುವ ವೀರವಾದಿಗಳು ಕೂಡ ಇಂಥ ಕೃತಿ ಬೇಡವೆನ್ನಲಾರರೆಂದು ನಾನು ಭಾವಿಸುತ್ತೇನೆ. ಬಡತನ ಕೆಟ್ಟದು; ಹಸಿವು ಕೆಟ್ಟದು; ಆದರೆ ನಾಡಲ್ಲಿ ಬಡತನ ಹಸಿವು ಇವೆಯೆಂದು ಬೆಳದಿಂಗಳನ್ನು ನೋಡಲೇಬಾರದೆನ್ನಬಹುದೇ ? ಅನ್ನವನ್ನು

ಗಳಿಸಬೇಕು. ಹಾಗೆಯೇ ನಮ್ಮ ಬಾಳ ಎಲ್ಲ ಪ್ರವೃತ್ತಿಗಳನ್ನೂ ಗಳಿಸಬೇಕು. ಮೊದಲು ಹಣ, ಆ ಮೇಲೆ ಬೆಳದಿಂಗಳು, ಎನ್ನುವುದು ಬಾಳ ಸೂತ್ರವಾಗಲಾರದು. ಬೆಳದಿಂಗಳು ಹೂವು ತಂಗಾಳಿ for princes and rich men only ಎಂದೇನೂ ಮೀಸಲಾಗಿಲ್ಲ. ಬಾಳು ಹಸನಾಗಬೇಕು. ಎಲ್ಲ ದಿಕ್ಕಿನಲ್ಲೂ ಹಸನಾಗಬೇಕು. ಲೋಕವನ್ನು ನೋಡುವುದು ಒಂದು ದಿಕ್ಕು. ಲೋಕದ ಚೆಲುವನ್ನು ಮಾತ್ರವಲ್ಲ? ಅಲ್ಲ: ಅದರ ಕಷ್ಟವನ್ನೂ. ಹಾಗೆಯೇ ಲೋಕದ ಕಷ್ಟವನ್ನು ಮಾತ್ರವಲ್ಲ: ಅದರ ಚೆಲುವನ್ನು; ಸುಖವನ್ನು. ಜೀವನವನ್ನು ಸಮಗ್ರವಾಗಿ ನೋಡಬೇಕು; ಜೀವನವನ್ನು ಸಮಗ್ರಮಾಡಬೇಕು. ಇದು ಎಲ್ಲರ ಗುರಿ. ಇದನ್ನು ಕವಿ ಮೊದಲು ತಾನು ಮಾಡಬೇಕು, ಇತರರಿಗೆ ಆ ಮೇಲೆ ತೋರಿಸಿಕೊಡಬೇಕು. "ರಾಘವ" ರು ಇದನ್ನು ಯತ್ನಿಸಿದಾರೆ.

೫

ಲೋಕಜೀವನದ ವೀಣೆ, ನಾಡುಗಳ ಜೀವನದ ವೀಣೆ, ವ್ಯಕ್ತಿಗಳ ಜೀವನದ ವೀಣೆ ಶ್ರುತಿಯಾಗುತ್ತಿವೆ, ಶ್ರುತಿ ಸಡಿಲುತ್ತಿವೆ. ಶ್ರುತಿಯಾಗುತ್ತಿರುವಂದು ಟೊಯ್ ಟೊಯ್ ಗೊಯ್ ಗೊಯ್ ಎಂದು ಅಪಸ್ವರ ಹೊರಡುತ್ತಲೇ ಇರುತ್ತದೆ. ಸ್ವರ ಸೇರಿದ ಮೇಲೆ ಸಂಗೀತ ಬರುತ್ತದೆ. ಶ್ರುತಿಮಾಡುತ್ತಿರುವ ಹೊತ್ತಿನಲ್ಲಿ, ಇದೇನು ಈ ಹೊಲಸು ಅಪಸ್ವರ, ಎಂದು ಬೇಸರಪಟ್ಟು ಪ್ರಯೋಜನವಿಲ್ಲ. ಕಾವ್ಯ ಇದುವರೆಗೆ ಮಾಡಿದ ಕೆಲಸ ಸಾಲದು. ಮುಂದೆ ಎಷ್ಟು ಮಾಡಿದರೂ ಸಾಲದೆ ಹೋಗಬಹುದು. ಶ್ರುತಿಯಾಗಿದೆಯೆಂದು ಕೆಲವು ವೇಳೆ, ಶ್ರುತಿಯಾಗಲಿ ಎಂದು ಕೆಲವು ವೇಳೆ, ಕವಿಗಳು ದನಿಯನ್ನು ಎತ್ತಿದಾರೆ. ಯಾರನ್ನೂ ನೀವು ಹಾಡುವುದು ಬೇಡ ಎನ್ನುವುದು ಬೇಡ. ವೀಣೆ ಈಗಲೇ ಶ್ರುತಿಯಾಗಿರಬಹುದು. ಇಲ್ಲ ಮುಂದೆ ಶ್ರುತಿಯಾಗಬಹುದು. ಅದು ಹೇಗಾದರೂ ಅದರಿಂದ ಸ್ವರ ಹೊರಡುತ್ತಿರಬೇಕು. ಕವಿಗಳು ಹಾಡಲಿ; ಕವಿಮಿತ್ರರು ಕೇಳಿರಿ; ಏನನ್ನೇ ಆಗಲಿ ವರ್ಜಯೇತ್; ಕಾವ್ಯಾಲಾಪಾನ್ ನ ವರ್ಜಯೇತ್.

## "ಶೂದ್ರ ತಪಸ್ವಿ" ಒಂದು ಸಣ್ಣ ದೃಶ್ಯ

ರಾಮಾಯಣದ ಉತ್ತರಕಾಂಡದಲ್ಲಿ ಬರುವ ಶಂಬೂಕಪ್ರಸಂಗ ಈ ಸಣ್ಣ ದೃಶ್ಯಕಾವ್ಯದ ಮೂಲವಸ್ತು. ಉತ್ತರಕಾಂಡದ ಕತೆಯನ್ನು ಕವಿ ಹಲವು ವಿವರದಲ್ಲಿ ಮಾರ್ಪಡಿಸಿಕೊಂಡಿದ್ದಾರೆ. ಶಂಬೂಕನ ಆಶ್ರಮವನ್ನು ಕಾಯುವ ದೊಡ್ಡದೊಂದು ಆಲದಮರ, ಭೈರವ, ಆಶ್ರಮದಲ್ಲಿ ಅವಿನಯ ನಡೆಯುತ್ತದೆಂದು ಅರಿತು ಅದಕ್ಕೆ ತಕ್ಕ ಶಿಕ್ಷೆಯನ್ನು ಮಾಡುವುದಕ್ಕಾಗಿ ಅಲ್ಲಿಗೆ ಬರುವ ಮೃತ್ಯು, ಆಶ್ರಮದ ಸನ್ನಿವೇಶದಲ್ಲಿ ಸಂದರ್ಭಕ್ಕೆ ತಕ್ಕಂತೆ ಒದಗುವ ಬಿರುಗಾಳಿ, ಧೂಳು, ಕತ್ತಲು, ಮುಂತಾದ ಕ್ಷೋಭೆಯ ಭಾಗ, ಇವು ಕವಿ ಊಹೆಯಿಂದ ಸೇರಿಸಿರತಕ್ಕವು. ಮಾರ್ಪಾಡು ಕಾವ್ಯ ದೃಷ್ಟಿಯಿಂದ ಸಾಧುವಾಗಿದೆ. ಭೈರವ ಮೃತ್ಯುಗಳ ಸಂಭಾಷಣೆ ಶಂಬೂಕನು ಎಷ್ಟು ಮಹಿಮಾವಂತನೆಂಬುದನ್ನು ತೋರಿಸುತ್ತದೆ. ಆದರೆ ಮಾತು ಅಲ್ಲಲ್ಲಿ ಇಂತಹ ದಿವ್ಯ ತತ್ವಗಳ ಹಿರಿತನಕ್ಕೆ ಆವಶ್ಯಕವಾದ ಗಾಂಭೀರ್ಯದಿಂದ ತಪ್ಪುತ್ತದೆ.

ರಾಮಚಂದ್ರನು ಹುಣ್ಣಿಮೆಯ ಸಂಜೆ ಅರಮನೆಯಲ್ಲಿ ಇರಬೇಕಾದರೆ ಬ್ರಾಹ್ಮಣನೊಬ್ಬನು ಬಂದು ತನ್ನ ಮಗನು ಸತ್ತ ಬಗೆಗೆ ಪ್ರಲಾಪಮಾಡುತ್ತ ಇದು ದೊರೆಯ ದೋಷ ಎಂದು ಅರಮನೆಯ ಮುಂದೆ ಕೂಗಾಡುತ್ತಾನೆ. ರಾಮನು ಹೊರಗೆ ಬಂದು ಸಂಗತಿಯನ್ನು ವಿಚಾರಿಸಿ ಆ ಮಗನು ಸತ್ತು ಬಿದ್ದಿದ್ದ ಶಂಬೂಕಾಶ್ರಮಕ್ಕೆ ಬ್ರಾಹ್ಮಣನೊಂದಿಗೆ ಹೋಗುತ್ತಾನೆ. ಬ್ರಾಹ್ಮಣನೊಂದಿಗೆ ಮಾತನಾಡುವುದರಲ್ಲಿ, ಆ ಹುಡುಗನು ಶಂಬೂಕನಿಗೆ ನಮಸ್ಕಾರ ಮಾಡುವುದರಲ್ಲಿದ್ದನೆಂದೂ, ಬ್ರಾಹ್ಮಣನು ಶೂದ್ರನಿಗೆ ನಮಸ್ಕಾರ ಮಾಡಬೇಡವೆಂದು ಮಗನನ್ನು ತಡೆದನೆಂದೂ ರಾಮನಿಗೆ ತಿಳಿಯುತ್ತದೆ. ತಪಸ್ವಿಯಾದ ಶಂಬೂಕನಿಗೆ ಈ ಅವಿನಯ ಮಾಡಿದ್ದರಿಂದಲೇ ಹುಡುಗನು ಸತ್ತನೆಂದು ರಾಮಚಂದ್ರನು ಗ್ರಹಿಸುತ್ತಾನೆ. ಶೂದ್ರನು ತಪಸ್ಸು ಮಾಡುವುದು ಅಧರ್ಮ, ಅದರಿಂದ ತನ್ನ ಮಗನು ಸತ್ತನು, ಎಂದು ಬ್ರಾಹ್ಮಣನ ಕಲ್ಪನೆ. ತಪಸ್ಸನ್ನು ಬ್ರಾಹ್ಮಣನ ಸ್ವತ್ತು ಎನ್ನುವುದು ಜಾತಿಗರ್ವಾಂಧ ಬ್ರಾಹ್ಮಣರ ಭ್ರಮೆ,

ಶೂದ್ರನಾದರೂ ತಪಸ್ವಿಯಾದುದರಿಂದ ಶಂಬೂಕನು ಪೂಜ್ಯ, ಎಂದು ರಾಮನ ಅಭಿಪ್ರಾಯ. ಅಧರ್ಮಿಗೆ ಶಿಕ್ಷೆಮಾಡೆಂದು ರಾಮನು ಬ್ರಹ್ಮಾಸ್ತ್ರವನ್ನು ಬಿಡುವನು. ಅದು ಶಂಬೂಕನನ್ನು ಕೊಲ್ಲುವುದೆಂದು ಬ್ರಾಹ್ಮಣನ ನಿರೀಕ್ಷೆ. ಬ್ರಹ್ಮಾಸ್ತ್ರ ಇದನ್ನು ಮಾಡುವುದಿಲ್ಲ; ಶಂಬೂಕ ನಿಗೆ ನಮಿಸಿ ಬ್ರಾಹ್ಮಣನನ್ನು ಮುಗಿಸಲು ಹಿಂದಿರುಗಿ ಬರುತ್ತದೆ. ತಾನೇ ಅಧರ್ಮಿ ಎನ್ನುವುದು ರಾಮನ ನಾಲ್ಕು ಮಾತಿನಿಂದ ಬ್ರಾಹ್ಮಣನಿಗೆ ಮಂದಟ್ಟಾಗುತ್ತದೆ. ಅವನು ರಾಮನಿಗೆ ಶರಣು ಹೋಗುತ್ತಾನೆ. ರಾಮನು, ಶರಣುಹೋಗಬೇಕಾದುದು ತನ್ನನ್ನಲ್ಲ, ಮಹಾತ್ಮನಾದ ಶಂಬೂಕನನ್ನು, ಎಂದು ಅವನಿಗೆ ಮನವರಿಸುತ್ತಾನೆ. ಬ್ರಾಹ್ಮಣನು ಶೂದ್ರ ತಪಸ್ವಿಗೆ ಸಾಷ್ಟಾಂಗ ಪ್ರಣಾಮ ಮಾಡುತ್ತಾನೆ. ಸತ್ತಿದ್ದ ಬಾಲಕನು ಏಳುತ್ತಾನೆ; ರಾಮನೂ ಬ್ರಾಹ್ಮಣನೂ ಖುಷಿಯಿಂದ ಆಶೀರ್ವಾದ ಪಡೆದು ಬಾಲಕ ನೊಡನೆ ಹಿಂದಿರುಗುತ್ತಾರೆ.

ಉತ್ತರಕಾಂಡದ ಕಥೆಯಲ್ಲಿ ತಪಸ್ಸುಮಾಡುವ ಶೂದ್ರ ಅಪರಾಧಿ. ವರ್ಣಧರ್ಮಕ್ಕೆ ಇಂತಹ ವ್ಯಾಘಾತ ನಡೆಯುವಂತೆ ಬಿಟ್ಟದ್ದಕ್ಕಾಗಿ ರಾಜನಿಗೆ ಪಾತಕ ಅಡಸುತ್ತದೆ. ಆದರ ಫಲವಾಗಿ ವೃದ್ಧನೊಬ್ಬನು ಬಾಲನ ಪ್ರೇತಕಾರ್ಯ ಮಾಡುವ ಪ್ರಸಂಗವೊದಗುತ್ತದೆ. ರಾಜನ ಗುರುಜನ ಈ ಸಂದರ್ಭವನ್ನು ಅವನಿಗೆ ವಿವರಿಸಿದ್ದರ ಮೇಲೆ ಅವನು ಹೋಗಿ ಶಂಬೂಕನನ್ನು 'ನಿನ್ನ ಜಾತಿ ಯಾವುದು' ಎಂದು ವಿಚಾರಿಸಿ ಅವನು ಶೂದ್ರ ಎಂದೊಡನೆ ಅವನ ತಲೆಯನ್ನು ಕಡಿದು ಬಿಡುತ್ತಾನೆ. ಅಪರಾಧಿಯ ಶಿರಶ್ಛೇದ ಆದೊಡನೆ ಬ್ರಾಹ್ಮಣ ಬಾಲಕನು ಪುನರ್ಜೀವಿ ಯಾಗಿ ಏಳುತ್ತಾನೆ.

ಅಪರಾಧ ಯಾವುದು ಎಂಬ ವಿಷಯದಲ್ಲಿ ಉತ್ತರಕಾಂಡದ ಭಾವನೆಗೂ ಈ ದೃಶ್ಯದ ಭಾವನೆಗೂ ಬಹಳ ಅಂತರವಿದೆ ಎನ್ನುವುದನ್ನು ಹೇಳಬೇಕಾಗಿಲ್ಲ. ಉತ್ತರಕಾಂಡದ ಕತೆಯಲ್ಲಿ ಪ್ರಕಟವಾಗುವ ಮನೋ ಧರ್ಮ ವರ್ಣವ್ಯವಸ್ಥೆಯನ್ನು ಕುರಿತ ಒಂದು ತೀವ್ರವಾದ ಶ್ರದ್ಧೆ. ಈ ಕಾವ್ಯದಲ್ಲಿ ಅದನ್ನು ಜಾತಿಗರ್ವಾಂಧತೆ ಎಂದು ವರ್ಣಿಸಿರುವುದು ಕಾಣುತ್ತದೆ. ಉತ್ತರಕಾಂಡದ ಗ್ರಂಥವನ್ನು ರಚಿಸುವ ಕಾಲಕ್ಕೆ ಇದು

ಜಾತಿಗರ್ವಾಂಧತೆ ಆಗಿತ್ತೋ ಇಲ್ಲವೋ, ಪ್ರಾಯಶಃ ಈಗ ಹೇಳುವುದು ಸಾಧ್ಯವಲ್ಲ. ಇಂತಹ ಸಂದರ್ಭದಲ್ಲೆಲ್ಲಾ ಮೂಲದ ಭಾವಕ್ಕೆ ಒಂದೇ ಮುಖ ಇರುವುದಿಲ್ಲ: ಏನಿಲ್ಲವೆಂದರೂ ಎರಡು ಮುಖ ಇರುತ್ತದೆ. ಒಂದು ಮುಖ ಒಳ್ಳೆಯ ಅರ್ಥದ್ದು; ಇನ್ನೊಂದು ಕೆಟ್ಟ ಅರ್ಥದ್ದು. ಸುವ್ಯವಸ್ಥಿತವಾದ ಸಮಾಜದಲ್ಲಿ ಒಂದೊಂದು ವಿಭಾಗಕ್ಕೆ ಒಂದೊಂದು ಕೆಲಸ ಇರುತ್ತದೆ. ಆಯಾ ವಿಭಾಗದವರು ಆಯಾ ಕೆಲಸವನ್ನು ಮಾಡ ತಕ್ಕದ್ದು ಎಂದು ಅಂತಹ ಸಮಾಜ ನಿರ್ಣಯಿಸಿಕೊಳ್ಳಬಹುದು. ಆ ಸಮಾಜದ ಒಬ್ಬ ವ್ಯಕ್ತಿ ಆ ನಿರ್ಣಯವನ್ನು ಮೀರಿದರೆ ವ್ಯವಸ್ಥೆಯ ದೃಷ್ಟಿಯಿಂದ ಅಪರಾಧಿಯಾಗುತ್ತಾನೆ. ಆ ತಳಹದಿಯ ಮೇಲೆ ಆ ನಿಷ್ಕರ್ಷೆ ಸರಿಯಾದದ್ದು. ಯಾವುದಕ್ಕೂ ಅಧಿಕಾರಬೇಕು ಎನ್ನುವುದು ಇಂತಹ ವ್ಯವಸ್ಥೆಯ ಪಾಯದ ಸೂತ್ರ. ಇದು ವ್ಯವಸ್ಥೆ ಒಳ್ಳೆಯದಾಗಿದ್ದು ಸಮಾಜದ ಒಟ್ಟು ಕ್ಷೇಮದ ದೃಷ್ಟಿಯಿಂದ ನಡೆಯುವಾಗ. ಇಂತಹ ಸಂದರ್ಭದಲ್ಲಿ 'ಶೂದ್ರನಿಗೆ ಏಕೆ ತಪಸ್ಸು?' ಎಂದು ಬ್ರಾಹ್ಮಣ ಮಾತ್ರ ಹೇಳುವುದಿಲ್ಲ; ನನಗೇಕೆ ತಪಸ್ಸು ಎಂದು ಶೂದ್ರನೂ ಹೇಳುತ್ತಾನೆ. ಅಥವಾ ತನಗೊಂದು ತಪಸ್ಸು ಇದ್ದರೆ ಅದು ತನ್ನ ಸೇವಾವೃತ್ತಿಯಲ್ಲಿದೆ ಎಂದು ಮನಗಂಡು ತಲೆಯೆತ್ತಿಕೊಂಡು ನಡೆಯುತ್ತಾನೆ. ಧ್ಯಾನದಲ್ಲಿ ಕುಳಿತು ಬ್ರಾಹ್ಮಣ ಹೆಚ್ಚಿನವನಾಗುವುದಿಲ್ಲ; ಸೇವೆಯಲ್ಲಿ ದುಡಿದು ಶೂದ್ರ ಕಡಮೆಯಾಗುವುದಿಲ್ಲ. ಅವರವರ ಕರ್ಮದಲ್ಲಿ ನಿರತರಾಗಿ ಇಬ್ಬರೂ ಸಮಾನವಾಗಿ ಧನ್ಯರಾಗುತ್ತಾರೆ.

ಉತ್ತರಕಾಂಡದ ಮನೋಧರ್ಮ ನಿಜವಾಗಿಯೂ ಉದಾತ್ತ ವಾಗಿದ್ದಿದ್ದರೆ ಈ ನೆಲೆಯದಾಗಿರಬೇಕು. ಅದನ್ನು ಓದುವವರಿಗೆ ಇಂತಹ ಉದಾತ್ತಭಾವ ಕಾಣುವುದಿಲ್ಲ. ಬ್ರಾಹ್ಮಣ ಜಾತಿಯನ್ನು ಶ್ರೇಷ್ಠವೆಂದು, ಶೂದ್ರಜಾತಿಯನ್ನು ಕಡಮೆಯೆಂದು ಕಾಣುವ ಮನೋಧರ್ಮ ಅದರಲ್ಲಿ ಪ್ರಕಟವಾಗುತ್ತದೆ. ಆ ಮನೋಧರ್ಮ ಸಮಾಜದ ಆರೋಗ್ಯಸ್ಥಿತಿಯನ್ನು ಸೂಚಿಸತಕ್ಕದ್ದಲ್ಲ. ರಾಮಾಯಣವನ್ನು ಕುರಿತು ಯೋಚಿಸಿರುವವರಿಗೆಲ್ಲ ಉತ್ತರಕಾಂಡ ವಾಲ್ಮೀಕಿಯ ಅನಂತರ ರಚಿತವಾಗಿ ವಾಲ್ಮೀಕಿಯ ಕಾವ್ಯಕ್ಕೆ ಅಂಟಿಸಿದ ಒಂದು ಕೃತಕಭಾಗವೆಂದು ಸ್ಪಷ್ಟವಾಗಿ ಕಾಣುತ್ತದೆ.

ಉತ್ತರಕಾಂಡದ ರಾಮ ವಾಲ್ಮೀಕಿಯ ರಾಮನಲ್ಲ. ಆ ಕಾಂಡದ ಧರ್ಮ ದೃಷ್ಟಿ ರಾಮಚಂದ್ರನ ಧರ್ಮದೃಷ್ಟಿಯಲ್ಲ. ಇತ್ತೀಚಿನಕಾಲದ ಯಾರೋ ಬುದ್ಧಿವಂತರು ಸಮಾಜವನ್ನು ಕುರಿತ ತಮ್ಮ ಭಾವನೆಗೆ ಹಿರಿಯ ಹೆಸರಿನ ಒಂದು ಪ್ರತಿಷ್ಠೆಯನ್ನು ಒದಗಿಸುವ ಉದ್ದೇಶದಿಂದ ಸೀತಾ ವಿಸರ್ಜನೆ, ಶಂಬೂಕ ವಧ, ಇತ್ಯಾದಿ ಪ್ರಸಂಗಗಳನ್ನು ರಾಮನಿಗೆ ಆರೋಪಿಸಿ ಈ ಗ್ರಂಥವನ್ನು ಮಾಡಿದರು. ಅವರ ಕಾಲಕ್ಕೇ ಆ ಕಲ್ಪನೆ ಸಮೀಚೀನ ವಾಗಿತ್ತೋ ಇಲ್ಲವೋ; ಈಚೆಗಂತೂ ಅದರ ವಿಷಯದಲ್ಲಿ ಅತೃಪ್ತಿ ಬೆಳೆಯುತ್ತ ಬಂದಿದೆ. ಈ ಸಣ್ಣ ದೃಶ್ಯದ ಮುನ್ನುಡಿಯಲ್ಲಿ ಶ್ರೀಮಾನ್ ಪುಟ್ಟಪ್ಪನವರು ಹೇಳಿರುವಂತೆ ಉತ್ತರಕಾಂಡದ ಜ್ಞಾತಿಕಲ್ಪನೆ ಭವಭೂತಿಗೆ ಒಪ್ಪಿಗೆಯಾಗಲಿಲ್ಲ. ಜಾತಿಮಾತ್ರದಿಂದ ಬ್ರಾಹ್ಮಣ್ಯ ಲಭಿಸಲಾರದೆಂದು ಧರ್ಮಗ್ರಂಥಗಳು ಹೇಳುತ್ತ ಬಂದಿವೆ; ಸಮಾಜ ದಿನದಿನವೂ ಕಾಣುತ್ತ ಬಂದಿದೆ. ಶೂದ್ರನಾಗಿ ಹುಟ್ಟಿದಮಾತ್ರದಿಂದ ಶಂಬೂಕನು ತಪಸ್ಸು ಮಾಡಬಾರದಾಗಿತ್ತು ಎನ್ನುವ ಮಾತು ಈಗ ನಮಗೆ ಯಾರಿಗೂ ಒಪ್ಪಿಗೆಯಿಲ್ಲ. ಅವನು ತಪಸ್ಸು ಮಾಡಿದ್ದರಿಂದ ಒಬ್ಬ ಬ್ರಾಹ್ಮಣ ಬಾಲಕನು ತೀರಿಕೊಂಡನೆನ್ನುವುದೂ ತೀರ ಅಪೋಹದ ಮಾತು. ಅದಕ್ಕಾಗಿ ರಾಜನು ತನ್ನ ಕೈಯಿಂದಲೇ ತಪಸ್ವಿಯ ತಲೆಯನ್ನು ಕಡಿದನೆನ್ನುವುದು ವಿಕಾರವಾದ ಬುದ್ಧಿಯ ಕಲ್ಪನೆ. ಆ ತಲೆ ಕಡಿದು ಬಿದ್ದೊಡನೆ ಸತ್ತಿದ್ದ ಹುಡುಗ ಜೀವಂತನಾಗಿ ಎದ್ದನೆನ್ನುವುದು ಇದಕ್ಕಿಂತ ಹೆಚ್ಚೇನೂ ಅಲ್ಲ.

ಉತ್ತರಕಾಂಡದ ಈ ಪ್ರಸಂಗದ ಮನೋಧರ್ಮ ಅಸಾಧು ಎಂದು ಕಂಡ ನಾವು ಏನುಮಾಡಬೇಕು? ಕೆಲವರಿಗೆ 'ಆ ಪೊಳ್ಳು ಪ್ರಸಂಗವನ್ನು ಬಿಟ್ಟುಬಿಡೋಣ' ಎಂದು ತೋರಬಹುದು. ಪೊಳ್ಳು ಪ್ರಸಂಗವನ್ನು ಬಿಟ್ಟರೂ ಅದರ ಬುಡದ ಮನೋಧರ್ಮ ಜನತೆಯಲ್ಲಿ ಇರಬಹುದು; ಅದನ್ನು ತಿದ್ದುವುದು ಈಗಲೂ ಆವಶ್ಯಕ; ಆದುದರಿಂದ ಅದರ ಸಂಗತಿ ಗಳನ್ನು ಪರಿಷ್ಕರಿಸಿ ಇಂದು ನಾವು ಧರ್ಮವೆಂದು ಗ್ರಹಿಸಿರುವದನ್ನು ರೂಪಿಸಬೇಕು: ಎಂದು ಇನ್ನು ಕೆಲವರಿಗೆ ತೋರಬಹುದು. ಇಂಥ ಅಭಿಪ್ರಾಯದ ಒಬ್ಬ ಕವಿ ಈ ಉದ್ದೇಶದಿಂದ ಈ ಕೃತಿಯನ್ನು ರಚಿಸಿದಾರೆ.

ಶಂಬೂಕನು ಮಹಿಮಾವಂತ ತಪಸ್ವಿ ಆದರೆ ಅವನಿಗೆ ಬ್ರಾಹ್ಮಣನೂ ನಮಿಸಬೇಕು; ರಾಜನೂ ನಮಿಸಬೇಕು. ತಪಸ್ವಿ ತನ್ನ ತಪಸ್ಸಿನ ಪ್ರಭಾವದಿಂದ ಇವರಿಗೆ ಆಶೀರ್ವಾದ ಮಾಡಲು ಶಕ್ತಿ ಉಳ್ಳವನು ಎಂಬ ಮಾತೂ ಇಂದು ಬಲ್ಲವರ ಮಾತಾಗಿದೆ. ಈ ಭಾವ ಸಮಾಜದ ಹಿತೈಷಿಗಳಿಗೆಲ್ಲ ಸಮ್ಮತವಾಗಬೇಕು. ಆದರೆ ಪೂಜ್ಯನಿಗೆ ನಮಸ್ಕಾರ ಮಾಡದೆ ಇದ್ದವನಿಗೆ ಸಾವು ಶಿಕ್ಷೆ ಎನ್ನುವುದು ಹಿಂದಣ ಕ್ರೌರ್ಯಕ್ಕೆ ಪ್ರತಿಯಾದ ಇನ್ನೊಂದು ಕ್ರೌರ್ಯವಾಗುತ್ತದೆ. ಜೊತೆಗೆ ತಂದೆಯ ಮಾತಿನಂತೆ ನಡೆದ ಎಳೆಯನು ಹೀಗೆ ಸಾಯುವುದು ಅಪ್ಪ ದೋರೆಗಾಯಿ ತಿಂದರೆ ಮಗನಿಗೆ ಹೊಟ್ಟೆನೋವು ಎಂಬ ನೀತಿಯಾಗುತ್ತದೆ. ಈಗ ನಮಗೆ ಬೇಕಾಗಿರುವುದು, ಅಂದು ಒಂದು ಜಾತಿಯ ಹೆಸರಿನಲ್ಲಾದ ತಪ್ಪಿಗೆ ಇಂದು ಇನ್ನೊಂದು ಜಾತಿಯ ಹೆಸರಿನಲ್ಲಿ ಆಗುವ ಬದಲ ತಪ್ಪಲ್ಲ; ಆ ತಪ್ಪನ್ನು ತಿದ್ದಿ ಔದಾರ್ಯ. ಅಲ್ಲದೆ, ಹೊಸ ತಪ್ಪು ಶಿಕ್ಷೆಯನ್ನು ಪ್ರತಿಪಾದಿಸುವುದರಲ್ಲಿ ಕವಿ ಬ್ರಾಹ್ಮಣನನ್ನು ಅನವಶ್ಯಕವಾಗಿ ಅವಿವೇಕಿಯನ್ನಾಗಿ ಮಾಡಿದ್ದಾರೆ; ಹಾಗೆಯೇ ರಾಮಚಂದ್ರನನ್ನು ಈ ಬ್ರಾಹ್ಮಣನೊಂದಿಗೆ ವ್ಯಂಗವಾಡುವ, ಶೂದ್ರ ತಪಸ್ವಿಗೆ ಯಾವುದೋ ವ್ಯಾಜದಿಂದ ಕೈ ಮುಗಿಯುವ, ಮಿತ್ರನಂತೆ ನಟಿಸುತ್ತ ಬ್ರಾಹ್ಮಣನ ಕುತ್ತಿಗೆಗೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸುವ, ಒಬ್ಬ ಅಧೀರ ಅನುದಾತ್ತ ನಾಯಕನಾಗಿ ಮಾಡಿದಾರೆ. ಇದರ ಹೊಣೆಯೆಲ್ಲ ಕವಿಯದಲ್ಲ. ಇದರ ಬಹುಭಾಗ ಮೂಲದ ಕಥೆಯಲ್ಲಿ ಅನಿವಾರ್ಯವಾದದು. ತನ್ನ ಮಗ ಹೋದ ತಪ್ಪನ್ನು ರಾಜನಲ್ಲಿ ಆರೋಪಿಸುವ ಬ್ರಾಹ್ಮಣ ಎಷ್ಟು ತೊಳೆದರೂ ಕಪ್ಪಾಗಿಯೇ ನಿಲ್ಲಬೇಕು. ಇಂತಹ ತಪ್ಪು ತಿಳುವಳಿಕೆ ರಾಜ್ಯದಲ್ಲಿ ವ್ಯವಹಾರದಲ್ಲಿರಬೇಕಾದರೆ ಅದನ್ನು ತಿದ್ದುವ ಯತ್ನಮಾಡದೆ ತಾನು ಕಂಡ ಸತ್ಯವನ್ನು ತನ್ನ ನಡತೆಯಲ್ಲಿ ಮಾತ್ರ ಬಳಸುತ್ತಿರುವ ರಾಜ ಅಧೀರನೂ ಅನುದಾತ್ತನೂ ಆಗದೆ ವಿಧಿಯಿಲ್ಲ. ಈ ಕಾರಣದಿಂದ ಈ ದೃಶ್ಯದಲ್ಲಿಯ ಕಲ್ಪನೆ ಒಟ್ಟಿನಲ್ಲಿ ಓದುವವರ ಮನಸ್ಸಿನಲ್ಲಿ ಅತೃಪ್ತಿಯನ್ನು ಉಂಟುಮಾಡುತ್ತದೆ. ವಕ್ರದೃಷ್ಟಿಯ ಹಿಂದಿನ ಕಥೆಯನ್ನು ತಿದ್ದುವೆವೆಂದು ಹೋಗುವುದು ಬೇರೆಯವರು ಹಾಕಿದ ನೆಲಗಟ್ಟಿನ

ಮೇಲೆ ನಮ್ಮ ಮನಸ್ಸಿಗೆ ಒಪ್ಪುವ ಭವನವನ್ನು ಕಟ್ಟುವೆವೆನ್ನುವ ಪ್ರಯತ್ನದಂತೆ. ಇಂದು ನಾವು ಏನು ಮಾಡಿದರೂ ಹಿಂದಿನ ಗೀರು ಇದ್ದೇ ಇರುತ್ತದೆ. ಹೊಸಕಾಲದ ಧರ್ಮವನ್ನು ಹೇಳುವುದಕ್ಕೆ ಹೊಸ ಕಥೆಯನ್ನೇ ಹೇಳುವುದು ಕ್ಷೇಮ ಎಂದು ನಾನು ಶ್ರೀ ಪುಟ್ಟಪ್ಪನವರಿಗೆ ಸೂಚಿಸುತ್ತೇನೆ.

ದೃಶ್ಯದ ಗತಿ ಒಟ್ಟಿನಲ್ಲಿ ಚೆನ್ನಾಗಿದೆ. ಭಾಷೆಯಲ್ಲಿ ಅಲ್ಲಲ್ಲಿ ಅನವಶ್ಯಕವಾಗಿ ಎಂಬಂತೆ ಸಂಸ್ಕೃತ ಶಬ್ದಗಳು ಕಾಣುತ್ತವೆ. ಪಕ್ಕದಲ್ಲಿಯೇ ಇರುವ ಅಂಥದೇ ಸಂದರ್ಭದಲ್ಲಿ ಬಳಸಿರುವ ತಿಳಿಗನ್ನಡ ಇಂತಹ ಸಂಸ್ಕೃತವನ್ನು ಎತ್ತಿ ತೋರಿಸುವಂತಿದೆ. ದೃಶ್ಯಗಳ ಆರಂಭದ ನಿರೂಪಣವಾಕ್ಯಗಳಲ್ಲಿ ಪದಪ್ರಯೋಗ ಸ್ವಲ್ಪ ಹಳೆಯದೆ ಸ್ವಲ್ಪ ಹೊಸದಾಗಿ ಕಾಣುತ್ತದೆ. ಪದ್ಯ ಆರಂಭದಲ್ಲಿ ಇಪ್ಪತ್ತು ಮಾತ್ರೆಯ ಬಿಡಿ ವೃತ್ತದಂತೆ ಹೊರಟು ಬರಬರುತ್ತ ಬೇರೆ ಬೇರೆ ಉದ್ದದ ಸಣ್ಣ ದೊಡ್ಡ ಪಂಕ್ತಿಯಾಗಿದೆ. ಎರಡು ಮೂರು ಕಡೆ ಪಂಕ್ತಿಯಲ್ಲಿ ಛಂದೋನಿಯಮ ಇರುವಂತೆ ಕಾಣುವುದಿಲ್ಲ. ಪಂಚವಟಿಯೊಳ್ ನಿಂದವನ್, ಗೋದಾವರಿಯ ಮಿಂದವನ್, ತಪಂ ಪೂಜ್ಯ ಕರ್ಮವಲ್ತೆ ದ್ವಿಜೇಂದ್ರ, ತಪಕ್ಕೆಣೆಯುಂಟೆ ರಾಘವೇಂದ್ರ, ದಕ್ಷರಿಗೆ ದಾಕ್ಷಿಣ್ಯವೆ ಎಂಬ ಕಡೆಗಳಲ್ಲಿ ಶಬ್ದ ಅಥವಾ ರಸ ಅಸುಷ್ಠು ಆಗುತ್ತದೆ.

ಈ ದೃಶ್ಯ ಇರುವುದೆಲ್ಲ ಒಟ್ಟು ಇಪ್ಪತ್ತನಾಲ್ಕು ಪುಟ. ಇಷ್ಟು ಸಣ್ಣ ದೃಶ್ಯಕ್ಕೆ ಈ ಅವಲೋಕನ ಸ್ವಲ್ಪ ಉದ್ದವಾಯಿತೆಂದು ಕಾಣಬಹುದು. ನಿಜವಾಗಿ ಇದು ಬರಿಯ ಅವಲೋಕನ ಮಾತ್ರ ಅಲ್ಲ. ಇಂದು ನಮ್ಮ ಸಮಾಜದಲ್ಲಿ ಅನೇಕ ಜಟಿಲ ಪ್ರಶ್ನೆಗಳು ಎದ್ದುನಿಂತಿವೆ. ಜಾತಿ ಜಾತಿಗಳ ಅಹಂಭಾವದ ಪ್ರಶ್ನೆ ಇವುಗಳಲ್ಲಿ ಒಂದು. ತಮ್ಮ ಅನೇಕ ಕೃತಿಗಳಿಂದ ದೇಶಕ್ಕೂ ಭಾಷೆಗೂ ಸೇವೆಮಾಡಿರುವ ಶ್ರೀಮಾನ್ ಪುಟ್ಟಪ್ಪನವರು ಈ ಪ್ರಶ್ನೆಯನ್ನು ಹರಿಸುವುದರಲ್ಲಿ ತಮ್ಮ ಸಹಾಯವನ್ನು ಈ ಸಣ್ಣ ಕೃತಿಯ ಮೂಲಕ ನಮ್ಮ ಸಮಾಜದ ಮುಂದೆ ಇರಿಸಿದ್ದಾರೆ. ಕೃತಿ ಕಿರಿದಾದರೂ ವಿಷಯ ಹಿರಿದು; ಅದನ್ನು ಎತ್ತಿರುವವರು ಗಣ್ಯರು, ದಕ್ಷರು. ಇಂತಹ ಸಂದರ್ಭದಲ್ಲಿ ಅಭಿಪ್ರಾಯದ ಚರ್ಚೆ ಎಷ್ಟೇ ಸಂಗ್ರಹ

ವಾಗಿ ಆದರೂ ಇಷ್ಟು ಉದ್ದ ಆಗದೆ ವಿಧಿಯಿಲ್ಲ. ಇದಕ್ಕಿಂತ ಸಂಕ್ಷೇಪವಾಗಿ ಹೇಳಿದರೆ ವಿಮರ್ಶೆಯ ಉದ್ದೇಶ ಓದುಗರಿಗೆ ಸ್ಪಷ್ಟವಾಗದೆ ನಿಲ್ಲುವ ಸಂಭವವಿದೆ. ತಮ್ಮ ಕೃತಿಯನ್ನು ಸಮಾಧಾನಚಿತ್ತದಿಂದ ಓದಬೇಕೆಂದು ಕವಿ ಮುನ್ನುಡಿಯಲ್ಲಿ ಬೇಡಿದ್ದಾರೆ. ಇಂತಹ ವಿಷಯವನ್ನು ಚರ್ಚೆಮಾಡುವ ವಿಮರ್ಶೆಗೂ ಓದುವವರು ಇದೇ ಸಮಾಧಾನವನ್ನು ತರಬೇಕು. ಜಾತಿ ಕುಲದ ಮಾತು ಬಂದಾಗ ಮನಸ್ಸನ್ನು ಉದ್ರೇಕಕ್ಕೆ ಬಿಡದೆ ಸಮಾಧಾನದಿಂದ ಚರ್ಚಿಸುವ ಬಲುವೆ ಸಮಾಜದ ಶ್ರೇಯಸ್ಸಿನ ಮುಖ್ಯ ಸಾಧನಗಳಲ್ಲಿ ಒಂದು.

"ಜೀವನ"
ಜುಲೈ ೧೯೪೪

ಚಾ-ಓ-ಕ್ಯೂನ್ ಚೆಲುವೆಯ ತಂದೆ ಲಂಚ ಕೊಡಲೊಪ್ಪುವುದಿಲ್ಲ. "ನನ್ನ ಮಗಳು ಎಂತಹ ಚೆಲುವೆ. ಇವಳನ್ನು ಒಪ್ಪಲು ಹಣವೇಕೆ ಕೊಡಬೇಕು?" ಎಂದು ಅವನ ಜಂಭ. ಅಮಾತ್ಯ ಯೋಚಿಸುತ್ತಾನೆ. "ಇವರಿಗೆ ಇದಕ್ಕೆ ಶಿಕ್ಷೆ ಮಾಡಬೇಕು. ಹೇಗೆ? ಈ ಚೆಲುವೆಯ ಚಿತ್ರವನ್ನು ನೋಡಿ ಅಲ್ಲವೆ ಅರಸ ಮೆಚ್ಚಬೇಕು? ಆ ಚಿತ್ರವನ್ನು ಸ್ವಲ್ಪ ವಿರೂಪ ಮಾಡಿದರೆ ಇವರ ದುರಹಂಕಾರಕ್ಕೆ ಪ್ರತೀಕಾರವಾಯಿತು. ಪ್ರತೀಕಾರದಿಂದ ಸುಖಿಸದಿರುವನು ಅಧಮನೇ ಸರಿ." ಚಾ-ಓ-ಕ್ಯೂನ್ ಅರಮನೆಗೆ ಬಂದಿದಾಳೆ. ದಿನ ಕಳೆದಿದೆ. ವಿರೂಪಿತವಾದ ಚಿತ್ರವನ್ನು ನೋಡಿ ಅರಸನು ಅವಳನ್ನು ಕರೆಯದೆ ಬಿಟ್ಟಿದಾನೆ. ಒಂದು ರಾತ್ರಿ ಸುಂದರಿ ತನ್ನ ಮಾಡದ ಮುಂದೆ ಒಬ್ಬಳೇ ಕುಳಿತು ಚಿಂತಿಸುತ್ತ ಹೊತ್ತು ಹೋಗಲು ವೀಣೆ ನುಡಿಸುತ್ತಿದಾಳೆ. ಅರಸು ಅಲ್ಲಿಗೆ ಬಂದು ವೀಣೆಯ ಸ್ವರವನ್ನು ಕೇಳಿ ನುಡಿಸುವಾಕೆ ಯಾರೆಂದು ವಿಚಾರಿಸಿ ಇವಳನ್ನು ಕಾಣುತ್ತಾನೆ. "ಇಂತಹ ಸುಂದರಿಯನ್ನು ನಾನು ಈ ಮೊದಲು ಏಕೆ ಕಾಣದೇ ಹೋದೆ?" ಎನ್ನುತ್ತಾನೆ. ಸುಂದರಿ ಅವನಿಗೆ ಅಮಾತ್ಯ ನಡೆಸಿದ ಅಕೃತ್ಯವನ್ನು ವರ್ಣಿಸುತ್ತಾಳೆ. ಅರಸನು ಅವಳನ್ನು ಸ್ವೀಕರಿಸುತ್ತಾನೆ. ಹಾಗೆಯೇ ಈ ಅನ್ಯಾಯವನ್ನು ಮಾಡಿದ ಮಂತ್ರಿ ಮಾ-ಯನ್-ಷೋವಿಗೆ ಶಿರಶ್ಛೇದನ ದಂಡನೆಯನ್ನು ವಿಧಿಸುತ್ತಾನೆ. ಸುಂದರಿಯ ಅಪೇಕ್ಷೆಯಂತೆ ಅವಳ ತಂದೆ ಕೊಡಬೇಕಾಗಿದ್ದ ಒಂದು ತೆರಿಗೆಯನ್ನು ಮನ್ನಿಸಿ ಅವಳನ್ನು ಅರಮನೆಯ ಒಬ್ಬ ರಾಣಿಯಾಗಿ ಮಾಡುತ್ತಾನೆ.

ಈ ಮಧ್ಯೆ ಟಾರ್‌ಟರ್ ಖಾನ ಅರಮನೆಯ ಹೆಣ್ಣೊಂದನ್ನು ಕೇಳಿದ್ದ ಮಾತಿಗೆ ಪ್ರತಿಯಾಗಿ ಹೆಣ್ಣು ಯಾವುದೂ ಇಲ್ಲವೆಂದು ಉತ್ತರ ಹೋಗಿದೆ. ತಲೆದಂಡವಾಗಬೇಕಿದ್ದ ಅಮಾತ್ಯ ರಾಜನ ನಗರದಿಂದ ತಪ್ಪಿಸಿಕೊಂಡು ಓಡಿ ಖಾನನ ಬಳಿಗೆ ಸಾರುತ್ತಾನೆ. ಚಾ-ಓ-ಕ್ಯೂನ್ ಸುಂದರಿಯ ಚಿತ್ರವನ್ನು ಖಾನನಿಗೆ ತೋರಿಸಿ ಅವನು ಅರಸನಿಂದ ಅವಳನ್ನು ಬಯಸುವಂತೆ ಮಾಡುವುದು ಅಮಾತ್ಯನ ಉದ್ದೇಶ. ಇವನ ಮಾತು ಖಾನನಿಗೆ ಒಪ್ಪಿಗೆಯಾಗುತ್ತದೆ. ಅಮಾತ್ಯ ಅವನಿಗೆ "ಈ ಚೆಲುವೆಯನ್ನು ಖಾನನಿಗೆ ಕಳುಹಿಸು, ರೂಪಲೋಭದಿಂದ ಇವಳನ್ನು ಉಳಿಸಿಕೊಂಡು ಎರಡು

ರಾಷ್ಟ್ರಗಳ ಶಾಂತಿಯನ್ನು ಕೆಡಿಸಬೇಡ, ಎಂದೆನು; ಅವನು ಕೇಳಲಿಲ್ಲ'' ಎಂದು ಸುಳ್ಳಾಡುತ್ತಾನೆ. ಈ ಹೆಣ್ಣನ್ನು ಕಳುಹಿಸಬೇಕೆಂದು ಬಯಸಿ ಖಾನ ರಾಜನ ಕಡೆಗೆ ನಿಯೋಗಿಯನ್ನಟ್ಟುತ್ತಾನೆ.

ರಾಜನಿಗೆ ಸುಂದರಿಗೆ ಪರಸ್ಪರ ಪ್ರೇಮ ಬೆಳೆದಿದೆ. ಅವಳೊಡನೆ ಕಾಲ ಕಳೆಯುವುದರಲ್ಲಿ ಈ ಪ್ರಭು ಸಭಾಮಂದಿರ ಒಂದಿದೆಯೆಂಬುದನ್ನು ಮರೆತಿದಾನೆ, ಅಥವಾ ಸಭೆ ಮಾಡಿದರೆ ಅದು ನಡೆಯುತ್ತಿರುವಂತೆಯೇ ಎದ್ದು ಅಂತಃಪುರಕ್ಕೆ ಓಡುತ್ತಾನೆ. ಹೀಗಿರುವಲ್ಲಿ ಮಂತ್ರಿಮಂಡಲದ ಪ್ರಧಾನ ರಾಜನ ಸನ್ನಿಧಿಗೆ ಬರುತ್ತಾನೆ. ''ಅಮಾತ್ಯರಾದವರು ರಾಷ್ಟ್ರದ ಕ್ಷೇಮದ ವಿಷಯದಲ್ಲಿ ಶ್ರದ್ಧೆ ತಾಳಬೇಕು. ಆಡಳಿತದ ಭವನದಲ್ಲಿ ಮಹಾಜನದ ಶುಭವನ್ನು ಸಾಧಿಸುವ ಚಿಂತೆಯಲ್ಲಿ ತೊಡಗಿರಬೇಕು. ಅರಮನೆಯ ಔತಣಗಳಲ್ಲಿ ನೆರೆಯುವುದು ಎಷ್ಟೋ ಅಷ್ಟೇ ನಮ್ಮ ಮಂತ್ರಿಗಳು ಈಗ ಮಾಡುವ ಕೆಲಸ. ಅರಸರ ಸೇವೆಯಲ್ಲಿ ಅವರು ಒಂದು ದಿನವನ್ನಾದರೂ ಬಳಸಿದ್ದಿಲ್ಲ'' ಎನ್ನುತ್ತಾನೆ. ಅರಸನಿಗೆ ಖಾನನಿಂದ ಬಂದಿರುವ ನಿಯೋಗವನ್ನು ಅರಿಕೆಮಾಡಿ ''ಅದರಂತೆ ನಡೆಯದಿದ್ದರೆ ಟಾರ್ಟರ ಸೇನೆ ನಮ್ಮ ನಾಡನ್ನು ಪೀಡಿಸುತ್ತದೆ'' ಎನ್ನುತ್ತಾನೆ. ರಾಜನು ಆಗ್ರಹ ಮಾಡುತ್ತಾನೆ. ''ನಾವು ಸೇನೆಯನ್ನಿಟ್ಟಿರುವುದು, ದಂಡಯಾತ್ರೆ ಕಳುಹಿಸುವುದು ನಿಷ್ಪ್ರಯೋಜನವಾಯಿತು. ಅರಮನೆಯನ್ನು ಮುತ್ತಿರುವ ಆಡಳಿತದ ಅಧಿಕಾರಿ ಸೇನಾನಾಯಕರ ತಂಡವೆಲ್ಲ ವ್ಯರ್ಥವಾಯಿತು. ರಾಣಿಯನ್ನು ಒಪ್ಪಿಸದೆ ಹಗೆಯನ್ನು ಹಿಂದಿರುಗಿಸುವ ದಾರಿ ಒಂದನ್ನು ಇವರು ಕಂಡುಹಿಡಿಯಲಿ. ಇವರ ಕೈಯಿಂದ ಸಾಗದ ಕೆಲಸವನ್ನು ಹೆಣ್ಣು ನಡೆಸಬೇಕೆ? ಹಾಗಾದರೆ ಇನ್ನು ಮುಂದೆ ರಾಜ್ಯವನ್ನು ಹಗೆಗಳಿಂದ ರಕ್ಷಿಸಬೇಕಾದರೆ ಅಧಿಕಾರಿಗಳನ್ನಲ್ಲ, ಹೆಂಗಸರನ್ನು ಇರಿಸಿಕೊಳ್ಳುವುದೇ ಸರಿಯಾದೀತು.'' ರಾಜ ಏನು ಹೇಳಿದರೂ ಪ್ರಯೋಜನವಿಲ್ಲ. ಮಂತ್ರಿಮಂಡಲದ ಪ್ರಧಾನ ಅರಸನಿಗೆ ಎಚ್ಚರಿಕೆ ಹೇಳುತ್ತಾನೆ. ''ಹೆಣ್ಣಿನ ಚೆಲುವಿಗಾಗಿ ಹಿಂದೆ ಎಷ್ಟೋ ರಾಜ್ಯ ಹಾಳಾದುದುಂಟು. ಇಂದು ಅದು ಮತ್ತೆ ಆಗದಿರಲಿ.'' ಚಾ-ಓ-ಕ್ಯೂನ್ ರಾಣಿಯನ್ನು ಮಾರನೆಯ ದಿನ ಖಾನನಿಗೆ ಒಪ್ಪಿಸುವುದಾಗಿ ನಿರ್ಧರವಾಗುತ್ತದೆ.

# ರಾಮರಾಜ್ಯ

## ೧

ಶ್ರೀ ಸುಬ್ಬರಾವ್ ದತ್ತಾತ್ರೇಯ ನಾಡಕರಣಿಯವರು ಕಾರವಾರದ ನಮ್ಮ ಒಬ್ಬ ಪ್ರಿಯಮಿತ್ರರು. ಎರಡು ವರ್ಷದ ಹಿಂದೆ ನಾನು ಕಾರವಾರಕ್ಕೆ ಹೋದಾಗ ನನಗೆ ಇವರ ಪರಿಚಯ ಆಯಿತು. ಸುಬ್ಬರಾಯರ ಬುದ್ಧಿ ಸೂಕ್ಷ್ಮ. ಇವರು ವಿಸ್ತಾರವಾದ ಸಾಹಿತ್ಯಾಭ್ಯಾಸ ನಡೆಸಿದಾರೆ; ತತ್ವವನ್ನು ಕುರಿತು ಚಿಂತಿಸಿದಾರೆ; ಧರ್ಮದ ತಿರುಳನ್ನು ವಿಚಾರ ಮಾಡಿದಾರೆ. ಇವರು ಬಹುವಿಧದಲ್ಲಿ ದಕ್ಷರೂ ಹೌದು. ಸಂಸ್ಕೃತ ದಲ್ಲಿ ಶ್ಲೋಕವನ್ನು ರಚಿಸಬಲ್ಲರು; ಇಂಗ್ಲೀಷ್ ಚೆನ್ನಾಗಿ ಬರೆಯುತ್ತಾರೆ; ನವಯುಗ ಎಂಬ ಪತ್ರಿಕೆಯನ್ನು ನಡೆಸುತ್ತಿದ್ದರು. ಹಿಂದೂ ಸಮಾಜದ ಇಂದಿನ ಸ್ಥಿತಿಯನ್ನು ನೋಡಿ ಖಿನ್ನರಾಗಿ ಈ ನಮ್ಮ ಮಿತ್ರರು ಹೊಸ ಕಾಲಕ್ಕೆ ಹೊಸದೊಂದು ಸ್ಮೃತಿ ಬೇಕು ಎಂದು ನಿರ್ಧರಿಸಿಕೊಂಡು ಪ್ರಾಜ್ಞರ ಪರಿಶೀಲನಕ್ಕಾಗಿ ಒಂದು ಸಲಹೆಯ ಸ್ಮೃತಿಯನ್ನು ರಚಿಸಿ ಹೊರಡಿಸಿದಾರೆ. ಸರ್ವ ಧರ್ಮಗಳ ಸಮನ್ವಯ ಅವಶ್ಯಕ ಎಂಬ ದೃಷ್ಟಿ ಯಿಂದ ಅನೇಕ ಮಹನೀಯರನ್ನು ಕರೆಸಿ ಕಾರವಾರದಲ್ಲಿ ಈಗ ಕೆಲವು ವರ್ಷಗಳ ಹಿಂದೆ ಇವರೊಬ್ಬರೇ ಒಂದು ಸಮ್ಮೇಲನವನ್ನು ನಡೆಸಿದರು. ಈ ನಾಲ್ಕು ಮಾತಿನಿಂದ ಇವರು ಎಂಥ ಮೇಧಾವಿಗಳು, ಇವರ ದೃಷ್ಟಿ ಎಷ್ಟು ವಿಶಾಲವಾದದು, ಇವರ ಕಾರ್ಯಕ್ಷೇತ್ರ ಎಷ್ಟು ವಿಸ್ತಾರ ವಾದದು, ಎಂದು ತಕ್ಕಮಟ್ಟಿಗೆ ಸ್ಪಷ್ಟವಾಗಬೇಕು.

ಈ ನಮ್ಮ ಮಿತ್ರರು "ರಾಮರಾಜ್ಯ" ಎಂಬ ಹೆಸರಿನ ಒಂದು ಪುಸ್ತಕವನ್ನು ಬರೆದಿದಾರೆ. ಅದು ಇಂಗ್ಲೀಷಿನಲ್ಲಿದೆ. ಒಳ್ಳೆಯ ರಾಜ್ಯ, ಮಾದರಿಯ ರಾಜ್ಯ, ಎನ್ನಬೇಕಾದರೆ ನಮ್ಮಲ್ಲಿ ರಾಮರಾಜ್ಯ ಎನ್ನುವುದು ಒಂದು ವಾಡಿಕೆ. ರಾಮ ಒಬ್ಬ ಆದರ್ಶಪುರುಷ, ಅವನ ಆಡಳಿತ ಬಹು ಉತ್ತಮ ರೀತಿಯದು, ಎಂದು ಇದರ ಹಿಂದಣ ಭಾವ. ಇದು ಎಲ್ಲಾ ಕಾಲದಲ್ಲೂ ಎಲ್ಲರಿಗೂ ಒಪ್ಪಿಗೆಯಾಗಿತ್ತೋ ಇಲ್ಲವೋ ನಾವು ಹೇಳು ವಂತಿಲ್ಲ. ಅಲ್ಲದೆ ರಾಮರಾಜ್ಯ ಎಂದವರೆಲ್ಲ ಒಂದೇ ತರದ ರಾಜ್ಯವನ್ನು

ಮಾದರಿಯ ರಾಜ್ಯವೆಂದು ಕಲ್ಪಿಸಿಕೊಂಡಿದ್ದರೆಂದು ಹೇಳಲಾಗುವುದಿಲ್ಲ. ಕಲ್ಪನೆಗಳು ಬೇರೆ ಬೇರೆಯಾದರೂ ಮಾತು ಈ ಅರ್ಥದಲ್ಲಿ ವಾಡಿಕೆಗೆ ಬಂದಿದೆ. ಈ ಮಾತನ್ನು ಒಟ್ಟಿನ ಒಂದು ಅರ್ಥದಲ್ಲಿ ಒಳ್ಳೆಯ ರಾಜ್ಯ ಎಂಬ ಧ್ವನಿ ಬರುವಂತೆ ಮಹಾತ್ಮಾ ಗಾಂಧಿಯವರು ಅನೇಕವೇಳೆ ಬಳಸಿರುವುದುಂಟು. ಕಾಥಿಯಾವಾಡದ ಸಂಸ್ಥಾನದ ಪ್ರಜೆಗಳ ಸಮ್ಮೇಲನವೊಂದರ ಅಧ್ಯಕ್ಷರಾಗಿ ಮಹಾತ್ಮರು ರಾಜರಿಗೆ, ಪ್ರಜೆಗಳಿಗೆ, 'ನಿಮ್ಮ ರಾಜ್ಯವನ್ನು ರಾಮರಾಜ್ಯವಾಗಿ ಮಾಡಿಕೊಳ್ಳಿ' ಎಂದರಂತೆ. ಹಾಗೆಯೇ ರಾಮಚಂದ್ರನ ಪತ್ನೀ ಪರಿತ್ಯಾಗವನ್ನು ಆದರ್ಶವರ್ತನವೆಂದು ಹೊಗಳಿ ಹೇಳಿದರಂತೆ. ಹೊಸಕಾಲದ ದೃಷ್ಟಿಯಲ್ಲಿ ರಾಮನನ್ನು ಆದರ್ಶ ಪುರುಷನೆನ್ನುವುದಕ್ಕೂ ಅವನ ರಾಜ್ಯವನ್ನು ಆದರ್ಶರಾಜ್ಯವೆನ್ನುವುದಕ್ಕೂ ಅನೇಕರು ಒಪ್ಪುವುದಿಲ್ಲ. ಶ್ರೀ ನಾಡಕರಣಿಯವರು ಇಂತಹವರಲ್ಲಿ ಒಬ್ಬರು. ಮಹಾತ್ಮಾ ಗಾಂಧಿಯವರು ಇಂಥ ಮಾತುಗಳನ್ನು ಹೇಳುವುದರಿಂದ ಜನದ ತಿಳುವಳಿಕೆ ತಪ್ಪುವ ಸಂಭವವಿದೆಯೆಂದು ನಾಡಕರಣಿಯವರಿಗೆ ತೋರಿತು. ಅವರು ಈ ವಿಚಾರವನ್ನು ವಿಸ್ತರಿಸಿ ಮಹಾತ್ಮರು ತಮ್ಮ ರಾಮರಾಜ್ಯದ ಕಲ್ಪನೆಯನ್ನು ಸ್ಪಷ್ಟಪಡಿಸಬೇಕು ಎಂದು ಬೇಡಿ ಈ ಪುಸ್ತಕವನ್ನು ಬರೆದರು.

ತಾವು ಈ ಪುಸ್ತಕವನ್ನು ಬರೆಯುವಂತೆ ಆಗ ಪ್ರೇರಣೆ ಬಂದದ್ದು ಹೇಗೆ ಎನ್ನುವುದನ್ನು ಶ್ರೀಮಾನ್ ನಾಡಕರಣಿಯವರು ವರ್ಣಿಸಿದಾರೆ. ಮಹಾತ್ಮರು ಕಾಥಿಯವಾಡದಲ್ಲಿ ಮಾತನಾಡಿದ್ದು ೧೯೩೯ರಲ್ಲಿ. ೧೯೪೦ರಲ್ಲಿ ತಾವು ಸನಾತನ ಧರ್ಮಿಗಳೆಂದು ಹೇಳಿಕೊಳ್ಳುವ ಕೆಲವು ಮಂದಿ 'ಅಖಿಲ ಭಾರತ ವರ್ಣಾಶ್ರಮ ಧರ್ಮ ಸ್ವರಾಜ್ಯ ಸಂಘ' ಎಂಬ ಒಂದು ಸಂಘವನ್ನು ನಿರ್ಮಿಸಿದರು. ಮಹಾರಾಷ್ಟ್ರ ದೇಶದ ಜಲಗಾಮಿನಲ್ಲಿ ಒಂದು ಸಮ್ಮೇಳನವನ್ನು ಸೇರಿಸಿ ಸನಾತನ ಧರ್ಮದ ಪುನರುಜ್ಜೀವನದ ಕಾರ್ಯಕ್ರಮವನ್ನು ಪರ್ಯಾಲೋಚಿಸಿದರು. ಸ್ವಾಗತ ಸಮಿತಿಯ ಅಧ್ಯಕ್ಷರು ಆ ವೇಳೆ ರಾಮಚಂದ್ರನ ಆಳ್ವಿಕೆಯಲ್ಲಿ ಇದ್ದಂತಹ ಸ್ವರಾಜ್ಯವನ್ನು ನಾವು ಬಯಸುತ್ತೇವೆ ಎಂದರಂತೆ. ರಾಮರಾಜ್ಯ ಸಮ್ಮೇಳನ ಎಂದು ಹೇಳಬಹುದಾದ ಈ ಸಮ್ಮೇಳನದ ಕೆಲವು ಲಕ್ಷಣಗಳು ಎಂದು ಶ್ರೀಮಾನ್

ನಾಡಕರಣಿಯವರು ಇವನ್ನು ಹೇಳಿದಾರೆ. ಸಮ್ಮೇಳನದ ಕ್ಷೇತ್ರದಲ್ಲಿ ಒಂದು ವಿಷ್ಣುಯಾಗ ನಡೆಯಿತು. ಶೂದ್ರರು, ಅಸ್ಪೃಶ್ಯರು, ಹಾಗೆಯೇ ಯಾವ ಜಾತಿಯವರೆಂಬ ಭೇದವಿಲ್ಲದೆ ಎಲ್ಲಾ ಹೆಂಗಸರು, ಅಲ್ಲಿಂದ ದೂರ ವಾಗಿರಬೇಕಾಯಿತು. ಸಮ್ಮೇಳನದ ಯಾವ ಕಾರ್ಯಕ್ರಮಕ್ಕೂ ಅಸ್ಪೃಶ್ಯರಿಗೆ ಪ್ರವೇಶವಿರಲಿಲ್ಲ. ಆದರೆ ಸಮ್ಮೇಳನ ಶಾಂತವಾಗಿ ನಡೆಯು ವಂತೆ ನೋಡಿಕೊಳ್ಳುವುದಕ್ಕೆ ಮುಹಮ್ಮದೀಯ ಪೋಲೀಸರು ಯಾಗ ವಾಟೆಯೊಳಗೆ ಬಂದಿದ್ದರು. ಸಮ್ಮೇಳನದ ನಿರ್ಣಯಗಳಲ್ಲಿ ಒಂದು ನಿರ್ಣಯ ಶಾರದಾ ಅವರ ಬಾಲ್ಯ ವಿವಾಹ ನಿಷೇಧ ಕಾನೂನನ್ನು ವಿರೋಧಿಸಿತು. ಒಂದು ನಿರ್ಣಯ ವಿಧವಾ ಪುನರ್ವಿವಾಹ ಆಗಬಹುದೆಂಬ ಕಾನೂನನ್ನು ಖಂಡಿಸಿತು. ಒಂದು ನಿರ್ಣಯ ಅಸ್ಪೃಶ್ಯರು ಸನಾತನ ಹಿಂದೂ ಧರ್ಮಕ್ಕೆ ಸೇರಿದವರು, ಆದರೆ ನಾಲ್ಕು ವರ್ಣಗಳಿಂದ ಹೊರಗಿರತಕ್ಕವರು, ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಿತು.

ಇಂಥ ರಾಮರಾಜ್ಯದಿಂದ ಏನು ಪ್ರಯೋಜನ ಎನ್ನುವುದು ಶ್ರೀ ನಾಡಕರಣಿಯವರ ಆಕ್ಷೇಪ. ರಾಮರಾಜ್ಯ, ಸನಾತನ ಧರ್ಮ, ಎನ್ನುವ ಈ ಜನರ ಮನಸ್ಸು ಧರ್ಮವನ್ನು ಕಾಣದು, ಜನಾಂಗದ ಕ್ಷೇಮವನ್ನೂ ಗ್ರಹಿಸದು, ಎಂದು ಇವರ ಅಭಿಪ್ರಾಯ. ಇದನ್ನು ಸಾಧಿಸಲು ಇವರು ರಾಮನು ವಾಲಿಯನ್ನು ಕೊಂದ ವಿಚಾರ, ಅವನು ಸೀತೆಯನ್ನು ಅಗ್ನಿ ಪ್ರವೇಶಕ್ಕೆ ಮೊದಲು ಅವಮಾನಪಡಿಸಿದ ಮತ್ತು ಆಮೇಲೆ ಜನರನ್ನು ಒಪ್ಪಿಸುವುದಕ್ಕಾಗಿ ಕಾಡಿಗೆ ಅಟ್ಟಿದ ವಿಚಾರ, ಅವನು ಶೂದ್ರ ತಪಸ್ವಿ ಶಂಭೂಕನ ತಲೆ ತೆಗೆದ ವಿಚಾರ, ದ್ರೋಣನು ಏಕಲವ್ಯನ ಬೆರಳನ್ನು ಕಡಿಸಿದ ವಿಚಾರ, ವಿಷ್ಣು ವಾಮನನಾಗಿ ವರ ಪಡೆದು ತ್ರಿವಿಕ್ರಮನಾಗಿ ಬಲಿಯನ್ನು ನಿಗ್ರಹಿಸಿದ ಮೋಸದ ವಿಚಾರ, ಈ ವಿಷಯಗಳನ್ನೂ ಇದಕ್ಕೆ ಸಂಬಂಧಪಟ್ಟು ಬರುವ ವಿವರಗಳನ್ನೂ ಚರ್ಚೆಮಾಡಿ, ಈ ಸನಾತನಿಗಳ ರಾಮರಾಜ್ಯ ಒಳ್ಳೆಯ ರಾಜ್ಯವಲ್ಲ, ಇವರ ಸನಾತನ ಧರ್ಮ ಲೋಕಕ್ಕೆ ಹಿತಕರವಲ್ಲ, ಎಂದು ವಾದಿಸಿದಾರೆ. ರಾಮನು ವಾಲಿಯನ್ನು ಮರೆಯಿಂದ ಕೊಂದದ್ದು ತಪ್ಪು. ಸೀತೆ ಸೆರೆಯಿಂದ ಹೊರಗೆ ಬಂದಾಗ ಅವಳನ್ನು ಅವಮಾನಪಡಿಸಿದ್ದು ತಪ್ಪು. ಗರ್ಭಿಣಿಯಾದ ಆಕೆಯನ್ನು ಪ್ರಜೆಗಳನ್ನು

ಮೆಚ್ಚಿಸುವುದಕ್ಕಾಗಿ ಕಾಡಿಗೆ ಅಟ್ಟಿದ್ದು ತಪ್ಪು. ಶೂದ್ರನಾಗಿ ತಪಸ್ಸು ಮಾಡಿದನೆಂದು ಶಂಭೂಕನನ್ನು ಕೊಂದದ್ದು ತಪ್ಪು. ಇವು ರಾಮರಾಜ್ಯದಲ್ಲಿ ಕುಂದುಗಳು. ದ್ರೋಣನು ಅರ್ಜುನನ ಸಲವಾಗಿ ಏಕಲವ್ಯನ ಬೆರಳನ್ನು ಕಡಿಸಿದ್ದು ತಪ್ಪು. ವಿಷ್ಣು ಮೋಸದಿಂದ ಬಲಿಯನ್ನು ನಿಗ್ರಹಿಸಿದ್ದು ತಪ್ಪು. ಹುಟ್ಟನಿಂದ ಜಾತಿಯನ್ನು ನಿರ್ಧರಿಸಿ ಅದರಿಂದ ಒಬ್ಬೊಬ್ಬನ ಕರ್ತವ್ಯವನ್ನು ನಿರ್ಧರಿಸುವುದು ಅತಂತ್ರ ವರ್ತನ. ನಮ್ಮ ಧರ್ಮಶಾಸ್ತ್ರಗಳು ಆಧುನಿಕ ದೃಷ್ಟಿಯಿಂದ ಕ್ಷೇಮಕರವಲ್ಲದ ಅನೇಕ ನಿಯಮಗಳನ್ನು ವಿಧಿಸಿವೆ. ಗೀತೆ ಕೂಡ "ಪಾಪಯೋನಿಗಳಾದ ಸ್ತ್ರೀ, ವೈಶ್ಯ, ಶೂದ್ರರು ಸಹ" ಎಂಬಂತಹ ಮಾತಿನಲ್ಲಿ ಒಂದು ಪಕ್ಷಪಾತ ಬುದ್ಧಿಯನ್ನು ತೋರಿಸುತ್ತದೆ. ವರ್ಣ, ಆಶ್ರಮಗಳ ವ್ಯವಸ್ಥೆ ಮತ್ತೆ ಉಜ್ಜೀವಿಸುವುದು ಸಾಧ್ಯವಲ್ಲ; ಅದು ಸಾಧ್ಯವಾದರೂ ಹಿತವಲ್ಲ. ಸ್ಪೃಶ್ಯ ಅಸ್ಪೃಶ್ಯ ಎಂಬ ಭೇದಗಳು ಸಮಾಜದಲ್ಲಿ ಕ್ಷೇಮಕರವಲ್ಲ. ಯಾಗಗಳಲ್ಲಿ ಜೀವಗಳನ್ನು ತೆಗೆಯುವುದು ಸರಿಯಲ್ಲ. ಇದೆಲ್ಲ ಸನಾತನ ಧರ್ಮದಲ್ಲಿ ಕುಂದುಗಳು.

೨

ಸಮ್ಮೇಳನಗಳ ಮಾತು ಹೇಗೇ ಇರಲಿ. ಸಾಮಾನ್ಯವಾಗಿ ಬಳಕೆಯಲ್ಲಿ ರಾಮರಾಜ್ಯ ಎನ್ನುವ ವೇಳೆ ನಮ್ಮ ಜನರ ಮನಸ್ಸಿನಲ್ಲಿ ಪ್ರಾಯಶಃ ಒಂದು ರಾಜ್ಯದ ಸ್ಥಿತಿಯ ವಿವರಗಳು ಮೂಡಿರುವುದಿಲ್ಲ. ರಾಮರಾಜ್ಯವೆಂದರೆ ಒಳ್ಳೆಯ ರಾಜ್ಯ; ಎಂದರೆ ಎಲ್ಲರೂ ಸುಖವಾಗಿರುವ ರಾಜ್ಯ. ಎಲ್ಲರೂ ಎಂದರೆ ಯಾವ ಎಲ್ಲರು? ಸುಖವಾಗಿ ಎಂದರೆ ಹೇಗೆ ಸುಖವಾಗಿ? ಈ ವಿಭಜನೆ ಚರ್ಚೆ ಬಂದಾಗ ನಡೆಯಬಹುದು. ಒಂದು ರಾಜ್ಯವನ್ನು ರಾಮರಾಜ್ಯ ಎಂದು ವರ್ಣಿಸುವಾಗ ಮನಸ್ಸಿನಲ್ಲಿ ನಡೆಯುವುದಿಲ್ಲ. ಎಷ್ಟೋ ಶತಮಾನ ಕಾಲ ದೇಶಾದ್ಯಂತವಾಗಿ ವರ್ಷಂಪ್ರತಿ ರಾಮಚಂದ್ರನ ಪಟ್ಟಾಭಿಷೇಕವನ್ನು ನಡೆಸಿ ನಮ್ಮ ಜನ ರಾಮಚಂದ್ರ ಶ್ರೇಷ್ಠ ರೀತಿಯ ರಾಜ ಎಂಬ ಒಂದು ನಂಬಿಕೆಯನ್ನು ನೆನಪಿರಿಸಿಕೊಂಡಿದೆ, ದೃಢಪಡಿಸಿಕೊಂಡಿದೆ. ಯಾವ ಎಲ್ಲರೂ, ಹೇಗೆ ಸುಖವಾಗಿ, ಎಂದು ಚರ್ಚೆ ಬರುವುದೇ ಆದರೆ ಆಗ ಚರ್ಚೆಯಲ್ಲಿ ಭಾಗ ವಹಿಸುವವರು ತಮ್ಮ

ತಮ್ಮ ಮನೋಧರ್ಮಗಳಂತೆ ವಿವರಗಳನ್ನು ತುಂಬಿಕೊಳ್ಳುತ್ತಾರೆ. ಈ ತುಂಬಿಕೊಳ್ಳುವಿಕೆ ಕಾಲಾನುಕ್ರಮವಾಗಿ ಶತಮಾನ ಶತಮಾನದಲ್ಲೂ ನಡೆದು ಬಂದಿದೆ. ಈಗಲೂ ನಡೆಯುತ್ತಿದೆ. ಹಿಂದಿನವರ ಭಾವನೆಯಲ್ಲಿ 'ರಾಮು' ಎಂದರೆ 'ಒಳ್ಳೆಯ' ಎಂದು ಅರ್ಥ. ಹಿಂದಿನವರು ಒಳ್ಳೆಯದು ಎಂದು ಎಣಿಸಿದ ಕೆಲವು ಸಂಗತಿ ಈಗ ನಮಗೆ ಒಳ್ಳೆಯದು ಎಂದು ಕಾಣದ್ದರಿಂದ ನಾವು ರಾಮರಾಜ್ಯ ಒಳ್ಳೆಯ ರಾಜ್ಯವಲ್ಲ ಎನ್ನುತ್ತಿದೇವೆ. ನಮ್ಮ ಮಿತ್ರರಾದ ಸುಬ್ಬರಾಯರು ಮಾಡಿರುವುದು ಇಷ್ಟೇ. ವೀರಮಾನಿಗಳಾದ ಸನಾತನ ಧರ್ಮಿಯರು ತಾವು ಹೇಳುವುದೇ ಸರಿಯಾದ ಸನಾತನ ಧರ್ಮ ಎಂಬ ಹಟದಲ್ಲಿ ಯಾವ ಯಾವುದನ್ನು ನಿಯಮಿಸಬಹುದೋ ಅದನ್ನೆಲ್ಲ ರಾಮರಾಜ್ಯದ ಅಂಗಗಳೆಂದು ಭಾವಿಸಿ ಇವರು ರಾಮರಾಜ್ಯವನ್ನು ದೂರಿದಾರೆ. ಆದರೆ ಇವರು ದೂರಿರುವ ಈ ರಾಮರಾಜ್ಯ ಎಲ್ಲ ರಾಮರಾಜ್ಯವಾದಿಗಳ ರಾಮರಾಜ್ಯವಲ್ಲ. ವಾಲೀ ವಧೆಯ ಭಾಗ ಎಲ್ಲರ ರಾಮರಾಜ್ಯದ ಪರಿಧಿಯಲ್ಲಿ ಸೇರುವುದಿಲ್ಲ. ಸೀತಾಪರಿತ್ಯಾಗ ಮತ್ತು ಶಂಭೂಕವಧೆಯ ಭಾಗ ರಾಮರಾಜ್ಯದ ಮೂಲ ಕಲ್ಪನೆಯಲ್ಲಿ ಸೇರಿದ್ದಲ್ಲ. ವಾಲಿಯ ವಧೆಯನ್ನು ಸರಿಯೆನ್ನುವ ಸನಾತನಿಗಳೂ ಏಕಲವ್ಯನ ಪ್ರಸಂಗ ಸರಿಯೆಂದು ಸಮರ್ಥಿಸುವುದನ್ನು ನಾವು ಕೇಳಿಲ್ಲ. ವಾಮನಾವತಾರದ ಕಥೆಯನ್ನು ನಂಬುವವರು ಅದನ್ನು ಮನುಷ್ಯರ ನಡತೆಗೆ ಮೇಲ್ಪಂಕ್ತಿಯೆಂದು ಹೇಳಿದ್ದೂ ಅನುಭವದ ವಿಷಯವಲ್ಲ.

ಆದ್ದರಿಂದ ಇಂಥ ಟೀಕೆ ಮಾಡುವ ಮೊದಲು ನಾವು ರಾಮರಾಜ್ಯ ಒಳ್ಳೆಯ ರಾಜ್ಯ ಎನ್ನುವವರಲ್ಲಿ ಬಹುಜನ ಯಾವ ಕಲ್ಪನೆಯನ್ನಿಟ್ಟುಕೊಂಡಿದಾರೆ, ಈಗ ರಾಮರಾಜ್ಯ ಬೇಕೆನ್ನುವ ದೇಶನಾಯಕರು ಯಾವ ಧ್ಯೇಯವನ್ನಿಟ್ಟುಕೊಂಡಿದಾರೆ ಎಂದು ಗ್ರಹಿಸುವುದು ಆವಶ್ಯಕ.

೩

ಈಗ ನಮಗೆ ರಾಮನ ಚರಿತ್ರೆಯಲ್ಲಿ ಹಿರಿಯ ದೋಷಗಳಾಗಿ ಕಾಣುವ ಶಂಭೂಕವಧೆ, ಪತ್ನೀ ಪರಿತ್ಯಾಗ ಉತ್ತರಕಾಂಡದಲ್ಲಿ ಉಕ್ತವಾಗಿರುವ ಸಂಗತಿಗಳು. ನಮ್ಮ ಈಗಿನ ಉತ್ತರಕಾಂಡ ಮೂಲ

ರಾಮಾಯಣದ ಒಂದು ಭಾಗ ಅಲ್ಲ. ಈ ವಿಷಯವನ್ನು ವಿಚಾರ ಮಾಡಲೊಪ್ಪುವ ಯಾರಿಗಾದರೂ ಇದರ ನಿಜವನ್ನು ತೋರಿಸಿಕೊಡ ಬಹುದು. ಆ ಪ್ರಶ್ನೆಯನ್ನು ಇಲ್ಲಿ ಬೆಳಸಿ ಪ್ರಯೋಜನವಿಲ್ಲ. ಆರು ಕಾಂಡಗಳ ರಾಮ ಪಟ್ಟಾಭಿಷಿಕ್ತನಾಗಿ ತನ್ನ ರಾಜ್ಯವನ್ನು ಸುಖದಲ್ಲಿ ಆಳಿದನೆಂಬ ಮಾತು ಯಾರ ಮನಸ್ಸಿಗೋ ಸಾಲದೆ ಹೋಗಿ ಅವರು ಆ ಆಳ್ವಿಕೆಯ ಪರಿಯನ್ನು ವಿವರಿಸಬೇಕೆಂದು ಯೋಚಿಸಿದರು. ವರ್ಣ ಧರ್ಮಪಾಲಕನಾದ ದೊರೆ ಆ ಧರ್ಮದ ದೂಷಕನಿಗೆ ಮರಣದಂಡನೆ ಮಾಡಿದನೆಂದು ಶೂದ್ರ ತಪಸ್ವಿ ಶಂಭೂಕನ ಕತೆಯನ್ನು ಹೇಳಿದರು. ಹಾಗೆಯೇ ಈ ಶ್ರೇಷ್ಠ ರಾಜನು ತನ್ನ ಪ್ರಜೆಗಳ ಮನಸ್ಸನ್ನು ಒಪ್ಪಿಸುವುದು ತನ್ನ ಕರ್ತವ್ಯವೆಂದು ತಿಳಿದಿದ್ದನೆಂದು ತೋರಿಸುವುದಕ್ಕಾಗಿ ತನ್ನ ಪತ್ನಿ ಸತ್ಯವಂತೆ ಎಂದು ತಿಳಿದಿದ್ದೂ ಜನರ ಶಂಕೆಗೆ ಮನ್ನಣೆ ಕೊಟ್ಟು ಅವಳನ್ನು ತೊರೆದನು ಎಂದು ಸೀತಾಪರಿತ್ಯಾಗದ ಕಥೆಯನ್ನು ಜೋಡಿಸಿದರು.

ಉತ್ತರಕಾಂಡ ರಾಮಾಯಣಕ್ಕೆ ಒಂದು ಭಾಗವೆಂಬಂತೆ ಸೇರಿದುದು, ನಮ್ಮ ದೃಷ್ಟಿಯಿಂದ ಬಹು ಹಿಂದಿನ ಮಾತು. ವರ್ಣಧರ್ಮ ಪರಿಪಾಲನ ಪ್ರಜೆಗಳ ಆರಾಧನ ಎಂಬ ಈ ಎರಡು ಗುಣಗಳನ್ನು ಧರ್ಮರಕ್ಷಕನಾದ ರಾಮಚಂದ್ರನಿಗೆ ಆರೋಪಿಸುವ ಕಾಲಕ್ಕೆ ಈ ಗುಣಗಳನ್ನು ಬಹು ಶ್ರೇಷ್ಠ ವಾದುವೆಂದು ಆ ಆರೋಪಿಸಿದವರಾದರೂ ತಿಳಿದಿದ್ದಿರಬೇಕು. ಈಗಿನ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಡ್ಯೂಸ್, ಫ್ಯೂರರ್, ಸ್ಟಾಲಿನ್ ಪ್ರಭೃತಿಗಳು ತಮ್ಮ ರಾಜ್ಯ ಅನುಸರಿಸುತ್ತಿರುವ ನೀತಿಗೆ ವಿರೋಧವಾಗಿ ನಡೆಯು ವವರನ್ನು ಅಡಗಿಸುವ ರೀತಿ ಇದೇ ಮನೋಧರ್ಮದ ರೀತಿ. ಈ ಕಲ್ಪನೆಯು ರಾಮನಿಗಿಂತ ಎಷ್ಟೋ ಒಳ್ಳೆಯವನಾದ ಭವಭೂತಿಯ ರಾಮ ಕೂಡ "ಲೋಕದ ಆರಾಧನಕ್ಕಾಗಿ ತಾನು ಸೀತೆಯನ್ನಾದರೂ ತೊರೆದೇನು" ಎಂದು ಹೆಮ್ಮೆ ನುಡಿಯುತ್ತಾನೆ. ಶಂಭೂಕನನ್ನು ದಂಡಿಸಿದ ಮಾತು ಭವಭೂತಿಯ ಕಾಲಕ್ಕೇ ಪುನರ್ವಿಮರ್ಶೆಗೆ ಪಾತ್ರವಾಗಿತ್ತು; ಆ ದಂಡನೆ ಸರಿಯೊ ಎಂದು ಬಲ್ಲವರಲ್ಲಿ ಸಂದೇಹ ಹುಟ್ಟಿತ್ತು. ಆದರೂ ರಾಮನು ಧರ್ಮವನ್ನು ಪಾಲಿಸುವ ರಾಜ, ಈ ಕಠೋರವಾದ ಶಾಸನವನ್ನು, ಈ ನಿಷ್ಠುರವಾದ ಆತ್ಮನಿರಾಸವನ್ನು ಮಾಡಿದ ಧರ್ಮವೀರ ಪ್ರಭು ಎಂಬ

ಪ್ರತೀತಿ ನಿಂತಿತು. ಈಚೆಗಾದರೂ ಈ ಎರಡು ಸಂಗತಿಯೂ ರಾಮನ ಚರಿತ್ರೆಗೆ ಅಂಟಿಯೇ ಇವೆ. ಶಾಸನ ಸರಿಯೋ ತಪ್ಪೋ ಎನ್ನುವ ಮಾತು ಮುಖ್ಯವಲ್ಲ, ಯಾವುದು ಶಾಸನವಾಗಿದೆಯೋ ಅದನ್ನು ನಡೆಸುವುದು ರಾಜನ ಕರ್ತವ್ಯ: ಎಂಬ ಸೂತ್ರದ ಅಡಿಯಲ್ಲಿ ಶಾಸನ ಪಕ್ಷಪಾತಿಗಳು ಶಂಭೂಕನ ವಧೆಯನ್ನು ಸಮರ್ಥಿಸುತ್ತಾರೆ. ಹಾಗೆಯೇ ಪತ್ನಿ ಒಳ್ಳೆಯವಳೆ ಅಲ್ಲವೆ ಎನ್ನುವುದು ಮುಖ್ಯವಲ್ಲ, ಪ್ರಜೆಗಳು ಅವಳ ವಿಷಯ ಶಂಕಿಸುತ್ತಿದಾರೆನ್ನುವುದು ಮುಖ್ಯ. ಪ್ರಜಾಪ್ರೇಮಿಯಾದ ಅರಸು ಪ್ರಜೆಗಳ ಮನಸ್ಸನ್ನು ಒಪ್ಪಿಸುವುದಕ್ಕಾಗಿ ತನ್ನ ಇಷ್ಟವನ್ನೂ ನಂಬಿಕೆಯನ್ನೂ ಒತ್ತಟ್ಟಿಗಿಡಬೇಕು ಎಂಬ ಸೂತ್ರದ ಕೆಳಗೆ ಸೀತಾ ಪರಿತ್ಯಾಗದ ಪ್ರಸಂಗವೂ ಸಮರ್ಥಿತವಾಗಿದೆ. ಈ ಎರಡು ಪ್ರಸಂಗ ರಾಮನ ಕಥೆಗೆ ಸೇರಿದಮೇಲೆ ಸಾಹಿತ್ಯವೂ ಇವನ್ನು ಜನರ ಮನಸ್ಸಿನಲ್ಲಿ ಭದ್ರವಾಗಿ ನಿಲ್ಲಿಸಿತು. ಇತರ ಭಾಷೆಗಳ ಸಂಗತಿ ನನಗೆ ತಿಳಿಯದು. ನಮ್ಮ ಸಾಹಿತ್ಯದಲ್ಲಿ ಲಕ್ಷ್ಮೀಶನ ಕಾವ್ಯ ಸೀತಾಪರಿತ್ಯಾಗದ ಕಥೆಯನ್ನು ರಸಕೂಪವಾಗಿ ತೋಡಿ ಕಟ್ಟಿತು. ಜನರ ಮನಸ್ಸನ್ನು ಕರಗಿಸುವ ಕಥೆಗಾಗಿ ಹಾತೊರೆಯುವ ನಾಟಕಕಾರರು ಕುಶಲವರ ಕಥೆಯನ್ನು ಕಟ್ಟಿದರು, ಬೆಳಸಿದರು. ಲಕ್ಷಲಕ್ಷವಾಗಿ ಜನರನ್ನು ಸೆಳೆಯುವ ಸಿನೀಮಾ ಲೋಕ ಈಗ ರಾಮರಾಜ್ಯ ಎಂಬ ಒಂದು ಚಿತ್ರವನ್ನು ಮಾಡಿ ಅಂದಿನ ಹಳೆಯ ಕಥೆಯನ್ನು ಇಂದು ಮರಳಿ ಹೊಸದಾಗಿ ಮಾಡಿದೆ. ರಾಮರಾಜ್ಯವನ್ನು ನೋಡುವವರೆಲ್ಲರೂ ರಾಮನನ್ನು ಕುರಿತು ಬೇಸರಪಡುತ್ತಾರೆ. "ಗಂಡಸೇ ಹೀಗೆ", "ಹೆಣ್ಣಿನ ಗತಿ ಇಷ್ಟೇ", "ಯಾವ ದೊಡ್ಡಮನುಷ್ಯ ಇವ, ಗರ್ಭಿಣಿಯಾದ ಹೆಂಡತಿಯನ್ನು ಸುಳಿವುಕೊಡದೆ ಕಾಡಿಗೆ ಕಳುಹಿಸುವುದಕ್ಕೆ" ಎನ್ನುತ್ತಾರೆ. ರಾಮರಾಜ್ಯ ಒಳ್ಳೆಯರಾಜ್ಯ ಎನ್ನುವ ಸಾಮಾನ್ಯ ಜನತೆ ಹಾತೊರೆದು ಬಯಸುವ ರಾಜ್ಯ ಉತ್ತರಕಾಂಡದ್ದಲ್ಲ.

೪

ಸರಿಯಾಗಿ ಪರಿಶೀಲಿಸಿದರೆ ಮೂಲರಾಮಾಯಣದ ಪ್ರಕಾರ ರಾಮನ ನಡತೆಯಲ್ಲಿ ಬಹಳ ಜನರಿಗೆ ತಪ್ಪು ಎಂದು ಕಾಣುವುದು ಎರಡು

ಸಂಗತಿ. ವಾಲಿಯನ್ನು ಕೊಂದದ್ದು, ಸೀತೆಯನ್ನು ಅಗ್ನಿಪ್ರವೇಶ ಮಾಡು ವಂತೆ ಅವಮಾನ ಪಡಿಸಿದ್ದು. ಈಗ ನಾವು ಈ ದೋಷಗಳು ಇಲ್ಲದ ರಾಮನನ್ನು ಬಯಸುತ್ತೇವೆ. ರಾಮರಾಜ್ಯ ಎನ್ನುವಾಗ ಇಂತಹ ದೋಷ ಗಳೂ ಇಲ್ಲದ ಅರಸನ ರಾಜ್ಯ ಎಂದು ಭಾವಿಸುತ್ತೇವೆ. ಯಾರೂ ಯಾರನ್ನೂ ಮೋಸದಿಂದ ಕೊಲ್ಲಬಾರದು. ಯಾರೂ ಹೆಂಡತಿಯನ್ನು ಅವಮರ್ಯಾದೆಯಿಂದ ಕಾಣಬಾರದು. ಹಾಗೆಯೇ ಶ್ರೀ ನಾಡಕರಣಿ ಯವರು ತಮ್ಮ ಪುಸ್ತಕದಲ್ಲಿ ಯಾವ ಯಾವದನ್ನು ತಪ್ಪು ಎಂದು ಹೇಳು ತ್ತಾರೋ ಅದನ್ನೆಲ್ಲಾ ದೇಶದಲ್ಲಿ ಅನೇಕರು ತಪ್ಪು ಎಂದೇ ಒಪ್ಪಿಕೊಳ್ಳು ತ್ತೇವೆ. ಒಪ್ಪಿಕೊಳ್ಳದವರೂ ಕೆಲವು ಜನ ಇರಬಹುದು. ಅವರನ್ನು ಮುಖ್ಯವಾಗಿ ಇರಿಸಿಕೊಂಡು ನಾವು ರಾಮರಾಜ್ಯ ಎಂಬ ಮಾತನ್ನು ಹಳಿಯಬೇಕಾಗಿಲ್ಲ. ಮಹಾತ್ಮಾ ಗಾಂಧಿಯವರು ರಾಮರಾಜ್ಯ ಎಂದದಕ್ಕೂ ವರ್ಣಾಶ್ರಮ ಸ್ವರಾಜ್ಯ ಸಂಘದವರು ಮಹಮದೀಯ ಪೋಲೀಸರನ್ನು ಒಳಗೆ ಬಿಟ್ಟು ಅಂತ್ಯಜ ಹಿಂದೂಗಳನ್ನೂ ಎಲ್ಲ ಸ್ತ್ರೀಯ ರನ್ನೂ ವಿಷ್ಣುಯಾಗದಿಂದ ಹೊರಗೆ ನಿಲ್ಲಿಸಿದ್ದಕ್ಕೂ ಯಾವ ಸಂಬಂಧವೂ ಇಲ್ಲ. ಅಂತ್ಯಜರ ವಿಷಯದಲ್ಲಿ ಮಹಾತ್ಮಾ ಗಾಂಧಿಯವರಿಗಿಂತ ಉದಾರ ವಾದ ಭಾವನೆ ಯಾರಿಗಿದೆ? ಸ್ತ್ರೀಯರು ಕನಿಕರಕ್ಕೆ ಪಾತ್ರರು ಎಂಬುದನ್ನು ಮಹಾತ್ಮರಿಗೆ ಹೇಳಿಕೊಡಬೇಕೇ? ರಾಮನು ಪ್ರಜೆಗಳಿಗಾಗಿ ಹೆಂಡತಿ ಯನ್ನು ಬಿಟ್ಟನೆನ್ನುವುದು ಯಾವ ದೃಷ್ಟಿಯಿಂದ ಉಪಾದೇಯ ಎಂದು ಮಹಾತ್ಮರ ಅಭಿಪ್ರಾಯವೋ ಅದನ್ನು ನಾವು ಮರೆಯಬಾರದು. ಮರೆತರೆ ಅವರ ಉಪದೇಶಕ್ಕೆ ವಿಪರೀತ ಅರ್ಥವನ್ನು ಆರೋಪಿಸಿ ದಂತಾಗುತ್ತದೆ.

೫

ಯಾವ ವಿಪರೀತವನ್ನೂ ಆರೋಪಿಸದೆ ಯಾವ ಅಸಾಂಪ್ರತ ವನ್ನೂ ಜೋಡಿಸದೆ ರಾಮರಾಜ್ಯದ ಮೂಲ ವರ್ಣನೆಯನ್ನು ತೆಗೆದು ಕೊಂಡರೆ ಅದು ವಾಲ್ಮೀಕಿ ರಾಮಾಯಣದಲ್ಲಿ ಪಟ್ಟಾಭಿಷೇಕ ಸರ್ಗದಲ್ಲಿ ಹೀಗೆಂದಿದೆ.

ನ ಪರ್ಯದೇವನ್ ವಿಧವಾ ನ ಚ ವ್ಯಾಲಕೃತಂ ಭಯಂ
ನ ವ್ಯಾಧಿಜಂ ಭಯಂ ವಾಪಿ ರಾಮೇ ರಾಜ್ಯಂ ಪ್ರಶಾಸತಿ.
ನಿರ್ದಸ್ಯುರಭವಲ್ಲೋಕೋ ನಾನರ್ಥಃ ಕಂಚಿದಸ್ಪೃಶತ್
ನ ಚಸ್ಮವೃದ್ಧಾ ಬಾಲಾನಾಂ ಪ್ರೇತ ಕಾರ್ಯಾಣಿ ಕುರ್ವತೇ.
ಸರ್ವಂ ಮುದಿತ ಮೇವಾಸೀತ್ ಸರ್ವೋ ಧರ್ಮ ಪರೋಽಭವತ್
ರಾಮ ಮೇವಾನು ಪಶ್ಯಂತೋ ನಾಭ್ಯಹಿಂಸನ್ ಪರಸ್ಪರಂ.
ಆಸನ್ ವರ್ಷ ಸಹಸ್ರಾಣಿ ತಥಾ ಪುತ್ರ ಸಹಸ್ರಿಣಃ
ನಿರಾಮಯಾ ವಿಶೋಕಾಶ್ಚ ರಾಮೇ ರಾಜ್ಯಂ ಪ್ರಶಾಸತಿ.
ರಾಮೋ ರಾಮೋ ರಾಮ ಇತಿ ಪ್ರಜಾನಾಮಭವನ್ ಕಥಾ
ರಾಮಭೂತಂ ಜಗದಭೂತ್ ರಾಮೇ ರಾಜ್ಯಂ ಪ್ರಶಾಸತಿ.
ನಿತ್ಯಪುಷ್ಪಾಃ ನಿತ್ಯಫಲಾಸ್ತರವಃ ಸ್ಕಂಧವಿಸ್ತೃತಾಃ
ಕಾಲೇ ವರ್ಷೀಚ ಪರ್ಜನ್ಯಃ ಸುಖ ಸ್ಪರ್ಶಶ್ಚ ಮಾರುತಃ.
ಬ್ರಾಹ್ಮಣಾಃ ಕ್ಷತ್ರಿಯಾಃ ವೈಶ್ಯಾಃ ಶೂದ್ರಾ ಲೋಭ ವಿವರ್ಜಿತಾಃ
ಸ್ವಕರ್ಮಸು ಪ್ರವರ್ತಂತೇ ತುಷ್ಟಾಃ ಸ್ವೈರೇವ ಕರ್ಮಭಿಃ.
ಆಸನ್ ಪ್ರಜಾಧರ್ಮರತಾಃ ರಾಮೇ ಶಾಸತಿನಾನೃತಾಃ
ಸರ್ವೇ ಲಕ್ಷಣ ಸಂಪನ್ನಾಃ ಸರ್ವೇ ಧರ್ಮ ಪರಾಯಣಾಃ.
ದಶವರ್ಷ ಸಹಸ್ರಾಣಿ ದಶವರ್ಷ ಶತಾನಿಚ
ಭ್ರಾತೃಭಿಃ ಸಹಿತಃ ಶ್ರೀಮಾನ್ ರಾಮೋ ರಾಜ್ಯಮಕಾರಯತ್.

"ರಾಮನು ರಾಜ್ಯವಾಳುತ್ತಿರಲಾಗಿ ವಿಧವೆಯರ ಅಳು ಇರಲಿಲ್ಲ. ಹಾವಿನ ಭಯ ಇರಲಿಲ್ಲ. ವ್ಯಾಧಿಗಳಿಂದಲೂ ಭಯ ಇರಲಿಲ್ಲ. ಲೋಕ ನಿರ್ದಸ್ಯುವಾಯಿತು. ಯಾರಿಗೂ ಅನರ್ಥ ತಟ್ಟಲಿಲ್ಲ. ವೃದ್ಧರಾದವರು ಬಾಲರಾದವರ ಪ್ರೇತಕಾರ್ಯವನ್ನು ಮಾಡಬೇಕಾಗಲಿಲ್ಲ. ಎಲ್ಲವೂ ಸಂತೋಷವಾಗಿಯೇ ಇತ್ತು. ಎಲ್ಲರೂ ಧರ್ಮಪರರಾಗಿದ್ದರು; ರಾಮನನ್ನು ನೋಡಿ ಹಿಂಸೆಮಾಡದೆ ಇದ್ದರು. ಸಾವಿರ ಕಾಲ ಬದುಕಿದರು; ಸಾವಿರ ಮಕ್ಕಳನ್ನು ಪಡೆದರು. ರಾಮ, ರಾಮ, ರಾಮ ಎಂದು ಪ್ರಜೆಗಳ ಬಾಯಲ್ಲಿ ನುಡಿಯುತ್ತಿತ್ತು. ಲೋಕ ರಾಮಭೂತವಾಯಿತು. ನೀಳವಾದ ಕೊಂಬೆಗಳಿಂದ ಕೂಡಿದ ವೃಕ್ಷಗಳು ಸದಾ ಹೂತವು, ಸದಾ

ಕಾತವು. ಸಕಾಲದಲ್ಲಿ ಮಳೆ ಸುರಿಯಿತು. ಗಾಳಿ ಸೊಂಪಾಗಿ ಬೀಸಿತು. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಲೋಭವಿಲ್ಲದೆ ಜೀವಿಸುತ್ತ ತಮ್ಮ ತಮ್ಮ ಕಾರ್ಯದಲ್ಲಿ ಸಂತೋಷ ಕಾಣುತ್ತ ಸ್ವಕರ್ಮ ಪ್ರವೃತ್ತರಾಗಿದ್ದರು. ಪ್ರಜೆಗಳು ಧರ್ಮರತರಾಗಿ ಅನೃತರಹಿತರಾಗಿ ಇದ್ದರು. ಸರ್ವರೂ ಲಕ್ಷಣಸಂಪನ್ನರು. ಸರ್ವರೂ ಧರ್ಮಪರಾಯಣರು. ಹತ್ತುಸಾವಿರ ವರ್ಷ ಮತ್ತು ಸಾವಿರ ವರ್ಷ ಸೋದರರೊಡನೆ ಶ್ರೀಮಂತನಾಗಿ ರಾಮನು ರಾಜ್ಯವನ್ನಾಳಿದನು.''

ವಾಲ್ಮೀಕಿಯ ಸ್ವರ್ಣಯುಗದ ಕಲ್ಪನೆ ಇದು. ರಾಮರಾಜ್ಯವೆಂದರೆ ಒಳ್ಳೆಯ ರಾಜ್ಯವೆಂದು ಅರ್ಥ ಬಂದದ್ದು ಈ ವರ್ಣನೆಯಿಂದ. ರಾಜನು ಸೋದರರೊಂದಿಗೆ ಸ್ನೇಹದಿಂದ ಬಾಳುತ್ತ ರಾಜ್ಯವನ್ನು ಧರ್ಮದಿಂದ ಪಾಲಿಸುತ್ತಾನೆ. ಅವನು ಸುಖವಾಗಿದಾನೆ. ಪ್ರಜೆಗಳು ಸುಖವಾಗಿದಾರೆ. ದೀನ, ರಿಕ್ತ, ರೋಗಿ ಈ ರಾಜ್ಯದಲ್ಲಿಲ್ಲ. ಅದರಲ್ಲಿ ಅಧರ್ಮ ಅನೃತಗಳಿಗೆ ಎಡೆಯಿಲ್ಲ. ಬೇರೆ ಬೇರೆ ವರ್ಗದ ಜನರು ತಮ್ಮ ತಮ್ಮ ಕರ್ಮದಲ್ಲಿ ನಿರತರಾಗಿ ಆಯಾ ಕರ್ಮವನ್ನು ಮಾಡುವುದರಲ್ಲಿ ಸಂತೋಷವನ್ನು ಕಂಡು ತೃಪ್ತರಾಗಿದಾರೆ. ಬ್ರಾಹ್ಮಣನು ಕ್ಷತ್ರಿಯನ ಅಧಿಕಾರ, ವೈಶ್ಯನ ಧನ, ಶೂದ್ರನ ಐಶ್ವರ್ಯವನ್ನು ಬಯಸಲಿಲ್ಲ. ಕ್ಷತ್ರಿಯ ವೈಶ್ಯ ಶೂದ್ರರೂ ಅಷ್ಟೇ. ಬೇರೊಂದು ವರ್ಣದ ಸೌಕರ್ಯವನ್ನು ಕುರಿತು ಲೋಭ ಪಡಲಿಲ್ಲ. ನಾಡ ಜನರು ತಮ್ಮ ಅರಸನನ್ನು ನೋಡಿ ಪರಸ್ಪರ ವಿಶ್ವಾಸದಿಂದ ನಡೆದುಕೊಂಡರು. ರೋಗರುಜಿನ ಇಲ್ಲದೆ ನಾಡು ಆರೋಗ್ಯವಾಗಿ ಬಾಳಿತು. ಜನರು ಪೂರ್ಣಾಯುಷ್ಕರಾಗಿ ಬಾಳಿ ಸರಿಯಾದ ವಯಸ್ಸಿನಲ್ಲಿ ತೀರಿಕೊಳ್ಳುತ್ತಿದ್ದರು. ಆ ರಾಜ್ಯದಲ್ಲಿ ಗಂಡ ಹೋದನೆಂದು ಹೆಣ್ಣು ಅಳುವ ಪ್ರಸಂಗ ಇರಲಿಲ್ಲ. ರಾಜನ ಮತ್ತು ಪ್ರಜೆಗಳ ಧರ್ಮದವರ್ತನೆಗೆ ಅನುವಾಗಿ ಋತುಮಾನ, ಗಾಳಿ, ಮಳೆ, ಇನ್ನೆಲ್ಲ ಪ್ರಕೃತಿ ವ್ಯಾಪಾರ, ಕ್ರಮ ತಪ್ಪದೆ ನಡೆಯಿತು. ಹಾವು ಹಲ್ಲಿ ಕೂಡ ಮನುಜರ ಗೋಜಿಗೆ ಬರಲಿಲ್ಲ. ಗಿಡ ಮರ ಬಳ್ಳಿ ಸಮೃದ್ಧವಾಗಿ ಹೂವನ್ನು, ಹಣ್ಣನ್ನು ಪಡೆದು ಲೋಕ ಸುಭಿಕ್ಷವಾಯಿತು.

ಆರಂಭದಲ್ಲಿ ಜನದ ಮನ ಮರಳುಹೋದದು ಈ ಕಲ್ಪನೆಗೆ. ಈಗಲೂ ರಾಮ ಪಟ್ಟಾಭಿಷೇಕದ ಉತ್ಸವಗಳಲ್ಲಿ ಪುರಾಣಿಕರು ಜನರಿಗೆ ವರ್ಣಿಸಿ ಹೊಗಳುವುದು ಈ ಕಲ್ಪನೆಯನ್ನು. ಈ ಕಲ್ಪನೆ ತಕ್ಕಷ್ಟು ಸುಂದರವಾಗಿಯೇ ಇದೆ. ಇದರ ಬಹುಭಾಗವನ್ನೇ ಜನ ಬಯಸುತ್ತಾರೆ.

೬

ಇದು ಅಂದಿನ ಕಲ್ಪನೆ, ವಾಲ್ಮೀಕಿಯ ಕಲ್ಪನೆ. ವೀರವಾನಿ ಸನಾತನ ಧರ್ಮೀಯರು ತಮಗೆ ಇದನ್ನು ತಮ್ಮ ಇಚ್ಛೆಯಂತೆ ಹಸನು ಮಾಡಿಕೊಳ್ಳುವುದಕ್ಕೆ ಅಧಿಕಾರವಿದೆಯೆಂಬಂತೆ ನಡೆದುಕೊಂಡಿದ್ದಾರೆ. ಸನಾತನಿಗಳಲ್ಲದವರಿಗೂ ಇದನ್ನು ಹಸನು ಮಾಡುವ ಅಧಿಕಾರವಿರ ಬೇಕು; ಇದೆ.

ರಾಮರಾಜ್ಯ ಎಂಬ ವಿಷಯದಲ್ಲಿ ಎಷ್ಟು ತೆರದ ಮನಸ್ಸೊ ಅಷ್ಟು ತೆರದ ಅರ್ಥ ಇರುತ್ತದೆ. ಆ ಪದಕ್ಕೆ ಸರಿಯಾದ ಅರ್ಥ ಯಾವುದೆಂದರೆ ನಿಸ್ಸ್ವಾರ್ಥ ಜೀವಿಗಳು, ವಿಶಾಲ ದೃಷ್ಟಿಯಿಂದ, ಉದಾರಭಾವದಿಂದ, ಸಕಲಲೋಕದ ಕಲ್ಯಾಣಕ್ಕಾಗಿ ಯಾವುದನ್ನು ನಿಯಮಿಸುತ್ತಾರೋ ಅದೇ. ಲೋಕದ ಜನ ಇಂತಹ ಒಂದು ಧ್ಯೇಯವನ್ನು ಎಷ್ಟು ಮಟ್ಟಿಗೆ ಒಪ್ಪಿ ಕೊಳ್ಳುತ್ತಾರೆ, ಅಷ್ಟು ಮಟ್ಟಿಗೆ ರಾಮರಾಜ್ಯವನ್ನು, ಆ ಹೆಸರಿಂದಲ್ಲ ದಿದ್ದರೆ ಬೇರೆ ಹೆಸರಿಂದ, ಒಪ್ಪಿಕೊಳ್ಳುತ್ತಾರೆ. ವಿಶಾಲ ದೃಷ್ಟಿಯಿಂದ, ಉದಾರಭಾವದಿಂದ, ಸಕಲ ಲೋಕದ ಕಲ್ಯಾಣವನ್ನು ಸಂಕಲ್ಪಿಸಿರು ವವರಲ್ಲಿ ಈಗ ಮಹಾತ್ಮಾ ಗಾಂಧಿಯವರು ಅಗ್ರಗಣ್ಯರು. ರಾಮರಾಜ್ಯ ವನ್ನು ಕುರಿತ ಅವರ ಭಾವನೆಯನ್ನು ಸ್ಪಷ್ಟಪಡಿಸಬೇಕೆಂದು ಅವರನ್ನು ಶ್ರೀ ನಾಡಕರಣಿಯವರು ಕೇಳಿದಂತೆ ಈಗ ಕೆಲವು ದಿನದ ಹಿಂದೆ ಬೇರೊಬ್ಬರು ಕೇಳಿದರಂತೆ. ಮಹಾತ್ಮಾಜಿ ಅವರಿಗೆ ಈ ಉತ್ತರ ಹೇಳಿದ ರೆಂದು ವರದಿಯಾಯಿತು.

"ರಾಮರಾಜ್ಯವೆಂದರೆ ಪಾರಮಾರ್ಥಿಕ ದೃಷ್ಟಿಯಿಂದ ಭೂಸ್ವರ್ಗ, ಭೂ ವೈಕುಂಠ; ರಾಜಕೀಯ ದೃಷ್ಟಿಯಿಂದ ಪರಿಪೂರ್ಣ ಪ್ರಜಾತಂತ್ರ. ಆ ಪ್ರಜಾತಂತ್ರದಲ್ಲಿ ಭಾಗ್ಯವಂತರಿಲ್ಲ, ನಿರ್ಭಾಗ್ಯರಿಲ್ಲ; ಕುಲಗೋತ್ರವಿಲ್ಲ;

ಲಿಂಗಭೇದವಿಲ್ಲ. ರಾಮರಾಜ್ಯದಲ್ಲಿ ಭೂಮಿ, ರಾಷ್ಟ್ರ, ಇದೆಲ್ಲ ಪ್ರಜೆಗಳಿಗೆ ಸೇರಿದ್ದು. ನ್ಯಾಯವೇ ಸಿದ್ಧಾಂತ, ಪರಿಪೂರ್ಣ, ಅಗ್ರ. ಅಲ್ಲಿ ವಾಕ್ ಸ್ವಾತಂತ್ರ್ಯವುಂಟು, ಪೂಜಾ ಸ್ವಾತಂತ್ರ್ಯವುಂಟು, ಪತ್ರಿಕಾ ಸ್ವಾತಂತ್ರ್ಯ ವುಂಟು. ಅದಕ್ಕೆ ಕಾರಣವಿಷ್ಟೆ; ಅಲ್ಲಿ ಸ್ವಯಂಸ್ಥಾಪಿತ ಶಾಸನ ಪ್ರಭುತ್ವ ವಿದೆ; ನೈತಿಕ ಸಂಯಮವಿದೆ. ಇಂತಹ ರಾಷ್ಟ್ರವು ಸತ್ಯ ಮತ್ತು ಅಹಿಂಸೆಯ ಅಸ್ತಿವಾರದ ಮೇಲೆ ನಿಲ್ಲಬೇಕು. ಆ ರಾಷ್ಟ್ರದಲ್ಲಿ ಸುಖ ಸಂಪದ್ಯುಕ್ತ, ಸ್ವಸಂಪೂರ್ಣ ಗ್ರಾಮಗಳಿರಬೇಕು; ಗ್ರಾಮಪಂಗಡಗಳಿರ ಬೇಕು. ಇದೆಲ್ಲ ಎಂದಿಗೂ ಸಾಧಿಸಲಾಗದ ಕನಸಾಗಬಹುದು. ಆ ಕನಸಿನ ಲೋಕದಲ್ಲಿ ಜೀವಿಸುವುದೇ, ಆದಷ್ಟು ಬೇಗ ಅದನ್ನು ಸಾಧಿಸಲು ಪ್ರಯತ್ನಪಡುವುದೇ, ನನಗೊಂದಾನಂದ.''

ಈ ಉತ್ತರದಿಂದ ನಮ್ಮ ಮಿತ್ರರಿಗೆ ತೃಪ್ತಿಯಾಗಬೇಕು. ಮಹಾತ್ಮರು ಅಪ್ಪಣೆ ಕೊಡಿಸಿದ ಮಾತು ಹೊಸ ರಾಮರಾಜ್ಯದ ಸಂಪೂರ್ಣ ವರ್ಣನೆ ಅಲ್ಲ. ರಾಮರಾಜ್ಯ ಎನ್ನುವುದು ಸತ್ಯವಂತರ, ಸಜ್ಜನರ, ಸುಗುಣಿಗಳ, Utopia; ಮಾನವವರ್ಗದ ಬಯಕೆಯ ಕನಸು. ನಮ್ಮ ಅರಿವು, ನಮ್ಮ ಎಣಿಕೆ, ನಮ್ಮ ಬಾಳು ಹಸನು ಹಸನಾದಂತೆಲ್ಲ ರಾಮರಾಜ್ಯದ ಕಲ್ಪನೆ ಹಸನು ಹಸನಾಗುತ್ತದೆ. ಈ ವಿಷಯದಲ್ಲಿ ವಿಚಾರಮಾಡುವವರೆಲ್ಲರೂ ಜನರ ಮನಸ್ಸಿನಲ್ಲಿ ಈ ಕಲ್ಪನೆ ಹಸನಾಗು ವುದಕ್ಕೆ ಸಹಾಯಮಾಡಬೇಕು.

೭

ಹಸನಾದ ಚೇತನದ ಹಸನಾದ ರಾಜ್ಯಕಲ್ಪನೆಯನ್ನು ರಾಮರಾಜ್ಯ ಎಂದು ಏಕೆ ಕರೆಯಬೇಕು ಎಂದು ಯಾರಾದರೂ ಕೇಳಬಹುದು. ಈ ಕಲ್ಪನೆಯನ್ನು ರಾಮರಾಜ್ಯ ಎನ್ನುವವರು ಅದನ್ನು ಮತ್ತಾವ ಹೆಸರಿ ನಿಂದಲೂ ಕರೆಯಬಾರದೆಂದು ಹೇಳಲಾರರು. ರಾಮರಾಜ್ಯ ಎಂದರೆ ಉತ್ತಮ ರಾಜ್ಯ ಎಂದು ಜನ ಬಹುಕಾಲದಿಂದ ತಿಳಿದಿರುವುದರಿಂದ ಅವರು ಆ ಪದವನ್ನು ಆ ಅರ್ಥದಲ್ಲಿ ಉಪಯೋಗಿಸುತ್ತಾರೆ. ನಮಗೆ ಈ ಮಾತಿಂದ ಈ ಅರ್ಥ ಬರುವುದಿಲ್ಲ, ಈ ಮಾತು ಬೇಡ, ಎಂದು

ಯಾರಾದರೂ ಹೇಳುವುದಾದರೆ ಅದಕ್ಕೆ ರಾಮರಾಜ್ಯವಾದಿಗಳು ಅಡ್ಡಿ ಮಾಡುವ ಕಾರಣವಿಲ್ಲ. ಆದ್ದರಿಂದಲೇ ಮೇಲೆ "ಈ ಹೆಸರಿಂದಲ್ಲದಿದ್ದರೆ ಬೇರೆಯ ಹೆಸರಿಂದ" ಎಂದಿದೆ. ಹೆಸರಿಂದ, ಪದದಿಂದ, ಏನೂ ಆಗುವುದಿಲ್ಲ. ನಮಗೆ ಬೇಕಾದದು ಅರ್ಥ. ಅರ್ಥಗಳನ್ನು ಬಿಟ್ಟು ಪದಗಳನ್ನಿಟ್ಟುಕೊಂಡು ಲೋಕ ಈ ಮೊದಲು ಕೆಟ್ಟದು ಆಗಿದೆ. ಈ ಕಾರಣದಿಂದ ಈಗ ಪದಗಳನ್ನೂ ಬಿಡುವುದಾದರೆ ಏನನ್ನೂ ಸಾಧಿಸಿದಂತಾಗಲಿಲ್ಲ. ಪದಗಳನ್ನಿಟ್ಟುಕೊಳ್ಳಲಿ, ಬಿಡಲಿ, ಅವುಗಳ ಅರ್ಥವನ್ನು ಸಾಧಿಸುವುದು ಕ್ಷೇಮದ ಮಾರ್ಗ. ಆ ಮಾರ್ಗದಲ್ಲಿ ಲೋಕವೆಲ್ಲ ಒಂದಾಗಿ ಕಲೆತು ನಡೆಯುವುದು ಸಾಧ್ಯ. ಭಾರತೀಯರು ಈ ಮಾರ್ಗದಲ್ಲಿ ಒಂದಾಗಿ ಕಲೆತು ನಡೆಯಲಿ. ಭೂಮಿಯನ್ನು ಸ್ವರ್ಗ ಸಮಾನ ಮಾಡಿ ಬಾಳಲಿ.

"ಜೀವನ"

ಆಗಸ್ಟ್ ೧೯೪೫

# ಪುರಾಣ ನೀತಿ

೧

ಮರಾಜ್ಯದ ನಮ್ಮ ಶ್ರೀ ನಾಡಕರಣಿ ಮಿತ್ರರು ವಾಮನಾವತಾರದ ಕತೆಯನ್ನು ತೆಗೆದುಕೊಂಡು ಅದರಲ್ಲಿ ವಿಷ್ಣು ಸುರರಿಗೆ ಪಕ್ಷಪಾತ ತೋರಿ ಅಸುರರಾಜನನ್ನು ಮೋಸಪಡಿಸಿರುವುದು ಕಾಣುತ್ತದೆಂದೂ ಇಂತಹ ಕತೆಯನ್ನು ನಮ್ಮಲ್ಲಿ ಕೆಲವರು ಸಂಕೇತ ಕತೆ ಎಂದು ಹೇಳುವವಾದರೂ ಸಾಮಾನ್ಯ ಜನರೂ ಈಗಣ ನಮ್ಮ ಗುರುಸ್ಥಾನೀಯರೂ ಅದನ್ನು ಅದು ಇರುವಂತೆಯೇ ಸಾಮಾನ್ಯ ಅರ್ಥದಲ್ಲಿ ಗ್ರಹಿಸುವರೆಂದೂ ಸೂಚಿಸಿ ಇದರಿಂದ ಮತ್ತು ಇಂತಹ ಇತರ ಕತೆಗಳಿಂದ ನಮ್ಮ ಜನರ ನೀತಿ ಹೀನವಾಯಿತೆಂಬ ಅರ್ಥ ತೋರುವ ಟೀಕೆಯನ್ನು ಮಾಡಿದಾರೆ.

ವಾಮನಾವತಾರದ ಕತೆಯು ರೇಖೆಯಷ್ಟನ್ನು ತೆಗೆದುಕೊಂಡರೆ ವಿಷ್ಣು ಬಲಿಗೆ ಮೋಸಮಾಡಿದನೆಂಬ ಮಾತನ್ನು ಒಪ್ಪಬೇಕಾಗುತ್ತದೆ. ಸಣ್ಣ ಆಕಾರದಲ್ಲಿ ಬಂದು ಮೂರು ಹೆಜ್ಜೆಗೆ ಸ್ಥಳವನ್ನು ಬೇಡಿ ದಾನಿ ಒಪ್ಪಿದ ಮೇಲೆ ದೊಡ್ಡ ಆಕಾರವನ್ನು ಧರಿಸಿ ಆ ಉಪಕಾರಿ ಎಣಿಸದೆ ಇದ್ದಷ್ಟು ಸ್ಥಳವನ್ನು ಆಕ್ರಮಿಸಿಕೊಂಡದು ಮೋಸವಲ್ಲದೆ ಬೇರೆಯೇನು? ಮೋಸ; ಘಾತಕತನ. ತುಂಬ ಓದಿರುವ, ತುಂಬ ಸಂಸ್ಕೃತರಾದ ನಮ್ಮ ಮಾನ್ಯ ಮಿತ್ರರೊಬ್ಬರು ಹತ್ತಾರು ವರ್ಷದ ಹಿಂದೆ ವಾಮನ ಅವತಾರವನ್ನು ಮೋಸಗಾರ ಅವತಾರವೆಂದು ಖಂಡಿಸಿದರು. ಇಂತಹ ಮಾತನ್ನು ಇತರರು ಹೇಳುವುದನ್ನೂ ನಾನು ಕೇಳಿದೇನೆ. ಆದರೆ ವಾಮನನ ಈ ನಡತೆ ಮೋಸದ ನಡತೆ ಎಂದು ಕತೆಯನ್ನು ಬರೆದವರಾದರೂ ತಿಳಿದೇ ಇದ್ದರು. ಇದೇ ಜನ ದೇವರು ಸತ್ಯಸ್ವರೂಪ, ಧರ್ಮರಕ್ಷಕ, ಎಂದು ಹೇಳುತ್ತಿದ್ದರು. ಹೀಗಿದ್ದೂ ಇವರು ದೇವರ ಒಂದು ಅವತಾರಕ್ಕೆ ಇಂತಹ ನಡತೆಯನ್ನು ಆರೋಪಿಸುವುದಕ್ಕೆ ಹಿಂಜರಿಯಲಿಲ್ಲ. ನಮ್ಮಂತೆಯೇ ಸತ್ಯವನ್ನು ಬಯಸಿದ, ನಮ್ಮಂತೆಯೇ ಮೋಸಕ್ಕೆ ಹೇಸಿದ, ಈ ಕತೆಯ ಕರ್ತೃಗಳು ಧರ್ಮಸ್ವರೂಪನಾದ ದೇವರಿಗೆ ಈ ಅಸದ್ವರ್ತನ, ಈ ವಕ್ರ

ಕೌಟಿಲ್ಯವನ್ನು ಆರೋಪಿಸಿದ್ದು ಹೇಗೆ? ಅಷ್ಟೇ ಅಲ್ಲ, ಅದನ್ನು ಆರೋಪಿಸಿ ಅದು ದೇವರಲ್ಲಿ ಒಂದು ಗುಣ ಎಂಬಂತೆ ವರ್ಣಿಸಿದ್ದು ಹೇಗೆ?

ಸಂಪ್ರದಾಯದ ಇಂತಹ ಕತೆಗಳನ್ನು ಸಮರ್ಥಿಸಬೇಕೆಂದು ಹೊರಡುವ ಹೊಸಕಾಲದ ಹಲವರು ನಾವು ಇವು ಸಂಕೇತ ಕತೆಗಳೆಂದು ಹೇಳುವುದು ನಿಜ. ಹೊಸ ಕಾಲದವರು ಮಾತ್ರವಲ್ಲ, ಹಳೆಯ ಕಾಲದವರೂ, ಇಂಥ ಕತೆಗಳಿಗೆ ಮಾತ್ರವಲ್ಲ, ಇಂಥ ದೋಷಕ್ಕೆ ಈಡಾಗದ ಕತೆಗಳನ್ನು ಕುರಿತು ಸಂಕೇತಾರ್ಥವನ್ನು ಆರೋಪಿಸುವುದುಂಟು. ಇಂತಹ ಹೊತ್ತಿನಲ್ಲಿ ಸೀತಾರಾಮರ ಕತೆ ಒಂದು ಸಂಕೇತ ಕತೆ; ರಾಮ ಪರಮಾತ್ಮ, ಸೀತೆ ಜೀವಾತ್ಮ. ಮಹಾಭಾರತದ ಯುದ್ಧ, ಕೃಷ್ಣಾರ್ಜುನರ ಸಂವಾದ, ಸಂಕೇತಗಳು. ಮನುಷ್ಯ ಸ್ವಭಾವದ ಒಳ್ಳೆಯ ಪ್ರವೃತ್ತಿಗಳು ಪಾಂಡವರು, ದುಷ್ಟ ಪ್ರವೃತ್ತಿಗಳು ಕೌರವರು. ಸಾಮಾನ್ಯವಾಗಿ ಇಂತಹ ಕತೆಯ ವಿಷಯದಲ್ಲಿ ಇನ್ನೊಂದು ಸಮಾಧಾನ ಕೇಳಿ ಬರುವುದು ಉಂಟು. ಕೃಷ್ಣ ಗೋಪಿಕಾಸ್ತ್ರೀಯರೊಡನೆ ಆಡಿದ, ಅಥವಾ ಹದಿನಾರು ಸಾವಿರದ ಎಂಟು ಮಂದಿ ಹೆಂಡಿರನ್ನು ಮದುವೆಯಾದ, ಎಂಬ ಕಾರಣದಿಂದ ನಾವು ಯಾರೂ ಅಂತಹ ಆಟಗಳನ್ನು ಆಡುವುದಕ್ಕೆ ನಮಗೆ ಅಪ್ಪಣೆ ದೊರೆಯಿತೆಂದು ಎಣಿಸುವಂತಿಲ್ಲ. ನ ದೇವ ಚರಿತಂ ಚರೇತ್ ಎಂದು ಸಂಸ್ಕೃತದಲ್ಲಿ ಒಂದು ವಾಕ್ಯವಿದೆಯಂತೆ. ಆದರೆ ಇಂತಹ ಎಚ್ಚರಿಕೆಯ ವಾಕ್ಯ ಕತೆ ಕೇಳುವವರ ಮನಸ್ಸು ಕೆಡದಂತೆ ಕಾಯಲಾರದು. ದೇವರೇ ಇಂತಹ ಕೆಲಸ ಮಾಡಿದ ಮೇಲೆ ಮನುಷ್ಯನಿಗೇನಡ್ಡಿ? ಜನರು ಹೀಗೆ ತರ್ಕಿಸುವುದೇ ಹೆಚ್ಚು ಸಂಭವ. ಆದಕಾರಣ ಇಂತಹ ಕತೆಗಳು ಜನರ ಮನಸ್ಸಿನ ಮೇಲೆ ಒಟ್ಟಿನಲ್ಲಿ ಕೆಟ್ಟದಾದ ಪರಿಣಾಮವನ್ನೇ ಉಂಟುಮಾಡುತ್ತವೆ ಎಂದು ಶ್ರೀ ನಾಡಕರಣಿಯವರು ಸೂಚಿಸಿದ್ದಾರೆ.

೨

ಪುರಾಣ ಕತೆಗಳು ಅವತಾರಗಳಿಗೆ ಇಂತಹ ಅನೀತಿಯನ್ನು ಆರೋಪಿಸಿದ್ದರಿಂದ ನಮ್ಮ ಜನರ ನೀತಿ ಕೆಟ್ಟಿತೇ ಎನ್ನುವುದು ವಿಚಾರಣೀಯವಾಗಿದೆ. ರಾಮನು ಸೀತೆಯನ್ನು ತ್ಯಜಿಸಿದನೆಂಬ ಕಾರಣದಿಂದ

ರಾಮನನ್ನು ಪೂಜಿಸುವ ಜನರು ತಮ್ಮ ಹೆಂಡಿರನ್ನು ಬಿಡುತ್ತಿರುವ ಸಂಗತಿ ಅನುಭವದ ವಿಷಯವಲ್ಲ. ಹೆಂಡಿರನ್ನು ಬಿಡಬೇಕೆಂದು ಬುದ್ಧಿ ಹುಟ್ಟಿದವನಿಗೆ ರಾಮನ ಆದರ್ಶ ಬೇಕಿಲ್ಲ. ಕೃಷ್ಣನನ್ನು ಪೂಜಿಸುವ ಜನರಲ್ಲಿ ಸಾವಿರಕ್ಕೆ ಒಬ್ಬರು ಒಬ್ಬ ಹೆಂಡಿರಿರುವಂತೆಯೇ ಇನ್ನೊಬ್ಬ ಹೆಂಡತಿಯನ್ನು ಮದುವೆಯಾಗುವುದಿಲ್ಲ. ಒಬ್ಬಳಿಗಿಂತ ಹೆಚ್ಚಾಗಿ ಹೆಣ್ಣು ಬೇಡ, ಎಂದಲ್ಲ. ಇರುವ ಒಬ್ಬ ಹೆಂಡತಿಯೊಂದಿಗೆ ಎಲ್ಲ ಹೊತ್ತೂ ಗಾಢಪ್ರೇಮದಿಂದ, ಯಾವ ಹೊತ್ತೂ ಬೇಸರಪಡದೆ ಬಾಳುತ್ತಾರೆಂದಲ್ಲ. ಒಟ್ಟು ಜನರ ತಿಳುವಳಿಕೆಯಲ್ಲಿ ಒಬ್ಬಳಿಗಿಂತ ಹೆಚ್ಚು ಹೆಂಡಿರನ್ನು ಏಕಕಾಲದಲ್ಲಿ ಕಟ್ಟಿಕೊಳ್ಳುವುದು ಸರಿಯಲ್ಲ, ಬುದ್ಧಿಯಲ್ಲ, ಎಂಬ ಒಂದು ಭಾವನೆಯಿದೆ. ಎಲ್ಲರೂ ಈ ಭಾವನೆಯಲ್ಲಿ ಬೆಳೆಯುತ್ತಾರೆ. ಈ ಮಾತು ವಾಮನಾವತಾರದ ಕತೆಯ ವಿಚಾರಕ್ಕೂ ಅನ್ವಯಿಸುತ್ತದೆ. ದೇವರು ಮಾಡಿದನೆಂಬ ಈ ಮೋಸ ಮೋಸ ಮಾಡುವ ಮನುಷ್ಯನಿಗೆ ಆಧಾರವಾಯಿತೆಂಬುದನ್ನು ನಾವು ಎಂದೂ ಎಲ್ಲೂ ಕೇಳಿಲ್ಲ. ನ ದೇವ ಚರಿತಂ ಚರೇತ್ ಎಂಬ ವಾಕ್ಯ ಜನಕ್ಕೆ ತಿಳಿದಿದೆಯೋ ಇಲ್ಲವೋ. ಪ್ರಾಯಶಃ ತಿಳಿದಿಲ್ಲ. ಆದರೆ ಅದರ ಅರ್ಥ ಜನರ ಮನಸ್ಸನ್ನು ಆಕ್ರಮಿಸಿರುವುದೇ ನಿಜ. ಗುರು ಕಂಡವನ್ನುಂಡನೆಂದು ನೀನೂ ಕಂಡಕ್ಕೆ ಬಾಯಿ ತೆರೆದೀಯೆ. ಈಗ ಕಂಡ ತಿಂದ ಗುರು ಆ ಮೇಲೆ ಕೆಂಡವಾಗಿ ಕಾದ ಕಬ್ಬಿಣವನ್ನೂ ತಿನ್ನುತ್ತಾನೆ. ಕಂಡವನ್ನು ಗಿಡಿದುಕೊಂಡಂತೆ ನೀನು ಕಬ್ಬಿಣವನ್ನು ಗಿಡಿದುಕೊಳ್ಳಲಾರೆ. ಜೋಕೆ. ದೊಡ್ಡವರ ದಾರಿಯಲ್ಲಿ ಚಿಕ್ಕವರು ಹೆಜ್ಜೆ ಇಟ್ಟು ಬದುಕಬಾರದು. ಇದು ನಮ್ಮ ಜನದ ಭಾವನೆ. ಒಂದು ಗೋಣಿಕಾಯಿ ಕೊಡುತ್ತೇನೆಂದು ಹರಸಿಕೊಂಡು ಆಸೆ ಕೈಗೂಡಿದ ಮೇಲೆ ದೇವರಿಗೆ ಗೋಣೀಕಾಯೊಂದನ್ನು ಕೊಟ್ಟ ಕಥಾನಾಯಕನ ಹೊರತು ಮತ್ತಾರೂ ಪ್ರಕಾಶವಾಗಿ ವಾಮನಮೂರ್ತಿ ಮಾಡಿದ ತಟವಟವನ್ನು ಮಾಡಹೋಗಿರಲಾರರು. ಅವನು ಮಾಡಿದ ಮೋಸ ಜನರಿಗೆ ಮೇಲ್ಪಂಕ್ತಿಯೇನೂ ಆಗಿಲ್ಲ.

ಇದಕ್ಕೆ ಸ್ಪಷ್ಟವಾಗಿ ಮತ್ತೊಂದು ಕಾರಣವೂ ಇದೆ. ದೇವರು ತನ್ನ ಭಕ್ತರನ್ನು ಸಲಹುವುದಕ್ಕಾಗಿ ಮೋಸವನ್ನಾದರೂ ಮಾಡಿದನು. ತನ್ನ ಮಾನುಷಲೀಲೆಯಲ್ಲಿ, ಇವರನ್ನು ರಕ್ಷಿಸಬೇಕು ಎಂದು ಕಂಡಾಗ,

ಬೇಕೆನಿಸದೆ ಇದ್ದಿರಬಹುದಾದ ಹದಿನಾರು ಸಾವಿರದ ಆರು ಜನ ಹೆಂಗಸರನ್ನು ಕಟ್ಟಿಯಾದರೂ ಕೊಂಡನು. ಆದರ್ಶ ರಾಜನಾಗುವುದಕ್ಕೆ ಪ್ರಜೆಗಳ ಮನಸ್ಸನ್ನು ಸಂತೋಷಪಡಿಸುವೆನೆಂದು ಸತ್ಯವಂತೆಯಾದ, ಪ್ರಿಯೆಯಾದ, ಹೆಂಡತಿಯನ್ನಾದನೂ ತೊರೆದನು. ದೇವರನ್ನು ಕುರಿತು ಹೀಗೆಂದು ಹೇಳುವ ಪುರಾಣ ಪುಣ್ಯ ಕಥೆಯೇ ಮನುಷ್ಯರಿಗೆ ಯಾವುದು ಒಳ್ಳೆಯ ನಡತೆ ಎಂಬುದನ್ನು ತಪ್ಪಿ ತಿಳಿಯಲು ಅವಕಾಶವಿಲ್ಲದಂತೆ ಒತ್ತಿ ಒತ್ತಿ ಹೇಳಿದವು. ತಂದೆ ಆಡಿದ ಮಾತನ್ನು ನಿಜಮಾಡಬೇಕೆಂದು ಕಾಡಿಗೆ ಹೋದ ರಾಮಚಂದ್ರನೂ, ತಾನು ಆಡಿದ ಮಾತನ್ನು ಅಸತ್ಯಮಾಡಲಾರೆನೆಂದು ರಾಜ್ಯವನ್ನು ಋಷಿಗೆ ಕೊಟ್ಟು ಹೆಂಡತಿ ಮಗನೊಂದಿಗೆ ಕಾಡುಪಾಲಾಗಿ ಆ ಹೆಂಡಿರನ್ನೂ ಮಗನನ್ನೂ ಹೆರವರಲ್ಲಿ ಊಳಿಗಕ್ಕಿಟ್ಟು ತಾನು ಚಂಡಾಲನಿಗೆ ದಾಸನಾಗಿ ಒಡೆಯನಿಗೆ ಬರುವ ಪಣವನ್ನು ಸಲ್ಲಿಸದೆ ತನ್ನ ಹೆಂಡತಿಯಾದರೂ ತಮ್ಮ ಮಗನ ಶವಕ್ಕೆ ಉತ್ತರಕ್ರಿಯೆ ಮಾಡಲು ಒಪ್ಪದ ಹರಿಶ್ಚಂದ್ರನೂ, ನಮ್ಮ ಪುರಾಣಗಳ ಪುಣ್ಯ ಪುರುಷರು.

ಆದರ್ಶಗಳನ್ನು ನೋಡಿ ತಮ್ಮ ನಡೆಯನ್ನು ನಿರ್ಧರಿಸುವ ಮನುಷ್ಯರು ಭೂಮಿಯನ್ನೆಲ್ಲ ಒಂದಡಿಯಿಂದ ಅಳೆದ ತ್ರಿವಿಕ್ರಮನ ಮೇಲ್ಪಂಕ್ತಿಯನ್ನು ಹುಡುಕಲಾರರು. ಭೂಮಿಯನ್ನು ಒಂದು ಹೆಜ್ಜೆಯಿಂದ ಅಳೆಯುವ ಪಾದ ಇವರಿಗಿಲ್ಲ. ರಾಜನಾದರೂ ಮನುಜನಾದ ಹರಿಶ್ಚಂದ್ರ ಮಾನವ ವರ್ಗಕ್ಕೆ ನಿಜವಾಗಿ ಮೇಲ್ಪಂಕ್ತಿ. ಭೂಮಿಯನ್ನು ಅಳೆಯುವ ಪಾದ ದೇವರೊಬ್ಬನದೇ. ಭೂಮಿಯಿಂದ ಆಕಾಶದವರೆಗೆ ನಿಮಿರಿ ನಿಂತು ಅಸತ್ಯವನ್ನು ಸಹಿಸೆನೆಂಬ ಹರಿಶ್ಚಂದ್ರನ ಧರ್ಮನಿಷ್ಠೆ, ಸತ್ಯವ್ರತ, ಅಸೀಮಧೃತಿ, ಅದು ಬೇಕೆಂದು ಸಂಕಲ್ಪಿಸುವ ಎಲ್ಲ ಮಾನವರಿಗೂ ಕೈಸೇರುತ್ತದೆ. ದೇವರ ಅವತಾರವಾದರೂ ತಾನು ಮಾನವನೆಂದೇ ನಡೆದುಕೊಂಡ ರಾಮಚಂದ್ರನು ತಮ್ಮ ಲಕ್ಷ್ಮಣನಿಗೆ "ಧರ್ಮವಿದ್ದು ಅರ್ಥವನ್ನೂ ಕಾಮವನ್ನೂ ಗಳಿಸಬಹುದು, ಪಡೆಯಬಹುದು; ಧರ್ಮವನ್ನು ಬಿಟ್ಟು ಗಳಿಸುವುದಕ್ಕೆ ಪಡೆಯುವುದಕ್ಕೆ ಇವು ಅರ್ಹವಲ್ಲ. ಧರ್ಮದೊಂದಿಗೆ ಇವನ್ನು ಪಡೆಯಬಹುದು, ಎಂಬ ಸಂದರ್ಭದಲ್ಲಿ ಇವನ್ನು ಗಳಿಸಬಹುದು. ಧರ್ಮವನ್ನೋ ಇವನ್ನೋ

ಬಿಡಬೇಕಾದ ಸಂದರ್ಭ ಬಂದರೆ ಧರ್ಮ ಒಂದನ್ನು ಉಳಿಸಿಕೊಂಡು ಅರ್ಥವನ್ನು ಕಾಮವನ್ನು ಬಿಡಬೇಕು'' ಎಂದು ಹೇಳಿದನು. ಮಾನವರಿಗೆ ಮೇಲ್ಪಂಕ್ತಿಯಾಗುವುದು ಈ ನಡತೆ. ಎಲ್ಲ ಹೊತ್ತೂ ಸತ್ಯವನ್ನೇ ಆಡಿ ಸತ್ಯ ತನ್ನ ಪಾಲಿಗೆ ಬಂಧುಗಳಲ್ಲಿ ಮೊದಲ ಬಂಧುವಾದ ತಾಯಿ ಎಂದು ಹೊಗಳಿದ ಯುಧಿಷ್ಠಿರನು ವಿಷಮವೆಂದು ಕಂಡ ಒಂದು ಪರಿಸ್ಥಿತಿಯಲ್ಲಿ ಅರೆಮನಸ್ಸಿನಿಂದ ಒಂದು ಸುಳ್ಳನ್ನಾಡಿ ಅದರ ಫಲವಾಗಿ ಸ್ವಲ್ಪ ಹೊತ್ತು ನರಕವನ್ನು ನೋಡಬೇಕಾಯಿತು. ಇದು ಜನ ಮರಳಿ ಮರಳಿ ಕೇಳಿ ಬಲ್ಲ ಕತೆ. ಹರಿಶ್ಚಂದ್ರ, ರಾಮಚಂದ್ರರು ಮೇಲ್ಪಂಕ್ತಿಯಾಗುವಂತೆ ಈ ಪ್ರಸಂಗದ ಯುಧಿಷ್ಠಿರ ಎಚ್ಚರಿಕೆಯ ಕೈಗಂಬವಾಗುತ್ತಾನೆ. ಪುರಾಣ ಕತೆಗಳ ಒಟ್ಟಿನ ಪ್ರಭಾವ ಜನರಲ್ಲಿ ಅನೀತಿಯನ್ನು ಹರಡಿತೆನ್ನುವುದು ಸರಿಯಾದ ಮಾತಲ್ಲವೆಂದು ನನಗೆ ತೋರುತ್ತದೆ.

೩

ಅಕ್ರೈಸ್ತ ಜನಾಂಗಗಳ ಪುರಾಣಗಳು ಅನೀತಿಯನ್ನು ಹೊಗಳಿ ಆಯಾ ಜನರ ನೀತಿಯ ಕೆಚ್ಚನ್ನು ಕಡಮೆಮಾಡಿದುವೆಂದು ಪಾಶ್ಚಾತ್ಯರು ಕೆಲವರು ಹೇಳುವುದುಂಟು. ಕ್ರೈಸ್ತಧರ್ಮ ಒಂದೇ ಸರಿಯಾದ ಧರ್ಮ, ಅದನ್ನನುಸರಿಸಿದ ತಾವೇ ನಿಜವಾಗಿ ನೀತಿವಂತರು, ಎಂದು ಭಾವಿಸಿದ ಕ್ರೈಸ್ತ ಮಿಷನರಿಗಳೂ ಇತರ ಕ್ರೈಸ್ತ ಜನರೂ ಇಂತಹ ಟೀಕೆಯನ್ನು ಮೊದಲು ಮಾಡಿದರು. ಜಾರ ಚೋರ ಕೃಷ್ಣ ಈ ಟೀಕಾಕಾರರ ಕೈಗೆ ಚಿನ್ನದ ಒಂದು ಗಣಿಯಾಗಿ ಸಿಕ್ಕಿಕೊಂಡನು. ಈಗ ಈ ಜನ ಈ ಪೋರನಿಗೆ ಮುಸುರಿಕೊಂಡಷ್ಟು ಆತುರದಿಂದ ಆ ಕಾಲದಲ್ಲಿ ಬೃಂದಾವನದಲ್ಲಿ ಗೋಪಿಯರೂ ಮುಸುರಿಕೊಂಡಿರಲಾರರು. ಬಿಳಿಯ ಜನ ಈಗ ರಾಜರಾಗಿ ನಮ್ಮನ್ನು ಆಳುತ್ತಿರುವವರು. ನಮ್ಮ ಧರ್ಮದಲ್ಲಿ, ಪುರಾಣ ದಲ್ಲಿ, ಇತಿಹಾಸದಲ್ಲಿ, ಇವರು ಯಾವುದೇ ಸಂಗತಿಯನ್ನು ದೋಷವೆಂದು ತೋರಿಸಿದರೆ 'ಹೌದು, ಅದು ದೋಷವೇ' ಎಂದು ನಮ್ಮಲ್ಲಿ ಅನೇಕರಿಗೆ ಕಂಡದ್ದು ಸಹಜವಾಗಿದೆ. ಸಾಲದ್ದಕ್ಕೆ ನಮ್ಮ ಜನಜೀವನದಲ್ಲಿ ಸಾಕಾದಷ್ಟು ದೋಷ ಇರುವುದೂ ನಿಜ. ಇದರ ಮೇಲೆ ನಾವು ಹೊಸ

ಕಾಲದ ವಿದ್ಯೆಯನ್ನು ಪಡೆದು ಪಾಶ್ಚಾತ್ಯರಂತೆಯೇ ನಮ್ಮ ಈ ಆಸ್ತಿಯನ್ನೆಲ್ಲಾ ಚಿಕಿತ್ಸಕ ಮನೋಧರ್ಮದಿಂದ ಪರಿಶೀಲಿಸಿದೆವು. ಹೀಗೆ ಮಾಡುವುದರಲ್ಲಿ ಅವರ ದೃಷ್ಟಿಯಿಂದ ಅವರು ಮಾಡಿದ ಟೀಕೆ ನಮಗೇ ಬೇರೊಂದು ದೃಷ್ಟಿಯಿಂದ ಸರಿಯೆಂದು ಕಂಡಿತು. ಒಳ್ಳೆಯ ಮನಸ್ಸಿನಿಂದ ಹೊರಟ ಚಿಕಿತ್ಸೆಯಾದರೂ ಕೆಲವು ವೇಳೆ ಕೆಟ್ಟುದನ್ನು ಕುರಿತು ಮಾತ್ರವಲ್ಲದೆ ಒಳ್ಳೆಯುದನ್ನು ಕುರಿತೂ ಶಂಕೆಪಡುತ್ತದೆ. ನಮ್ಮ ಪುರಾಣಗಳನ್ನು ಕುರಿತು ನಾವು ಹಲವು ವೇಳೆ ಹೀಗೆ ಯೋಚನೆ ಮಾಡಿದೇವೆ. ಆದರೆ ಈ ವಿಚಾರದಲ್ಲಿ ಶಂಕೆ ಒಂದೇ ಸರಿಯಾದ ನಿಲುವಲ್ಲ. ಬೇರೊಂದು ನಿಲುವಿದೆ. ಅದನ್ನೂ ನಾವು ತಿಳಿದುಕೊಳ್ಳಬೇಕು. ಈ ಪಕ್ಷದಿಂದ F. W. Bain ಎಂಬ ಒಬ್ಬ ಆಂಗ್ಲ ಮಹಾಶಯರ ಈ ನಾಲ್ಕು ಮಾತು ಗಮನಾರ್ಹವಾಗಿವೆ:

"The ethical value of India's beautiful mythology is not sufficiently appreciated in Europe, whose people seem to think that virtue was discovered by themselves, and have learned from Xenophanes and Plato, S. Paul, S. Augustine, and other shallow politicians to deny all morality to polytheism condemning the whole of antiquity for the vices of the old metropolis of Rome, which itself was no worse than many modern cities. And India is a survival from antiquity. But it is not, as some suppose, a sink of immorality; nor a barbarous *tabula rasa* as others seem to think, with everything to learn in ethics, on which anything may be written that you please. The arrogance of ignorance is the cause of these misunderstandings. The Hindoos have a fable that the *chakora*, a legendary partridge, subsists on the beams of the moon: and the bird is no bad emblem of themselves. In the ruin of all their ancient glories, the one thing that remains to them is the thesaurus of religion and mythology preserved, like palæozoic flies in amber, in the crystal of their ancient tongue.... For with them it is not as with us. Here, in the young nations of the West literature and religion are not one thing, but two, with essence and origins altogether different and distinct, though now and then a Milton or a Dante may, by welding them

together, produce something more analogous to Indian poetry . . . . in India religion and literature are inseparable: they look back not to Greece on the one hand and Judæa on the other, but to a sacred compound of the two, all the nearer because it is their very own.

* * * *

From every line of his old literature the Hindoo learns the essence of religion better than any missionary can teach him. It is devotion: of a woman to her husband; of a man, to his duty, his *dharma;* his ancesters, his family, his mother-tongue" (The Ashes of a God : ಮುನ್ನುಡಿ).

"—ಭರತವರ್ಷದ ಸುಂದರವಾದ ಪುರಾಣ ಕಥಾಸ್ತೋಮ ನೀತಿ ದೃಷ್ಟಿಯಿಂದ ಎಷ್ಟು ಅಮೂಲ್ಯವಾದದೆಂದು ಯೂರೋಪಿನ ಜನರಿಗೆ ತಕ್ಕಷ್ಟು ಮನ ಮುಟ್ಟಿಲ್ಲ. ನೀತಿಯೆನ್ನುವುದನ್ನು ತಾವೇ ಕಂಡು ಹಿಡಿದೆವೆಂದು ಅವರು ತಿಳಿದಿರುವಂತಿದೆ. ಈ ಜನ ಜೆನೊಫೇನಿಸ್, ಪ್ಲೇಟೊ, ಸೆಯಿಂಟ್‌ಪಾಲ್, ಸೆಯಿಂಟ್ ಅಗಸ್ಟೀನ್ ಪ್ರಭೃತಿಗಳಿಂದಲೂ, ಇತರ ಆಳವಿಲ್ಲದ ರಾಜಕೀಯರಿಂದಲೂ ಬಹುದೈವವಾದಿಮತಗಳಲ್ಲಿ ನೀತಿ ಎಂಬುದಿಲ್ಲ ಎಂದು ಹೇಳುವುದನ್ನು ಕಲಿತಿದಾರೆ. ಪುರಾತನ ರಾಜಧಾನಿ ರೋಮ್ ನಗರದ ಪಾಪವನ್ನು ಕಾರಣಮಾಡಿಕೊಂಡು ಒಟ್ಟು ಪೂರ್ವಕಾಲವನ್ನೇ ದೂರಿದಾರೆ. ನಿಜಕ್ಕೆ ರೋಮ್ ನಗರ ಹೊಸಕಾಲದ ಹಲವು ನಗರಗಳಿಗಿಂತ ಬಹಳವೇನೂ ನಿಕೃಷ್ಟವಾಗಿರಲಿಲ್ಲ. ರೋಮ್ ನಗರದಂತೆ ಇಂಡಿಯಾ ದೇಶವೂ ಈ ಜನರ ಮನಸ್ಸಿಗೆ ಅನೀತಿಯ ಆ ಪೂರ್ವಕಾಲದ ಒಂದು ಅವಶೇಷ ಎಂದು ಕಾಣುತ್ತಿದೆ. ಇಂಡಿಯಾ ಪೂರ್ವಕಾಲದ ದೇಶ ಸರಿ; ಪುರಾತನ ನಾಗರಿಕತೆಯಿಂದ ಉಳಿದು ನಿಂತಿದೆ ಸರಿ; ಆದರೆ ಇಷ್ಟುಮಾತ್ರದಿಂದ ಈ ದೇಶ ಹಲವರು ಗ್ರಹಿಸುವಂತೆ ಆ ನೀತಿಯ ತಿಪ್ಪೆಯಗುಂಡಿಯೇನೂ ಅಲ್ಲ. ಇನ್ನು ಹಲವರು ಈ ದೇಶವನ್ನು ಸಾರಿಸಿದ ನೆಲವೆಂದು ತಮ್ಮ ಇಷ್ಟಬಂದದ್ದನ್ನು ಬರೆಯುಬಹುದಾದ, ಎಲ್ಲ ನೀತಿಯನ್ನೂ ಹೊರಗಿಂದ ಕಲಿಯುಬೇಕಾದ, ಶೂನ್ಯರಂಗವೆಂದು ಗ್ರಹಿಸಿರುವಂತೆ ತೋರುತ್ತಿದೆ. ಈ ಗ್ರಹಿಕೆಯೂ ಸರಿಯಲ್ಲ. ಅಹಂಕಾರ ದೃಪ್ತವಾದ ಅಜ್ಞಾನವೇ ಈ ಜನರ ಇಂತಹ ತಪ್ಪುತಿಳುವಳಿಕೆಗಳಿಗೆ

ಕಾರಣ. ಚಕೋರವೆಂಬ ಒಂದು ಪಕ್ಷಿ ಚಂದ್ರನ ಕಿರಣದಿಂದ ಜೀವಿಸು ತ್ತದೆಂದು ಹಿಂದುಗಳಲ್ಲಿ ಒಂದು ಐತಿಹ್ಯವಿದೆ. ಈ ಪಕ್ಷಿ ಈ ಜನರ ಬಹು ಒಳ್ಳೆಯ ಪ್ರತಿನಿಧಿ. ಪೂರ್ವಕಾಲದ ತಮ್ಮ ಎಲ್ಲಾ ವೈಭವದ ವಿನಾಶದಲ್ಲಿ ಈ ಜನಕ್ಕೆ ಉಳಿದು ಬಂದಿರುವ ಒಂದು ಧನ ಎಂದರೆ ಧರ್ಮವೂ ಪುರಾಣವೂ ಬೆರೆತು ಕಾಣುವ ಇವರ ಇತಿಹಾಸಕೋಶ. ಇವರಿಗೆ ನಮ್ಮ ಗತಿ ಬಂದಿಲ್ಲ. ಇಲ್ಲಿ ಪಶ್ಚಿಮದ ನವೀನ ಜನಾಂಗಗಳಲ್ಲಿ ಸಾಹಿತ್ಯ ಧರ್ಮಗಳು ಒಂದು ವಸ್ತುವಲ್ಲ; ಎರಡಾಗಿ ಉಳಿದಿವೆ. ಅವುಗಳ ಸಾರ, ಅವುಗಳ ಆರಂಭ, ಪ್ರತ್ಯೇಕ ಮತ್ತು ವ್ಯತ್ಯಸ್ತ. ಎಲ್ಲೋ ಒಂದೊಂದು ಸಲ, ಒಬ್ಬ ಮಿಲ್ಟನ್ನೋ ಒಬ್ಬ ಡಾಂಟೆಯೋ ಅವನ್ನು ಒಂದಾಗಿ ಬೆಸೆದು ಭಾರತೀಯ ಕಾವ್ಯಗಳಂತೆ ಕಾಣುವ ಕೃತಿಯನ್ನು ನಿರ್ಮಿಸಬಹುದು. ಭರತವರ್ಷದ ಸ್ಥಿತಿ ಬೇರೆ. ಅಲ್ಲಿ ಧರ್ಮ ಸಾಹಿತ್ಯಗಳು ಅವಿಚ್ಛೇದ್ಯ. ನಮ್ಮಲ್ಲಿರುವಂತೆ ಭಾರತವರ್ಷದಲ್ಲಿ ಅವು ಒಂದು ಗ್ರೀಸ್ ಕಡೆಗೆ, ಒಂದು ಜೂಡಿಯಾ ಕಡೆಗೆ ನೋಡುತ್ತ ನಿಂತಿಲ್ಲ. ಗ್ರೀಸ್ ಜೂಡಿಯಾ ಎರಡೂ ಸೇರಿದ ಬೇರೆ ಒಂದು ಪುಣ್ಯತಮ ಸ್ಥಾನವನ್ನು ದೃಷ್ಟಿಸುತ್ತಿವೆ. ಆ ಸ್ಥಾನ ಅವುಗಳ ಸ್ವಂತದ್ದು. ಆದಕಾರಣದಿಂದ ಅವರ ಹೃದಯಕ್ಕೆ ಬಹು ಹತ್ತಿರವಾಗಿದೆ. ಯಾವ ಒಬ್ಬ ಹಿಂದುವೂ ಧರ್ಮದ ತಿರುಳನ್ನು ತನ್ನ ಪುರಾಣ ಸಾಹಿತ್ಯದ ಒಂದೊಂದೇ ಪಂಕ್ತಿಯಿಂದ ಯಾವ ಮಿಷನೆರಿಯೂ ಅವನಿಗೆ ಕಲಿಸಲಾರದಷ್ಟು ಚೆನ್ನಾಗಿ ಗ್ರಹಿಸುವನು. ಆ ತಿರುಳು ನಿಷ್ಠೆ: ಹೆಣ್ಣಿಗೆ ಗಂಡನಲ್ಲಿರಬೇಕಾದ ನಿಷ್ಠೆ, ಗಂಡಿಗೆ ಕರ್ತವ್ಯದಲ್ಲಿರಬೇಕಾದ ನಿಷ್ಠೆ, ತನ್ನ ಧರ್ಮದಲ್ಲಿ, ತನ್ನ ಪೂರ್ವಿಕರಲ್ಲಿ, ತನ್ನ ಕುಟುಂಬವಲ್ಲಿ ತಾಯ್ನುಡಿಯಲ್ಲಿ ಇರಬೇಕಾದ ನಿಷ್ಠೆ—"

ಬೆಯಿನ್ ಮಹಾಶಯರು ಭರತವರ್ಷದಲ್ಲಿ ಬಾಳು ನಡಸಿದವರು; ನಮ್ಮ ಜನದ ಬಾಳುವೆಯನ್ನು ಕಣ್ತುಂಬ ನೋಡಿದವರು. ಪುರಾಣಗಳು ನಮ್ಮ ಜನದ ಮನಸ್ಸಿನ ಮೇಲೆ ಯಾವ ಪರಿಣಾಮವನ್ನು ಮಾಡಿದು ವೆಂಬುದನ್ನು ಇವರು ಊಹೆಯಿಂದ ಗ್ರಹಿಸಲಿಲ್ಲ: ನೋಡಿ ತಿಳಿದರು. ಅವರ ಈ ಅಭಿಪ್ರಾಯವನ್ನು ನಾವು ಹಗುರವಾಗಿ ಒಗೆಯುವುದು ಸಾಧ್ಯವಲ್ಲ.

೪

ಇದು ತಾತ್ವಿಕ ದೃಷ್ಟಿಯಿಂದ ಪ್ರತಿಪಾದನ ಮಾತ್ರ ಆಯಿತು, ಜನರಲ್ಲಿ ನಿಜವಾಗಿ ಈ ನಿಷ್ಠೆ ಇದ್ದಿತೆ, ಎಂದರೆ ನಮ್ಮ ಉತ್ತರವೇನು? ಈ ಭಾಗದಲ್ಲೂ ಪುರಾಣ ಕೇಳಿ ಬೆಳೆದವರ ಚರಿತ ಒರೆಗೆ ನಿಲ್ಲುತ್ತದೆಂದು ಹೇಳಬೇಕು. ಇಂಡಿಯಾ ದೇಶದಲ್ಲಿ ಬಹುಕಾಲ ಇದ್ದು ಬಹು ವಿಧದ ಜನರೊಂದಿಗೆ ಬೆರೆತು ಬಾಳಿದ ಕರ್ನಲ್ ಸ್ಲೀಮನ್ ಎಂಬ ಆಂಗ್ಲ ಮಹಾಶಯರು "I have had before me hundreds of cases in which a man's property, liberty or life has depended upon his telling a lie and he has refused to tell it" ಎಂದು ಬರೆದಿದಾರೆ. ಕರ್ನಲ್ ಸ್ಲೀಮನ್ ಹೇಳಿದ ಈ ಮಾತನ್ನು ಉದ್ಧರಿಸಿ ಮಹಾವಿದ್ವಾನ್ ಮ್ಯಾಕ್ಸ್‌ಮುಲ್ಲರ್ "Could many an English Judge say the same?" (India: What it can teach us) ಎಂದು ಪ್ರಶ್ನೆ ಮಾಡಿದ್ದಾರೆ. ಹಾಗೆಯೇ ಮಾತನ್ನು ಮುಂದರಿಸಿ ಬಹು ವರ್ಷ ಕಲ್ಕತ್ತಾ ನಗರದಲ್ಲಿದ್ದು ಬಹು ರೀತಿಯ ಜನರನ್ನು ಕಂಡಿದ್ದ ಪ್ರೊಫೆಸರ್ ವಿಲ್‌ಸನ್ ಎಂಬುವರು ಹೇಳಿದ ಈ ಮಾತುಗಳನ್ನು ಎತ್ತಿ ನುಡಿದಿದಾರೆ:

"I lived both from necessity and choice, very much amongst the Hindus, and had opportunities of becoming acquainted with them in a greater variety of situations than those in which they usually come under the observation of Europeans. In the Calcutta mint for instance, I was in daily personal communication with a numerous body of artificers, mechanics, and labourers, and always found amongst them cheerful and unwearied industry, good humoured compliance with the will of their superiors, and a readiness to make whatever exertions were demanded from them. There was among them no drunkenness, no disorderly conduct, no insubordination. It would not be true to say that there was no dishonesty, but it was comparatively rare, invariably petty, and much less formidable than, I believe, it is necessary to guard against in other mints in other countries."

ಸಾಮಾನ್ಯವಾಗಿ ಇಂಗ್ಲೀಷರ ಪರಿಚಯಕ್ಕೆ ಬಾರದ ಅನೇಕರನ್ನು ಕಂಡ ವಿಲ್‌ಸನ್ ಮಹನೀಯರು ಈ ಜನರಲ್ಲಿ ಸಾಮಾನ್ಯವಾಗಿ ಇಂಗ್ಲೀಷರು ನಮ್ಮ ಜನಕ್ಕೆ ಆರೋಪಿಸದ ಅನೇಕ ಸದ್ಗುಣಗಳನ್ನು ಕಂಡರು. ಟಿಂಕಸಾಲೆಯ ನೂರಾರು ಸೇವಕರು ಹರ್ಷಚಿತ್ತರಾಗಿ ಬೇಸರ ಇಲ್ಲದೆ ಶ್ರದ್ಧೆಯಿಂದ ಕೆಲಸಮಾಡುವುದು ಇವರಿಗೆ ಕಂಡಿತು. ಆ ಜನರಲ್ಲಿ ಕುಡಿತವಿರಲಿಲ್ಲ, ಕೆಡು ನಡತೆಯಿರಲಿಲ್ಲ, ಅವಿಧೇಯತೆ ಯಿರಲಿಲ್ಲ. ಅಷ್ಟು ಜನದಲ್ಲಿ ಯಾರೂ ಎಂದೂ ಅಸತ್ಯದಿಂದ ನಡೆಯಲಿಲ್ಲ ಎಂದಲ್ಲ; ಆದರೆ ಇದು ಬಹು ಅಪೂರ್ವವಾಗಿತ್ತು. ಇದ್ದಾಗ ಅಂತಹ ವಿಪರೀತದ್ದೇನೂ ಆಗಿರಲಿಲ್ಲ. ಬೇರೆಯ ಜನರಲ್ಲಿ ಇರುವುದಕ್ಕಿಂತ ಕಡಮೆ ಯಾಗಿರುವಂತೆ ಇವರಿಗೆ ಕಂಡಿತು.

ಇದು ಭಾರತೀಯರಿಗೆ ಹೆಮ್ಮೆಯನ್ನುಂಟುಮಾಡುವಂತಹ ಪ್ರಶಂಸೆ. ಕೃತ್ತಿವಾಸನ ರಾಮಾಯಣ, ಕಾಶೀದಾಸನ ಭಾರತ, ಶಾಕ್ತ ವೈಷ್ಣವರ ಗೀತ ಇತ್ಯಾದಿ ಹಳೆಯ ಕೃತಿಗಳಿಂದ ಪುರಾಣಗಳ ನೀತಿಯನ್ನು ಗ್ರಹಿಸಿದ್ದ ಈ ಜನರ ನಡತೆ ಹೊಸಕಾಲದ ನಮ್ಮ ಮನಸ್ಸಿಗಾದರೂ ತೃಪ್ತಿ ಉಂಟು ಮಾಡುವಂತಹದಾಗಿತ್ತು.

ಸ್ಲೀಮನ್‌ರವರ ವಾಕ್ಯವನ್ನು ಉದ್ಧರಿಸುವ ಸಂದರ್ಭದಲ್ಲಿ ಮ್ಯಾಕ್ಸ್‌ಮುಲ್ಲರ್ ಮಹನೀಯರು ಈ ಸತ್ಯಸಂಧತೆಗೆ ಕಾರಣವನ್ನು ಸೂಚಿಸಿದ್ದಾರೆ.

"....Where rights, duties and interests begin to clash in one and the same village public opinion in its limited sphere seems strong enough to deter even an evil disposed person from telling a falsehood. The fear of Gods has not also lost its power. In most villages there is a sacred tree, a Peepal Tree (*Ficus Indica*) and the Gods are supposed to delight to sit among its leaves and listen to the music of their rustling. The deponent takes one of these leaves into his hand and invokes the God, who sits above him, to crush him or those dear to him, as he crushes the leaf in his hand, if he speaks anything but the truth. He then plucks and crushes the leaf, and states what he has to say ....If the deponent told a lie, he believes that the God

who sat on his sylvan throne above him, and searched the heart of man, must know it; and from that moment he knew no rest, he was always in dread of His vengeance. If any accident happened to him or to those dear to him, it was attributed to this offended deity; and if no accident happened, some evil was brought about by his own disordered imagination. It was an excellent superstition inculcated in the ancient law-books, that the ancestors watched the answer of a witness, because, according as it was true or false, they themselves would go to heaven or to hell."

ದುಷ್ಟರಾದವರು ಕೂಡ ಹತ್ತು ಜನದ ಎದುರಿಗೆ ಸುಳ್ಳು ಹೇಳಲು ಹಿಂಜರಿಯುತ್ತಾರೆ. ಅರಳೀ ಮರದ ಕೆಳಗೆ ಪಂಚಾಯಿತಿ ಕುಳಿತು 'ಆಣೆಮಾಡು' ಎಂದು ಹೇಳಿದಾಗ ಸುಳ್ಳರಾದರೂ ಆ ಮರದ ಮೇಲಿರುವರೆಂಬ ದೇವತೆಗಳಿಗೆ ಹೆದರುತ್ತಾರೆ; ಸತ್ಯವನ್ನು ಹೇಳುತ್ತಾರೆ. ಹೇಳದಿದ್ದರೆ ಮನೆ ಹಾಳಾಗುತ್ತದೆಂದು ಎಲ್ಲರ ನಂಬಿಕೆ, ಅವರ ಭಯ. ಏನಾದರೂ ತೊಂದರೆ ಆಯಿತೋ ಅದು ದೇವತೆಗಳ ಆಗ್ರಹದ ಫಲವೆಂದು ಜನ ತಿಳಿಯುತ್ತಾರೆ.

ನಮ್ಮ ಊರುಗಳಲ್ಲಿ ಅಶ್ವತ್ಥಕಟ್ಟೆ ಇದ್ದದೂ ಇರುವುದೂ ಸಾರ್ವಜನಿಕ ಜೀವನದ ಬಹು ಭಾಗ ಇವುಗಳ ಮೇಲೆ ನಡೆಯುತ್ತಿದ್ದದೂ ನಮ್ಮಲ್ಲಿ ಅನೇಕರಿಗೆ ತಿಳಿದ ವಿಷಯ. ದೇವರ ಮುಂದೆ ಸತ್ಯಮಾಡಿಸುವುದು ನಮ್ಮ ಹಳ್ಳಿಗಳಲ್ಲಿ ಇಂದಿಗೂ ಉಳಿದಿರುವ ವಾಡಿಕೆ.

ಬಹು ಪೂರ್ವಕಾಲದಲ್ಲಿ ನಮ್ಮ ದೇಶವನ್ನು ಕಂಡ ಪರದೇಶೀಯರು ಭರತವರ್ಷದ ಜನರ ಸತ್ಯವನ್ನು ಹೊಗಳಿದ್ದಾರೆ. ಎಪಿಕ್‌ಟೀಟಸ್ ಮಹಾ ಗುರುವಿನ ಶಿಷ್ಯ ಆ್ಯರಿಯಾನ್ (Arian) ಎಂಬುವನು "But indeed no Indian is accused of lying" ಎಂದು ಹೇಳಿದಾನಂತೆ. ಹುಯಾನ್ ಸಾಂ "They are distinguished by the straightforwardness and honesty of their character" ಎಂದಿರುವುದು ನಮಗೆ ದೊರೆಯುತ್ತದೆ. ಮಹಮದೀಯ ಭೂವಿವರಕ ಇದ್ರಿಸಿ "ಇಂಡಿಯಾದೇಶದ ಜನರು ನಂಬಿಕೆ, ಸತ್ಯ, ನಿಷ್ಠೆಗೆ ಪ್ರಸಿದ್ಧರಾಗಿದಾರೆ"

ಎಂದು ಹೇಳಿದಾನೆ. ಮೊದಲಿಬ್ಬರ ಮಾತು ಪುರಾಣಕಾಲದ್ದು ಹೌದೋ ಅಲ್ಲವೋ ಎನ್ನುವುದಾದರೂ ಈ ಮೂರನೆಯ ಮಾತು ಕ್ರಿಸ್ತಶಕ ಹನ್ನೊಂದನೆಯ ಶತಮಾನದ್ದು, ಪುರಾಣಗಳ ಪ್ರಭಾವ ಹರಡಿದ್ದ ಕಾಲವನ್ನು ಕುರಿತದ್ದು. ಹಾಗೆಯೇ ಹದಿಮೂರನೆಯ ಶತಮಾನದ ಒಬ್ಬ ಮಹನೀಯ ಇಂಡಿಯದೇಶದ ಜನರು "Free from all deceit and violence. They fear neither death nor life" ಎಂದು ಹೇಳಿದನಂತೆ. ಈ ದೇಶದ ವ್ಯಾಪಾರಿ ಸಮುದಾಯ ಒಂದನ್ನು ಕುರಿತು ಮಾರ್ಕೊಪೊಲೋ "The best merchants in the world and the most truthful, for they would not tell a lie for anything on earth" ಎಂದು ಹೊಗಳಿದನು. ಭಾರತೀಯ ರಾಷ್ಟ್ರೀಯ ಸಭೆಯ ಅಧ್ಯಕ್ಷನಾಗಿದ್ದ ಆಲ್‌ಫ್ರೆಡ್ ವೆಬ್ ಮಹಾಶಯನು ಹೀಗೆಂದು ಬರೆದಿದಾನೆ:

"In Madras, in 1894, I conversed with a sewing machine agent who had travelled and done business over the globe. His principal trade now was with Indian tailors and seamsters; selling machines to be paid for by monthly instalments. I asked the proportion of bad debts in such business. He said he had found them as high as ten per cent. in England. 'How high in India?' 'But one per cent.' and such chiefly with Europeans. Practically we have no debts with Indian natives. If it comes to it that they cannot pay instalments, they will give back the machines.

"In open crowded bazaars or market-places, or Railway platforms in India are money changers. They sit at tables upon which are heaps of coins of various denominations. Can money be thus exposed at similar gatherings in Europe?" (*Modern Review* ಪತ್ರಿಕೆಯಲ್ಲಿ ಉದ್ಧರಿಸಿರುವ ಮಾತು.)

ಹೊಲಿಗೆಯ ಯಂತ್ರದ ವ್ಯಾಪಾರಿಗಳ ಪ್ರತಿನಿಧಿಯ ಅನುಭವದಲ್ಲಿ, ಹೊರ ದೇಶದಲ್ಲಿ ನೂರರಲ್ಲಿ ಹತ್ತರಷ್ಟು ಸಾಲ ಬರದೆ ಮುಳುಗುತ್ತಿತ್ತು. ಭರತವರ್ಷದಲ್ಲಿ ನೂರರಲ್ಲಿ ಒಂದರಷ್ಟು. ಆ ಒಂದೂ ಇಲ್ಲಿರುವ ಯೂರೋಪಿಯನ್ ಸಂಬಂಧದ್ದು. ದೇಶೀಯ ಹೊಲಿಗೆಕಾರರು ಸಾಲ

ಉಳಿಸಿಕೊಳ್ಳುತ್ತಿರಲಿಲ್ಲ. ತೀರಿಸುವುದಕ್ಕಾಗದಿದ್ದರೆ ಯಂತ್ರವನ್ನು ಹಿಂದಿರುಗಿಸುವರು. ಇದಕ್ಕೂ ಆಶ್ಚರ್ಯದ ಸಂಗತಿ, ಸಂತೆಯಲ್ಲಿ, ಅಂಗಡಿ ಕಟ್ಟೆಯಲ್ಲಿ, ರೈಲು ನಿಲ್ದಾಣದಲ್ಲಿ ವ್ಯಾಪಾರಿಯಾದವರು ತೆರೆದ ಗಲ್ಲದಲ್ಲಿ ಹಣ ಹಾಕಿ ಕುಳಿತಿದ್ದರೆ ಯಾರೂ ಅದಕ್ಕೆ ಕೈ ಹಾಕದೆ ಇರುವುದು. ಯೂರೋಪಿನಲ್ಲಿ ಹಣವನ್ನು ಹೀಗೆ ಬಿಡುವುದು ಸಾಧ್ಯವೇ?

ಇದಿಷ್ಟು ಸತ್ಯದ ಮಾತಾಯಿತು. ಎಲ್ಫಿನ್‌ಸ್ಟನ್ ಮಹಾಶಯನು ಮತ್ತೊಂದು ವಿಷಯದಲ್ಲಿ "Their freedom from gross debauchery is the point in which they appear to most advantage, and their superiority in purity of manners is not flattering to our self-esteem" ಎಂದಿದಾನೆ. ಸರ್ ಥಾಮಸ್ ಮನ್ರೋ (Sir Thomas Munro) ಈ ಜನರ "treatment of the female sex full of confidence, respect and delicacy" ಎಂದು ಹೇಳಿದಾನೆ. ಈ ಮತ್ತು ಇಂತಹ ಇತರ ಗುಣಗಳಲ್ಲಿ ಹಿಂದೂ ಜನಗಳು ಯೂರೋಪಿನ ಜನರಿಗೆ ಕಡಮೆಯಿಲ್ಲ ಎಂದಿದಾನೆ. ನಿಂದಾಸ್ತುತಿಯಲ್ಲಿ ನಮ್ಮ ಪೂರ್ವೀಕರು ಗೋಪೀಜಾರನೆಂದ ಕೃಷ್ಣನ ಕತೆಗಳನ್ನು ಕೇಳಿ ನಮ್ಮ ಜನ ನಡತೆಯಲ್ಲಿ ಕೆಡಲಿಲ್ಲ; ಪರದೇಶೀಯರಿಂದ ಹೀಗೆ ಹೊಗಳಿಸಿಕೊಳ್ಳುವಂತೆ ನಡೆದುಕೊಂಡರು.

ಪ್ರತಿಷ್ಠೆಯಿಂದ ಮತ್ತರಾದ ಲಾರ್ಡ್ ಕರ್ಜನಿನಂತಹ ಅಧಿಕಾರಿಗಳು ಭಾರತೀಯರನ್ನು ಸುಳ್ಳಿನ ತೌರೆಂದು ಹೇಳಲಿ. ಅದೇ ಪೀಳಿಗೆಯ ಕ್ಯಾಥರಿನ್ ಮೇಯೊ, ಬೆವರ್ಲಿ ನಿಕಲ್ಸ್ ಇನ್ನಷ್ಟು ಸಲ್ಲದ ಮಾತನ್ನಾಡಲಿ. ಅವರ ಮಾತಿನಿಂದ ನಾವು ಬೆದರುವುದು ಬೇಡ. ಅವರು ಕಾಣುವ ಜನ ಜೀವನ ಬಹು ಸ್ವಲ್ಪ. ಜನರನ್ನು ಚೆನ್ನಾಗಿ ಬಲ್ಲ ಬೆಯಿನ್, ಸ್ಲೀಮನ್, ವಿಲ್ಸನ್, ವೆಬ್ ಮಹನೀಯರ ಮಾತಿಂದ ವಸ್ತುಸ್ಥಿತಿ ವ್ಯಕ್ತವಾಗಬೇಕು. ನಮ್ಮ ಜನ ಒಳ್ಳೆಯವರೆಂದು ನಾವು ಹೇಳಿ ಪ್ರಯೋಜನವಿಲ್ಲ: ಹಿಂದೂ ಆದವನು ಹಿಂದೂ ಧರ್ಮವನ್ನು, ಹಿಂದೂ ಜನವನ್ನು ಹೊಗಳುತ್ತಿದಾನೆ ಎಂಬ ಸೋಡಿಯ ಮಾತು ಬರುತ್ತದೆ. ಹಿಂದೂ ಅಲ್ಲದವರು, ಈ ದೇಶಕ್ಕೆ ಸೇರದವರು, ಆಡುವ ಮೆಚ್ಚು ನುಡಿ ಇಂತಹ ಆಕ್ಷೇಪಣೆಗೆ

ಗುರಿಯಾಗುವುದಿಲ್ಲ. ಇಂಥವರ ಮಾತಿನಿಂದ ಪುರಾಣ ಕತೆಗಳನ್ನು ಕೇಳಿ ಸಾವಿರ ವರ್ಷ ಬೆಳೆದಿರುವ ಜನ ಸತ್ಯವನ್ನು ಕಾಯ್ದುಕೊಂಡು ಬಂದಿತೆನ್ನುವುದು, ಒಳ್ಳೆಯ ಬಾಳನ್ನು ಬೆಳಸಿತೆನ್ನುವುದು ಕಾಣುತ್ತದೆ. "ಸತ್ಯಂ ಮಾತಾ" ಎನ್ನುವುದು ಸಂಸ್ಕೃತ ಮಾತು. ಹಿರಿಯರು ಜೋಡಿಸಿದ್ದು, ಸಾಮಾನ್ಯರು ಕೇಳಿದ್ದು. ಇದರಂತೆ ಸಾಮಾನ್ಯರು ಜೋಡಿಸಿ ಊರೆಲ್ಲ ಕೇಳಿದ ವಾಕ್ಯಗಳೂ ಜನದಲ್ಲುಂಟು. ನಮ್ಮ ಜನರ ಒಂದು ಕಥೆಯ ಗೋವು "ಸತ್ಯವೆಂಬುದೆ ತಾಯಿ ತಂದೆ, ಸತ್ಯವೆಂಬುದೆ ಬಂಧು ಬಳಗವು, ಸತ್ಯವಾಕ್ಯಕೆ ತಪ್ಪಿ ನಡೆದರೆ ಮೆಚ್ಚನಾ ಜಗದೀಶನು" ಎಂದು ಹೇಳಿದ್ದಾಗಿ ಜನಪದ ಗೀತೆ ಹಾಡಿದೆ. ಹುಲಿಯ ಕೈಗೆ ಸಿಕ್ಕಿ ನರಳುವ ಹಸು ಅನೇಕ ರೀತಿಯಲ್ಲಿ ನಮ್ಮ ಜನದ ಪ್ರತಿನಿಧಿ. ಸತ್ಯವನ್ನು ಕುರಿತ ನಿಷ್ಠೆಯಲ್ಲಿಯೂ ಬಹು ಭಾಗದ ನಮ್ಮ ಜನ ಈ ಕತೆಯ ಹಸುವಿನಂತೆ ಸರಳಮನಸ್ಕರು.

ಇಂದಿನ ಕೋರ್ಟು ಕಚೇರಿಯ, ನೂರು ಶಾಸನದ, ನೂರು ಲಾಯರುಗಳ, ನೂರು ವ್ಯವಹಾರದ ಗೊಂದಲದಲ್ಲಿ ಈ ಸತ್ಯದ ಕನ್ನಡಿ ಚೂರಾಗಿರುವಂತೆ ಕಾಣುವುದಾದರೆ ಅದು ನಮ್ಮ ಪುರಾಣಗಳ ತಪ್ಪಲ್ಲ. ಶತಮಾನ ಕಾಲದ ಪರದೇಶ ವಿದ್ಯೆ, ಶತಮಾನ ಕಾಲದ ಧರ್ಮ ವೈಮುಖ್ಯ, ಶತಮಾನ ಕಾಲದ ಅನುಕರಣ ಜೀವನಕ್ರಮ ನಮ್ಮನ್ನು ಈ ದುರವಸ್ಥೆಗೆ ತಂದಿವೆ. ಈ ಅವಸ್ಥೆ ತೊಲಗಬೇಕಾದರೆ ನಾವು ಪುರಾಣಗಳನ್ನು ಅಟ್ಟ ಬೇಕಾಗಿಲ್ಲ. ಜನಜೀವನದಿಂದ ಅವು ಓಡಿಹೋಗಿ ಬಹು ದಿನವಾಯಿತು. ಅವು ಇದ್ದಾಗ ಜನರಲ್ಲಿ ಸತ್ಯಶೌಚ ಇದ್ದವೆಂದೂ ಅವು ಹೋದಂತೆ ಇವೂ ಮರೆಯಾದುವೆಂದೂ ಕಾಣುತ್ತದೆ. ಪುರಾಣಗಳು ಹಿಂದಿನ ಕಾಲದ ನಂಬಿಕೆಯ ರೀತಿಯಲ್ಲಿ ಜನಜೀವನಕ್ಕೆ ಹಿಂದಿರುಗುವುದು ಈಗ ಸಾಧ್ಯವಿಲ್ಲ. ಸಾಧ್ಯವಾಗಿದ್ದರೂ ಅದು ಒಳಿತೂ ಅಲ್ಲ. ಪುರಾಣಗಳನ್ನು ಸಮರ್ಥಿಸುವಂತಹ ಬೆಯಿನ್ ಮಹಾಶಯರಂತಹ ವಿದೇಶೀಯರು ಅವುಗಳ ಸಪ್ತಸಮುದ್ರ ಸಪ್ತದ್ವೀಪಗಳನ್ನೂ ಅವುಗಳ ಊಹೆಯ ವಿಲಾಸವನ್ನೂ ನಂಬುವ ಸರಳಜೀವನವೇ ಒಳ್ಳೆಯದೆಂಬಂತೆ ಮಾತ ನಾಡುತ್ತಾರೆ. ಇದನ್ನು ನಾವು ಒಪ್ಪಬೇಕಾಗಿಲ್ಲ. ಕುರುಡು ನಂಬಿಕೆ

-ಇದ್ದಬೇಕು. ತಿಳಿವು ಹರಡಬೇಕು. ಆದರೆ ಈ ಬಗ್ಗೆ ಪುರಾಣಗಳನ್ನು ಅಳಿಸಬೇಕಾದದಿಲ್ಲ. ಅವನ್ನು ಉಳಿಸಿಕೊಳ್ಳಬೇಕು; ಅವುಗಳಿಂದ ಸರಿಯಾದ ಪ್ರಯೋಜನವನ್ನು ಪಡೆಯಬೇಕು. ಹೊರಗಿನವರದಾಗಲಿ ನಮ್ಮವರದಾಗಲಿ ಚಿಕಿತ್ಸಕ ಬುದ್ಧಿ ಸಫಲವಾಗುವುದು ಇದರಿಂದ. ಈ ಪ್ರಯೋಜನ ಯಾವುದು, ಇದನ್ನು ಪಡೆಯುವುದು ಹೇಗೆ ಎಂದು ದೇಶಪ್ರೇಮಿಗಳು ಇಂದು ಯೋಚಿಸಬೇಕಾಗಿದೆ.

"ಜೀವನ"

ಸೆಪ್ಟೆಂಬರ್ ೧೯೪೫

# ಚೀನಾ ದೇಶದ ಒಂದು ನಾಟಕ

## ೧

ಇಂದಿನ ಪ್ರಪಂಚದಲ್ಲಿ ಅತ್ಯಂತ ಪುರಾತನವಾದ ಒಂದು ಸಂಸ್ಕೃತಿಯನ್ನು ಎಳೆ ಹರಿಯದೆ ಬೆಳೆಸಿಕೊಂಡು ಬಂದಿರುವ ಎರಡು ದೇಶಗಳು ಭರತವರ್ಷ, ಚೀನಾದೇಶ. ಚೀನಾ ದೇಶದ ತತ್ವವಿದ ಲಾವೋಜು ಭಾರತೀಯ ಅವತಾರಪುರುಷ ಶಾಕ್ಯಮುನಿಗೆ ಸ್ವಲ್ಪ ಮುಂದಾಗಿ ಜೀವಿಸಿದನು. ಈತನ ಉಪದೇಶವನ್ನು ಕುರಿತು ಈಗ ಕೆಲವು ವರ್ಷಗಳ ಹಿಂದೆ ನಾನು ಈ ಪತ್ರಿಕೆಯಲ್ಲಿ ಒಂದು ಲೇಖನ ಬರೆದೆನು. ಲಾವೋಜು ಗುರುವಿನ ಉಪದೇಶ ಯಾವುದೇ ಒಂದು ರೂಪದಲ್ಲಿ ಈಗಲೂ ಚೀನಾದಲ್ಲಿ ನಾಣ್ಯವಾಗಿದೆ. ಚೀನಾದ ರಾಷ್ಟ್ರಗುರು ಕಾಂಫೂಷನ ವಿಷಯವಾಗಿ ನಮ್ಮ ಮಿತ್ರರು ಶ್ರೀ ಗುಂಡ್ಲುಪಂಡಿತ ರಾಜರತ್ನಂ ಇವರು ಈಚೆಗೆ ಇದೇ ಪತ್ರಿಕೆಯಲ್ಲಿ ಕೆಲವು ಲೇಖನಗಳನ್ನು ಬರೆದಿದಾರೆ. ಈ ಇಬ್ಬರು ಗುರುಗಳ ಉಪದೇಶದಲ್ಲಿ ಚಿತ್ರಿತವಾದ ಅದೇ ಬಹು ಪ್ರಾಚೀನ ಸಂಸ್ಕೃತಿಯನ್ನು ಮತ್ತೊಂದು ಮುಖದಿಂದ ತೋರಿಸುವ ಉದ್ದೇಶದಿಂದ ಚೀನಾ ದೇಶದ ಒಂದು ಪುರಾತನ ನಾಟಕವನ್ನು ಕುರಿತು ಈ ಲೇಖನವನ್ನು ಬರೆದಿದೆ.

ನಾಟಕದ ಹೆಸರು ಹ್ಯಾನ್-ಕೂಂಗ್-ಚೂ (ಹ್ಯಾನ್ ಅರಮನೆಯಲ್ಲಿ ಮಾಗಿಯ ಕಾಲ.) ಹ್ಯಾನ್ ಎನ್ನುವುದು ಚೀನಾದ ರಾಜವಂಶಗಳಲ್ಲಿ ಒಂದು. ನಾಟಕದ ನಾಯಕ ಆ ವಂಶದ ಅರಸು ಯೂ-ವೆನ್-ಟಿ. ಮಾಗಿ ಎಂದರೆ ದುಃಖದ ಕಾಲ ಎಂದು ಚೀನಾ ಲಾಕ್ಷಣಿಕರ ಸಂಕೇತ. ನಾಟಕದ ಕತೆ ಯೂ-ವೆನ್-ಟಿ ಪ್ರಭುವಿನ ದುರ್ದಶೆಯನ್ನು ಕುರಿತದು. ದುರ್ದಶೆಯನ್ನು ಸೂಚಿಸುವುದಕ್ಕಾಗಿ ನಾಟಕದ ಹೆಸರಿನಲ್ಲಿ "ಮಾಗಿ" ಶಬ್ದ ಬಂದಿದೆ. ಯೂ-ವೆನ್-ಟಿ ಕ್ರಿಸ್ತ ಪೂರ್ವ ಸುಮಾರು ನಲವತ್ತೆರಡನೆಯ ವರ್ಷದಲ್ಲಿ ರಾಜನಾದನು. ಚೀನಾ ದೇಶ ಆಗ್ಯೆ ತಕ್ಕಷ್ಟು ದುರ್ಬಲವಾಗಿತ್ತು. ರಾಜನು ಸುಖಲೋಲುಪ. ಸೇನೆಗಳು ಇಂತಹ ಅರಸನಿಗೆ ತಕ್ಕವಾಗಿದ್ದುವು. ದುರ್ಬಲವಾದ ರಾಷ್ಟ್ರಕ್ಕೆ ಮತ್ತೆ ಮತ್ತೆ ಕೋಟಲೆ

ಕೊಡುತ್ತ ಹಗೆಗಳಾದ ಟಾರ್ಟರ್ ಜನರು ದಂಡೆತ್ತಿ ಬರುತ್ತಿದ್ದರು. ಬಂದ ಹಗೆಯನ್ನು ಎದುರಿಸಿ ಕಾದಲು ಶಕ್ತಿಯಿಲ್ಲದೆ ಚೀನಾ ಪ್ರಧಾನರು ಅವರಿಗೆ ಹಣಕಾಸನ್ನು ಕೊಟ್ಟು ಒಪ್ಪಂದ ಮಾಡಿಕೊಂಡು ಹಿಂದಿರುಗಿಸುವುದು ವಾಡಿಕೆಯಾಗಿತ್ತು. ಹಿಂದೆ ಎಂದೋ ಆದ ಒಪ್ಪಂದದಲ್ಲಿ ಟಾರ್ಟರರ ನಾಯಕನಿಗೆ ಚೀನಾ ಪ್ರಭುವಿನ ಮಗಳೊಬ್ಬಳನ್ನು ಕೊಡುವುದೆನ್ನುವುದು ಒಂದು ಪದ್ಧತಿಯಾಗಿ ನೊದಲಾಯಿತು. ಮಗಳಿಲ್ಲದಿದ್ದರೆ ಚೆಲುವಾದ ಬೇರೆ ಒಂದು ಹೆಣ್ಣೂ ಆಗಬಹುದು. ಈ ನಾಟಕದ ನಾಯಕ ಆಳುತ್ತಿರುವಂದು ಟಾರ್ಟರರ ಖಾನ ಹ್ಯಾನ್-ಚೆನ್-ಯು ದಂಡೆತ್ತಿ ಬಂದನು. ರಾಜನಿಗೆ ಮಗಳಿಲ್ಲದ್ದರಿಂದ ಅವನ ಅಂತಃಪುರದ ಚಾ-ಓ-ಕ್ಯೂನ್ ಎಂಬ ಸ್ತ್ರೀಯನ್ನು ಖಾನನಿಗೆ ಒಪ್ಪಿಸಬೇಕಾಯಿತು. ಆಕೆಗೆ ರಾಜನನ್ನು ಬಿಟ್ಟು ಖಾನನ ಪಾಲಾಗುವುದು ಇಷ್ಟವಿರಲಿಲ್ಲ. ಚೀನಾ ಟಾರ್ಟರಿಗಳ ಮಧ್ಯೆ ಒಂದು ಹೊಳೆ. ಖಾನ ಈಕೆಯನ್ನು ಪಡೆದು ಟಾರ್ಟರಿಗೆ ಹಿಂದಿರುಗುತ್ತ ದೋಣಿಯಲ್ಲಿರುವಾಗ ಸುಂದರಿ ಹೊಳೆಗೆ ಹಾರಿ ಜೀವ ಬಿಟ್ಟಳಂತೆ. ಇದು ಐತಿಹಾಸಿಕ ಸಂಗತಿ. ನಾಟಕ ಇದನ್ನು ಅವಲಂಬಿಸಿ ರಚಿತವಾಗಿದೆ.

ರಾಜ, ಖಾನ, ಸುಂದರಿ ಅಲ್ಲದೆ ನಾಟಕದಲ್ಲಿ ಮೌ-ಯನ್-ಷೋ ಎಂಬ ದುಷ್ಟ ಅಮಾತ್ಯ ಒಬ್ಬ, ಷಾನ್-ಷೂ ಎಂಬ ಬಿರುದಿನ ಮಂತ್ರಿ ಮಂಡಲದ ಪ್ರಮುಖ ಒಬ್ಬ, ಚಾಂಗ್-ಷಿ ಎಂದು ಇವರತ್ತ, ಫ್ಯಾನ್-ಷಿ ಎಂದು ಅವರತ್ತ ಅಧಿಕಾರಿ, ನಿಯೋಗಿಗಳು, ಸೇವಕರು, ಸೈನಿಕರು ಇದಾರೆ.

ನಾಟಕದ ಆರಂಭದಲ್ಲಿ ಟಾರ್ಟರ ಖಾನ ಹ್ಯಾನ್-ಚೆನ್-ಯು ಶ್ಲೋಕಗಳನ್ನು ಹಾಡಿಕೊಂಡು ಬರುತ್ತಾನೆ. "ಚಳಿ ದಿನದ ಗಾಳಿ ಉಣ್ಣೆಯಿಂದ ಮಾಡಿದ ನಮ್ಮ ಡೇರೆಗಳ ಮಧ್ಯೆ ಬೆಳೆದ ಹುಲ್ಲಿನಮೇಲೆ ಭರದಿಂದ ಬೀಸುತ್ತಿದೆ. ನಟ್ಟಿರುಳ ಚಂದ್ರ ಕಾಡು ಗುಡಿಸಲುಗಳ ಮೇಲೆ ಬೆಳಗುತ್ತಾನೆ; ಊಳಿಡುವ ಅವುಗಳ ಓಲಗವನ್ನು ಕೇಳುತ್ತಾನೆ. ಅಸಂಖ್ಯಾತ ಸೇನೆಗಳು ತಮ್ಮ ಕೊಂಬನ್ನು ತಗ್ಗಿಸಿ ನಾಯಕನಾದ ನನ್ನ ಆಜ್ಞೆಯನ್ನು ನಡೆಸುತ್ತಿವೆ." ಈ ಪದವನ್ನು ಹೇಳಿದ ಮೇಲೆ ಹ್ಯಾನ್-ಚೆನ್-ಯು

ತಾನು ಯಾರೆಂದು, ತನ್ನ ಜನ ಎಂತೆಂದು, ತನ್ನ ಜನಕ್ಕೂ ಚೀನಾ ಜನಕ್ಕೂ ಹಿಂದೆ ಆದ ಯುದ್ಧವೇನು, ಒಪ್ಪಂದವೇನು ಎಂದು ಕಥಾ ಮುಖವನ್ನು ತಿಳಿಸುತ್ತಾನೆ. "ರಾಜ ಹೊ-ಯೆ-ಟಿ, ರಾಜಮಾತೆ ಲ್ಯೂ-ಹೋ ದೇವಿಯು ಕಾಲದಿಂದ ಒಂದೊಂದು ತಲೆಮಾರೂ ವಾಡಿಕೆ ಯನ್ನು ನಡಸಿಕೊಂಡು ತನ್ನ ಹೆಣ್ಣುಮಕ್ಕಳಿಗೆ ನಮ್ಮ ಸಂಬಂಧವನ್ನು ಬಯಸಿದೆ" ಎನ್ನುತ್ತಾನೆ. ಹಾಗೆಯೇ "ನಾನು ನಿಜವಾಗಿ ಹ್ಯಾನ್ ವಂಶದ ಒಬ್ಬ ಕುವರ" ಎನ್ನುತ್ತಾನೆ.

ಖಾನನ ಮಾತು ಮುಗಿದಮೇಲೆ ಅಮಾತ್ಯ ಮೌ-ಯನ್-ಷೋ ಬರುತ್ತಾನೆ. ಅವನೂ ಶ್ಲೋಕಗಳನ್ನು ಹೇಳುತ್ತಾನೆ. "ಯಾವನಿಗೇ ಆಗಲಿ ಗಿಡಗದ ಎದೆಯಿರಲಿ, ಹದ್ದಿನ ಕಾಲಿರಲಿ; ಅವನು ಹಿರಿಯರನ್ನು ವಂಚಿಸಲಿ; ಕಿರಿಯರನ್ನು ಹಿಂಸಿಸಲಿ; ಸುಳ್ಳು ಹೊಗಳಿಕೆ, ವ್ಯಂಗ್ಯೋಕ್ತಿ, ವ್ಯಭಿಚಾರ, ಧನಲೋಭ, ಇವುಗಳ ಸಹಾಯ ಪಡೆಯಲಿ. ಜೀವನದ ಕೊನೆಯವರೆಗೂ ಅವು ಸತತವೂ ಅವನಿಗೆ ಊರೆಯಾಗುತ್ತವೆ." ಹೀಗೆಂದು ಹೇಳಿ ಮೌ-ಯನ್-ಷೋ ತನ್ನ ಪೂರ್ವೋತ್ತರವನ್ನು ವಿವರಿಸಿ ಕಥಾಮುಖವನ್ನು ಮುಂದರಿಸುತ್ತಾನೆ. "ಮೃಷಾ ಸ್ತುತಿಯ, ಛದ್ಮ ಭಕ್ತಿಯ ನೂರು ಆಟಹೂಟದಿಂದ ಅರಸರನ್ನು ವಂಚಿಸಿದೇನೆ. ಈಗ ಅವರು ನನ್ನೊಬ್ಬನಲ್ಲಿಯೇ ತಮ್ಮ ಪೂರ್ಣ ವಿಶ್ವಾಸವನ್ನು ಇರಿಸಿದಾರೆ. ಅರಮನೆಯ ಒಳಗಾಗಲಿ ಅರಮನೆಯ ಹೊರಗಾಗಲಿ ನನಗೆ ಮಣಿಯ ದವರು ಯಾರು? ನನ್ನನ್ನು ಕಂಡು ನಡುಗದವರು ಯಾರು? ಇಷ್ಟಕ್ಕೆ ನಾನು ಕಲಿತಿರುವುದು ಒಂದೇ ಮುಖ್ಯ ವಿದ್ಯೆ. ರಾಜರು ತಮ್ಮ ಸತ್ಯವಂತ ರಾದ ಪ್ರಧಾನಿಗಳನ್ನು ಬಳಿಗೆ ಬರಗೊಳಿಸದಂತೆ ಮಾಡಿದೇನೆ. ಅಂತಃ ಪುರದ ಸ್ತ್ರೀಯರ ಮಧ್ಯೆ ಸುಖಲೋಲುಪರಾಗಿ ನಿಲ್ಲುವಂತೆ ಮಾಡಿದೇನೆ."

ರಾಜ ಯೂ-ವೆನ್-ಟಿ, ಚೇಟಿ, ಕಂಚುಕಿಯರೊಡನೆ ಬರುತ್ತಾನೆ. ಆತನೂ ಶ್ಲೋಕಗಳನ್ನು ಹೇಳುತ್ತಾನೆ. "ಚಕ್ರಾಧಿಪತ್ಯವನ್ನು ಸ್ಥಾಪಿಸಿದುದು ಮೊದಲಾಗಿ ಇದುವರೆಗೆ ನಡೆದಿರುವ ಹತ್ತು ತಲೆಮಾರ ಕಾಲ ಲೋಕದ ನಾನ್ನೂರು ಮಂಡಲಗಳನ್ನು ನಮ್ಮ ವಂಶ ಒಂದೇ ಆಳಿದೆ. ನಮ್ಮ ಪೂರ್ವಿಕ ಕ-ಊ-ಟಿ ಸಾಮಾನ್ಯ ಮನುಷ್ಯನಾಗಿದು

ಛಿನ್ ವಂಶವನ್ನು ನಾಶಮಾಡಿ ಅದರಲ್ಲೊಬ್ಬರನ್ನೂ ಉಳಿಯಬಿಡದೆ ಕೊಲೆಮಾಡಿ ನಮ್ಮ ವಂಶವನ್ನು ಗಾದಿಗೇರಿಸಿದನು. ಅಂದಿನಿಂದ ರಾಷ್ಟ್ರದ ಗಡಿಗಳು ಶಾಂತವಾಗಿ ಇದ್ದಿವೆ. ಎಂಟು ದಿಕ್ಕು ಅಕ್ಷುಬ್ಧವಾಗಿವೆ. ಇದು ನಮ್ಮ ಸ್ವಂತ ಪ್ರಯತ್ನದಿಂದೇನೂ ಅಲ್ಲ. ನಾವು ನಮ್ಮ ಆಡಳಿತದ ಮತ್ತು ಸೇನೆಗಳ ನಾಯಕರ ದುಡಿಮೆಯ ಮೇಲೆ ಸಂಪೂರ್ಣ ಭರವಸೆಯನ್ನು ಇಟ್ಟದೇವೆ. ನಮ್ಮ ತಂದೆ ತೀರಿಕೊಂಡಾಗ ಅಂತಃಪುರದ ಹೆಂಗಳನ್ನು ಹತ್ತು ಕಡೆಗೆ ಚದರಿಸಿದರು. ಈಗ ನಮ್ಮ ರಾಣಿವಾಸ ನಿರ್ಜನವಾಗಿದೆ, ನಿಭೃತವಾಗಿದೆ. ಇದನ್ನು ಹೇಗೆ ಸಹಿಸುವುದು?''

ಹೀಗೆನ್ನುತ್ತಿರುವ ರಾಜನ ಸನ್ನಿಧಿಗೆ ಅಮಾತ್ಯ ವೌ-ಯೆನ್-ಷೋ ಅರಿಕೆ ಮಾಡುತ್ತಾನೆ. ''ಅಂತಃಪುರ ಏಕೆ ಬರಿದಾಗಿರಬೇಕು? ಎಂತಹ ಸಾಮಾನ್ಯರೂ ಇಷ್ಟಬಂದಾಗ ಒಬ್ಬ ಹೆಣ್ಣನ್ನು ಗ್ರಹಿಸುತ್ತಾರೆ. ದೈವಿಕವಾದ ಅಧಿಕಾರವುಳ್ಳ, ಲೋಕವೇ ಆಸ್ತಿಯಾದ ಅರಸರು ಏಕೆ ಬಿಡಬೇಕು? ರಾಜದೂತರು ಹೋಗಲಿ, ದೇಶವೆಲ್ಲ ಹುಡುಕಲಿ. ತುಂಬು ಚೆಲುವಿನ ಎಳೆ ಹರೆಯದ ಹೆಣ್ಣು ಎಲ್ಲೆಲ್ಲಿ ಇರಬಹುದು ಅದನ್ನು ಕರೆತರಲಿ. ಚೆಲುವೆಯರಿಂದ ಅಂತಃಪುರ ತುರುಗಲಿ.'' ರಾಜ ಅಮಾತ್ಯನನ್ನು ಮೆಚ್ಚುತ್ತಾನೆ; ''ಹುಡುಕುವ ಕೆಲಸ ನಿನಗೇ ಇರಲಿ'' ಎಂದು ಅವನಿಗೆ ಬರಹದಿಂದ ಅಧಿಕಾರ ಕೊಡುತ್ತಾನೆ. ''ತಕ್ಕ ಚೆಲುವೆಯರ ಚಿತ್ರಗಳನ್ನು ಮಾಡಿ ಕಳುಹಿಸು. ನಾವು ಇಷ್ಟಬಂದವರನ್ನು ಗ್ರಹಿಸುತ್ತೇವೆ. ಈ ಉಪಕಾರಕ್ಕಾಗಿ ನೀನು ಹಿಂದಿರುಗಿದಾಗ ನಿನಗೆ ತಕ್ಕ ಮರ್ಯಾದೆಯನ್ನು ಮಾಡಿಸುತ್ತೇವೆ'' ಎನ್ನುತ್ತಾನೆ. ಅಮಾತ್ಯ ತೊಂಬತ್ತೊಂಬತ್ತು ಹೆಣ್ಣುಮಕ್ಕಳನ್ನು ಆರಿಸುತ್ತಾನೆ. ರಾಜನ ಮನೆಗೆ ಸೇರುವರೆಂಬ ಕಾರಣದಿಂದ ಹೆಣ್ಣುಗಳ ತಂದೆ ತಾಯಂದಿರು ತಮ್ಮ ಮಕ್ಕಳನ್ನು ಆಯ್ದುಕೋ ಎಂದು ಅವನಿಗೆ ಧನಕನಕ ರತ್ನಗಳನ್ನು ಲಂಚವಾಗಿ ಕೊಟ್ಟರಾರೆ. ''ನ್ಯಾಯ ತಪ್ಪಿಸಿದ್ದರಿಂದ ರಕ್ತ ಹೊಳೆ ಹರಿದರೆ ನನಗೇನು? ಬದುಕಿದ್ದಷ್ಟು ದಿವಸ ಕೈತುಂಬ ಕಾಸಿರಬೇಕು ಎಂದು ನಾನು ನಿಶ್ಚಯ ಮಾಡಿದೇನೆ. ಸತ್ತಮೇಲೆ ಜನ ಶಪಿಸುತ್ತಾರೆ. ನಾನು ಇದನ್ನು ಲಕ್ಷಿಸುವುದಿಲ್ಲ'' ಎನ್ನುತ್ತಾನೆ. ಅನೇಕರು ಹೀಗೆ ಹಣ ಕೊಟ್ಟರೂ

ಮರುದಿನ ಬರುತ್ತದೆ. ರಾಣಿಗೆ ಹೋಗುವುದಕ್ಕೆ ಇಷ್ಟವಿಲ್ಲ. ರಾಜನಿಗೆ ಬಿಡುವುದಕ್ಕೆ ಇಷ್ಟವಿಲ್ಲ. ಒಬ್ಬರನ್ನೊಬ್ಬರು ಬಿಡದೆ ಇವರು ರಾಜ ರಾಣಿಯಾಗಿ ಬಾಳುವಂತಿಲ್ಲ. ರಾಣಿ ತನ್ನ ವೈಭವದ ವಸನಗಳನ್ನು ಕಳೆದು ತೊರೆಯುತ್ತಾಳೆ. "ಇಂದು ಇಲ್ಲಿ ರಾಣಿ, ನಾಳೆ ಅನ್ಯನೊಬ್ಬನ ಹೆಂಡತಿ. ಅಯ್ಯೋ ನನ್ನ ಗತಿಯೇ" ಎಂದು ಹಲುಬುತ್ತಾಳೆ. ರಾಜನು "ಬೇರೆಯೆಡೆ ಸೇರಿದವಳು ನಾನು ನಿನ್ನನ್ನು ರಕ್ಷಿಸಿಕೊಳ್ಳಲಿಲ್ಲವೆಂದು ನನ್ನ ವಿಷಯದಲ್ಲಿ ಅಸಮಾಧಾನಪಡಬೇಡ" ಎಂದು ಅವಳನ್ನು ಬೇಡಿ ಬೀಳ್ಕೊಡುತ್ತಾನೆ. ತನಗೆ ತಾನೆ "ನಾನು ಹ್ಯಾನ್ ಮಹಾವಂಶದ ಚಕ್ರವರ್ತಿ ಸಾರ್ವಭೌಮನೋ?" ಎಂದು ಪ್ರಶ್ನೆಮಾಡಿಕೊಳ್ಳುತ್ತಾನೆ. ಮಂತ್ರಿಮಂಡಲದ ಅಧ್ಯಕ್ಷ ಸಮಾಧಾನ ಹೇಳಲು ತನ್ನ ದುಃಖವನ್ನು ಬಹಳವಾಗಿ ಪ್ರಕಟಿಸುತ್ತಾನೆ. "ನನ್ನ ದುಃಖಾಶ್ರು ಸಹಸ್ರ ಸ್ರೋತವಾಗಿ ಹರಿಯುತ್ತಿದೆ. ಇದೇ ಸಂಜೆ ಅವಳ ರೂಪ ಪಟ ಒಂದನ್ನು ತೂಗಹಾಕುತ್ತೇನೆ. ಅದರ ಮುಂದೆ ಪೂಜೆ ನಡೆಸುತ್ತೇನೆ. ಬೆಳ್ಳಿಯ ದೀಪಸ್ತಂಭಗಳ ಸೊಡರುಗಳು ಅವಳ ಆವಾಸವನ್ನು ಬೆಳಗಲಿ" ಎನ್ನುತ್ತಾನೆ.

ಇಷ್ಟು ಹೊತ್ತಿಗೆ ರಾಣಿ ಎಷ್ಟೋ ದೂರ ಹೋಗಿದಾಳೆ. ಖಾನ ಅವಳನ್ನು ಕರೆದುಕೊಂಡು ಹೊರಡುತ್ತಾನೆ. "ಹಿಂದಿನ ಒಪ್ಪಂದದಂತೆ ಈಕೆ ನನಗೆ ಸಂದಿರುವುದರಿಂದ ನಾನು ಈಕೆಯನ್ನು ರಾಣಿಯಾಗಿ ವರಿಸಿದೇನೆ. ಎರಡು ರಾಷ್ಟ್ರಗಳೂ ಇನ್ನು ಶಾಂತಿಯ ಸೌಭಾಗ್ಯವನ್ನು ಅನುಭವಿಸಲಿ" ಎನ್ನುತ್ತಾನೆ. ಇಬ್ಬರೂ ಹೊಳೆ ದಾಟುತ್ತಿದಾರೆ. ರಾಣಿ ಒಂದು ಬಟ್ಟಲು ದ್ರಾಕ್ಷಾರಸವನ್ನು ಕೈಯಲ್ಲಿ ಹಿಡಿದು, "ಮಹಾಪ್ರಭು, ಇದನ್ನು ದಕ್ಷಿಣ ದಿಶೆಗೆ ಹವಿಸ್ಸಾಗಿ ಎರೆಯುತ್ತೇನೆ. ಹ್ಯಾನ್ ಚಕ್ರವರ್ತಿಗೆ ಶುಭವಾಗಲಿ," ಎಂದು ಹೇಳಿ ಅದನ್ನು ಸುರಿದು ಹೊಳೆಯಲ್ಲಿ ಧುಮುಕುತ್ತಾಳೆ. ಖಾನ ಅವಳನ್ನು ರಕ್ಷಿಸುವ ಯೋಚನೆ ಕೂಡ ಮಾಡುವುದಿಲ್ಲ. "ಎಲ್ಲ ಮುಗಿಯಿತು; ಅನಿವಾರ್ಯವಾಯಿತು. ಈಕೆಗೆ ಈ ಹೊಳೆಯ ದಡದಲ್ಲಿ ಒಂದು ಸಮಾಧಿಯನ್ನು ಮಾಡಿರಿ; ಅದನ್ನು ಪಚ್ಚೆಯ ಸಮಾಧಿ ಎನ್ನಿರಿ. ಹ್ಯಾನ್ ವಂಶದೊಂದಿಗೆ ನಾವು ಬೆಳಸಿದ ದ್ವೇಷ ಅನರ್ಥಕ್ಕೆ

ಕಾರಣವಾಯಿತು" ಎನ್ನುತ್ತಾನೆ. ಇವಕ್ಕೆಲ್ಲ ಕಾರಣನಾದ ಅಮಾತ್ಯ ಮೌ-ಯನ್-ಷೋವನ್ನು ದಂಡನೆಗಾಗಿ ಚಕ್ರವರ್ತಿಯ ಬಳಿಗೆ ಕಳುಹಿಸುತ್ತಾನೆ.

ಇತ್ತ ಅರಮನೆಯಲ್ಲಿ ಚಕ್ರವರ್ತಿ ರಾಣಿಯ ಚಿತ್ರದ ಮುಂದೆ ಕುಳಿತು ಅದಕ್ಕೆ ಧೂಪ ದೀಪಗಳ ಸತ್ಕಾರವನ್ನು ನೀಡಿ ದುಃಖಿಸುತ್ತಿದಾನೆ. ಸ್ವಲ್ಪ ನಿದ್ರೆ ಬರುತ್ತದೆ. ಚಾ-ಓ-ಕ್ಯೂನ್ ರಾಣಿ ಎದುರಿಗೆ ಕಾಣುತ್ತಾಳೆ. 'ನಾನು ಖಾನನಿಂದ ತಪ್ಪಿಸಿಕೊಂಡು ಬಂದೆ' ಎಂದು ಹೇಳುತ್ತಾಳೆ. ಟಾರ್ಟರ ಸೈನಿಕನೊಬ್ಬ ಅವಳ ಹಿಂದೆ ಬಂದು 'ಆಕೆ ತಪ್ಪಿಸಿಕೊಂಡು ಬಂದಳು, ಇಗೋ ಇಲ್ಲಿದಾಳೆ' ಎಂದು ಅವಳನ್ನು ಹಿಡಿದುಕೊಂಡು ಹೊರಟುಹೋಗುತ್ತಾನೆ. ಚಕ್ರವರ್ತಿಗೆ ಎಚ್ಚರವಾಗುತ್ತದೆ. "ನಿದ್ರೆಯಲ್ಲಿ ಹಿಂದಿರುಗಿದಳು. ಮತ್ತೆ ಮರೆಯಾದಳು. ಅಕೋ! ಪಕ್ಷಿ ಎರಡು ಸಲ, ಮೂರು ಸಲ ಕೂಗಿತು. ನನ್ನಷ್ಟು ದುಃಖಿತ ದೇಹ ಇನ್ನು ಬೇರೆ ಇಲ್ಲ. ಹಕ್ಕಿ ಇದನ್ನು ಬಲ್ಲುದೆ? ಪ್ರಾಯಶಃ, ಸೋತು ನಿತ್ರಾಣವಾಗಿ, ಹಸಿದು ಕಂಗಾಲಾಗಿ, ಈ ಪಕ್ಷಿಗಳು ತೆಂಕಣ ದೊಡ್ಡ ಬಲೆಗಳನ್ನು, ಬಡಗಣ ಕಠಿಣ ಚಾಪಗಳನ್ನು ದೂರುತ್ತವೆ. ಈ ವಿಕ್ರೋಶವನ್ನು ಕೇಳಿ ನನ್ನ ಖೇದ ವೃದ್ಧಿಯಾಗುತ್ತಿದೆ" ಎನ್ನುತ್ತಾನೆ. ಸೇವಕ ಸಮಾಧಾನ ಹೇಳುತ್ತಾನೆ. ಚಕ್ರವರ್ತಿ ಸಮಾಧಾನವನ್ನು ಒಲ್ಲನು. "ನನ್ನ ದುಃಖ ದುರ್ದಮ್ಯವಾಗಿದೆ. ನೀವೂ ದುಃಖ ಭಾಜನರೇ. ಇದನ್ನು ದೂರದಿರಿ. ಹಕ್ಕಿಯ ಆ ಮೊರೆ ಅರಮನೆಯ ತೊಲೆಯ ಮೇಲೆ ಕುಳಿತ ಗುಬ್ಬಚ್ಚಿಯ ಚಿಲಿಪಿಲಿಯಲ್ಲ. ಹೂತ ಮರದ ಮೇಲೆ ಕುಳಿತ ಬಣ್ಣದ ಹಕ್ಕಿಯ ಹಾಡಲ್ಲ. ಅರಮನೆಯಲ್ಲಿ ರಾಣಿ ಇಲ್ಲ. ಅವಳು ಬೇರೆ ಎಲ್ಲಿದಾಳೆ, ಅಲ್ಲಿ ದುಃಖಿಸುತ್ತಿದಾಳೆ; ನನ್ನಂತೆ ಒಂದು ಕಾಡಹಕ್ಕಿಯ ನೋವ ಮೊರೆಯನ್ನು ಕೇಳುತ್ತಿದಾಳೆ; ಬಲ್ಲೆಯಾ?" ಎನ್ನುತ್ತಾನೆ. ಮಂತ್ರಿ ಮಂಡಲದ ಅಧ್ಯಕ್ಷ ಬರುತ್ತಾನೆ. ರಾಣಿ ತೀರಿಕೊಂಡ ಸಂಗತಿಯನ್ನೂ ಖಾನ ಮೌ-ಯನ್-ಷೋವನ್ನು ಕಳುಹಿಸಿರುವ ಸಂಗತಿಯನ್ನೂ ತಿಳಿಸುತ್ತಾನೆ. ಚಕ್ರವರ್ತಿ "ಆ ದ್ರೋಹಿಯ ತಲೆಯನ್ನು ಕಡಿದುಹಾಕಿರಿ. ಅದನ್ನು ರಾಣಿಯ ಆತ್ಮಕ್ಕೆ ಎಡೆಯಾಗಿ ಒಪ್ಪಿಸಿ" ಎಂದು ಆಜ್ಞೆ ಮಾಡು

ತ್ತಾನೆ. ಈ ಶ್ಲೋಕದಲ್ಲೂ ಕರ್ತವ್ಯವನ್ನು ಮರೆಯದೆ "ಖಾನನ ನಿಯೋಗಿಗೆ ತಕ್ಕ ಔತಣ ಮಾಡಿ ಕಳುಹಿಸಿ" ಎನ್ನುತ್ತಾನೆ; ಶ್ಲೋಕ ಗಳನ್ನು ಹೇಳುತ್ತಾನೆ. "ಎಲೆ ಉದುರುವ ದಿನದಲ್ಲಿ, ಅರಮನೆಯ ಮೂಲೆಗಳಲ್ಲಿ ಕಾಡಹಕ್ಕಿಯ ಕೂಗು ಕೇಳುವಂದು, ನನ್ನ ಏಕಾಂತ ಶಯ್ಯೆಗೆ ದುಃಸ್ವಪ್ನಗಳು ಸಾರಿಬಂದವು. ನಿಶಿಯೆಲ್ಲ ನಾನು ಅವಳ ನೆನವನ್ನು ನೆನೆದೆನು. ಅವಳ ಹಸುರ ಸಮಾಧಿ ನಿಂತಿದೆ. ಆದರೆ ಅವಳನ್ನು ಕಾಣುವ ಎಡೆಯಿಲ್ಲ. ಅವಳ ರೂಪನ್ನು ಕೆಡಿಸಿದ ದ್ರೋಹಿಯ ತಲೆ ಅವನು ವಿದ್ರೋಹಿಸಿದ ರೂಪಿಗೆ ಸ್ವಲ್ಪ ಪರಿಹಾರವಾಗಲಿ" ಎನ್ನು ತ್ತಾನೆ. ಈ ಭರತವಾಕ್ಯದೊಂದಿಗೆ ನಾಟಕ ಮುಗಿಯುತ್ತದೆ.

೨

ಚೀನೀ ಭಾಷೆಯಲ್ಲಿ ಅನೇಕ ನಾಟಕ ಇವೆಯಂತೆ. ಅವುಗಳಲ್ಲಿ "ಯೂ-ಯೆನ್ ವಂಶದ ನೂರು ನಾಟಕ" ಎನ್ನುವುದು ಒಂದು ಸಂಗ್ರಹ. ಇಲ್ಲಿ ಪರಿಶೀಲಿಸಿರುವ ನಾಟಕ ಅವುಗಳಲ್ಲಿ ಒಂದು. ಇಂತಹ ನಾಟಕ ಗಳಲ್ಲಿ ಒಂದನ್ನು ಅವಲಂಬಿಸಿ ಫ್ರೆಂಚ್ ಲೇಖಕ ವಾಲ್ಟೇರ್ ಒಂದು ನಾಟಕವನ್ನು ರಚಿಸಿದನಂತೆ. ಈ ನಮ್ಮ ನಾಟಕ ಅಷ್ಟೇನೂ ಉದ್ದ ನಾಗಿಲ್ಲ; ಭರತವರ್ಷದ ಅಥವಾ ಇಂಗ್ಲೀಷರ ಸಂಪ್ರದಾಯದ ಒಂದು ನಾಟಕದ ಅರ್ಧದಷ್ಟು ಅಥವಾ ಮೂರರಲ್ಲಿ ಒಂದು ಪಾಲಿನಷ್ಟು ಇದೆ. ಆದರೂ ಇದು ಚೀನಾ ನಾಟಕಗಳಲ್ಲಿ ಬಹು ಉದ್ದವಾದವುಗಳಲ್ಲಿ ಒಂದು ಎಂದು ಪ್ರತೀತಿ. ಇದರಿಂದ ಚೀನಾದ ನಾಟಕಗಳು ಪ್ರಾಯಶಃ ಗಾತ್ರ ದಲ್ಲಿ ಸಣ್ಣವೆಂದು ಹೇಳಬೇಕು. ಆಂಗ್ಲರಲ್ಲಿ ಷೇಕ್ಸ್‌ಪಿಯರ ಕಾಲಕ್ಕೆ, ನಮ್ಮಲ್ಲಿ ಇತ್ತೀಚಿನವರೆಗೆ ಹೆಣ್ಣಿನ ಪಾತ್ರಗಳನ್ನೂ ಗಂಡಸರೇ ಮಾಡು ತಿದ್ದಂತೆ ಚೀನೀ ನಾಟಕರಂಗದಲ್ಲಿ ಗಂಡಸರೇ ಹೆಣ್ಣಿನ ಪಾತ್ರಗಳನು ವಹಿಸುವುದು ಸಂಪ್ರದಾಯ. ಚೀನಾದಲ್ಲಿ ಸಂಪ್ರದಾಯವಾಗಿ ನಾಟಕ ನಡೆಯುವುದು ಒಂದು ಮಂದಿರದಲ್ಲಲ್ಲ. ಊರಿನ ಚೌಕದಲ್ಲಿ, ಬೇಕೆಂದಾಗ ಹಾಕಿದ ಒಂದು ಚಪ್ಪರದಲ್ಲಿ. ಇದು ಪ್ರಾಯಶಃ ನಮ್ಮ ಬಯಲು ನಾಟಕದ ರೀತಿ ಆಗುತ್ತದೆ. ಈ ನಾಟಕಗಳು ಜನರಿಗೆ ಬಹು

ಪ್ರಿಯವಾಗಿವೆಯಂತೆ. ಸರಕಾರ ನಾಟಕಗಳ ಈ ಪ್ರದರ್ಶನವನ್ನು ತನ್ನ ಆಡಳಿತದಲ್ಲಿ ಇಟ್ಟುಕೊಂಡಿದೆ; ಅವಕ್ಕೆ ಸಹಾಯ ಮಾಡುತ್ತದೆ; ಅವುಗಳನ್ನು ನೋಡಿಕೊಳ್ಳುತ್ತದೆ. ವಿಶೇಷವಾಗಿ ಹಬ್ಬ ಹುಣ್ಣಿಮೆಗಳಲ್ಲಿ ನಡೆಯುವುದರಿಂದ ಈ ನಾಟಕಗಳ ಪ್ರದರ್ಶನವನ್ನು ಸ್ವಲ್ಪ ಮಟ್ಟಿಗೆ ಧಾರ್ಮಿಕ ಮತ್ತು ರಾಷ್ಟ್ರೀಯ ಸಂಸ್ಥೆ ಎಂದು ಹೇಳಬಹುದು. ಉದ್ದದ ದೃಷ್ಟಿಯಿಂದಲೂ ಧಾರ್ಮಿಕ ಅಥವಾ ರಾಷ್ಟ್ರೀಯ ಎಂದು ನೋಡುವ ದೃಷ್ಟಿಯಿಂದಲೂ ಚೀನಾ ನಾಟಕ ಗ್ರೀಕ್ ನಾಟಕದ ಸಂಪ್ರದಾಯವನ್ನು ಹೋಲುತ್ತದೆ. ಅಂತೇ ಈ ನಾಟಕದ ರಂಗದಲ್ಲಿ ಯಾವುದೇ ಒಂದು ಪ್ರವೇಶದಲ್ಲಿ ಇಬ್ಬರಿಗಿಂತ ಹೆಚ್ಚಾಗಿ ಪಾತ್ರಗಳು ಇರುವುದಿಲ್ಲ.

ನಮ್ಮ ಸೀಮೆಯ ಬಯಲು ನಾಟಕಗಳಲ್ಲಿ ಇರುವಂತೆ ಈ ನಾಟಕದಲ್ಲಿಯೂ ಪಾತ್ರಗಳು ತಾವೇ ತಮ್ಮ ಪೂರ್ವೋತ್ತರಗಳನ್ನು ತಿಳಿಸಿ ಕತೆಯನ್ನು ನಡೆಸುತ್ತವೆ. ಒಂದೊಂದು ಮುಖ್ಯ ಪಾತ್ರವೂ ತನ್ನ ಮುಖ್ಯ ಭಾಷಣದ ಮುನ್ನ ಶ್ಲೋಕಗಳನ್ನು ಹೇಳುತ್ತದೆ. ಅಲ್ಲದೆ ವಚನದಲ್ಲಿ ತಿಳಿಸಿದ ಸಂಗತಿಯನ್ನೇ ಗೀತವಾಗಿ ಹಾಡಿ ಹೇಳುವುದೂ ಉಂಟು. ಇದರಿಂದ ಒಬ್ಬೊಬ್ಬ ನಟನೂ ನಾಟಕದಲ್ಲಿ ಬರೆದುಕೊಟ್ಟಿರುವ ನಾಲ್ಕು ಮಾತನ್ನು ಹೇಳುವಷ್ಟು ಹೊತ್ತನ್ನಲ್ಲದೆ ಹೆಚ್ಚು ಹೊತ್ತನ್ನು ತೆಗೆದುಕೊಳ್ಳುತ್ತಾನೆ. ಯಾವ ನಾಟಕವಾಗಲಿ ರಂಗದಲ್ಲಿ ಬರಹದಲ್ಲಿ ಕಾಣುವಷ್ಟು ಹ್ರಸ್ವವಾಗುವುದಿಲ್ಲ. ಈ ಗುಣದಲ್ಲಿ ಚೀನೀ ನಾಟಕ ಕನ್ನಡ ದೇಶದ ಬಯಲ ನಾಟಕ ಅಥವಾ ಇಂದಿನವರೆಗಿನ ನಾಟಕವನ್ನು ಹೋಲುತ್ತದೆ.

ಈ ಲೇಖನದಲ್ಲಿ ಪರಿಶೀಲಿಸಿರುವ ನಾಟಕ ದುಃಖಾಂತವಾದದು. ಈ ಲಕ್ಷಣದಿಂದ ಇದು ಭಾರತವರ್ಷದ ಸಂಪ್ರದಾಯದಿಂದ ಭಿನ್ನವಾಗಿದೆ; ಮತ್ತು ಪಾಶ್ಚಾತ್ಯ ನಾಟಕವನ್ನು ಹೋಲುತ್ತದೆ. ಕತೆ ಪ್ರಸಿದ್ಧವಾದುದು. ನಾಯಕ ನಾಯಕಿಯರು ಹಿರಿಯ ಪದವಿಯ ಮಂದಿ. ಇದರ ವಸ್ತುಸಂವಿಧಾನ ಚತುರವಾಗಿದೆ. ಇಷ್ಟು ಸಂಸ್ಕೃತ ನ್ಯಾಯ ನಾಟಕದಲ್ಲಿ ಒಂದೊಂದು ಪಾತ್ರವೂ ತನ್ನ ಸ್ವಭಾವವನ್ನು ತಾನೇ ನಿರೂಪಿಸಿಕೊಳ್ಳುವ ವಾಡಿಕೆಯಿರುವುದು ಒಂದು ಸೋಜಿಗ. ಪಾತ್ರ ಒಂದು ಮುಂದೆ ಬಂದು ನಾನು ಇಂತಹ ವ್ಯಕ್ತಿ ಎಂದು ಹೇಳಿಕೊಳ್ಳು

ವುದು ಹೇಗೋ ಹಾಗೆ ಯಾವ ಪಾತ್ರವಾಗಲಿ ತನ್ನ ಸ್ವಭಾವವನ್ನು ನಿರೂಪಿಸಿಕೊಳ್ಳುತ್ತ ನಡೆಯುವುದು ಒಂದು ರೀತಿಯ ಅವಿದಗ್ಧ ಪದ್ಧತಿ. ಇದು ಅವಿಚ್ಛಿನ್ನವಾಗಿ ಬೆಳೆದ ಸಂಪ್ರದಾಯ, ಅಧಿಕಾರ ಮತ್ತು ಧರ್ಮದ ಕಟ್ಟಿನ ಫಲವಾಗಿ ಉಳಿಸಿದ ಅವಶೇಷ ಎಂದು ಕಾಣುತ್ತದೆ. ಇಷ್ಟು ಹೊರತಾಗಿ ಈ ನಾಟಕದ ಭಾವನೆಗಳು ಗಂಭೀರವಾಗಿವೆ; ಇದರ ನಡೆಯೂ ಗಂಭೀರ. ಪಾತ್ರಗಳು ಸ್ವಲ್ಪ ಮಟ್ಟಿಗೆ ಒಂದು ಪಡಿಯಚ್ಚನ್ನು ಅನುಸರಿಸಿ ಕಲ್ಪಿತವಾದಂತೆ ಕಾಣುವುದಾದರೂ ಅವುಗಳಲ್ಲಿ ತಕ್ಕಷ್ಟು ಜೀವವಿದೆ.

ಎಲ್ಲಕ್ಕಿಂತ ಹೆಚ್ಚಾಗಿ ಇದರಲ್ಲಿ ಕಾಣುವ ವ್ಯಂಗ್ಯ ಗಮನಾರ್ಹವಾದದು. ಖಾನನ ಮಾತಿನ ನಂತರ ರಾಜನಾದವನು ಮೊದಲಲ್ಲಿ ಆಡುವ ಡಂಭದ ಮಾತೂ ಸೇನೆಯನ್ನು ಕುರಿತು ಪ್ರಶಂಸೆಯೂ ತೀರ ಪೊಳ್ಳಾಗಿ ಕಾಣುತ್ತವೆ. ತನ್ನ ಅಧಿಕಾರಿವರ್ಗ ಹಗೆಯನ್ನು ಅಟ್ಟದೆ ನಿಲ್ಲಲು ತನ್ನ ಪ್ರಿಯ ಭಾರ್ಯೆಯನ್ನು ಹಗೆಯ ಕೈಗೆ ಒಪ್ಪಿಸಬೇಕಾಗಿ ಬಂದ ವೇಳೆ ಈ ನಾಟಕದ ನಾಯಕ ನುಡಿಯುವ ನುಡಿ ದುರವಸ್ಥೆಯನ್ನು ಚಿತ್ರಿಸುವಂತೆ ಯಾವ ವರ್ಣನೆಯೂ ಚಿತ್ರಿಸಲಾರದು. ರಾಜನ ನಿಸ್ಸಹಾಯಕ್ಕೂ ಹೆಚ್ಚಿನ ನಿಸ್ಸಹಾಯವೆಂದರೆ ಅವನ ಮಂತ್ರಿಮಂಡಲದ ಪ್ರಧಾನನದು. ದೊರೆಯ ಸುಖ, ಅವನು ಒಲಿದ ಹೆಣ್ಣಿನ ಮರ್ಯಾದೆ, ಎರಡೂ ಇವನ ಕಣ್ಣಿನಲ್ಲಿ ಅಲ್ಪ ವಿಷಯ. ದಂಡೆತ್ತಿ ಬಂದಿರುವ ಹಗೆ ಹಿಂದಕ್ಕೆ ಹೋಗುವುದೇ ಇವನಿಗೆ ಮುಖ್ಯ ವಿಚಾರ. ರಾಜನ "ಇನ್ನು ರಾಜ್ಯದ ಶಾಂತಿಯನ್ನು ಕಾಯುವುದಕ್ಕೆ ಸೇನಾಪತಿಗಳನ್ನು ಇರಿಸಿಕೊಳ್ಳುವುದಕ್ಕೆ ಪ್ರತಿಯಾಗಿ ಹೆಣ್ಣುಮಕ್ಕಳನ್ನು ನೇಮಿಸಿಕೊಳ್ಳುವುದು ಸರಿಯೆಂದು ಕಾಣುತ್ತದೆ" ಎಂಬ ಮಾತು ಅವನ ಬೇಸರವನ್ನು ಬಹು ಚೆನ್ನಾಗಿ ಪ್ರಕಟಿಸುತ್ತದೆ. ಇದು ವ್ಯಂಗ್ಯೋಕ್ತಿಯ ಪರಮಾವಧಿಗಳಲ್ಲಿ ಒಂದು. ಒಪ್ಪಂದದ ಪ್ರಕಾರ ತಮಗೆ ಬರುವ ಹೆಣ್ಣುಗಳನ್ನು "ಚೀನಾ ಅರಸರು ತಮಗೆ ಕೊಡಲು ಬಯಸುತ್ತಾರೆ" ಎಂಬಲ್ಲೂ, ರಾಣಿ ಕೈಸೇರಿದ ವೇಳೆ "ಇನ್ನು ಎರಡು ರಾಷ್ಟ್ರಗಳೂ ಶಾಂತಿಯ ಸುಖವನ್ನು ಅನುಭವಿಸಲಿ" ಎಂಬಲ್ಲೂ ಖಾನನ ಮಾತು ವ್ಯಂಗ್ಯದಲ್ಲಿ ವ್ಯಂಗ್ಯವಾಗಿದೆ. ಇಂಥ ಮಾತು ಚೀನಾ ಪ್ರೇಕ್ಷಕನ ಕರುಳನ್ನು ಹೊರಳಿಸುವಂತಹದು. ಜೀವಂತ ರಾಣಿ

ಯನ್ನು ಹಗೆಯ ಕೈಗೆ ಕೊಟ್ಟು ಅವಳ ಪಟದ ಮುಂದೆ ಧೂಪ ದೀಪ ನೈವೇದ್ಯಗಳ ಪೂಜೆಯನ್ನೊಪ್ಪಿಸುವ ಚಕ್ರವರ್ತಿ ಎಷ್ಟು ಅನುದಾತ್ತನೆಂದು ನಾಟಕಕಾರ ಭಾವಿಸಿರಬೇಕು! ಚೆಲುವೆ ಅಲ್ಲಿ ಹೊಳೆಗೆ ಹಾರಿ ಸತ್ತಿದ್ದಾಳೆ. ಖಾನ ಅವಳಿಗೆ ಹಸುರ ಸಮಾಧಿಯನ್ನು ಅನುಗ್ರಹಿಸಿ ಭರತವಾಕ್ಯ ನುಡಿದಿದ್ದಾನೆ. ಇಲ್ಲಿ ಈ ಅಸಹಾಯ ಭೀರುವಾದ ಅವಳ ಅರಸನಿಗೆ ಅವಳು ತಪ್ಪಿಸಿಕೊಂಡು ಬಂದಂತೆ ಕನಸಾಗಿದೆ. ನಿಜದಲ್ಲಿ ಅವಳನ್ನು ನಿಲ್ಲಿಸಿಕೊಳ್ಳುವ ಧಾರ್ಷ್ಟ್ಯವಿಲ್ಲದ ಈ ನಿರ್ವೀರ್ಯ ಪ್ರೇಮಿಯ ಮನಸ್ಸಿನಲ್ಲಿ ಆ ಹೆಣ್ಣು ತಪ್ಪಿಸಿಕೊಂಡು ಬಂದರೆ ಚೆನ್ನಾಗಿದ್ದೀತೆಂದು ಒಂದು ಆಶೆ ಹಾಯ್ದಿರಬೇಕು. ನಿಜದ ಪ್ರಪಂಚದಲ್ಲಿ ಇದು ಸಾಧ್ಯವಿಲ್ಲ. ನಿದ್ರೆ ಇವನಿಗೆ ಕೃಪೆ ತೋರುತ್ತದೆ; ಇವನ ಹಸುಳೆ ಮನದ ಆಸೆಯನ್ನು ನಡೆದಂತೆ ನಟಿಸುತ್ತದೆ. ಇಂತಹ ಜೀವಕ್ಕೆ ಇಷ್ಟು ತೃಪ್ತಿಯೇ ಎಷ್ಟೋ ಆದಂತೆ. ಇದಾದೊಡನೆಯೆ ಕೇಳುವ ಹಕ್ಕಿಯ ಗೋಳು ಈ ವ್ಯಂಗ್ಯದ ಹಾಗೆಯೇ ಕಾವ್ಯರಸದ ಮತ್ತೊಂದು ಪರಮಾವಧಿ. ಇದರಂತೆ ಇನ್ನು ಹತ್ತು ಮಾತಿನಲ್ಲಿ ಸುಮ್ಮನೆ ವ್ಯಂಗ್ಯ ತುಂಬಿದೆ. ಸುಖವೆನ್ನುವುದು ಕನಸು ಮಾತ್ರ; ನಿಜವಾದದ್ದು ನೋವು ಒಂದೇ. ಅಷ್ಟೇ ಅಲ್ಲ. ಮನುಷ್ಯ ನಾದವನು ಆಕಾರದಲ್ಲಿ ಬೇರೆ ಆದರೂ ಜೀವದಲ್ಲಿ ಹಕ್ಕಿಯಂದ. ಅದಕ್ಕಿಂತ ಬಹಳ ಹೆಚ್ಚಲ್ಲ, ಬೇರೆಯಲ್ಲ. One touch of nature makes the whole world kin. ವಾಲ್ಮೀಕಿಯ ಕಾವ್ಯದಲ್ಲಿ ಹೇಗೋ ಹಾಗೆ ಚೀನಾದ ಈ ನಾಟಕದಲ್ಲಿ ನೋಯುವ ಈ ಹಕ್ಕಿ ಎಲ್ಲ ನೋವಿನ ಪ್ರತಿನಿಧಿಯಾಗಿದೆ. ಆ ನೋವನ್ನು ಚಿತ್ರಿಸಿರುವ ಚಾತುರ್ಯವೂ ಸಾವಿರ ವರ್ಷಕ್ಕೆ ಕಡಮೆ ಇಲ್ಲದ ಒಂದು ಕಾವ್ಯಸಂಪ್ರದಾಯದಲ್ಲಿ ಮಾತ್ರ ಸಾಧ್ಯ ಎಂಬಂತೆ ಪ್ರೌಢ, ಹಾಗೆಯೇ ನಯ ಆಗಿದೆ.

"ಜೀವನ"
ಡಿಸೆಂಬರ್ ೧೯೪೫

# ಸಾಧು ಜೀವನ

## ೧

ಈಗ ಸುಮಾರು ಇಪ್ಪತ್ತನಾಲ್ಕು ವರ್ಷಗಳ ಹಿಂದೆ ಒಂದು ರಾತ್ರಿ ಕರ್ನಾಟಕದ ಸಾರಸ್ವತ ಬ್ರಾಹ್ಮಣ ಸಮಾಜದ ಮಧ್ಯವಯಸ್ಕ ಗೃಹಸ್ಥರೊಬ್ಬರಿಗೆ ವೈರಾಗ್ಯದ ಕರೆ ಬಂದಿತು. ಈ ಗೃಹಸ್ಥರು ಅದುವರೆಗೆ ಎಲ್ಲರಂತೆ ಬಾಳಿದ್ದರು; ಎಲ್ಲರಂತೆ ಬೆಳೆದಿದ್ದರು. ಅವರಿಗೆ ಎಲ್ಲರಂತೆ ಒಂದು ಮನೆಯಿತ್ತು; ತಕ್ಕಂಥ ಒಂದು ಜೀವಿಕೆಯಿತ್ತು. ಅವರಿಗೆ ತಂದೆ, ಸೋದರರು, ಒಂದು ಬಂಧುವರ್ಗ, ಇನ್ನೂ ಹತ್ತಿರವಾಗಿ ಒಬ್ಬಾಕೆ ಗೃಹಿಣಿ, ಒಬ್ಬ ಹೆಣ್ಣುಮಗಳು, ಇದ್ದರು. ಹೊರ ನೋಟದಿಂದ ನೋಡಿದರೆ ಇಂತಹ ಒಬ್ಬ ಗೃಹಸ್ಥ ತಕ್ಕಷ್ಟು ತೃಪ್ತನಾಗಿ ಇರಬೇಕು. ಇಂತಹ ಮನುಷ್ಯನು ಹುಡುಕಿಕೊಂಡು ಹೋಗಬೇಕಾದ ಮಹಾ ಸುಖ ಏನಿರಬಹುದು? ಆದರೆ ಕೆಲವು ಜೀವಗಳಿಗೆ ಸಾಮಾನ್ಯವಾದ ಸುಖದ ಸಾಮಗ್ರಿಗಳಿಂದ ತೃಪ್ತಿ ಸಿದ್ಧಿಸುವುದಿಲ್ಲ. ದನದ ಕೊಟ್ಟಿಗೆಯಲ್ಲಿ ಕಟ್ಟಿರುವ ಜಿಂಕೆಗೆ ವನದಿಂದ ಬರುವ ಗಾಳಿ ಸ್ವಾತಂತ್ರ್ಯದ ಒಂದು ಅಗೋಚರ ಆಹ್ವಾನವನ್ನು ತರುತ್ತದೆ. ಸಂಸಾರದಲ್ಲಿ ಕಟ್ಟುಬಿದ್ದಿರುವ ಸ್ವತಂತ್ರ ಜೀವಕ್ಕೆ ಬದ್ಧಜೀವಗಳಿಗೆ ಕೇಳದ ಒಂದು ದೈವಿಕ ಆಹ್ವಾನ ಹೀಗೆ ಕೇಳ ಬರುತ್ತದೆ. ವೈರಾಗ್ಯದ ಈ ಕರೆ ಬಂದ ರಾತ್ರಿ ಮಧ್ಯವಯಸ್ಸಿನ ಆ ಗೃಹಸ್ಥನು ಮನೆ ಮಠವನ್ನು ಹೆಂಡತಿ ಮಗಳನ್ನು ಇನ್ನುಳಿದ ತನ್ನ ಎಲ್ಲ ಬಾಳುವೆಯನ್ನು ತೊರೆದು ದೈವವನ್ನು ವರಿಸಿದನು. ದೈವಪ್ರೇರಣೆಯಿಂದ ರಾಮದಾಸ ಎಂಬ ಹೆಸರಿಟ್ಟುಕೊಂಡು ತನ್ನ ಹೊಸ ಬಾಳನ್ನು ಬಾಳತೊಡಗಿದನು.

ಸ್ವಾಮಿ ರಾಮದಾಸರು ಈಗ ದಕ್ಷಿಣ ಕನ್ನಡ ಜಿಲ್ಲೆಯ ಹೊಸದುರ್ಗ ಗ್ರಾಮದ ಎಲ್ಲೆಯಲ್ಲಿ ಒಂದು ಆಶ್ರಮವನ್ನು ಮಾಡಿಕೊಂಡು ಭಕ್ತವೃಂದದ ಜೀವನದಲ್ಲಿ ತಮ್ಮ ಆತ್ಮಜ್ಯೋತಿಯನ್ನು ಬೆಳಗುತ್ತಿದ್ದಾರೆ. ಹಳೆಯಕಾಲದ ಕೊನೆಯಾದ, ಹೊಸಕಾಲದ ಮೊದಲಾದ ಈ ದಿನಗಳಲ್ಲಿ ಭರತವರ್ಷ ತಾನು ಈವರೆಗೆ ನುಡಿಯುತ್ತ ಬಂದಿರುವ ಸೂತ್ರಗಳಿಗೆ

ಉದಾಹರಣೆಗಳಾಗಿ ಇರಲಿ ಎಂಬಂತೆ ಅನೇಕ ತೆರದ ಸಾಧು ಜೀವನವನ್ನು ತಳೆದು ಬೆಳಸಿದೆ. ಈಗ ಜೀವಂತರಾಗಿರುವವರ ಹೆಸರನ್ನೇ ತೆಗೆದು ಕೊಂಡರೂ ಒಂದು ಕಡೆ ಗುರು ಅರವಿಂದ ಘೋಷರು, ಒಂದೆಡೆ ರಮಣ ಮಹರ್ಷಿಗಳು, ಇಲ್ಲಿ ಶ್ರೀನಿವಾಸ ಶಾಸ್ತ್ರಿಗಳು, ಇಲ್ಲಿ ಮಹಾತ್ಮಾಗಾಂಧಿ, ಇಲ್ಲಿ ರಾಮದಾಸರು. ಈ ಮಹನೀಯರ ಸಿದ್ಧಿ ಎಂಥ ಸಿದ್ಧಿ! ಮಹಾ ಪುರುಷ, ಮಹಾತ್ಮನ್, ಕೃತಾತ್ಮನ್, ಕರ್ಮಯೋಗಿ, ಸ್ಥಿತಪ್ರಜ್ಞ, ಭಕ್ತಿಯೋಗಿ ಮೊದಲಾದ ಮಾತುಗಳು ಬರಿಯ ಮಾತುಗಳಲ್ಲ, ಬಾಳಿನಲ್ಲಿ ನಿಲುಕಬಹುದಾದ ಆಧ್ಯಾತ್ಮಿಕ ಉನ್ನತಿಯ ಹೆಸರುಗಳು, ಎಂಬುದನ್ನು ಈ ಮಹನೀಯ ಜೀವನಗಳು ತೋರಿಸುತ್ತವೆ. ಭಕ್ತಿಯೆನ್ನುವುದು ಏನು, ಅದು ಮನುಷ್ಯನ ಜೀವನವನ್ನು ಹೇಗೆ ಮಾರ್ಪಡಿಸುತ್ತದೆ, ಅದನ್ನು ಹಿಡಿದು ನಡೆದ ಜೀವ ಯಾವ ನಿಲುಕಡೆಯನ್ನು ಮುಟ್ಟುತ್ತದೆ, ಎಂಬು ದನ್ನು ತಿಳಿಯಬೇಕಾದರೆ ನಾವು ಸ್ವಾಮಿ ರಾಮದಾಸರ ಚರಿತ್ರೆಯನ್ನು ನೋಡಬೇಕು. ಸಾಮಾನ್ಯವಾಗಿ ಇಂತಹ ಜೀವನ ನಮಗೆ ಬೇರೆಯವರ ಬರಹದಿಂದ ತಿಳಿದು ಬರುತ್ತದೆ. ಈ ಮಹನೀಯರು ಹೊಸಕಾಲದವ ರಾದ್ದರಿಂದ ತಮ್ಮ ಅನುಭವವನ್ನು ತಾವೇ ವರ್ಣಿಸಿದಾರೆ. ಸಾಧು ಜೀವನ ಸಾವಿರ ಸಾವಿರದಲ್ಲಿ ಒಬ್ಬರಿಗೆ ರುಚಿಸುವುದಿಲ್ಲ. ಅದು ರುಚಿಸಿ ಅದನ್ನು ವರಿಸಿದ ಸಾವಿರ ಸಾವಿರದಲ್ಲಿ ಒಬ್ಬರು ತಮ್ಮ ಅನುಭವವನ್ನು ವರ್ಣಿಸುವುದಿಲ್ಲ. ಸಿದ್ಧಿ ಪಡೆದವರು ಅದನ್ನು ವರ್ಣಿಸುವುದು ಉಂಟೇ ಎಂಬುದು ಎಂತೂ ಸಂದೇಹವೇ. ಈ ಕಾರಣದಿಂದ ಸ್ವಾಮಿ ರಾಮದಾಸರ ಅನುಭವವನ್ನು ತಿಳಿಸುವ ಅವರ ಗ್ರಂಥಗಳು ಆಧ್ಯಾತ್ಮಿಕ ಸಾಹಿತ್ಯದಲ್ಲಿ ಒಂದು ಅಪೂರ್ವ ಕೋಟೆಗೆ ಸೇರುತ್ತವೆ. ಸ್ವಾಮಿಗಳು ತಮ್ಮ ಗ್ರಂಥ ಗಳನ್ನು ಇಂಗ್ಲೀಷಿನಲ್ಲಿ ರಚಿಸಿದ್ದಾರೆ. ಮೊದಲ ವರ್ಷದ ಅನುಭವ In Quest of God ಎಂಬ ಪುಸ್ತಕದಲ್ಲಿ; ಆಮೇಲಣ ಒಂಬತ್ತು ವರ್ಷದ ಅನುಭವ In the Vision of God ಎಂಬ ಪುಸ್ತಕದಲ್ಲಿ ಇರುತ್ತವೆ. ಸ್ವಾಮಿಗಳ ಭಕ್ತರಲ್ಲೊಬ್ಬರಾದ ನಮ್ಮ ಮಾನ್ಯಮಿತ್ರರು ಶ್ರೀ ಚೀ. ರಾಮಚಂದ್ರರಾಯರು ಈ ಎರಡನೆಯ ಗ್ರಂಥವನ್ನು ಕನ್ನಡಕ್ಕೆ ಅನುವಾದಿಸಿದಾರೆ.

೨

ರಾಮುದಾಸರಿಗೆ ಭಕ್ತಿಯ ಉಪದೇಶ ಆದುದು ಅವರ ತಂದೆಯವರಿಂದ. ಸ್ವಾಮಿಗಳು ತಂದೆಯನ್ನು ಈ ಗ್ರಂಥದಲ್ಲಿ ಗುರುದೇವ ಎಂಬ ಪದದಿಂದ ನಿರ್ದೇಶಿಸುತ್ತಾರೆ. ತಂದೆಯಿಂದ ಪಡೆದ ರಾಮಮಂತ್ರ ಮಗನ ಜೀವನದಲ್ಲಿ ತ್ರಿವಿಕ್ರಮವಾಗಿ ಬೆಳೆದು ಮುವ್ವತ್ತೇಳು ವಯಸ್ಸಿನ ಸಂಸಾರಿಯನ್ನು ವಿರಾಗದ ದಾರಿಗೆ ದೂಡಿತು. ದೈವಶಕ್ತಿ ತಮ್ಮಲ್ಲಿ ಮೆಲ್ಲಗೆ ಆದರೂ ತಪ್ಪದೆ ಕೆಲಸಮಾಡುತ್ತ ತಮ್ಮ ಬಾಳನ್ನು ಆವರಿಸಿ ಸಂಪೂರ್ಣವಾಗಿ ಸ್ವಾಧೀನ ಮಾಡಿಕೊಂಡದ್ದು ಸ್ವಾಮಿಗಳಿಗೆ ಕಂಡಿತಂತೆ. ದೈವದಿಂದ ಆವಿಷ್ಟವಾದ ಈ ಜೀವ ಆ ಹೊಸದರಲ್ಲಿ ಅಪ್ರತಿಭವಾಯಿತು; ಅಸಹಾಯವಾಯಿತು. ಇದು ಸಹಜವೇ. ಆ ವರ್ಷವೆಲ್ಲಾ ಸ್ವಾಮಿಗಳು ತಮ್ಮ ಶರೀರ ಮತ್ತು ಸುತ್ತಣ ವಿಷಯ ಯಾವುದೂ ಬೇಕಿಲ್ಲದವರಂತೆ, ಅಲ್ಲಿ ಅವು ಇವೆ ಎಂಬ ಅರಿವೇ ಇಲ್ಲದಂತೆ, ಕನಸಿನಲ್ಲಿ ನಡೆಯುವಂತೆ, ಸ್ಥಳದಿಂದ ಸ್ಥಳಕ್ಕೆ ಕೀಲುಬೊಂಬೆಯಂತೆ ಪ್ರಯಾಣಮಾಡಿದರು. ಆ ಸ್ಥಿತಿಯಲ್ಲಿ ಭಕ್ತನಿಗೆ ಎರಡೇ ಭಾವ ನಿಜವಾಗಿತ್ತು. ತನ್ನ ಕಡೆಯಿಂದ ಅರ್ಪಣ, ತನ್ನ ದೈವದ ಕಡೆಯಿಂದ ಅನುಗ್ರಹ. ಹಾಗೆಯೇ ಲೋಕದಲ್ಲೆಲ್ಲ ಎರಡೇ ತತ್ವ: ತಾನು ಒಂದು, ತನ್ನ ದೈವ ಒಂದು. ಈ ಸ್ಥಿತಿಯ ಆನಂದ ಭವ್ಯವಾದುದು, ಅನುಭಾವ್ಯವಾದುದು. ಇದನ್ನು ಅನುಭವಿಸಿದರೆ ಉಳಿದೆಲ್ಲ ಭಾವ ನಿರಾಸವಾಗುತ್ತದೆ. ಈ ಸ್ಥಿತಿಯಲ್ಲಿ ಸ್ವಾಮಿಗಳು ಗುಹೆಗಳಲ್ಲಿ, ಕಾಡುಗಳಲ್ಲಿ, ನದೀ ತೀರಗಳಲ್ಲಿ, ರುದ್ರಭೂಮಿಗಳಲ್ಲಿ ಏಕಾಂತದಲ್ಲಿ ತಮ್ಮ ದೈವದ ಸಹವಾಸವನ್ನು ಅನುಭವಿಸಿದರು. ಆಗ ಇವರು ಭೀತಿ ಎಂಬುದನ್ನು ಕಾಣರು. ಅಪಾಯ, ಮರಣ, ಎಂದರೆ ಇವರಿಗೆ ಲಕ್ಷ್ಯ ಇರಲಿಲ್ಲ. ದೈವ ತನ್ನೊಂದಿಗಿದೆ, ತನ್ನನ್ನು ರಕ್ಷಿಸುತ್ತಿದೆ, ಎಂಬ ಧೈರ್ಯ ಇವರಿಗೆ ನಿಶ್ಚಲವಾಗಿತ್ತು. ನಾಲಗೆ ಎಲ್ಲ ಹೊತ್ತಿನಲ್ಲೂ ರಾಮ ಮಂತ್ರವನ್ನು ನುಡಿಯುತ್ತಿತ್ತು. ಯತ್ನದಿಂದಲ್ಲ, ಯಂತ್ರದಂತೆ; ತನ್ನಿಷ್ಟದಿಂದ. ಯಾವುದೆಂದರೆ ಆ ಅಚ್ಚಿನಲ್ಲಿ ಒತ್ತಿ ತನಗಿಷ್ಟ ಬಂದ ರೂಪನ್ನು ಕೊಟ್ಟು ತನಗೆ ಬೇಕಾದ ಮಾರ್ಪಾಟನ್ನು ಮಾಡುವ ಭಗವಂತನ ಕುಶಲ ಹಸ್ತದಲ್ಲಿ ತಾವು ಮೇಣದ

ಮುದ್ದೆಯಂತೆ ಇದ್ದರೆಂದು ಸ್ವಾಮಿಗಳು ಹೇಳಿದಾರೆ. ಒಂದು ವರ್ಷದ ಅನುಭವದಿಂದ ಸ್ವಾಮಿಗಳು ತನ್ನ ವಿಷಯದ ತಮ್ಮ ಸ್ವಾಮ್ಯ ವನ್ನು ತೀರಾ ಕಳೆದುಕೊಂಡು ಕೇವಲ ದೇವರ ಒಂದು ಜೀತವಾಗಿ ನಿಂತರು.

ವೇದಾಂತದಲ್ಲಿ ಜೀವಾತ್ಮ ಪರಮಾತ್ಮಗಳ ಸಂಬಂಧವನ್ನು ಮೂರು ವಿಧವಾಗಿ ವರ್ಣಿಸುತ್ತಾರೆ: ಅದ್ವೈತ, ವಿಶಿಷ್ಟಾದ್ವೈತ, ದ್ವೈತ. ರಾಮದಾಸ ಸ್ವಾಮಿಗಳ ಅನುಭವಕ್ಕೆ ಬಂದದು ದ್ವೈತ ಸಿದ್ಧಿ. ಅಧ್ಯಾತ್ಮ ಜೀವನವನ್ನು ನಡಸಿರುವ ಅನೇಕರಿಗೆ ಈ ಸಿದ್ಧಿ ದೊರೆಯುದಿದ್ದರೂ ಇದರ ದಾರಿ ಕಂಡಿರುತ್ತದೆ. ಇದಕ್ಕೆ ಕಾಲ ದೇಶಗಳ ಭೇದ ಇಲ್ಲ. ಆಧುನಿಕ ಪಾಶ್ಚಾತ್ಯರಲ್ಲಿ ಈ ಅನುಭವವನ್ನು ಪಡೆದ ಮಹನೀಯರುಂಟು. Lead kindly light 'ಕರುಣಾಳು ಬಾ ಬೆಳಕೆ' ಗೀತದ ಕರ್ತೃವಾದ Cardinal Newman, ಗುರು ಅಮಾತ್ಯ ನ್ಯೂಮನ್, ತಮಗೆ ಈ ಅನುಭವ ಆದು ದನ್ನು ವರ್ಣಿಸಿದಾರೆ. ಅಲ್ಲಿ ಲಕ್ಷಾಂತರದಲ್ಲಿ ಅವರಿಗೆ, ಇಲ್ಲಿ ಕೋಟ್ಯಂತರ ದಲ್ಲಿ ಇವರಿಗೆ, ಹೀಗೆ ಈ ಸಿದ್ಧಿ, ಈ ಅನುಭೂತಿ ಅಪೂರ್ವವಾದದು, ಅಸಾಧಾರಣವಾದದು. ಸ್ವಾಮಿ ರಾಮದಾಸರು ದೇವರ ಜೀತವಾಗಿ ಎಲ್ಲೆಲ್ಲೂ ದೇವರನ್ನೇ ಕಂಡರು. ಹತ್ತಿರ ಬಂದ ಶಿಷ್ಯರನ್ನು, ಆತಿಥ್ಯ ನೀಡಿದ ಉದಾರಿಗಳನ್ನು, ನಿರಾಕರಿಸಿದ ಛತ್ರದ ಪಾರುಪತ್ಯಗಾರನನ್ನು, ಮರ್ಯಾದೆ ತೋರಿದ ರಾಜನನ್ನು, ಅವಮರ್ಯಾದೆಯಿಂದ ಕಂಡ ಪಂಡಿತರನ್ನು, ರೈಲು ಪ್ರಯಾಣದಲ್ಲಿ ಹಿಂಸೆಗೆ ಗುರಿಮಾಡಿದ ಸಿಪಾಯಿ ಗಳನ್ನು, ಒಳ್ಳೆಯವರು ಕೆಟ್ಟವರೆನ್ನದೆ ರಾಮನೆಂದು ನೆನೆದರು, ರಾಮ ಎಂದು ಕರೆದರು. ಅಂತ್ಯಜರನ್ನು ಬಂಧುಗಳಂತೆ ನಡಸಿಕೊಂಡರು; ಕುಷ್ಠರೋಗಿಗಳಿಗೆ ಸೇವೆ ಮಾಡಿದರು. ಪಶುಪಕ್ಷಿಗಳಲ್ಲಿ ಹಾವು ಹಲ್ಲಿ ಗಳಲ್ಲಿ ರಾಮನನ್ನು ನೆನೆದು ಮೈತ್ರಿತೋರಿದರು, ಅವುಗಳ ಮೈತ್ರಿಯನ್ನು ಪಡೆದರು. ಎಲ್ಲ ಕಡೆಯಲ್ಲಿ ಎಲ್ಲ ಹೊತ್ತಿನಲ್ಲಿ ರಾಮನನ್ನು ಅನುಸಂಧಾನ ಮಾಡಿ ಲೋಕವೇ ರಾಮ, ತಾನು ಅದರ ದಾಸ ಎಂಬ ಭಾವವನ್ನು ಸಾಧಿಸಿಕೊಂಡರು. ಇದನ್ನೆಲ್ಲ ಈ ಚರಿತ್ರೆ ಸುಂದರವಾಗಿ ಸ್ವರಸವಾಗಿ ವರ್ಣಿಸಿದೆ.

೩

ಸ್ವಾಮಿಗಳು ಕಂಡ ಜೀವನದ ವೈವಿಧ್ಯವನ್ನು, ಇವರ ದೃಷ್ಟಿಯ ವೈಶದ್ಯವನ್ನು ತೋರುವ ಕೆಲವು ಸಂಗತಿಯನ್ನು ಇಲ್ಲಿ ಸಂಗ್ರಹಿಸಿ ಹೇಳ ಬಹುದು.

ಸ್ವಾಮಿಗಳು ಅನುಯಾಯಿ ರಾಮುಚರಣದಾಸನೊಂದಿಗೆ ಒಂದು ರಾತ್ರಿ ಗೋಕರ್ಣದ ದೇವಸ್ಥಾನದಲ್ಲಿ ತಂಗಿದರು. ಅಲ್ಲಿಯೇ ಹತ್ತಿರದಲ್ಲಿ ತುಂಬ ಜನ ಸಾಧುಗಳು ಸೇರಿದ್ದರು. ಅವರಲ್ಲಿ ಒಬ್ಬನು ಗುರು, ಒಬ್ಬನು ಶಿಷ್ಯ. ಗುರುವಿನ ದರ್ಪವೇ ದರ್ಪ. ಅವನು ಶಿಷ್ಯನನ್ನು ಹುಚ್ಚ, ಕತ್ತೆ, ಎನ್ನುವುದು ಸಾಮಾನ್ಯ. ತನ್ನ ಜೊತೆಯ ಸಾಧುಗಳಿಗೆ ಅವನ ದಡ್ಡತನ ವನ್ನು ವರ್ಣಿಸುವುದು ಬೇರೆ. ಗುರು ಶಿಷ್ಯನಿಗೆ ಚಿಲುಮೆ ಕೊಡು ಎಂದನು. ಶಿಷ್ಯನು ಗಾಂಜಾ ಸಿದ್ಧಮಾಡಿ ಅವನ ಕೈಗೆ ಚಿಲುಮೆಯನ್ನು ಕೊಟ್ಟನು. 'ಚಿಲುಮೆಯ ಅಡಿಯ ಬಟ್ಟೆಯನ್ನು ಕೊಡದೆ ಬರಿಯ ಚಿಲುಮೆ ಕೊಟ್ಟೆಯಾ' ಎಂದು ಗುರು ರೇಗಿದನು. ಶಿಷ್ಯನು ದೈನ್ಯದಿಂದ ಬಟ್ಟೆ ಯನ್ನು ಹುಡುಕಿ ಕೊಟ್ಟನು. ಗುರುಗಳು ಗಾಂಜಾ ಸೇದಿ ಮುಗಿಸುವ ವೇಳೆಗೆ ಎಷ್ಟೋ ಸಲ ಬೈಗಳಾಗಿದ್ದುವು. ಗುರು ಅವರ ಜೊತೆಯವರು ಗಾಂಜಾ ಸೇದಿ ಮುಗಿಸಿದ ಮೇಲೆ ಶಿಷ್ಯನು ಅದನ್ನು ತೆಗೆದುಕೊಂಡನು. ತಾನೂ ಸೇದಿದನು. ಗುರು ಬೈದಾಗ ಅವನಿಗೆ ಕೋಪ ಬರುತ್ತಿತ್ತು. ಅವನು ಅದನ್ನು ಕಷ್ಟದಿಂದ ತಡೆದುಕೊಂಡಿದ್ದನು. ಗಾಂಜಾ ಸೇದಿ ಅಮಲು ಏರಿತೋ ಇಲ್ಲವೊ ಈ ತಡೆ ಕಡಿಯಿತು. ಆಗ ಅವನು ಗುರು ವನ್ನು ಚೆನ್ನಾಗಿ ಬೈದು ತನಗೆ ಗಾಂಜಾ ಕುಡಿಯುವುದನ್ನು ಹೇಳಿ ಕೊಟ್ಟದ್ದಕ್ಕಾಗಿ ಅವನನ್ನು ಶಪಿಸಿ 'ನಾನು ನಿನ್ನೊಂದಿಗೆ ಇರುವುದಿಲ್ಲ' ಎಂದು ಹೊರಟುಹೋದನು.

ಪಂಢರಪುರದ ಬಳಿಯ ನಾಡಿನಲ್ಲಿ ಸ್ವಾಮಿಗಳು ಒಂದು ಸಲ ಸುತ್ತುತ್ತಿದ್ದಾಗ ಒಬ್ಬ ಅಂತ್ಯಜನಿಂದ 'ಇಂತಹ ಒಂದು ಹಳ್ಳಿಗೆ ಹೋಗಿ' ಎಂಬ ಸೂಚನೆಯನ್ನು ಪಡೆದು ಅದರಲ್ಲಿ ಅವನು ಹೇಳಿದ್ದ ಒಂದು ಅಂಗಡಿಯ ಮುಂದೆ ನಿಂತರು. ಅಂಗಡಿಯ ಹೆಂಗಸು ಸಾಧುವನ್ನು ಪ್ರೀತಿಯಿಂದ ಹತ್ತಿರಕ್ಕೆ ಕರೆದು ಬುರುಗು ಬೆಲ್ಲ ಖರ್ಜೂರವನ್ನು

ಯಥೇಷ್ಟವಾಗಿ ಕೊಟ್ಟಳು. ಎದುರಿಗಿದ್ದ ದೇವಸ್ಥಾನದ ಮುಂಭಾಗ ದಲ್ಲಿ ಕಂಬಳಿ ಹಾಕಿ ಕೂರಿಸಿದಳು. ಸ್ನಾನಮಾಡಿಕೊಂಡು ಬನ್ನಿ ಊಟ ಮಾಡುವಿರಂತೆ ಎಂದಳು. ತನ್ನ ಮನೆಗೆ ಬರುವುದಕ್ಕೆ ಇವರಿಗೆ ಸಮ್ಮತಿ ಉಂಟೆಂದು ತಿಳಿದು ಇವರನ್ನು ಊಟಕ್ಕೆ ಮನೆಗೆ ಕರೆದುಕೊಂಡು ಹೋದಳು. ಆಕೆಯ ಕಾಲಿಗೆ ಕೆರ ಇತ್ತು. ಸ್ವಾಮಿಗಳದು ಬರಿ ಕಾಲು. ದಾರಿಯ ಮರಳು ಕಾದಿತ್ತು. ಮನೆಯ ಮುಂದೆ ಬಿಸಿಲಲ್ಲಿ ಸ್ವಲ್ಪ ಹೊತ್ತು ನಿಲ್ಲಬೇಕಾಯಿತು. "ಬಹು ಬಿಸಿಲಲ್ಲ, ಕಾಲು ಸುಡುತ್ತದಲ್ಲ" ಎಂದು ಆಕೆ ಹಲವು ಸಲ ಪರಿತಾಪಪಟ್ಟು ಕೊನೆಗೆ ಸ್ವಾಮಿಗಳಿಗೆ ಕಾಲು ಸುಡದೆ ಇರಲಿ ಎಂದು ಇವರನ್ನು ಮಗುವಿನಂತೆ ಎತ್ತಿಕೊಂಡು ಬೆನ್ನಮೇಲೆ ಕೂರಿಸಿಕೊಂಡಳು.

ಲಿಂಬಡಿ ಸಂಸ್ಥಾನದ ಅರಮನೆಯಲ್ಲಿ ಅರಸರು ಸ್ವಾಮಿಗಳಿಗೆ ಒಂದು ರೇಷ್ಮೆ ಶಾಲನ್ನು ಉಡುಗೊರೆಯಾಗಿ ಕೊಡಲು ಬಯಸಿದರು. ಸ್ವಾಮಿಗಳು ಇದಕ್ಕೆ ಒಪ್ಪಲಿಲ್ಲ. ಅರಸರ ಮಿತ್ರಳಾದ ಎಲಿಜಬೆತ್ ಷಾರ್ಪ್ ಎಂಬ ಆಂಗ್ಲಮಹಿಳೆ ಸ್ವಾಮಿಗಳಿಗೆ ಸಾಮಾನ್ಯವಾದ ಒಂದು ಬೆಚ್ಚನೆಯ ಉಡುಪನ್ನು ಕೊಡಬಹುದೆಂದಳು. ಅರಸರು ಇವರಿಗೆ ಒಂದು ನಿಲುವಂಗಿಯನ್ನು ಮಾಡಿಸಿ ಕೊಟ್ಟರು. ಸಾಧುವಿಗೆ ಇಂತಹ ವೇಷ ಅಸಂಗತ. ಸ್ವಾಮಿಗಳು ಆ ನಿಲುವಂಗಿಯನ್ನು ಹಾಕಿಕೊಂಡು ರಾಜ ಮತ್ತು ಎಲಿಜಬೆತ್ ಮಾತೆಯ ಎದುರಿನಲ್ಲಿ ನರ್ತನಮಾಡಿದರು. ಅವರಿಬ್ಬರೂ ನಕ್ಕರು. ಸ್ವಾಮಿಗಳು ಅಂಗಿಯನ್ನು ತೆಗೆದು ಒತ್ತಟ್ಟಿ ಗಿಟ್ಟರು. ಮತ್ತೆ ಅದನ್ನು ಹಾಕಿಕೊಳ್ಳಲಿಲ್ಲ.

ಒಬ್ಬ ಬನಿಯ ಒಂದು ಸಲ ದಾರಿಯಲ್ಲಿ ಸ್ವಾಮಿಗಳ ಜೊತೆ ಸೇರಿದನು. ಹೆಂಡತಿಯೊಡನೆ ಏಕಾಗಿಯೋ ಜಗಳಮಾಡಿ ಬೇಸರಗೊಂಡು ಅವನು ಸಂನ್ಯಾಸಿಯಾಗಲು ಹೊರಟಿದ್ದನು. ಸ್ವಾಮಿಗಳನ್ನು ತನಗೆ ಉಪದೇಶ ಮಾಡಬೇಕು ಎಂದು ಬೇಡಿದನು. ಸ್ವಾಮಿಗಳು, ಸ್ವಲ್ಪ ಹೊತ್ತು ಬಿಟ್ಟು, ಮನಸ್ಸನ್ನು ಏಕಾಗ್ರಮಾಡಲು ಸಂತತವಾಗಿ ನಾಮಸ್ಮರಣೆ ಮಾಡಬೇಕೆಂದರು. ಅವನು ಆ ವಿಚಾರದಲ್ಲಿ ನಾನು ಸರಿಯಾಗಿಯೇ ಇದ್ದೇನೆ ಎಂದನು. ಬನಿಯನು ದಾರಿಯಲ್ಲಿ ಒಬ್ಬ

ನಾಪಿತನನ್ನು ತನಗೆ ಮುಂಡನಮಾಡು ಎಂದು ಕೇಳಿದನು. ನಾಪಿತನು "ನಿನ್ನನ್ನು ಸಂನ್ಯಾಸಿಮಾಡಿ ನಿನ್ನ ಹೆಂಡತಿ ಮಕ್ಕಳ ಕೈಯಲ್ಲಿ ಬೈಯಿಸಿ ಕೊಳ್ಳುವುದಕ್ಕೆ ನಾನು ಸಿದ್ಧನಾಗಿಲ್ಲ" ಎಂದನು. ಸ್ವಾಮಿಗಳು ಬನಿಯ ನನ್ನು 'ಮನೆಗೆ ಹೋಗು' ಎಂದರು; ಅವನು 'ನಿಮ್ಮನ್ನು ಎಂದಿಗೂ ಬಿಡುವುದಿಲ್ಲ' ಎಂದನು. ಚಿತ್ರಕೂಟದ ದಾರಿಯಲ್ಲಿ ಬನಿಯನ ಅತ್ತಿಗೆಯ ಮನೆ. ಇವನು ಅವಳ ಮನೆಗೆ ಹೋಗಿ ಅವಳ ತಂಗಿಯ ವರ್ತನವನ್ನು ಖಂಡಿಸಿ ನಾಲ್ಕು ಮಾತು ಹೇಳಿದನು. ಇಂತಹ ಮಾತಿನಲ್ಲಿ ಗಂಡಿನ ನಾಲಗೆ ಹೆಣ್ಣಿನ ನಾಲಗೆಗೆ ಸಮನಲ್ಲ. ಆ ಅತ್ತಿಗೆ ಇವನಿಗೆ ಬೇಕಾದಷ್ಟು ಶಾಸ್ತಿಮಾಡಿ 'ನಡೆ ಆಚೆ' ಎಂದಳು. ಬನಿಯನು ಹೆದರಿ ಓಡಿಬಂದನು. ರಾತ್ರಿ ಚಿತ್ರಕೂಟವನ್ನು ಸೇರಿದರು. ಸಾಧು ಜೀವನ ತಾನು ಎಣಿಸಿದಷ್ಟು ರುಚಿ ಅಲ್ಲವೆಂದು ಬನಿಯನಿಗೆ ಕಂಡಿತು. ಇರುವುದು ಬೆಟ್ಟದಲ್ಲಿ: ಒಬ್ಬನೇ ಮಲಗುವುದಕ್ಕೆ ಇವನಿಗೆ ಭಯ; ಹೊರಗಡೆ ಮಲಗುವುದಕ್ಕೆ ಭಯ. ಒಂದು ಮಂಟಪದಲ್ಲಿ ಮಲಗಿರುತ್ತ ಮೇಲೆ ಇಲಿ, ಹಲ್ಲಿ ಹಾಯ್ದಾಗ 'ಹಾವು' ಎಂದು ಚೀರಿದನು. ಮತ್ತೆ ಸದ್ದಾದಾಗ ಸ್ವಾಮಿ ಗಳನ್ನು ಹಿಡಿದುಕೊಂಡು ತಾಯನ್ನು ಅಪ್ಪಿಕೊಳ್ಳುವ ಮರಿ ಮಂಗನಂತೆ ಆಡಿದನು. ಮಾರನೆಯ ಬೆಳಗಾಗ ಸ್ವಾಮಿಗಳು ಬೆಟ್ಟದಲ್ಲಿ ಸ್ವಲ್ಪ ಸುತ್ತಿ ಹಿಂತಿರುಗಿ ಬಂದರು. ಬನಿಯನು ಕಾಣಲಿಲ್ಲ. ಅವನು ಹಿಂತಿರುಗಿ ಹೋಗುತ್ತಿದ್ದುದನ್ನು ಕಂಡವರು ಅದನ್ನು ಸ್ವಾಮಿಗಳಿಗೆ ತಿಳಿಸಿದರು. ಹೆಂಡತಿಯೇ ಇಲ್ಲದ ಬೆಟ್ಟಕ್ಕಿಂತ ಬೈಯುವಳಾದರೂ ಹೆಂಡತಿ ಇರುವ ಮನೆ ಭದ್ರವೆಂದು ಅವನಿಗೆ ಕಂಡಿರಬೇಕು.

ಹೀಗೆ ಹತ್ತಾರು ಸಂಗತಿ ಈ ಪುಸ್ತಕದಲ್ಲಿ ದೊರೆಯುತ್ತವೆ. ರಾಮ ಚರಣದಾಸನ ಚರಿತ್ರೆ, ಸಾಧು ಬಾಲಕರಾಮನ ಚರಿತ್ರೆ, ಹಿಮಾಲಯದ ಸಾಧುಗಳ ಜೀವನ, ವಸಿಷ್ಠಾಶ್ರಮದ ಅನುಭವ, ಕಾಶ್ಮೀರ, ಪಂಜಾಬಿನ ಪ್ರವಾಸದ ವರ್ಣನೆ: ಹೀಗೆ ಬಹುವಿಧದ ವಿಷಯ ಈ ಗ್ರಂಥದಲ್ಲಿ ಪ್ರತಿ ಪಾದಿತವಾಗಿದೆ. ಸಾಧುಗಳು ಕವಿಗಳಲ್ಲ; ಆದರೆ ಇವರಲ್ಲಿ ಕವಿಮನೋ ಧರ್ಮ ಇದೆ. ಇವರು ಲೇಖನವನ್ನು ಒಂದು ಕಲೆಯೆಂದು ಅಭ್ಯಾಸಿಸಿಲ್ಲ. ಆದರೆ ಇವರು ಜೀವನವನ್ನೇ ಒಂದು ಕಲೆಯಂತೆ ಸಾಧಿಸಿದವರು.

ಆದ್ದರಿಂದ ಅದರ ಅಂಗವಾದ ಈ ಲೇಖನ ಕಾರ್ಯದಲ್ಲಿಯೂ ಕಲೆಯನ್ನು ಸಾಧಿಸಿದ್ದಾರೆ. ಕಲೆಯ ಸಹಜ ಪ್ರವೃತ್ತಿ, ಅದರ ಸಹಜ ಸಂಯಮ, ಅವುಗಳ ಮಿಲನದಿಂದ ಸಾಧಿಸುವ ಸೌಂದರ್ಯ, ಈ ಕಥನದಲ್ಲಿ ಉದ್ದಕ್ಕೂ ಕಾಣುತ್ತದೆ. ಮತ್ತಾವ ದೃಷ್ಟಿಯಿಂದ ಅಲ್ಲದಿದ್ದರೂ ಒಂದು ಜೀವನ ಚರಿತ್ರೆ ಎಂಬ ದೃಷ್ಟಿಯಿಂದ ಈ ಗ್ರಂಥ ಎಂಥವರಿಗಾದರೂ ರುಚಿಸಬೇಕು.

ಸಾಧುಗಳ ಜೀವನದ ಚರಿತ್ರೆಯಲ್ಲಿ ಹಾಸ್ಯಕ್ಕೆ ಎಡೆ ಇಲ್ಲವೆಂದು ನಮ್ಮಲ್ಲಿ ಅನೇಕರಿಗೆ ತೋರಬೇಕು. ಅದರಲ್ಲಿಯೂ ಒಬ್ಬ ಸಾಧು ತಮ್ಮ ಚರಿತ್ರೆಯನ್ನು ಗುರುತಿಸುವಾಗ ಹಾಸ್ಯಮಾಡುವ ಹವ್ಯಾಸಕ್ಕೆ ಹೋದಾರೆಂದು ನಾವು ನಂಬಲಾರೆವು. ಆದರೆ ಸಾಧು ಜೀವನ ಸಾಮಾನ್ಯ ಜೀವನಕ್ಕಿಂತ ಶ್ರೇಷ್ಠವಾಗುವುದರಲ್ಲಿ ಮೊಟಕಾಗುವುದಿಲ್ಲ. ಪರಿಶುದ್ಧವಾದ ಹಾಸ್ಯಕ್ಕೆ ಸಾಧು ಜೀವನದಲ್ಲೂ ಸ್ಥಾನವುಂಟು. ಸ್ವಾಮಿ ರಾಮದಾಸರ ಈ ಗ್ರಂಥ ಈ ತತ್ವಕ್ಕೆ ಒಳ್ಳೆಯ ನಿದರ್ಶನ. ಬನಿಯನ ವೈರಾಗ್ಯ ಮೊದಲಾದ ಅನೇಕ ಸಂಗತಿಗಳನ್ನು ವಿವರಿಸುವಲ್ಲಿ ಸ್ವಾಮಿಗಳ ಕಥನ ತುಂಬ ತಿಳಿಯಾದ ಒಂದು ನಗೆಯಿಂದ ಬೆಳಗುತ್ತದೆ. ಇವರ ಹಾಸ್ಯದ ನಯಕ್ಕೆ ಒಂದು ಉದಾಹರಣೆಯನ್ನು ಹೇಳಬಹುದು. ಅನುಯಾಯಿ ರಾಮಚರಣದಾಸ ಅಡುಗೆಯ ಕೆಲಸಕ್ಕೆ ಹೊಸಬ. ಅವನು ಬೇಕಾದಷ್ಟು ಕಾಯಿಪಲ್ಯ ತಂದು ಒಂದು ದಿನ ಅಡುಗೆ ಮಾಡಿದನು. ಅದು ಚೆನ್ನಾಗಿ ಬೇಯದೆ ಇಬ್ಬರಿಗೂ ತೊಂದರೆಯಾಯಿತು. ಸ್ವಾಮಿಗಳು ಶಿಷ್ಯನ ಪಾಚಕಕಾರ್ಯವನ್ನು ವರ್ಣಿಸುತ್ತ 'ಅವನು ಅಡುಗೆಯಲ್ಲಿಯೂ ಸಾಧಕನಾಗಿಯೆ ಇದ್ದನು' ಎಂದಿದಾರೆ.

೪

ಸ್ವಾಮಿಗಳು ಸಂತತವಾಗಿ ನಾಮಸ್ಮರಣೆಮಾಡಿ ವೈರಾಗ್ಯವನ್ನೂ ಮನೋದಾರ್ಢ್ಯವನ್ನೂ ಸಾಧಿಸಿದ ರೀತಿ; ಮಳೆಯೆನ್ನದೆ ಬಿಸಿಲೆನ್ನದೆ, ಚಳಿಯೆನ್ನದೆ ಗಾಳಿಯೆನ್ನದೆ, ಎಲ್ಲವನ್ನೂ ಸಹಿಸಿ ದೇಹವನ್ನು ದಂಡಿಸಿ ಅದರಲ್ಲಿದ್ದಂತೆಯೇ ಅದರಿಂದ ಬಿಡುಗಡೆಹೊಂದಿದ ರೀತಿ; ಸಮಸ್ತ

ಚರಾಚರದಲ್ಲಿ ರಾಮಚಂದ್ರನನ್ನು ಕಾಣುವ ಅನುಸಂಧಾನದಲ್ಲಿ ಒಂದೇ ಸಮನಾಗಿ ಮುಂದುವರಿದು ಮೇಲೇರಿದ ರೀತಿ; ವಸಿಷ್ಠಾಶ್ರಮದ ಗುಹೆಯಲ್ಲಿ ಒಬ್ಬರೇ ಆಗಿ ಕುಳಿತು ರಾತ್ರಿ ಎದುರಿಗೆ ಜ್ಯೋತಿರ್ಮಯ ಕ್ರೈಸ್ತ ಮೂರ್ತಿಯನ್ನು ಕಂಡು ಸಾರಿದ ರೀತಿ; ಕೋಡುಗಲ್ಲಿನ ಮೇಲೆ ಕುಳಿತು ಸುತ್ತಣ ಸೌಂದರ್ಯದಲ್ಲಿ ಚೇತನವನ್ನು ಬೆರಸಿ ಅನ್ನ ನೀರಿನ ಬಯಕೆ ಇಲ್ಲದೆ ದಿನಗಟ್ಟಳೆ ಸಮಾಧಿಯಲ್ಲಿ ಕಳೆದ ರೀತಿ: ಇದನ್ನೆಲ್ಲ ಇಲ್ಲಿ ವಿವರಿಸುವುದು ಸಾಧ್ಯವಲ್ಲ. ಬನಿಯನ ಕಥೆಯನ್ನು ಸಂಗ್ರಹಿಸಿ ಬರೆಯಬಹುದು. ಇಂತಹ ವಿಷಯವನ್ನು ಸಂಗ್ರಹಿಸುವುದು ಅಪಚಾರವಾಗುತ್ತದೆ. ಆಸೆಯುಳ್ಳವರು ಇದನ್ನೆಲ್ಲ ಗ್ರಂಥದಲ್ಲೇ ಓದಬೇಕು.

ತಮ್ಮ ಆಧ್ಯಾತ್ಮಿಕ ಆರೋಹಣದಲ್ಲಿ ಸ್ವಾಮಿಗಳು ತಮ್ಮದೇ ಆದ ಒಂದು ದಾರಿಯನ್ನು ಹಿಡಿದರೆನ್ನುವದು ನಾವು ಮುಖ್ಯವಾಗಿ ತಿಳಿಯಬೇಕಾದ ಮಾತು. ಇವರು ಹುಟ್ಟಿದ್ದು ಹಿಂದೂ ಧರ್ಮದಲ್ಲಿ. ಅದರ ವಿಶಾಲ ಭಾವನೆಯನ್ನು ಮುಂದುವರಿಸಿಕೊಂಡು, ಈಗ ಅವರು ಒಂದು ವಿಶ್ವಧರ್ಮವನ್ನು ಸಾಧಿಸಿಕೊಂಡಿದ್ದಾರೆ, ಪ್ರತಿಪಾದಿಸುತ್ತಿದಾರೆ. ಕ್ರೈಸ್ತ, ಬುದ್ಧ, ರಾಮಕೃಷ್ಣ, ಮುಹಮ್ಮದ್, ನಾನಕ್, ಮೊದಲಾದ ಹಿರಿಯ ಧರ್ಮಪ್ರವರ್ತಕರ ನುಡಿ, ನಡೆಯನ್ನು ಇವರು ಬಲ್ಲರು. ಸಾಮಾನ್ಯ ಜೀವಗಳ ಬಾಳನ್ನು ಕುಂಠಿಸುವ ಶುಷ್ಕ ಸಂಪ್ರದಾಯವನ್ನು ಬೀಸಿ ಒಗೆದಿರುವರು. ಸಾಮಾನ್ಯ ಸಂನ್ಯಾಸದ ನಿಯಮಗಳನ್ನು ಕೂಡ ಇವರು ನಿರಾಕರಿಸಿದವರೇ.

ಇವರ ಸಂನ್ಯಾಸದ ನಿಲುವನ್ನು ಸ್ಫುಟವಾಗಿ ತೋರುವ ಒಂದು ಸಂಗತಿಯನ್ನು ಇಲ್ಲಿ ಹೇಳಬಹುದು. ಹೆಂಡತಿ ಮಕ್ಕಳನ್ನು ತೊರೆದು ದೇಶಾಂತರ ಹೋದ ಸ್ವಾಮಿಗಳು ವರ್ಷಕಾಲ ಕಳೆದು ಎಲ್ಲರನ್ನೂ ನೋಡುವಂತೆ ಪೂರ್ವಾಶ್ರಮದ ಮಾವನ ಮನೆಯವರನ್ನು ನೋಡಲು ಅಲ್ಲಿಗೆ ಹೋದರು. ವೈರಾಗ್ಯಕ್ಕೆ ಪೂರ್ವ ಹೆಂಡತಿಯಾಗಿದ್ದ ಮಹಿಳೆ ಅಲ್ಲಿದ್ದಳು. ಸ್ವಾಮಿಗಳು ಆಕೆಯನ್ನು ಎಲ್ಲರನ್ನೂ ಮಾತನಾಡಿಸುವಂತೆ ಮಾತನಾಡಿಸಿದರು. ಮಾತು ಮುಗಿದ ಮೇಲೆ ಹೊರಡಲನುವಾದರು. ಪೂರ್ವಾಶ್ರಮದ ಪತ್ನಿ 'ಮತ್ತೆ ನೋಡುವುದೆಂದು' ಎಂದು ಕೇಳಿದಳು.

ಸ್ವಾಮಿಗಳು 'ದೇವರ ಇಚ್ಛೆ ಬಂದಾಗ' ಎಂದರು. ಆಕೆಯ ಕಣ್ಣಲ್ಲಿ ನೀರು ತುಂಬಿತು. ಸ್ವಾಮಿಗಳು ಅದನ್ನು ನೋಡಿದರು. ತಮ್ಮಂತೆ ತಾವು ನಡೆದರು.

ಒಂದು ಕಾಲದಲ್ಲಿ ವೈಹಿಡಿದು ಒಲಿದಿದ್ದ ಹೆಣ್ಣಿನ ಕಣ್ಣು ನೋವಿಂದ ತುಂಬಿ ಬಂದದ್ದನ್ನು ನೋಡಿಯೂ ಧೃತಿಯಿಂದ ಮುಂದುವರಿದ ಸ್ವಾಮಿಗಳ ಕೆಚ್ಚುಮನ ಅವರ ಬಾಳು ಮುಟ್ಟಿರುವ ಮೇಲ್ಮಟ್ಟದ ನಿದರ್ಶನ, ಅವರ ಆತ್ಮದಸಿದ್ಧಿಯ ಸಂಕೇತ.

೫

ಸ್ವಾಮಿ ರಾಮದಾಸರು ಕನ್ನಡಿಗರು. ಇವರು ಕನ್ನಡ ನಾಡಿನಲ್ಲಿಯೂ ಓಡಾಡಿದಾರೆ. ಹಲವು ಮುಖ್ಯ ನಗರಗಳ ಪ್ರಮುಖ ಮಿತ್ರರು ಹಲಕೆಲವರ ಹೆಸರು ಈ ಚರಿತ್ರೆಯಲ್ಲಿ ಬರುತ್ತವೆ. ಸ್ವಾಮಿಗಳು ಹುಬ್ಬಳ್ಳಿಯ ಸಿದ್ಧಾರೂಢಸ್ವಾಮಿಗಳನ್ನು ಸಂದರ್ಶಿಸಿದ ಸಂದರ್ಭವನ್ನು ಉಲ್ಲೇಖಿಸಿದಾರೆ. ಹಾಗೆಯೇ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಗಣಿತಶಾಸ್ತ್ರದ ಅಧ್ಯಾಪಕರಾಗಿದ್ದ ಕೊಮಂಡೂರು ಕುಪ್ಪಸ್ವಾಮಿ ಅಯ್ಯಂಗಾರ್ರ ಸೇವೆಯನ್ನೂ ವರ್ಣಿಸಿದಾರೆ. ಇಂತಹ ಸಂಗತಿಯನ್ನು ಓದುವುದರಲ್ಲಿ ಕನ್ನಡಿಗರಿಗೆ ಹೆಚ್ಚಿನ ಆಸಕ್ತಿ ಇರುವುದು ಸಹಜ. ಅದರಲ್ಲೂ ಆ ಹಿರಿಯ ಸಿದ್ಧರಂತೆ, ಈ ತರುಣ ಅಧ್ಯಾಪಕರಂತೆ, ಇತ್ತೀಚೆಗೆ ಕಣ್ಮರೆಯಾಗಿರುವವರ ವಿಷಯವನ್ನು ಓದುವುದರಲ್ಲಿ ಅತ್ತ ಭಕ್ತಿ, ಇತ್ತ ಮರುಕ ಬೆರೆಯುವುದು ಅನಿವಾರ್ಯ. ಸಾಧು ಜೀವನ ದಿನದ ಜೀವನದಿಂದ ಬೇರೆಯಾಗಿರುವುದು ವಿವರದಲ್ಲಿ ಅಲ್ಲ, ಮನೋಧರ್ಮದಲ್ಲಿ ಎನ್ನುವುದೂ ಇದರಿಂದ ವ್ಯಕ್ತವಾಗುತ್ತದೆ.

ರಾಮದಾಸ ಸ್ವಾಮಿಗಳು ಈಗ ತಮ್ಮ ಆಶ್ರಮದಲ್ಲಿಯೇ ನಿಂತಿದಾರೆ. ನಂಬಿ ಹತ್ತಿರ ಬಂದವರಿಗೆ ತಮ್ಮ ಆತ್ಮಪರಿಪಾಕದ ಪ್ರಯೋಜನವನ್ನು ಧಾರಾಳವಾಗಿ ನೀಡುತ್ತಿದಾರೆ. ಲೋಕದ ರುಚಿ ಒಂದು ತೆರನಲ್ಲ. ಇವರನ್ನು ಆಶ್ರಯಿಸಿ ಸುಖವನ್ನು ಕಾಣುವವರು ನೂರು ಜನ ಇದ್ದರೆ ಇಂತಹ ವಿಷಯದಲ್ಲಿ ನಂಬಿಕೆ ಹುಟ್ಟದೆ ದೂರ

ನಿಲ್ಲುವವರು ನೂರು ಜನ ಇರುತ್ತಾರೆ. ನಂಬಿಕೆ ಉಳ್ಳವರಿಗೆ ಸರಿಯಾದ ರೀತಿಯಲ್ಲಿ ನಂಬಿ ಎಂದೂ, ನಂಬಿಕೆ ಇಲ್ಲದವರಿಗೆ ಅಪನಂಬಿಕೆಯನ್ನು ಅತಿಮಾಡಬೇಡಿ ಎಂದೂ, ಸ್ವಾಮಿಗಳು ಎಚ್ಚರಿಕೆಯ ಮೂರ್ತಿಯಾಗಿ ಬಾಳುತ್ತಿದಾರೆ. ಆ ಎಚ್ಚರಿಕೆ ಜನರ ಮನಸ್ಸನ್ನು ಮುಟ್ಟಬೇಕು; ದೇಶದ ಬಾಳು ಹಸನಾಗಬೇಕು.

ಸ್ವಾಮಿಗಳು ಇಂಗ್ಲೀಷಿನಲ್ಲಿ ರಚಿಸಿರುವ ಗ್ರಂಥವನ್ನು ಕನ್ನಡಕ್ಕೆ ತಂದು ಶ್ರೀ ರಾಮಚಂದ್ರರಾಯರು ಗುರುಗಳಿಗೆ ಒಂದು ಸೇವೆ ಸಲ್ಲಿಸಿ ಅದೇ ಹೊತ್ತಿನಲ್ಲಿ ಕನ್ನಡಿಗರಿಗೆ ಒಂದು ಉಪಕಾರ ಮಾಡಿದ್ದಾರೆ. ತಾವು ಲೇಖಕರಲ್ಲವೆಂದೂ, ಕೇವಲ ಗುರುವಿನ ಅನುಗ್ರಹದಿಂದ ಈ ಕೆಲಸದಲ್ಲಿ ಹೇಗೋ ಉತ್ತೀರ್ಣರಾಗಿರುವುದಾಗಿಯೂ, ಇವರು ಪಾಠಕರಲ್ಲಿ ವಿಜ್ಞಾಪಿಸಿ ಕೊಂಡಿದಾರೆ. ಲೇಖನದಲ್ಲಿ ಈ ಮೊದಲು ಉದ್ದೇಶ ಪೂರ್ವಕವಾಗಿ ತೊಡಗದಿದ್ದರೂ ಲೇಖಕನಾಗಲು ಆವಶ್ಯಕವಾದ ಅಭ್ಯಾಸವೆಲ್ಲ ಇವರಿಗೆ ಮೊದಲೇ ಲಭಿಸಿತ್ತು. ಈ ಕಾರಣದಿಂದ ಈ ಪುಸ್ತಕದ ಬರವಣಿಗೆ ತಕ್ಕಷ್ಟು ಚೆನ್ನಾಗಿಯೇ ಇದೆ. ಅಲ್ಲಿ ಇಲ್ಲಿ ಒಂದು ಮಾತು ಅರ್ಧಮಾತು ಬೇರೆಯಾಗಿದ್ದರೆ ಚೆನ್ನಾಗಿದ್ದಿರಬಹುದು. ಆದರೂ ಇದರಿಂದ ಗ್ರಂಥದ ಒಟ್ಟಿನ ಯೋಗ್ಯತೆ ಕಡಮೆಯಾಗುವುದಿಲ್ಲ. ಶ್ರೀ ರಾಮಚಂದ್ರರಾಯರು ಇಂತಹ ಮತ್ತು ಇತರ ರೀತಿಯ ಬೇರೆ ಲೇಖನದಿಂದ ಕನ್ನಡದ ಸೇವೆ ಯಲ್ಲಿ ನಿಲ್ಲುವಂತೆ ಗುರುಗಳು ಇವರನ್ನು ಅನುಗ್ರಹಿಸಲೆನ್ನುವುದು ಕನ್ನಡದ ಈ ಲೇಖಕನ ಪ್ರಾರ್ಥನೆ.

"ಜೀವನ"
ಜೂನ್ ೧೯೪೫

# ಗೆದ್ದಾಯಿತು : ಮುಂದೆ?

ಈಗ ಆರು ವರ್ಷಗಳ ಹಿಂದೆ ಆರಂಭವಾದ ವಿಶ್ವಸಂಗ್ರಾಮ ಮೂರು ವಾರದ ಹಿಂದೆ ಮುಕ್ತಾಯಕ್ಕೆ ಬಂದಿತು. ಗೆದ್ದ ರಾಷ್ಟ್ರಗಳ ನಾಯಕರು ಲೋಕದ ಭವಿಷ್ಯದ ರೂಪರೇಖೆಯನ್ನು ನಿರ್ಣಯಿಸುವುದರಲ್ಲಿ ತೊಡಗಿದ್ದಾರೆ. ಮೂವತ್ತು ವರ್ಷದ ಅಂತರದಲ್ಲಿ ಲೋಕ ಎರಡು ಯುದ್ಧವನ್ನು ಸಹಿಸಿದ್ದಾಯಿತು. ಹಿಂದಣ ಯುದ್ಧದ ಕೊನೆಯಲ್ಲಿ ನಡೆದ ಶಾಂತಿಹೋಮ ಈಗ ಮುಗಿದ ಯುದ್ಧಕ್ಕೆ ಕೆಂಡವನ್ನು ಒದಗಿಸಿತು; ಇಂದು ನಮ್ಮ ನಾಯಕರು ಸ್ಥಾಪಿಸುವ ಶಾಂತಿ ಎಂತಹದಾಗುತ್ತದೋ! ಹೇಗಿದೆಯೋ ನಮ್ಮ ಲೋಕದ ಅದೃಷ್ಟ ಮುಂದೆ?

ಈ ಸಲದ ಯುದ್ಧ ಸಾವಿರದ ಒಂಬೈನೂರ ಹದಿನೆಂಟನೇ ಕ್ರೀಸ್ತ ವರ್ಷದ ಶಾಂತಿಯಿಂದ ಮೊಳೆಯಿತೆನ್ನುವುದು ಎಲ್ಲರಿಗೂ ತಿಳಿದ ವಿಷಯ. ಆ ಶಾಂತಿಯ ಹಿಂದಿನ ಯುದ್ಧ ಫ್ರೆಂಚ್ ಜರ್ಮನ್ ಜನಾಂಗಗಳ ಪರಸ್ಪರ ಶಂಕೆಯಿಂದ ಹುಟ್ಟಿಕೊಂಡಿತು. ಫ್ರೆಂಚ್ ಜರ್ಮನ್ ಜನಾಂಗಗಳ ಈ ಅಸೂಯೆಗೆ ಸಾವಿರದ ಎಂಟನೂರ ಎಪ್ಪತ್ತರಲ್ಲಿ ಮುಗಿದ ಒಂದು ಯುದ್ಧದಲ್ಲಿ ಫ್ರೆಂಚ್ ಜನರು ಜರ್ಮನರಿಗೆ ಸೋತು ಅವಮಾನ ಪಟ್ಟದ್ದು ಕಾರಣ. ಅದಕ್ಕೆ ಕಾರಣ ಸಾವಿರದ ಎಂಟುನೂರ ಹದಿನೈದರಲ್ಲಿ ಫ್ರೆಂಚರ ನೆಪೋಲಿಯನ್ ಚಕ್ರವರ್ತಿಯನ್ನು ಜರ್ಮನರೂ ಇಂಗ್ಲೀಷರೂ ಸೋಲಿಸಿ ಅಡಗಿಸಿದ್ದು. ಅದಕ್ಕೂ ಇಂತಹದೇ ಒಂದು ಕಾರಣ. ಬಾಳೆಗೆ ಸುಳಿ ಇರುವಂತೆ ದ್ವೇಷಕ್ಕೂ ಸುಳಿಯಿದೆ. ಅದೊಂದು ಕರಿಬಾಳೆ: ಅದರ ಗೆಡ್ಡೆ ಮನುಷ್ಯನ ಸ್ವಭಾವದ ಆಳದಲ್ಲಿ ಅಡಗಿದೆ. ಕಡಿದ ಕಡಿದಂತೆ ಅದರ ಸುಳಿ ಮತ್ತೆ ತಲೆಯೆತ್ತಿ ನಿಲ್ಲುತ್ತದೆ. ಅದು ಮತ್ತೆ ನಿಲ್ಲದೆ ಅಳಿಯಬೇಕಾದರೆ ಈ ದ್ವೇಷದ ಬಾಳೆಯ ಗೆಡ್ಡೆಯನ್ನು ಕಿತ್ತು ಒಗೆಯಬೇಕು. ದ್ವೇಷವನ್ನು ಉಳಿಸಿಕೊಂಡು ಶಾಂತಿಗೆ ರುಜು ಹಾಕಿದರೆ ಆ ರುಜು ಸಿದ್ಧಿಸುವುದಿಲ್ಲ. ಶಾಂತಿಗೆ ಬೇಕಾದದು ಲೆಕ್ಕಣಿಯ ಗುರುತಲ್ಲ; ಮನಸ್ಸಿನ ಸಮಾಧಾನ, ದ್ವೇಷಾಗ್ನಿಯ ನಿರ್ವಾಪ.

ಜರ್ಮನರಲ್ಲಿ ನಿಬೆಲಂಗ್ ಎಂಬ ವಂಶದ ಒಂದು ಇತಿಹಾಸ ಇದೆ. ಅದರಲ್ಲಿ ಒಂದು ಉಂಗುರ ಕದನದ ಪರಂಪರೆಗೆ ಕಾರಣವಾಗುತ್ತದೆ. ಇವರಿಂದ ಅವರು, ಅವರಿಂದ ಮತ್ತೊಬ್ಬರು ಇದನ್ನು ಕಸಿಯುತ್ತಾರೆ. ಅವರವರ ಮಧ್ಯೆ ವೈರ ಮಸಗುತ್ತದೆ. ಆ ಉಂಗುರವನ್ನು ಅದರ ಮೂಲ ಅಧಿಕಾರಿಣಿಯಾದ ಒಬ್ಬ ದೇವಾಂಶಸಂಭೂತೆ ಕಿಚ್ಚಿನಲ್ಲಿಸೆದು ತಾನೂ ಉಸಿರು ನೀಗಿದಾಗಲೇ ಅದರಿಂದ ಮೊದಲಿಟ್ಟ ಅಪಘಾತ ಪರಂಪರೆ ಕೊನೆಯಾಗುವುದು. ಮನುಜಕುಲ ನಡೆಸುತ್ತ ಬಂದಿರುವ ಅಪಘಾತ ಪರಂಪರೆಗೂ ಈ ಉಂಗುರದಂತಹ ಈಷಣತತ್ತ್ವ ಮೂಲವಾಗಿದೆ. ಮನುಜಕುಲದಲ್ಲಿ ಬೆರೆತು ಬಾಳುತ್ತಿರುವ ಅತಿಮಾನುಷ ಅರ್ಧದೈವೀ ಸತ್ವ ಈ ಈಷಣತತ್ತ್ವವನ್ನು ಸುಡಬೇಕು; ತಾನು ಸ್ವಲ್ಪ ವ್ಯಯವಾಗ ಬೇಕು. ಆಗ ಮಾತ್ರ ಲೋಕದಲ್ಲಿ ನಿಜವಾದ ಶಾಂತಿ ಮೂಡಬಹುದು. ಅಂದು ಮಾನವನ ಇತಿಹಾಸದಲ್ಲಿ ಹೊಸ ಒಂದು ಯುಗ ಆರಂಭ ವಾಗುವುದು.

ಜಗತ್ತಿನ ಈವರೆಗಿನ ಇತಿಹಾಸದ ಮುಖ್ಯ ಲಕ್ಷಣ ಈಷಣ ಎನ್ನುವುದರಲ್ಲಿ ಸಂಶಯವಿಲ್ಲ. ಮನುಜಕುಲ ಉದಿಸಿದ ಹೊಸದರಲ್ಲಿ ಅದು ಬಹುಮಟ್ಟಿಗೆ ಇಂದಿನ ವನ್ಯಜೀವಿಗಳಂತೆ ಬಾಳಿತೆಂದು ಶಾಸ್ತ್ರಜ್ಞರು ಊಹಿಸಿದಾರೆ. ಆರಂಭದ ದೆಸೆಯಲ್ಲಿ ಗುಂಪು ಗುಂಪುಗಳು ಒಂದರೊಂದಿಗೆ ಒಂದು ಕಾಡಿನ ಸ್ವಾಮ್ಯಕ್ಕಾಗಿ, ನಾಡಿನ ಸ್ವಾಮ್ಯಕ್ಕಾಗಿ, ಹೊಡೆದಾಡಿರ ಬೇಕು. ಒಂದೊಂದು ಗುಂಪಿನ ಒಳಗೆ ಕೂಡ ಬುದ್ಧಿವಂತರೆನಿಸಿಕೊಂಡ ವರು ತಂಡಗಳು ಪಂಗಡಗಳು ಆಗಿ ಹಿರಿಮೆ ಗರಿಮೆಗಳ ಬಯಕೆಯಿಂದ ವಾದಿಸಿರಬೇಕು, ಕಾದಾಡಿರಬೇಕು. ಮನುಜಕುಲದ ಉದಯವಾಗಿ ಇಂದಿಗೆ ಐದು ಕೋಟಿಯೊ ಐವತ್ತು ಕೋಟಿಯೊ ವರ್ಷ ಕಳೆದಿದೆಯೆಂದು ಶಾಸ್ತ್ರದಿಂದ ಕಾಣುತ್ತದೆ. ಆದರೂ ಮನುಷ್ಯರು ಈಗಲೂ ಅಂದಿನ ಆ ವನ್ಯಜೀವಿ ಮಾನವರ ಪ್ರವೃತ್ತಿಗಳಿಂದಲೇ ಬಾಳನ್ನು ನಡೆಸುತ್ತಿದಾರೆ. ನಾಗರಿಕತೆಯಿಂದ ಮನುಷ್ಯನ ವನ್ಯಜೀವನ ತಿದ್ದಿರುವಂತೆ ಕಾಣುತ್ತದೆ, ನಿಜ. ಆದರೆ ತಿದ್ದುಗೆಯ ಬಹು ಭಾಗ ಕಾಣುವ ಕ್ಷೇತ್ರದ್ದು; ಹೊರ ಗಣ್ಣಿಗೆ ಗೋಚರವಾಗತಕ್ಕದು; ಬಾಹ್ಯವಾದದು. ಹೊರಗೆ ತಿದ್ದಿರುವಂತೆ

ಒಳಗೂ ತಿದ್ದಬೇಕು; ಇನ್ನೂ ತಿದ್ದಿಲ್ಲ. ಐದು ಕೋಟಿ ಐವತ್ತು ಕೋಟಿ ವರ್ಷ ನಡೆಸಿದ ಬಾಳ್ವೆಯಲ್ಲಿ ಮನುಜಕುಲ ಒಳಗನ್ನು ತಿದ್ದಿಕೊಳ್ಳುವುದೂ ಆವಶ್ಯಕವೆಂಬುದನ್ನು ಕಲಿಯುತ್ತ ಬಂದಿದೆ ಅಷ್ಟೆ. ಹೊಸ ಯುಗದಲ್ಲಿ ಒಳಗನ್ನು ತಿದ್ದುವ ಈ ಕಾರ್ಯಕ್ಕೆ ಅದು ದೀಕ್ಷೆಯನ್ನು ವಹಿಸ ಬೇಕಾಗಿದೆ.

ಈ ದೀಕ್ಷೆಯನ್ನು ವಹಿಸುವ ಭಾರ ಎಲ್ಲ ರಾಷ್ಟ್ರಗಳನ್ನೂ ಸೇರಿದೆ. ಈಗ ಯುದ್ಧದಲ್ಲಿ ಸೋತಿರುವವರು ಮಾತ್ರ ತಪ್ಪುಮಾಡಿದರೆಂದು ಈಗ ಗೆದ್ದ ಪಕ್ಷ ತಿಳಿಯುವುದಾದರೆ ಅದು ಶುದ್ಧಾಂಗವಾಗಿ ತಪ್ಪು ತಿಳುವಳಿಕೆ ಯಾಗುತ್ತದೆ. ಜರ್ಮನಿಯ ಹಿಟ್ಲರ್ ತಪ್ಪುಮಾಡಿದ; ಇಟಲಿಯ ಮುಸೊಲೀನಿ, ಜಪಾನಿನ ಟೋಜೋ ಪ್ರಭೃತಿಗಳು, ತಪ್ಪುಮಾಡಿದರು. ಹಿಟ್ಲರ್, ಜರ್ಮನ್ ಜನ ಆರ್ಯಕುಲ ಎಂದ; ಉಳಿದೆಲ್ಲ ಮಾನವ ಕುಲಕ್ಕೆ ಹಿರಿಯಕುಲ ಎಂದ. ಈ ವರಿಷ್ಠಕುಲ ಇತರ ಎಲ್ಲ ಕುಲಗಳನ್ನೂ ಆಳುವುದೇ ನ್ಯಾಯ ಎಂದ. ಲೋಕವನ್ನೆಲ್ಲ ಆಳುವ ಪದವಿಗೆ ಅದನ್ನು ನಡೆಯಿಸುತ್ತೇನೆಂದು ಮುಂದೆ ನಿಂತ. ಸರಿ ತಪ್ಪು ಎಂಬ ಶಂಕೆಗೆ ಎಡೆಗೊಡದೆ ಯುದ್ಧವನ್ನು ಮೊದಲುಮಾಡಿ, ತನ್ನ ಸೌಕರ್ಯವೇ ಮುಖ್ಯ ಸೂತ್ರವೆಂದು ಮುಂದುವರಿದು ಹೆರಜನವನ್ನು ತುಳಿದು, ಮೊದ ಮೊದಲಲ್ಲಿ ಅಸಾಧ್ಯ ಸಾಹಸದಿಂದ ಜಯಶೀಲನಾಗಿ ಕಂಡ. ಅವನ ಆ ಸಾಹಸ ಇಂದು ಮುರಿದು ಬಿದ್ದಿದೆ. ಮುಸೊಲೀನಿ ನಡೆದ ನಡತೆ ಇದರದೇ ಪೂರ್ವಾವತಾರ. ಇವನ ಏಳಿಗೆಯ ಕಾಲದಲ್ಲಿ ಇಟಲಿ ಒಂದು ಚಕ್ರಾಧಿಪತ್ಯವನ್ನು ಸ್ಥಾಪಿಸಿತು. ಚಕ್ರಾಧಿಪತ್ಯಗಳು ಎಂದೂ ಸ್ಥಿರವಲ್ಲ. ಇಟಲಿಯ ಚಕ್ರಾಧಿಪತ್ಯ ದಿನಭಂಗುರವಾಯಿತು; ಕನಸಂತೆ, ನೀರಗುಳ್ಳೆ ಯಂತೆ, ಹುಟ್ಟುತಿದ್ದಂತೆಯೇ ಅಳಿಯಿತು. ಟೋಜೋ ಪ್ರಭೃತಿಗಳು ಒಂದು ಪರಂಪರೆಯ ಕೈ ಗೊಂಬೆಗಳಾಗಿ, ಜಪಾನ್ ರಾಷ್ಟ್ರ ಪಶ್ಚಿಮದ ಒಂದು ದೇಶವೆಂದು ಭ್ರಮಿಸಿದಂತೆ ಅವರ ಕುಟಿಲ ನೀತಿಯನ್ನು ನಟಿಸಿ ತೋರಿಸಿದರು. ಈ ಎಲ್ಲ ನಾಯಕರಲ್ಲೂ ಒಂದು ಗುಣ ಸ್ಪಷ್ಟವಾಗಿ ಕಾಣುತ್ತಿತ್ತು. ತಮ್ಮ ಪಕ್ಷ ಹೊರತು ಬೇರೊಂದು ಪಕ್ಷ ದೇಶದಲ್ಲಿ ಉಸಿರೆತ್ತಕೂಡದು. ಬೇರೊಂದು ಅಭಿಪ್ರಾಯವನ್ನು ಸೂಚಿಸಿದ ಉಸಿರಿಗೆ

ಇವರ ಸನ್ನಿಧಿಯಲ್ಲಿ ಉಳಿಗಾಲವಿಲ್ಲ. ಇವರೆಲ್ಲ ತಮ್ಮ ಜನಕ್ಕೆ ತಾನು ವರಿಷ್ಠ ಜನಾಂಗ, ತಾನು ಅಜೇಯ ಜನಾಂಗ, ಎಂಬ ಮದ್ದು ಗುಣಿಕೆಯನ್ನು ತಿನ್ನಿಸಿದರು. ನೆಲದ ಆಶೆಯ, ಚಕ್ರಾಧಿಪತ್ಯದ ಆಶೆಯ, ಕಿಡಿಯನ್ನು ಅವರ ಮನಗಳಲ್ಲಿ ಮೂಡಿಸಿ ದುರಹಂಕಾರದ ಮಾತುಗಳ ಗಾಳಿಯಿಂದ ಅದನ್ನು ಬೀಸಿ ಹಿರಿದ ಮಾಡಿದರು; ಹೀಗೆ ಆಶೆಯಿಂದ ಬೀಗಿದ ದುರಭಿಮಾನದ ಕಾವಿನಲ್ಲಿ ದೇಶದ ತರುಣರು ಮನ ಮರೆತು ಜೀವ ತೆರುವಂತೆ ಉಬ್ಬಿಸಿದರು. ಉಳಿದ ಯಾವ ವಿಷಯಕ್ಕಿಂತಲೂ ತಮ್ಮ ರಾಷ್ಟ್ರ ಹೆಚ್ಚು, ತಮ್ಮ ರಾಷ್ಟ್ರ ಎನ್ನುವುದು ತಮ್ಮ ಅಭಿಮತದ ಸಮೂಹ, ಎನ್ನುವುದೇ ಈ ನಾಯಕರ ಮನೋಧರ್ಮ. ಕೆಲವು ಕಾಲ ವ್ಯೆ ಮರೆಯಿಸಿ ಜಯಕ್ಕೆ ಒಯ್ದು ಇವರ ಅಭಿಮಾನದ ಹುಚ್ಚು ಹೊಳೆ ಇಂದು ತಗ್ಗಿಹೋಗಿದೆ. ಅದು ಹರಿದ ಶಯ್ಯೆ ಈಗ ಬರಿ ಮರಳಾಗಿ ಕಾಣುತ್ತಿದೆ. "Pride goeth forth on horseback grand and gay, But cometh back on foot and begs its way" ಎಂದು ಒಬ್ಬ ಕವಿ ಹೇಳಿದ ಮಾತು ಈ ಮೂರೂ ರಾಷ್ಟ್ರಗಳಿಗೆ ಅನ್ವಯಿಸುತ್ತದೆ. ಮೂರೂ ತಪ್ಪು ಮಾಡಿದವು. ಮೂರೂ ಸೋತು ಕಷ್ಟಕ್ಕೆ ಸಿಕ್ಕಿ ಇಂದು ದಯಾಳು ಮಾನವ ಹೃದಯದ ಕನಿಕರಕ್ಕೆ ವಿಷಯವಾಗಿವೆ.

ಸೋತ ರಾಷ್ಟ್ರಗಳು ಮಾಡಿದ ಈ ತಪ್ಪುಗಳು ಗೆದ್ದ ರಾಷ್ಟ್ರಗಳನ್ನು ಬಿಟ್ಟಿಲ್ಲ. ಆಂಗ್ಲನಾಯಕ ಚರ್ಚಿಲ್ ಆಂಗ್ಲಜನ ಶ್ರೇಷ್ಠರೆಂಬ ಧ್ವನಿಯ ಮಾತನ್ನು ಆಡುತ್ತಲೇ ಇದ್ದಿದಾನೆ. ತಮ್ಮ ಜನ, ತಮ್ಮ ಬುಡಕಟ್ಟಿನ ಅಮೇರಿಕದ ಜನ, ಬ್ರಹ್ಮನ ಸೃಷ್ಟಿಯಲ್ಲಿ ವಿಶಿಷ್ಟ ಸೃಷ್ಟಿಯೆಂದು ಇವನ ಪಂಗಡದ ಭ್ರಾಂತ ಬುದ್ಧಿ. ಜರ್ಮನಿ, ಇಟಲಿ, ಜಪಾನ್ ದೇಶಗಳು ಹೆಚ್ಚಿನ ನೆಲವನ್ನು, ಚಕ್ರಾಧಿಪತ್ಯವನ್ನು ಬಯಸಿದವು. ಮೊದಲೇ ಚಕ್ರಾಧಿಪತ್ಯ ಇದ್ದದರಿಂದ ಅದನ್ನು ಇಂಗ್ಲೆಂಡ್ ಹೊಸತಾಗಿ ಬಯಸಲಿಲ್ಲ. ಅಮೇರಿಕ ಚಕ್ರಾಧಿಪತ್ಯವನ್ನಲ್ಲದಿದ್ದರೂ ಸ್ವಲ್ಪ ನೆಲದ ಆಧಿಪತ್ಯವನ್ನು ವಹಿಸಿಕೊಂಡಿತ್ತು. ನನಗೆ ಇದು ಬೇಕಿಲ್ಲವೆಂದು ಬಾಯಲ್ಲಿ ಹೇಳುತ್ತ ಮುಂದೆ ಎಂದೋ ಬಿಡುವೆನೆನ್ನುತ್ತಿತ್ತು. ಮುಂದಿನ ಆ ಅಂದು ಬರುವ ಮುನ್ನ ಈ ಯುದ್ಧ ಆರಂಭವಾಯಿತು. ಫಿಲಿಪೈನ್ ದ್ವೀಪಗಳು ಅದರ

ಕೈ ತಪ್ಪಿ ಹೋಗಿದ್ದು ಮತ್ತೆ ಈಗ ಅದರ ಕೈಗೆ ಬಂದಿವೆ. ಅವು ಬಿಡುಗಡೆ ಹೊಂದುವುದನ್ನು ನಾವು ಮುಂದೆ ನೋಡಬೇಕಾಗಿದೆ. ರಷ್ಯಾ ಜನತೆ ಚಕ್ರಾಧಿಪತ್ಯದ ಯೋಚನೆ ಮಾಡಬೇಕಾಗಿಲ್ಲ. ಅದು ಒಳಗೊಂಡಿರುವಷ್ಟು ನೆಲವನ್ನು ರೂಢಿಸಿದರೆಯೋ ಎಷ್ಟೋ ಆಯಿತು. ಆದರೂ ಅದು ಯುದ್ಧದಲ್ಲಿ ಹೊಸ ನೆಲ ಅಷ್ಟನ್ನು ಸ್ವಾಧೀನಮಾಡಿಕೊಂಡಿದೆ. ಇದು ಹೊರತಾಗಿ ಈ ಮೂರು ರಾಷ್ಟ್ರಗಳಲ್ಲಿಯೂ ಸ್ವಾರ್ಥ, ಸ್ವಾಭಿಮಾನ, ಒಂದಲ್ಲ ಒಂದು ರೀತಿಯಲ್ಲಿ ತಾಂಡವ ಮಾಡುತ್ತಿವೆ. ಆಂಗ್ಲರಲ್ಲಿ ಪುಣ್ಯವಂತರ ಪ್ರಾಬಲ್ಯ ಎಂದಿನಂತೆ ನೆಲೆಯಾಗಿದೆ. ಅಮೇರಿಕಾದಲ್ಲಿ ಹಣವೊಂದಿಗನ ಪ್ರಭಾವದೊಂದಿಗೆ ಕಾಸಿನ ಮೂಲಕ ಅನ್ಯಾಯವನ್ನು ದಕ್ಕಿಸಿಕೊಳ್ಳುವ ಸಂಪ್ರದಾಯ ಒಂದು ಬೆಳೆದುಕೊಂಡಿದೆ; ಅಲ್ಲದೆ ಇಲ್ಲಿ ನೀಗ್ರೋ ಜನರಿಗೆ ಇನ್ನೂ ಸಮಾನ ಜೀವನವಿಲ್ಲ. ಈ ಎರಡು ರಾಷ್ಟ್ರಗಳಲ್ಲಿ ಹೊರಮಟ್ಟಿಗಾದರೂ ಅಭಿಪ್ರಾಯ ಸ್ವಾತಂತ್ರ್ಯವುಂಟು; ರಷ್ಯಾದಲ್ಲಿ ಇದೇ ಇಲ್ಲ. ಆ ರಾಷ್ಟ್ರಗಳಲ್ಲಿ ಪುಣ್ಯವಂತಿಕೆ ಮೇಲುಗೈಯಾಗಿದೆ. ರಷ್ಯಾದಲ್ಲಿ ಹೆಸರಷ್ಟಕ್ಕೆ ಮೇಲ್ಗೈ; ಜನತೆಯದು ನಿಜಕ್ಕೆ ಒಂದು ದೊಡ್ಡ ಗುಂಪಿನದು. ಆದರೆ ಉಳಿದಲ್ಲಿಗಿಂತ ಹೆಚ್ಚಾಗಿ ರಷ್ಯಾದಲ್ಲಿ ಜನತೆಯ ಬಹು ಭಾಗ ಅಜ್ಞಾನದಲ್ಲಿದೆ. ನಾಯಕರಲ್ಲಿ ಒಂದೇ ಪಂಗಡ; ಬೇರೆ ಪಂಗಡಕ್ಕೆ ಎಡೆ ಇಲ್ಲ. ಜರ್ಮನಿ ಇಟಲಿಯಲ್ಲಿ ಹಿಟ್ಲರ್ ಮುಸೊಲೀನಿಯ ಗುಂಪೇ ಗುಂಪು ಹೇಗೋ ಹಾಗೆ ರಷ್ಯಾದಲ್ಲಿ ಸ್ಟಾಲಿನ್ ಮಹಾಶಯನ ಗುಂಪೇ ಗುಂಪು. ಯುದ್ಧ ಮಾಡಿದ ರಾಷ್ಟ್ರಗಳಲ್ಲಿ ಒಂದಾದ ಚೀನಾ ಗೆದ್ದ ರಾಷ್ಟ್ರಗಳಲ್ಲಿ ಒಂದು ಎಂದು ಇನ್ನೂ ಕಂಡಿಲ್ಲ. ಆದರೆ ಅಲ್ಲಿ ಕಮ್ಯುನಿಸ್ಟ ಜನಕ್ಕೆ ಉಳಿವಿಲ್ಲ ಎಂದು ಪ್ರತೀತಿ ಹುಟ್ಟಿದೆ. ಹೀಗಾಗಿ ಈ ಗೆದ್ದ ರಾಷ್ಟ್ರಗಳೂ ಆ ಸೋತ ರಾಷ್ಟ್ರಗಳಂತೆ ದುರಭಿಮಾನ, ಐಶ್ವರ್ಯಲಾಲಸೆ, ಪರಮತ ಅಸಹಿಷ್ಣುತೆಗಳ ಒಂದಲ್ಲ ಒಂದು ಕಂದನೆಯ ಲೇಪದಿಂದ ಕಪ್ಪಾಗಿವೆ.

ಆದರೂ ಈ ಯುದ್ಧದಲ್ಲಿ ಈ ರಾಷ್ಟ್ರಗಳು ಗೆದ್ದದ್ದು ಲೋಕದ ಪುಣ್ಯ. ಮಹಾಭಾರತದ ಯುದ್ಧದಲ್ಲಿ ಗೆದ್ದ ಪಕ್ಷ ತೀರ ನಿರ್ದುಷ್ಟವಾಗಿರಲಿಲ್ಲ. ಅದರ ಪ್ರತಿ ಪಕ್ಷ ತೀರ ಅನ್ಯಾಯವನ್ನೇ ಆರಾಧಿಸಿದ್ದರಿಂದ

ಗೆದ್ದ ಪಕ್ಷದ ತಪ್ಪು ಸಣ್ಣದಾಯಿತು. ಇಷ್ಟೇ ಅಲ್ಲ. ಈ ಪಕ್ಷದ ಒಟ್ಟು ಉದ್ದೇಶ ಒಳ್ಳೆಯದಾದ್ದರಿಂದ ಅದು ಯುದ್ಧ ನಡೆಸುವುದರಲ್ಲಿ ಮಾಡಿದ ಒಂದೆರಡು ತಪ್ಪನ್ನು ಲೋಕ ಮನ್ನಿಸಲು ಒಪ್ಪುತ್ತದೆ. ಇಂದು ಯುದ್ಧದಲ್ಲಿ ಗೆದ್ದಿರುವ ರಾಷ್ಟ್ರಗಳ ವಿಷಯವೂ ಅಷ್ಟೇ. ಅಭಿಪ್ರಾಯ ಭೇದದ ಮಂದಿಯನ್ನು ಹಿಟ್ಲರ್, ಮುಸೊಲೀನಿ ಉಳಿಯಗೊಡಲಿಲ್ಲ. ಆಂಗ್ಲರೂ ಅಮೇರಿಕದವರೂ ಅಂಥವರನ್ನು ಕೊಲ್ಲುವುದಿಲ್ಲ; ಸೆರೆಯಲ್ಲಿ ಡುತ್ತಾರೆ. ಅಭಿಪ್ರಾಯ ಭೇದದ ಮಂದಿಗೆ ರಷ್ಯಾದಲ್ಲಿಯೂ ಉಳಿಗಾಲ ಇಲ್ಲ. ಆದರೂ ರಷ್ಯದ ಇಂದಿನ ಆಡಳಿತ ಬಹುಮಂದಿ ಕೆಲಮಂದಿಯನ್ನು ಅಡಗಿಸಿಟ್ಟಿರುವ ಆಡಳಿತವಾಗಿದೆ: ಕೆಲಮಂದಿ ಬಹುಮಂದಿಯನ್ನು ಅಡಗಿಸಿರತಕ್ಕದ್ದಲ್ಲ. ತಮ್ಮ ತಮ್ಮ ಒಳಗೆ ಈ ಒಂದು ತಿಳುವಳಿಕೆಯಿಂದ ಬಾಳುವುದಲ್ಲದೆ ಈ ರಾಷ್ಟ್ರಗಳು ಬೇರೆ ಜನರನ್ನು ಕುರಿತು ಹಿಟ್ಲರ್, ಮುಸೊಲೀನಿ, ಟೋಜೋ ಪ್ರಭೃತಿಗಳ ಧೃಷ್ಟತನದಿಂದ ಮಾತನಾಡು ವುದಿಲ್ಲ. ಇವುಗಳ ನಡತೆ ಇನ್ನೂ ಪರಿಷ್ಕಾರವಾಗಬೇಕು; ಮಾತಾದರೂ ತಕ್ಕಷ್ಟು ಪರಿಷ್ಕಾರವಾಗಿಲ್ಲ. ಆದರೂ ಇವರಲ್ಲಿ ತಮ್ಮ ನಡೆನುಡಿ ಪರಿಷ್ಕಾರವಾಗಬೇಕಾಗಿದೆಯೆಂಬ ಒಂದು ತಿಳುವಳಿಕೆ ತೋರಿಬರುತ್ತಿದೆ. ಇಷ್ಟರಿಂದ ಲೋಕ, ಈ ರಾಷ್ಟ್ರಗಳು ಮುಂದಕ್ಕೆ ತಮ್ಮ ನಡತೆಯನ್ನು ತಿದ್ದಿಕೊಂಡು ಒಟ್ಟಿನಲ್ಲಿ ಹಿತವನ್ನು ಸಾಧಿಸಿಯಾವು ಎಂದು ಆಶಿಸಬಹು ದಾಗಿದೆ.

ಈ ಆಶೆ ಈಡೇರುವುದು ಅಥವಾ ಬರಿದಾಗುವುದು ಈ ರಾಷ್ಟ್ರಗಳು ಈಗ ಆರಂಭಿಸುವ ಹೊಸ ವ್ಯವಸ್ಥೆಯನ್ನು ಅವಲಂಬಿಸಿದೆ. ಸರಿಯಾದ ನಡತೆ ಎಂದಿದ್ದರೂ ಕಷ್ಟ; ಗೆದ್ದ ಹೊತ್ತಿನಲ್ಲಿ ಸತ್ಯವಂತ ವ್ಯಕ್ತಿಗಾದರೂ ಕಷ್ಟವೇ. ಇನ್ನು ಲಕ್ಷಾಂತರ ಮನಸ್ಸುಗಳ ಮೇಳವಾದ ರಾಷ್ಟ್ರಗಳು ಗೆದ್ದ ಹೊತ್ತಿನಲ್ಲಿ ಸರಿಯಾಗಿ ನಡೆಯುವುದು ಕಷ್ಟ ಎನ್ನುವುದರಲ್ಲಿ ಸಂಶಯವೇನು? ಇನ್ನು ಇವುಗಳ ಜೊತೆಗೆ ಯುದ್ಧದ ಮಧ್ಯೆ ಸೋತಿದ್ದು ಈಗ ಗೆದ್ದ ಗುಂಪಿನಲ್ಲಿರುವ ರಾಷ್ಟ್ರಗಳು. ಇಂದು ಜರ್ಮನಿ ಸೋತಿದೆ; ಮೂರು ವರ್ಷದ ಹಿಂದೆ ಬೆಲ್ಜಿಯಂ ಸೋತಿತು. ಕಾಂಗೋ ಭೂಮಿಯಲ್ಲಿ ಆಫ್ರಿಕದ ಕಾಡ ಜನರನ್ನು ಹೇಳಲಾಗದ ಕೋಟಲೆಗೆ ಗುರಿಮಾಡಿ ಧನ

ಗಳಿಸಿದ ರಾಜ್ಯ ಬೆಲ್ಜಿಯಂ. ಇಂದು ಏನು ಮಾಡಿದರೆ ಈ ರಾಜ್ಯ ಆ ಪಾತಕವನ್ನು ಕಳೆದುಕೊಳ್ಳಬಹುದು? ಫ್ರಾನ್ಸ್ ದೇಶ ಎರಡು ವರ್ಷದ ಹಿಂದೆ ಸೋತಿತು; ಸಾವಿರದ ಒಂಬೈನೂರ ಹದಿನೆಂಟರಲ್ಲಿ ಗೆದ್ದು ತಲೆಗೆ ತುಂಬಿಕೊಂಡ ಗಾಳಿಯನ್ನು ಈ ಸಲ ನೆಲಕ್ಕೆ ಬಿದ್ದು ಕಳೆದುಕೊಂಡಂತೆ ಕಂಡಿತು. ಈ ದೇಶ ಪಾಶ್ಚಾತ್ಯ ಸಂಸ್ಕೃತಿಯ ಬೆಳವೊಲ; ಆದರೆ ಅದರ ರಾಷ್ಟ್ರೀಯ ಆಚರಣೆ ಉಳಿದ ಪಾಶ್ಚಾತ್ಯ ಆಚರಣೆಯಂತೆ ಗರ್ಹ್ಯವಾದದು. ಆಂಗ್ಲರೂ ಅಮೇರಿಕನರೂ ಗೆದ್ದು ಫ್ರಾನ್ಸ್ ಸ್ವಲ್ಪ ಉಸಿರಾಡುವುದು ಸಾಧ್ಯವಾದ ಒಡನೆ ಅದರ ನಾಯಕರು ಪೂರ್ವದೇಶ ಒಂದರಲ್ಲಿ ಎಂದಿನ ಸ್ವಾರ್ಥವನ್ನೂ ದುರಭಿಮಾನವನ್ನೂ ತೋರಿದರು. ಪಶ್ಚಿಮ ದೇಶದ ಒಂದು ಜನ ಅಂಬಲಿ ಕುಡಿಯಬಹುದು, ಆದರೂ ಅದಕ್ಕೆ ಪೂರ್ವದೇಶ ಒಂದು ಮೀಸೆ ತಿಕ್ಕಬೇಕು. ಈ ಜನರೆಲ್ಲ ಗೆದ್ದ ಪಂಗಡ. ಬಿದ್ದರೂ ಮೀಸೆ ಮಣ್ಣಾಗದ ಬಿಳಿಯ ಜನ. ಇವರೆಲ್ಲ ವಿವೇಕದಿಂದ ನಡೆದು ಕೊಳ್ಳಬೇಕಾಗಿದೆ. ಯುದ್ಧ ನಡೆಯುತಿದ್ದಂದು ನಾನೊಲ್ಲೆ ತಾನೊಲ್ಲೆ ಎಂದು ಶಾಂತಿ ಪ್ರೇಮವನ್ನು ಪ್ರಕಟಿಸಿದ್ದ ಅನೇಕ ರಾಷ್ಟ್ರಗಳು, ಯುದ್ಧ ಮುಗಿಯುತ್ತ ಬಂದುದನ್ನು ಕಂಡು ಶಾಂತಿ ಸಂಧಾನದಲ್ಲಿ ಭಾಗವಹಿಸಲು ಅಧಿಕಾರವನ್ನು ಗಳಿಸುವಷ್ಟಕ್ಕಾಗಿ, ತಾವೂ ಜರ್ಮನಿ, ಇಟಲಿ, ಜಪಾನ್ ದೇಶಗಳ ಮೇಲೆ ಯುದ್ಧವನ್ನು ಸಾರಿದವು. ಯುದ್ಧಮಾಡಿ ಗೆದ್ದ ನಾಲ್ಕು ಜನಾಂಗಗಳೊಂದಿಗೆ ಯುದ್ಧಮಾಡದೆ ಗೆದ್ದ ಈ ಜನಾಂಗಗಳೂ ಮುಂದಿನ ವ್ಯವಸ್ಥೆಯನ್ನು ನಿರ್ಧರಿಸಲು ನಿಂತಿವೆ. ಆ ಭೀಮಾರ್ಜುನರೊಂದಿಗೆ ಈ ವಿರಾಟ ಪುತ್ರರ ತಂಡ ಹೇಗೆ ನಡೆದುಕೊಳ್ಳುವುದೋ ಹೇಳುವಂತಿಲ್ಲ. ಗೆದ್ದವರ frantic boast and foolish word (ಕೊಬ್ಬಿದ ಕೊರಟಿ ಹುಚ್ಚು ಮಾತು), ಅವರಿಗೆ ಸಮನಲ್ಲದೆಯೇ ಸಮನಾಗಿರಲು ಯತ್ನಿಸುವ ಈ ಜನಾಂಗಗಳ ದುರಾಶೆ, ನೀಚವರ್ತನ, ಸೋತವರ ನೈರಾಶ್ಯ, ನಿಸ್ಸಹಾಯ: ಈ ಗೊಂದಲದಿಂದ ಹೊಸ ಯುಗದ ವ್ಯವಸ್ಥೆ ರೂಪು ಗೊಂಡು ಬರಬೇಕಾಗಿದೆ.

ಸೋತ ರಾಷ್ಟ್ರವನ್ನು ಅತಿಯಾಗಿ ಅವಮಾನಪಡಿಸಿದ್ದು, ಸೋತ ಒಬ್ಬ ವ್ಯಕ್ತಿ ಎಂಬಂತೆ ಹಗೆ ತೀರಿಸುವ ದೃಷ್ಟಿಯಿಂದ ನಡೆದುಕೊಂಡದ್ದು

ಇಂಗ್ಲೆಂಡ್ ಫ್ರಾನ್ಸ್ ದೇಶಗಳು ಸಾವಿರದ ಒಂಬೈನೂರ ಹದಿನೆಂಟರಲ್ಲಿ ಮಾಡಿದ ತಪ್ಪು. ಈ ಸಲವೂ ಹೀಗೆ ಮಾಡಿದರೆ ಕೇಡಿಗೆ ಸಂಚಕಾರ ಕೊಟ್ಟಂತೆಯೇ ಸರಿ. ಹಿಟ್ಲರ್ ತಪ್ಪು ಮಾಡಿದ. ಮುಸೊಲೀನಿ ತಪ್ಪು ಮಾಡಿದ. ಟೋಜೋ ಪ್ರಭೃತಿಗಳು ತಪ್ಪುಮಾಡಿದರು. ಇದು ನಿಜ. ಆದರೆ ಜರ್ಮನಿಯ, ಇಟಲಿಯ, ಜಪಾನಿನ ಜನತೆ ಏನುಮಾಡಿತು? ಮನೆಯ ಯಜಮಾನ ಕಳ್ಳತನ ಮಾಡಿ ಸಂಸಾರವನ್ನು ಸಾಕಿದನೆಂಬ ಕಾರಣದಿಂದ ಮಕ್ಕಳನ್ನು ಗಲ್ಲಿಗೇರಿಸುವುದೇ? ಹಿಟ್ಲರ್ ಮಾಡಿದ ತಪ್ಪಿಗೆ ಅವನ ಜನರೆಲ್ಲ ಒಪ್ಪಿದರೇನು? ಒಪ್ಪದೆ ಎಷ್ಟೋ ಮಂದಿ ಇದ್ದಿರಬಹುದು. ಅವನ ತಪ್ಪಿಗೆ ಅವರಿಗೇತಕ್ಕೆ ಶಿಕ್ಷೆ? ಅವನು ತಪ್ಪುಮಾಡಿದಾಗ ಇವರು ಅಸಮ್ಮತಿಯನ್ನು ಸೂಚಿಸಬೇಕಾಗಿತ್ತೆ? ಸೂಚಿಸಿ ಆಗುತ್ತಿದ್ದದೇನು? ಗೆದ್ದ ಇವರು ಹಿಡಿದ ದಾರಿಯನ್ನು ಇವರ ಜನರಲ್ಲಿ ಕೆಲವರು ತಪ್ಪು ಎಂದರಲ್ಲ ಆಗ ಇವರು ಏನುಮಾಡಿದರು? ಅವರ ಮಾತನ್ನು ಒಪ್ಪಿದರೇ? ಇನ್ನು ಈ ಎಲ್ಲ ಜನಾಂಗಗಳಲ್ಲಿಯೂ ಒಪ್ಪುವುದಕ್ಕೂ ಯೋಗ್ಯತೆಯಿಲ್ಲದ ಎಳೆಯ ತಲೆಯೆಷ್ಟು? ನಾಯಕರ ತಪ್ಪಿಗೆ ವಿಧಿಸುವ ದಂಡನೆಯಲ್ಲಿ ಇವು ಕೂಡ ಪೆಟ್ಟು ತಿನ್ನಬೇಕೇ? ರಾಷ್ಟ್ರ ರಾಷ್ಟ್ರ ಎಂಬ ಭಾವ ಅತಿಯಾಗಿ ಬೆಳೆದು ಯೂರೋಪ್ ಖಂಡ ದೊಡ್ಡ ರಣರಂಗವಾಗಿದೆ. ಇನ್ನಾದರೂ ಈ ಖಂಡ ಈ ವ್ಯಾಧಿಯಿಂದ ಬಿಡಿಸಿಕೊಳ್ಳಬೇಕು. ಹಿಂದೆ ಆದ ಮಾತು ಹಾಗಿರಲಿ, ಮುಂದೆ ಎಲ್ಲ ಸ್ನೇಹದಿಂದ ಬಾಳೋಣ, ಎಂಬ ತತ್ವವನ್ನು ತಳಹದಿಯಾಗಿ ಮಾಡಿಕೊಂಡು ಶಾಂತಿಯ ವಿವರಗಳನ್ನು ನಿರ್ಣಯಿಸ ಬೇಕು.

ಬಿಳಿಯ ಜನ ಮಾತ್ರ ಲೋಕವನ್ನಾಳಬೇಕು, ಉಳಿದೆಲ್ಲ ಜನ ಅವರಿಗೆ ತಗ್ಗಿ ನಡೆಯಬೇಕು, ಎನ್ನುವುದು ಈವರೆಗಿನ ಇತಿಹಾಸದ ಮತ್ತೊಂದು ತಪ್ಪು. ಪಾಶ್ಚಾತ್ಯರ ಈ ಭೂತಕ್ಕೆ ಪ್ರತಿಯಾಗಿಯೇ ಜಪಾನಿನ ಬೇತಾಳ ಎದ್ದು ನಿಂತದ್ದು. ವ್ಯಾಪಾರದ ಹೆಸರಲ್ಲಿ, ತಿದ್ದಿ ಬೆಳಸುವ ಹೆಸರಲ್ಲಿ, ನಾಗರಿಕವಾಗಿ ಮಾಡುವೆವೆಂಬ ಹೆಸರಲ್ಲಿ, ಬಲ್ಲಿದ ಮಂದಿ ಬಲ್ಲದ ಮಂದಿಯನ್ನು ತನ್ನ ಮುಂಗಾಲ ಮಧ್ಯೆ ಸಿಕ್ಕಿಸಿಕೊಂಡು ಕೀಚುಗುಟ್ಟಿಸುವ ಕಾಲ ಇಂದು ಮುಗಿಯಿತೇ ಒಳಿತು. ಅದಿಲ್ಲದೆ

ಈಗ ಹಿಂದುಳಿದಿರುವ ಕರಿಯ, ಕಂದು, ಹಳದಿ, ಜನಾಂಗಗಳು ಎಂದಿಗೂ ಹಿಂದಾಗಿ ಉಳಿದು ಬಿಳಿಯ ಜನರ ವೈಭವವನ್ನು ಬೆಳಸುತ್ತಿರಬೇಕೆಂದು ಈ ಜನ ಬಯಸಿದರೆ ಕೇಡು ಕೈಬಿಟ್ಟಿದ್ದಲ್ಲ. ಇದುವರೆಗಿನ ಏರ್ಪಾಡಿನ ಹಿಂದೆ ಒಂದು ದುಷ್ಟ ಮನೋಧರ್ಮವಿತ್ತು. ಹಲಜನಾಂಗಗಳು ದುಡಿದು ಸಾಮಾನ್ಯ ಬಾಳುವೆಯನ್ನು ಬಾಳುತ್ತಿದ್ದು ಕೆಲ ಜನಾಂಗಗಳು ಮಾತ್ರ ಆ ದುಡಿಮೆಯ ಫಲದಿಂದ ಭೋಗಿಸಬೇಕು. "ಇಂಡಸ್ಟ್ರಿಯಲೈಸೇಷನ್" ಮತ್ತು "ಮಾರ್ಕೆಟ್ಸ್" ಎಂದರೆ ಒಂದು ಜನ ತನ್ನ ಶಕ್ತಿಗೆ ಮಾರಿ ಪದಾರ್ಥಗಳನ್ನು ನಿರ್ಮಿಸುವುದು, ಮತ್ತೊಂದು ಜನ ಈ ಪದಾರ್ಥಗಳನ್ನು ಕೊಳ್ಳುವುದಕ್ಕೆ ತನ್ನ ಗಳಿಕೆಯನ್ನೆಲ್ಲಾ ತೆತ್ತು ಬರಿಗೈಯಾಗುವುದು: ಇದು ಈವರಿಗೆ ಬೆಳೆದ ವಿಷವೃಕ್ಷ. ಇದನ್ನು ಕಡಿದ ಹೊರತು ಲೋಕ ಉಳಿಯುವಂತಿಲ್ಲ. ಎಲ್ಲ ಜನವೂ ಒಂದು ಮಟ್ಟದ ಜೀವನವನ್ನು ಮುಟ್ಟಬೇಕು. ಯಾರೋ ದುಡಿದು ಬೇರೆ ಯಾರೋ ಉಣ್ಣುವ ಇಂದಿನ ಲೋಕವ್ಯವಸ್ಥೆ ಕೊನೆಗಾಣಬೇಕು. ಲೋಕದ ಮಕ್ಕಳೆಲ್ಲ ಒಬ್ಬ ತಾಯಮಕ್ಕಳು. ಕೆಲವರು ಕದ್ರುವಿನ ಕೆಲವರು ವಿನತೆಯ ಮಕ್ಕಳು ಎಂಬಂತಹ ಭೇದಬುದ್ಧಿ, ಸಾಮ್ರಾಜ್ಯ ಮಾರ್ಗ ಕೊನೆಗಾಣಬೇಕು.

ರಾಷ್ಟ್ರ ರಾಷ್ಟ್ರ ಕುಲ ಕುಲಗಳ ಮಧ್ಯೆ ಅಲ್ಲದೆ ಒಂದೊಂದು ರಾಷ್ಟ್ರದಲ್ಲೂ ಹಲವರು ದುಡಿದು ಕೆಲವರು ಸುಖಿಸುವ ಸಮಾಜವ್ಯವಸ್ಥೆ ಇನ್ನು ನಡೆಯುವುದಿಲ್ಲ. ಬುದ್ಧಿವಂತನಾದವನು ಸುಖವಾಗಿರಬಹುದು, ಬುದ್ಧಿವಂತನಲ್ಲದವನು ಸ್ವಲ್ಪ ಕಷ್ಟಪಡಬೇಕು, ಎನ್ನುವುದೂ ಇನ್ನು ಮೇಲೆ ಒಪ್ಪಿಗೆಯಾಗದು. ಪುಣ್ಯವಂತರಲ್ಲಿ ಹುಟ್ಟಿದನೆಂಬ ಕಾರಣದಿಂದ ಯಾವನಾದರೂ ಸುಮ್ಮನೆ ಕುಳಿತು ಸುಖಪಡುತ್ತಿರಬಹುದು ಎಂಬ ಮಾತಂತೂ ಜನಜೀವನದಿಂದ ತೀರ ಅಳಿಯಬೇಕು. ಇಂಗ್ಲೆಂಡಿನಲ್ಲಿ ಅಮೇರಿಕಾದಲ್ಲಿ ಕಾಣದೆ ರಷ್ಯಾದಲ್ಲಿ ಕಾಣುತ್ತಿರುವ ಶುಭಲಕ್ಷಣ ಇದು. ಜನವೆಲ್ಲ ದುಡಿಯಬೇಕು, ಗಳಿಸಬೇಕು; ಗಳಿಕೆ ಎಲ್ಲ ಜನಕ್ಕೆ ಪುದುವಾದ ಆಸ್ತಿ ಆಗಬೇಕು; ಎಲ್ಲರೂ ತಮಗೆ ಆವಶ್ಯಕವಾದಷ್ಟನ್ನು ತೆಗೆದುಕೊಳ್ಳಬಹುದು; ಯಾರೂ ಅದಕ್ಕಿಂತ ಹೆಚ್ಚನ್ನು ತೆಗೆದುಕೊಂಡು ಕೂಡಿಡ

ಬಾರದು. ಯಾವನೂ ಹೊಟ್ಟೆಗಿಲ್ಲದೆ ಸಾಯಬಾರದು; ಯಾವನೂ ಹೊಟ್ಟೆ ಬಿರಿಯ ಗಿಡಿದುಕೊಳ್ಳಬಾರದು. ನಾಡಲ್ಲಿ ಹುಟ್ಟಿದ ಜೀವ ನಾಡಿನ ಆಸ್ತಿ; ಅದನ್ನು ಸರಿಯಾಗಿ ಬೆಳೆಸುವುದು ನಾಡಿನ ಕಾರ್ಯ. ನಾಡಿನ ನಾಯಕರು ಹೀಗೆ ಒಟ್ಟು ಜನಾಂಗದ ಹಿತವನ್ನು ಗುರಿಯಾಗಿ ಇರಿಸಿ ಕೊಂಡು ದುಡಿಯಬೇಕು. ಆಡಳಿತದ ಗುರಿ ಇದಾಗಿರಬೇಕು; ಎಲ್ಲ ವ್ಯವಸ್ಥೆಯೂ ಇದಕ್ಕೆ ಸಾಧಕವಾಗಬೇಕು. ರಷ್ಯಾದೇಶದ ಕ್ರಾಂತಿಯ ಮೂಲ ಸೂತ್ರ ಇವು. ಅಲ್ಲಿ ಇಲ್ಲಿ ಎಳೆ ತಪ್ಪಿದರೂ ಆ ದೇಶ ಒಟ್ಟಿನಲ್ಲಿ ಈ ಗುರಿಯನ್ನು ಬಿಡದೆ ಮೂವತ್ತು ವರುಷ ನಡೆದು ಇಂದು ಬೇರೆ ಯಾವ ರಾಷ್ಟ್ರಕ್ಕೂ ಇಲ್ಲದ ಒಂದು ಸ್ಥಾನವನ್ನು ಪಡೆದಿದೆ. ಈ ಮನೋಧರ್ಮ ಇತರ ರಾಷ್ಟ್ರಗಳಲ್ಲಿ ಬಳಕೆಗೆ ಬರಬೇಕು.

ಜೊತೆಗೆ ಭಿನ್ನಾಭಿಪ್ರಾಯಗಳನ್ನು ಕುರಿತ ಸಹನೆ ಒಂದು ಸಂಪ್ರದಾಯವಾಗುವುದು ತೀರಾ ಆವಶ್ಯಕ. 'ಹತ್ತು ಜನ' ಎನ್ನುವುದು ನಮ್ಮಲ್ಲೂ ಹಳೆಯ ಮಾತು. 'ಡೆಮಾಕ್ರಸಿ' ಎಂದರೆ ಜನ ತಮ್ಮ ಕೆಲಸವನ್ನು ತಾವೇ ನಡೆಸಿಕೊಳ್ಳುವುದು. ಹತ್ತು ಜನ ಸೇರಿ ಮಾಡುವ ಮಂತ್ರಾಲೋಚನೆ ಹತ್ತು ಜನದ ಒಳ್ಳೆಯದನ್ನು ಕುರಿತೀತು. ಗುಂಪು ಒಪ್ಪಿದ ಹತ್ತು ಜನದ ಮಾತು ಗುಂಪಿನ ಮಾತಾಗುತ್ತದೆ. ಗುಂಪು ಒಪ್ಪಿ ಹತ್ತು ಜನದ ಮಾತು ನಡೆಯುವುದು ಗುಂಪಿನ ಶ್ರೇಯಸ್ಸಿನ ಮೂಲ. ಹತ್ತು ಜನದಲ್ಲಿ ಕೆಲವರಿಗೆ ಒಂದು ದಾರಿ ಸರಿಯೆಂದು ತೋರಿ ಮತ್ತೆ ಕೆಲವರಿಗೆ ಬೇರೊಂದು ದಾರಿ ಸರಿಯೆಂದು ತೋರಿದರೆ ಅನುಸರಿಸ ಬೇಕಾದ ದಾರಿಯನ್ನು ನಿರ್ಧರಿಸುವುದಕ್ಕೆ ಚರ್ಚೆ ಆವಶ್ಯಕವಾಗುತ್ತದೆ. ಚರ್ಚೆ ಸಮೀಚೀನವಾಗಬೇಕಾದರೆ ಅದು ಸಮಾಧಾನದಿಂದ ನಡೆಯ ಬೇಕು. ಯಾವ ರಾಷ್ಟ್ರದ ಹಿತವಾಗಲಿ ಹೀಗೆ ನಿರ್ಧರವಾಗಬೇಕಾದರೆ ಜನರ ಅಭಿಮತವನ್ನು ಪ್ರತಿಬಿಂಬಿಸುವ ಒಂದು ಸಭೆಯೂ ಆ ಸಭೆಯಲ್ಲಿ ಸೌಹಾರ್ದದಿಂದ ಪ್ರೇರಿತವಾದ ವಿಚಾರವಿನಿಮಯವೂ ಆವಶ್ಯಕ ವಾಗುತ್ತದೆ. ಅಂತಹ ಸಭೆಯಲ್ಲಿ ಭಿನ್ನಾಭಿಪ್ರಾಯಕ್ಕೆ ಎಂತಹ ವಿರೋಧ ವಿದ್ದರೂ ಅದನ್ನು ಅಪರಾಧವೆಂದು ಎಣಿಸುವ ಸಂಕೋಚಬುದ್ಧಿ ಇರುವುದಿಲ್ಲ; ಸಭೆಯಾಗಲಿ ಜನವಾಗಲಿ ಅಭಿಪ್ರಾಯಭೇದಕ್ಕೆ ದಂಡನೆ

ಯನ್ನು ವಿಧಿಸುವುದಿಲ್ಲ. ಇದು ಗುರಿ. ಈ ಗುರಿಯನ್ನು ಲೋಕದ ಯಾವ ರಾಷ್ಟ್ರವೂ ಇನ್ನೂ ಮುಟ್ಟಿಲ್ಲ. ಮುಟ್ಟುವ ಪ್ರಯತ್ನಮಾಡಿರುವ ರಾಷ್ಟ್ರಗಳಲ್ಲಿ ಇಂಗ್ಲೆಂಡ್ ಮುಂದಾಗಿದೆಯೆನ್ನಬೇಕು. ಇಂಗ್ಲೆಂಡಿನಲ್ಲಿ ಕೂಡ ಪಾರ್ಲಿಮೆಂಟ್ ಸಭೆ ಜನದ ಮನಸ್ಸನ್ನು ತಕ್ಕಷ್ಟು ಚೆನ್ನಾಗಿ ಪ್ರತಿಬಿಂಬಿಸುತ್ತಿಲ್ಲ. ಕಾಮನ್ಸ್ ಸಭೆ, ಲಾರ್ಡ್ಸ್ ಸಭೆಗಳ ಸಂಬಂಧ, ಕಾಮನ್ಸ್ ಸಭೆಗಾಗಲಿ ಪ್ರತಿನಿಧಿಗಳು ಆಯ್ದು ಬರುವ ನೀತಿ, ಆ ಸಭೆ ಶಾಸನಗಳನ್ನು ಮಾಡುವ ಕ್ರಮ, ಆ ಶಾಸನಗಳ ನೆರಳಲ್ಲಿ ಅಧಿಕಾರಿವರ್ಗ ನ್ಯಾಯಸ್ಥಾನಗಳು ನಡೆಸುವ ಕಾರ್ಯಕ್ರಮ, ಕೊಡುವ ತೀರ್ಪು, ಪರಿಹಾರ, ಈ ಎಲ್ಲ ವಿಷಯದಲ್ಲೂ ತಿದ್ದುಪಾಡು ಆವಶ್ಯಕವಾಗಿದೆ. ಆದರೂ ಉಳಿದ ದೇಶಗಳಲ್ಲಿ ಈ ಬಗ್ಗೆ ಇರುವ ಏರ್ಪಾಡು ಈ ಮಟ್ಟಕ್ಕಾದರೂ ಮುಟ್ಟದಿರುವುದರಿಂದ ಉಳಿದ ರಾಷ್ಟ್ರಗಳು ಇಂಗ್ಲೆಂಡಿನಿಂದ ಈ ವಿಷಯವನ್ನು ಗ್ರಹಿಸಬೇಕಾಗಿದೆ. ಕ್ರಾಂತಿ ನಡೆದ ಹೊಸದರಲ್ಲಿ ರಷ್ಯಾದಲ್ಲಿ ಅದನ್ನು ಕೆಡಿಸುವುದಕ್ಕೆ ಯತ್ನಮಾಡುವ ಒಂದು ಪಂಗಡವಿತ್ತು; ಆ ಪಂಗಡವನ್ನು ಅಡಗಿಸುವುದಕ್ಕೆ ಕ್ರಾಂತಿಯ ನಾಯಕರು ಕಠೋರವಾದ ಒಂದು ದಂಡ ನೀತಿಯನ್ನು ಅನುಸರಿಸಬೇಕಾಯಿತು; ರಷ್ಯಾದೇಶದ ಇಂದಿನ ಪರಿಸ್ಥಿತಿ ಆ ವಿಷಮಕಾಲದ ಸಂಪ್ರದಾಯದ ಅವಶೇಷವಾಗಿದೆ; ರಷ್ಯಾ ಈ ದೋಷದಿಂದ ಕೊಡಹಿಕೊಳ್ಳಬೇಕು. ಒಟ್ಟು ಜನಾಂಗ ಜನಾಂಗವೇ ತಿಳುವಳಿಕೆಯನ್ನು ಪಡೆದು ತನ್ನ ಶುಭವನ್ನು ಕುರಿತು ತಾನೇ ಯೋಚಿಸಿ ತನ್ನ ಬಯಕೆ ಏನೆಂಬುದನ್ನು ವ್ಯಕ್ತಪಡಿಸುವುದಕ್ಕೆ ತಕ್ಕ ವ್ಯವಸ್ಥೆಯನ್ನು ಮಾಡುವುದು ಒಂದೊಂದು ರಾಜ್ಯದ ನಾಯಕರ ಹೊಣೆಯಾಗಿದೆ.

ಇದಿಷ್ಟೂ ಗೆದ್ದ ರಾಷ್ಟ್ರಗಳ ಹೊಣೆಯ ಮಾತು. ಗೆಲ್ಲಲೂ ಗೆಲ್ಲದ, ಸೋಲಲೂ ಸೋಲದ, ರಾಷ್ಟ್ರ ಆದರೂ ರಾಷ್ಟ್ರವಾಗದ ಭರತವರ್ಷದಂತಹ ದೇಶದ ವಿಷಯವೇನು? ಭರತವರ್ಷದಂತೆ ಅಧೀನ ರಾಷ್ಟ್ರವಾಗದೆ, ಸ್ವತಂತ್ರವಾಗಿದ್ದರೂ, ಇಂಗ್ಲೆಂಡ್ ಅಮೇರಿಕಾ ರಷ್ಯಾದಂತೆ ಕಾದಿ ನೊಂದು ಗೆದ್ದಿದ್ದರೂ ಚೀನಾದೇಶ ಅಧೀನರಾಷ್ಟ್ರ ಒಂದೆಂಬಂತೆ ಅಸಹಾಯವಾಗಿದೆ. ಅದರ ವಿಷಯ ಹೇಗೆ? ಭರತವರ್ಷ, ಚೀನಾದೇಶದಂತಹ ದೊಡ್ಡ

ದೇಶಗಳು ಇಂದಿನ ದುರ್ಗತಿಯನ್ನು ಮುಟ್ಟುವುದಕ್ಕೆ ಕಾರಣ ಇವೆ. ಅವುಗಳಲ್ಲಿ ಮೊದಲನೆಯದು, ಈ ಜನಾಂಗಗಳು ರಾಷ್ಟ್ರಭಾವನೆಯನ್ನು ಬೆಳೆಸಿಕೊಳ್ಳದೆ ತುಂಡು ಬಾಳನ್ನು ಬಾಳಿದ್ದು. ಅಧೀನರಾಷ್ಟ್ರವಾಗಿ ದಾಸ್ಯದ ನೋವನ್ನೆಲ್ಲ ನೊಂದೂ ಉಂಡೂ ನಮ್ಮ ದೇಶ ಈಗಲೂ ಒಕ್ಕಟ್ಟಾಗಿ ಬಾಳಲು ಮನಸ್ಸು ಮಾಡಿಲ್ಲ. ಬೆದರಿಸಿದ ಪರ ರಾಷ್ಟ್ರಗಳಿಗೆಲ್ಲ ಒಂದೊಂದು ನಗರದಲ್ಲಿ ಸ್ವಾಮ್ಯವನ್ನು ಬಿಟ್ಟುಕೊಟ್ಟು ನೆರೆಯ ಜಪಾನ್ ದೇಶ ಮೇಲೆ ಬಿದ್ದು ಮಾಡಿದ ಅತ್ಯಾಚಾರವನ್ನು ಸಹಿಸಿಕೊಳ್ಳುತ್ತಿರುವ ಹೊತ್ತಿನಲ್ಲಿಯೇ ಚೀನಾದಲ್ಲಿ ಸ್ವಯೂಥ ಕಲಹ ನಡೆಯುತ್ತಿತ್ತು. ಮಗುವನ್ನು ತುಂಡುಮಾಡಿದರೂ ಸರಿ, ಅದು ಸವತಿಗೆ ಸೇರುವುದು ಕೂಡದು, ಎಂಬ ಮಲತಾಯ ಬುದ್ಧಿ; ಆಸ್ತಿ ಎಲ್ಲ ಹೋದರೂ ಸರಿಯೆ, ಜ್ಞಾತಿ ಅಣ್ಣನಿಗೆ ಸೇರುವುದು ಆಗದು, ಎಂಬ ದಾಯಾದಿ ಮತ್ಸರ; ಯಾರನ್ನಾದರೂ ಹಿರಿಯರೆಂದೇವು, ಸರಿಯ ಒಬ್ಬನಿಗೆ ಪಟ್ಟಕಟ್ಟಿ ದೊರೆ ಎನ್ನಲಾರೆವು, ಎಂಬ ವಿಪರೀತ ಅಭಿಮಾನ: ಇವು ಈವರೆಗೆ ನಮ್ಮ ನಾಡಿನ ಬಾಳನ್ನು ಹಾಳುಮಾಡಿವೆ. ಇವು ಅಥವಾ ಇವುಗಳ ಛಾಯೆಯಿಂದ ಚೀನಾದೇಶ ತೊಳಲುತ್ತಿದೆ. ಸಂಪತ್ತಿನ ಗಣಿಗಳಂತಿರುವ ಇಂತಹ ರಾಷ್ಟ್ರಗಳು ಇಂತಹ ಕಾರಣಗಳಿಂದ ದುರ್ಬಲವಾಗಿ ಕುಳಿತು ಹೆರ ರಾಷ್ಟ್ರಗಳ ದುರಾಶೆಗೆ ಉತ್ತೇಜಕವಾಗಿರುತ್ತವೆ; ನನಗಿರಲಿ ತನಗಿರಲಿ ಎಂದು ತಿಲೋತ್ತಮೆಗಾಗಿ ಸುಂದೋಪಸುಂದರು ಕಾದಿದಂತೆ ಕಾದುವ ಪರ ರಾಷ್ಟ್ರಗಳಿಗೆ ರಸಕವಳವಾಗಿವೆ. ನಾವು ಒಂದು ರಾಷ್ಟ್ರ ಎಂಬ ಭಾವವನ್ನು ಬೆಳಸಿಕೊಳ್ಳುವುದೇ ನಮ್ಮ ಮತ್ತು ಚೀನಾ ಜನರಿಗೆ ಕಾದಿರುವ ಮೊದಲ ಕೆಲಸ. ಹೀಗೆ ರಾಷ್ಟ್ರವಾಗುತ್ತ ನಮ್ಮ ಜನ ಪಾಶ್ಚಾತ್ಯ ಪಡಿಯಚ್ಚಿನ ದುರಭಿಮಾನರಾಷ್ಟ್ರವಾಗದೆ ಹೊಸಯುಗದ ವಿಶ್ವ ಕುಟುಂಬಿ ಮನೋಧರ್ಮದ ರಾಷ್ಟ್ರವಾಗಬೇಕು. ಆರ್ಯಾವರ್ತ ಮಾತ್ರ ಪುಣ್ಯಭೂಮಿಯಲ್ಲ. ಭರತವರ್ಷ ಮಾತ್ರ ಕರ್ಮಭೂಮಿಯಲ್ಲ. ಒಟ್ಟು ನೆಲವೇ ದೇವರ ಪಾದ. ಅದನ್ನು ಅಳೆದ ತ್ರಿವಿಕ್ರಮನ ಹೆಜ್ಜೆ ಅದರ ಯಾವ ಭಾಗವನ್ನೂ ಪಾವನಮಾಡದೆ ಬಿಡಲಿಲ್ಲ. ಭರತವರ್ಷ ಚೀನಾದೇಶ ಲೋಕದ ಅಣ್ಣ ರಾಷ್ಟ್ರಗಳು. ಇವು ತಮ್ಮ ವ್ಯಕ್ತಿತ್ವವನ್ನು

ಬೆಳಸಿಕೊಂಡು ಇತರ ರಾಷ್ಟ್ರಗಳು ಎಡವಿದ ಸ್ಥಳಗಳಲ್ಲಿ ಎಡವದಂತೆ ಎಚ್ಚರದಿಂದ ನಡೆದು ಲೋಕಕ್ಕೆ ಮಾರ್ಗದರ್ಶಿಗಳಾಗಬೇಕು.

ಅಮೇರಿಕದ ಸಂಯುಕ್ತ ಸಂಸ್ಥಾನಗಳ ಪ್ರಮುಖ ನಾಯಕ ವೆಂಡಲ್ ವಿಲ್ಕಿ ಎರಡು ವರ್ಷದ ಹಿಂದೆ ಈಗ ಮುಗಿದಿರುವ ಯುದ್ಧ ನಡೆಯುತ್ತಿರುವಲ್ಲಿ, ಭೂಮಿಯನ್ನೆಲ್ಲಾ ಒಮ್ಮೆ ಸುತ್ತಿದನು. ಆ ಪ್ರವಾಸದಲ್ಲಿ ಪಡೆದ ಎಲ್ಲ ಅನುಭವದ ಫಲವಾಗಿ 'One World' 'ಪ್ರಪಂಚ ಒಂದು' ಎಂಬ ಒಂದು ಪುಸ್ತಕವನ್ನು ಬರೆದನು. ನಮ್ಮ ಪ್ರಪಂಚ ಎಲ್ಲ ಒಂದು ಬಾಳ್ವೆ ಎಂದು ಹೇಳುವುದು ಆ ಗ್ರಂಥದ ಉದ್ದೇಶ. ಒಂದು ಭಾಗ ಚೆನ್ನಾಗಿದ್ದು ಇನ್ನೊಂದು ಭಾಗ ನೋಯುತ್ತಿದ್ದರೆ ಲೋಕದ ಜೀವನಕ್ಕೆ ಕುಂದು ಸಿದ್ಧ ಎಂಬ ತತ್ವವನ್ನು ವಿಲ್ಕಿ ಮಹಾಶಯನು ಮನಗಂಡನು. "ಉದಾರಚರಿತಾನಾಂತು ವಸುಧೈವ ಕುಟುಂಬಕಮ್" ಎಂಬ ಮಾತು ಸತ್ಯವೆನಿಸುವುದು ಇಂಥವರ ಹೃದಯ ವೈಶಾಲ್ಯದಿಂದ. ಬಡವರು, ಅಧೀನರಾಗಿರುವವರು, ದಾನ ಔದಾರ್ಯಗಳನ್ನು ಹೊಗಳುವುದು ಸಹಜ; ಅಂತೆ ನಿಷ್ಪ್ರಯೋಜನ. ಧನಿಕ ಬಲಿಷ್ಠರು ಹೀಗೆ ಮಾಡುವುದು ಅಸಾಧಾರಣ; ಹಾಗೆಯೇ ಫಲದಾಯಕ. ಮಿತ್ರ ರಾಷ್ಟ್ರಗಳ ಗೆಲವಿಗೆ ಮುಖ್ಯ ಕಾರಣವಾದ ಅಮೇರಿಕದ ಈ ಹಿರಿಯ ತನ್ನ ಉದಾರ ಭಾವನೆಯಿಂದ ತನ್ನ ನಾಡ ಹಿರಿಮೆಯನ್ನೇ ಪ್ರಕಟಿಸಿದನು. ಆಗ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಾಗಿದ್ದ ಫ್ರಾಂಕ್ಲಿನ್ ರೂಸವೆಲ್ಟನೂ ಲೋಕದ ದೃಷ್ಟಿಯಿಂದ ಆವಶ್ಯಕವಾದ ನಾಲ್ಕು ಸ್ವಾತಂತ್ರ್ಯಗಳನ್ನು ಕುರಿತು ಉದಾತ್ತವಾದ ಒಂದು ಘೋಷಣವನ್ನು ಮಾಡಿದನು. ಹಗೆಯೊಂದಿಗೆ ಹೋರಾಡುವ ಹೊತ್ತಿನಲ್ಲಿ ಇವರು ಇಂತಹ ಮಾತುಗಳನ್ನಾಡಿದ್ದರಿಂದ ಎಲ್ಲ ನಾಡುಗಳ ಸಜ್ಜನರ ಮನಸ್ಸು ಮಿತ್ರಮಂಡಲದ ಕಡೆಗೆ ಒಲೆಯಿತು. ದುರದೃಷ್ಟವಶಾತ್ ಈ ಇಬ್ಬರೂ ಈಚೆಗೆ ತೀರಿಕೊಂಡರು. ಆದರೆ ಇವರಂತೆ ಉದಾರಿಗಳಾದ ಇತರ ಪ್ರಮುಖರು ಆ ದೇಶದಲ್ಲಿ ಇರಬೇಕು. ಇದೇ ಮುಖವಾಗಿ ಇಂಗ್ಲೆಂಡಿನ ಆಡಳಿತದಲ್ಲಿ ಶುಭ ಸೂಚಕವಾದ ಒಂದು ಮಾರ್ಪಾಡು ಈಚೆಗೆ ಆಗಿದೆ; ಸಾಮ್ರಾಜ್ಯವಾದಿಗಳ ಅಧಿಕಾರ ತಪ್ಪಿ ಸಾಮ್ರಾಜ್ಯ ಕೂಡದೆಂಬ ದುಡಿಮೆಗಾರರ ಪಕ್ಷ ರಾಜ್ಯಸೂತ್ರವನ್ನು

ವಹಿಸಿಕೊಂಡಿದೆ. ಯುದ್ಧ ನಡೆಯುತ್ತಿದ್ದ ವೇಳೆ ಬಂದ ಒಳ್ಳೆಯ ಯೋಜನೆಗಳು, ಅಧಿಕಾರಕ್ಕೆ ಬರುವ ಮೊದಲು ಆಡಿದ ಒಳ್ಳೆಯ ಮಾತು, ಮಾಡಿದ ಶಪಥಗಳು, ಈ ದೇಶಗಳ ನಾಯಕರ ಮನಸ್ಸನ್ನು ಈಗಲೂ ನಡೆಸಿದರೆ ಶಾಂತಿ ನಿಜವಾಗುತ್ತದೆ; ಲೋಕ ಶುಭವನ್ನು ಕಾಣುತ್ತದೆ. ಹೀಗಾಗುವಂತೆ ಲೋಕದ ಅಧಿದೈವ ಅನುಗ್ರಹಿಸಬೇಕು.

ಶಾಂತಿಯನ್ನು ನಡೆಸುವರು ಯಾರೋ ಆಗಿ ಎಲ್ಲಿಯೋ ಇರುತ್ತ, ನಾವು ಇಲ್ಲಿ ಇಂತಹ ಮಾತನ್ನು ಆಡಿ ಆದದ್ದೇನು ಎಂದು ಯಾರಾದರೂ ಕೇಳಬಹುದು. ನರಿಯ ಕೂಗು ಗಿರಿಯನ್ನು ಮುಟ್ಟುವುದಿಲ್ಲ; ಆದರೆ ಇಂದಲ್ಲದಿದ್ದರೆ ಮುಂದೆ ಒಂದು ದಿನ ಭರತವರ್ಷ, ಅದರ ಭಾಗವಾಗಿ ಕನ್ನಡನಾಡು, ತಕ್ಕ ಸ್ಥಳದಲ್ಲಿ ಅಧಿಕಾರಯುಕ್ತವಾಗಿ ದನಿಯೆತ್ತ ಬೇಕಾಗುತ್ತದೆ. ಆಗ್ಯೆ ನಮ್ಮ ಒಟ್ಟು ಜನದ ಮನಸ್ಸು ನಮ್ಮ ಇತಿಹಾಸ ದಿಂದ ತಿದ್ದಿದ, ಮತ್ತು ನಮ್ಮ ಸಂಸ್ಕೃತಿಯ ಉತ್ತಮ ಭಾವಕ್ಕೆ ಅನುಗುಣ ವಾದ, ಔದಾರ್ಯದಿಂದ ನಡೆಯಬೇಕಾಗುತ್ತದೆ. ಇಂದೇ ಈ ಜನತೆ ಯನ್ನು ಚರ್ಚೆಯ ಕಣಕ್ಕೆ ಕರೆಯದಿರಬಹುದು. ಆದರೆ ಕರೆ ಬಂದ ಕಾಲಕ್ಕೆ ಸಿದ್ಧರಾಗಿರುವಂತೆ ಜನ ಇಂತಹ ವಿಚಾರದಲ್ಲಿ ವ್ಯಾಯಾಮ ಮಾಡಬೇಕು; ದಾರ್ಢ್ಯ ಪಡೆಯಬೇಕು. ಈ ಲೇಖನ ಈ ದೃಷ್ಟಿಯಿಂದ ಮಾಡಿರುವ ಒಂದು ಅಲ್ಪ ಪ್ರಯತ್ನ ಮಾತ್ರ; ಹೆಚ್ಚೇನೂ ಅಲ್ಲ.

"ಜೀವನ"
ಅಕ್ಟೋಬರ್ ೧೯೪೫

---

943-46. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

# ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಕತೆ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ ೩ (ಲೇಖನಗಳು)
ಯಶೋಧರಾ (ನಾಟಕ)
ಮರಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ಣಾಟಕದ ಜನಪದ ಸಾಹಿತ್ಯ
ಕಾಕನಕೋಟೆ (ದೃಶ್ಯ)
ಆದಿಕವಿ ವಾಲ್ಮೀಕಿ
ವಿಮರ್ಶೆ ೪ (ಲೇಖನಗಳು)
ಸಣ್ಣ ಕತೆಗಳು ೬
ಗೌಡರ ಮಲ್ಲಿ (ಪದ್ಯ ಕಥೆ)
ರಾಮನವಮಿ ,,
ಮೂಕನ ಮಕ್ಕಳು ,,
ತಾಯ್ನುಡಿಯ ತಮ್ಮಡಿ (ಭಾಷಣ)
ನವರಾತ್ರಿ ೨, ೪ (ಕಥನ ಕವನ)
ಚಿತ್ರಾಂಗದಾ (ಭಾಷಾಂತರ)
ಸುನೀತ (ಪದ್ಯಗಳು)
ನವರಾತ್ರಿ ೩

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols.)
Subbanna (Story)
Rabindranath Tagore.

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—
ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು ಸಿಟಿ
ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ
ಜೀವನ ಕಾರ್ಯಾಲಯ, ೪೩–೪೪, ಗವಿಪುರದ ವಿಸ್ತರಣ, ಬಸವನಗುಡಿ ಟಪಾಲು
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ